# ಹೈದರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ

## (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಉಮೇಶ ಗುರಿಕಾರ

ಮಾರ್ಗದರ್ಶಕರು

ಡಾ.ವಿರೂಪಾಕ್ಷಿ ಪೂಜಾರಹಳ್ಳಿ

ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವ ವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩.೨೭೬



೨೦೦೭

# ಹೈದರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ

## (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಉಮೇಶ ಗುರಿಕಾರ



ಮಾರ್ಗದರ್ಶಕರು
ಡಾ.ವಿರೂಪಾಕ್ಷಿ ಪೂಜಾರಹಳ್ಳಿ

ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವ ವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೦೭

## ಸಂಶೋಧಕರ ಪ್ರಮಾಣ ಪತ್ರ

**ಹೈದರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 2-04-02
ಸ್ಥಳ : ವಿದ್ಯಾರಣ್ಯ

ಉಮೇಶ ಗುರಿಕಾರ
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಉಮೇಶ ಗುರಿಕಾರ ಇವರು **ಹೈದರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 2- 8 -2012
ಸ್ಥಳ : ವಿದ್ಯಾರಣ್ಯ

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಬಿ.ಎ.ವಿವೇಕ ರೈ, ಕುಲಸಚಿವರಾದ ವ್ಹಿ.ಶಂಕರ್, ಅಧ್ಯಯನಾಂಗದ ನಿರ್ದೇಶಕರಾದ ಟಿ.ಆರ್.ಚಂದ್ರಶೇಖರ, ಪ್ರಸಾರಾಂಗದ ನಿರ್ದೇಶಕರಾದ ಮಲ್ಲೇಪುರಂ ಜಿ. ವೆಂಕಟೇಶ ಮತ್ತು ಪಿಎಚ್.ಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ವಿಶ್ರಾಂತ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೆ ಕೃತಜ್ಞತೆಗಳು.

ಪಿಎಚ್.ಡಿ ಅಧ್ಯಯನಕ್ಕೆ ಪ್ರತಿ ಹಂತದಲ್ಲೂ ಸೂಕ್ತ ಸಲಹೆಗಳನ್ನು ನೀಡಿ, ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರಾದ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ಎಂದಿಗೂ ಕೃತಜ್ಞ.

ಅಧ್ಯಯನಕ್ಕೆ ಸಹಕರಿಸಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ. ಮೋಹನಕೃಷ್ಣ ರೈ, ಪ್ರೋ. ಲಕ್ಷ್ಮಣ ತೆಲಗಾವಿ, ಡಾ. ಸಿ.ಆರ್.ಗೋವಿಂದರಾಜು, ಡಾ. ಚೆನ್ನಸ್ವಾಮಿ ಸೊಸಲೆ, ಡಾ. ಎಫ್.ಟಿ. ಹಳ್ಳಿಕೇರಿ, ಡಾ. ರವೀಂದ್ರನಾಥ, ಡಾ. ಕೆ.ಎಂ.ಮೈತ್ರಿ, ಡಾ. ಚಲುವರಾಜು ಮೊದಲಾದವರಿಗೆ ಆಭಾರಿಯಾಗಿದ್ದೇನೆ.

ಅಧ್ಯಯನಕ್ಕೆ ಸಹಕರಿಸಿದ ವಿಜಯಕುಮಾರ, ಕಣವಿ, ಗಂಗಾಧರ, ಅಧ್ಯಯನಾಂಗದ ಡಿ.ವಿ.ಪ್ರಕಾಶ, ಗ್ರಂಥಾಲಯದ ಗ್ರಂಥಪಾಲಕರು ಹಾಗೂ ಸಿಬ್ಬಂದಿ ವರ್ಗದವರಿಗೆ.

ಅಧ್ಯಯನಕ್ಕೆ ಪ್ರಾರಂಭದಿಂದಲೂ ಸೂಕ್ತ ಸಲಹೆ, ಸೂಚನೆ, ಸಹಕಾರ ನೀಡಿದ ಪ್ರೋ. ಸುಧಾಕರ್, ಡಾ. ಎಸ್.ಎಫ್.ಜಕಬಾಳ, ಪ್ರೋ. ಒಡೆಯರ್ ಡಿ.ಹೆಗ್ಗಡೆ, ದೊಡ್ಡಣ್ಣ ಗದ್ದನಕೇರಿ, ಎಚ್.ಎಸ್.ಪಾಟೀಲ, ಡಾ. ಮಾಳೆ, ಬಿ.ಸಿ.ಪಾಟೀಲ, ಮನ್ಸೂರಮಠ ಧಾರವಾಡದ ಗುರುಗಳಾದ ಶ್ರೀ ಬಸವರಾಜ ದೇವರು ಇವರಿಗೆ.

ಅಧ್ಯಯನದ ಪ್ರತಿ ಹಂತದಲ್ಲೂ ಸಲಹೆ, ಸಹಕಾರ ನೀಡಿದ ಸ್ನೇಹಿತರಾದ ಮೊಹಮ್ಮದ ಯುನುಸ್, ಚಿದಾನಂದ, ಅಮರೇಶ, ಈಶ್ವರ, ಖಾಜಾ, ರಾಮರಾವ್, ವಸಂತ, ಮಿನ್ಹಾಜ್, ಮಹಾಂತೇಶ, ಜ್ಞಾನೇಶ್ವರ, ಶರಣಪ್ಪ ಉಮುಚಗಿ, ದೇವರಾಜ, ಪ್ರಕಾಶ, ಉಮೇಶ ಕಾತರಕಿ, ಮಲ್ಲಿಕಾರ್ಜುನ ಮಾನ್ಪಡೆ, ಮಂಜುನಾಥ ಮೊದಲಾದವರು ಹಾಗೂ ಕ್ಷೇತ್ರ ಕಾರ್ಯದಲ್ಲಿ ನೆರವಾದ ಕುರುಬ ಸಮುದಾಯದ ಹಾಗೂ ಇತರೆ ಸಮುದಾಯದ ಸಮಸ್ತ ಹಿರಿಯರಿಗೆ, ವಿದ್ವಾಂಸರಿಗೆ.

ಸದಾ ನನ್ನ ಶ್ರೇಯಸ್ಸು ಬಯಸುವ ಪೂಜ್ಯ ತಂದೆ ಶಿವಪ್ಪ ಗುರಿಕಾರ, ತಾಯಿ ಶೈಲಮ್ಮ ಗುರಿಕಾರ, ಸಹೋದರ ಜಗದೀಶ ಗುರಿಕಾರ, ಚಿಕ್ಕಪ್ಪರಾದ ರಾಮಣ್ಣ ಗುರಿಕಾರ, ತಿಪ್ಪಣ್ಣ ಗುರಿಕಾರ ಹಾಗೂ ಎಲ್ಲಾ ಸಹೋದರ ಸಹೋದರಿಯರಿಗೆ.

ಅಕ್ಷರ ಸಂಯೋಜಿಸಿದ ಮಲ್ಲಿಕಾರ್ಜುನ ಕೊತಬಾಳ, ಹನುಮೇಶ ಕುಲಕರ್ಣಿ ಅವರಿಗೆ, ಕರಡು ತಿದ್ದುವಲ್ಲಿ ನೆರವಾದ ಡಾ. ಗವಿಸಿದ್ಧಪ್ಪ ಎಚ್.ಪಾಟೀಲ ಅವರಿಗೆ ಮತ್ತು ಸುಂದರವಾಗಿ ಬೈಂಡಿಂಗ್ ಮಾಡಿಕೊಟ್ಟ ಮಹಾಂತೇಶ ಬುಕ್ ಬೈಂಡರ್ಸ್, ಧಾರವಾಡ ಇವರಿಗೆ.

ತುಂಬು ಹೃದಯ ಕೃತಜ್ಞತೆಗಳು

– ಉಮೇಶ ಗುರಿಕಾರ

## ಪರಿವಿಡಿ

ಒಂದು ನಾಡಿನ ಚರಿತ್ರೆಯೆಂದರೆ, ಆ ನಾಡನ್ನಾಳಿದ ರಾಜರ ಚರಿತ್ರೆ ಎಂಬ ಭಾವನೆ ಸಾಮಾನ್ಯವಾಗಿ ರೂಢಿಯಲ್ಲಿದೆ. ಚರಿತ್ರೆಯನ್ನು ರೂಪಿಸುವ ಗ್ರಂಥಗಳು ಪ್ರಧಾನವಾಗಿ ರಾಜಕೀಯವನ್ನೇ ಹೊಂದಿರುತ್ತವೆ. ಅದರ ಜೊತೆಯಲ್ಲಿ ಆ ನಾಡಿನ ಕಲೆ, ಧರ್ಮ, ಸಾಹಿತ್ಯ ಮೊದಲಾದವುಗಳನ್ನು ಕೊನೆಯಲ್ಲಿ ನಿರೂಪಿಸಲಾಗಿರುತ್ತದೆ. ಆದರೆ ಒಂದು ನಾಡು ಎಂದರೆ ಅದನ್ನು ಆಳಿದ ರಾಜತ್ವವಲ್ಲ, ಅಲ್ಲಿ ವಾಸಿಸುವ ಜನ. ಆ ಜನರ ಬದುಕಿದ ರೀತಿ, ಅನುಸರಿಸಿದ ಧರ್ಮ, ನಿರ್ಮಿಸಿದ ಕಲೆ, ಅವರ ಜೀವನ ಸಮಸ್ಯೆಗಳು ಹಾಗೂ ಅವರ ಜೀವನ ಮೌಲ್ಯಗಳು ಇತಿಹಾಸದ ಭಾಗವಾಗಿರುತ್ತವೆ. ಹೀಗಾಗಿ ಒಂದು ನಾಡಿನ ಚರಿತ್ರೆ ರಚಿಸಲು ರಾಜವಂಶಗಳು ಅಸ್ಥಿಪಂಜರವಾದರೆ, ನಾಡಿನ ಜನತೆ ರಕ್ತಮಾಂಸಗಳಾಗಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಗಳೆರಡೂ ಪರಸ್ಪರ ಪೂರಕ ಮತ್ತು ಪೋಷಕ ಎನ್ನಬಹುದು.

ಇತಿಹಾಸದ ಅರ್ಥವ್ಯಾಪ್ತಿಯು ಇಂದು ರಾಜ ಮಹಾರಾಜರ ರಾಜಕೀಯ ಅಧ್ಯಯನದಿಂದ ಜನಸಾಮಾನ್ಯರ ಬದುಕಿನ ಅಧ್ಯಯನವಾಗಿ ರೂಪಾಂತರಗೊಳ್ಳತೊಡಗಿದೆ. ಇದರಿಂದಾಗಿ ಅರಸರ ಚರಿತ್ರೆ ಗೌಣವಾಗಿ ಶ್ರೀ ಸಾಮಾನ್ಯರ ಜೀವನದ ಚರಿತ್ರೆಗೆ ಮಹತ್ವ ಪ್ರಾಪ್ತವಾಗಿದೆ. ಜನರ ಜೀವನದ ಆಚಾರಗಳು, ಧರ್ಮ, ಸಮಾಜ, ಕಲೆ, ಸಂಸ್ಕೃತಿಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವುದು ಕಂಡುಬರುತ್ತದೆ. ಆರ್ಯ ಪೂರ್ವಕಾಲದಲ್ಲಿ ಸ್ಥಳಜನ್ಯ ಬುಡಕಟ್ಟುಗಳು ತಮ್ಮದೇ ಆದ ಸಂಸ್ಕೃತಿ ಹಾಗೂ ಆಚರಣೆಗಳನ್ನು ಹೊಂದಿದ್ದವು. ಭಾರತಕ್ಕೆ ಆರ್ಯರ ಆಗಮನವಾದ ಮೇಲೆ ಇಲ್ಲಿಯ ಸಂಸ್ಕೃತಿಯ ಚಿತ್ರಣವೇ ಬದಲಾಯಿತು. ಮೂಲ ಸಂಸ್ಕೃತಿಗಳನ್ನು ಕ್ಷುದ್ರ, ಕ್ಷುಲ್ಲಕ ಆಚರಣೆಗಳೆಂದು, ಆರ್ಯರು ವೈದಿಕ ಸಂಸ್ಕೃತಿಯೇ ನಿಜವಾದ ಸಂಸ್ಕೃತಿ ಎಂದು ಸಾರಿದರು. ಇದರಿಂದಾಗಿ ಕೆಳವರ್ಗದ ಸಂಸ್ಕೃತಿಗಳು ನಿರಂತರವಾಗಿ ಅನೇಕ ಸುಧಾರಣೆಗಳ ಹಾಗೂ ನಗರೀಕರಣದ ದಾಳಿಗೊಳಗಾಗುತ್ತ ಬಂದವೆಂದು ತಿಳಿಯುತ್ತದೆ.

ಬಹುದೇವತೋಪಾಸನೆ, ಕ್ಷುದ್ರದೇವತೋಪಾಸನೆ, ಮೌಢ್ಯಭರಿತ ಆಚರಣೆಗಳ ಖಂಡನೆಯ ರೂಪದಲ್ಲಿ ಮೂಲ ಸಂಸ್ಕೃತಿಗಳನ್ನು ನಾಶಪಡಿಸುವ ಅನೇಕ ಪ್ರಯತ್ನಗಳು ನಡೆದವು. ಆದರೂ ಮೂಲ ಸಂಸ್ಕೃತಿಗಳನ್ನು ಅನುಸರಿಸುತ್ತಿದ್ದ ಅನೇಕ ಸಮುದಾಯಗಳು ತಮ್ಮದೇ ಆದ ಧಾರ್ಮಿಕ, ಸಾಮಾಜಿಕ ವಿಧಿ-ವಿಧಾನಗಳು, ಆಚರಣೆಗಳನ್ನು ಕೈಬಿಡದೆ ತಮ್ಮ ದೈನಂದಿನ ಜೀವನದಲ್ಲಿ ಅಳವಡಿಸಿಕೊಂಡವಲ್ಲದೆ, ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇಂತಹ ಅಸಂಖ್ಯಾತ ಮೂಲ ಸಂಸ್ಕೃತಿಗಳಲ್ಲಿ ಕುರುಬ ಸಂಸ್ಕೃತಿಯೂ ಒಂದಾಗಿದೆ ಎಂದು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಪ್ರಾಚೀನ ಭಾರತದ ಮೂಲ ನಿವಾಸಿಗಳ ಪೈಕಿ ಕುರುಬ ಸಮುದಾಯ ಭವ್ಯವಾದ ಪರಂಪರೆ ಹೊಂದಿದೆ. ಪಶುಪಾಲನೆ ವೃತ್ತಿ ಆರಂಭಗೊಂಡ ನಂತರವೇ ಕುರುಬರ ಇತಿಹಾಸ ಪ್ರಾರಂಭವಾಗುತ್ತದೆ. ಮೂಲತಃ ದ್ರಾವಿಡ ಜನಾಂಗದ ಗುಣ-

ಲಕ್ಷಣಗಳನ್ನು ಹೊಂದಿದ್ದ ಕುರುಬರು ಪಶುಪಾಲನೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದರು. ಪಶುಪಾಲನೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಕಾಡು-ಮೇಡುಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ ವಾಸಿಸುತ್ತಿದ್ದ ಕುರುಬರು ತಮ್ಮ ಹಾಗೂ ಪ್ರಾಣಿಗಳ ರಕ್ಷಣೆಗಾಗಿ ಅನೇಕ ಆಯುಧಗಳನ್ನು ಹೊಂದಿರುತ್ತಿದ್ದರು. ಇದರಿಂದ ಕುರುಬರು ದೃಢಕಾಯರು, ಅಜಾನುಬಾಹುಗಳು, ಧೈರ್ಯಶಾಲಿಗಳು, ಕಷ್ಟಸಹಿಷ್ಣುಗಳು ಆಗಿ ತಮ್ಮ ಸಂಸ್ಕೃತಿಯನ್ನು ನಿರೂಪಿಸಿರುವ ಚಿತ್ರಣವನ್ನು ಸಂಶೋಧನೆಯ ಮೂಲಕ ವಿವರಿಸಲಾಗಿದೆ.

ಕುರುಬರು ಭಾರತದಾದ್ಯಂತ ನೆಲೆಸಿದ್ದರೆಂಬುದಕ್ಕೆ ಇಂದಿಗೂ ಎಲ್ಲೆಡೆ ಕಂಡುಬರುವ ಹಟ್ಟಿ, ಕೊಪ್ಪಗಳೆಂಬ ಹೆಸರಿನ ಊರುಗಳು ಸಾಕ್ಷಿಯಾಗಿವೆ. ಪಶುಪಾಲನೆ ಕೈಗೊಂಡು ಅಲೆಮಾರಿಗಳಾಗಿದ್ದ ಕುರುಬರು ಪ್ರದೇಶದಿಂದ ಪ್ರದೇಶಕ್ಕೆ ಸಂಚಾರ ಕೈಗೊಂಡು ನೆಲೆಸಿದ ಪ್ರದೇಶಗಳಲ್ಲೆಲ್ಲ ಹಟ್ಟಿಗಳನ್ನು ನಿರ್ಮಿಸತೊಡಗಿದರು. "ಪ್ರಾಚೀನ ಕಾಲದಲ್ಲಿ ಎಲ್ಲೆಡೆ ಹಟ್ಟಿಗಳೇ ಇದ್ದವು. ಪಟ್ಟಿ, ಹಟ್ಟಿ, ವಾಟಿ, ವಾಡ, ವಾಡಿ ಮೊದಲಾದ ಹೆಸರಿನ ಊರುಗಳಿಲ್ಲದ ಭಾಗವು ದಕ್ಷಿಣ ಪ್ರದೇಶದಲ್ಲಿ ಎಲ್ಲಿಯಾದರೂ ದೊರೆಯಬಹುದೇ ಎಂಬುದು ಸಂದೇಹ" ಎಂದು ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ.

ಕುರುಬರು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಮಹಾರಾಷ್ಟ್ರದಲ್ಲಿ ಧನಗಾರರು, ತಮಿಳುನಾಡಿನಲ್ಲಿ ಅಂಡರ್, ಪೊಡುವರ್, ಇಡೈಯರ್, ಕುರುಂಬರ್, ಕಳವರ್, ಆಂಧ್ರದಲ್ಲಿ ಗೊಲ್ಲವಾಡು, ಕುರುಪು. ಯಾದವುಲು,ಕುರುಮ ಅಥವಾ ಕುರುಮವಾರು, ರಾಜಮಹಲ ಗುಡ್ಡಗಳು, ಚೋಟಾನಾಗಪುರ, ಶೋಣ ನದಿ ತೀರಗಳಲ್ಲಿ ಕುರ್ಬ, ಪಂಜಾಬ ಆಗ್ರಾ ಮತ್ತು ದೆಹಲಿ ಮೊದಲಾದ ಪ್ರಾಂತ್ಯಗಳಲ್ಲಿ ಗಡಿ, ಅಥವಾ ಗಡರಿಯ, ಟಿಬೆಟ್, ನೇಪಾಳ ಹಿಮಾಲಯಗಳಲ್ಲಿ ಗಡ್ಡಿ ಅಥವಾ ಗಡಿ, ಉತ್ತರ ಹಿಂದೂಸ್ಥಾನ ಮತ್ತು ಗುಜರಾತ್ ಕಡೆ ಅಹೀರರು, ಬಂಗಾಲದಲ್ಲಿ ಪಾಲರು, ರಾಜಸ್ಥಾನದಲ್ಲಿ ರಾಜಪಾಲಿ ಪಾಲಕ್ಷತ್ರಿಯರೆಂಬ  ಹೆಸರಿನಿಂದ ಕರೆಯಲ್ಪಡುತ್ತಾರೆ. ಇದು ಕುರುಬರ ವಿಶಾಲವಾದ ವ್ಯಾಪ್ತಿಯ ಬಗ್ಗೆ ತಿಳಿಸುತ್ತದೆ. ಆದರೆ ಕುರುಬರು ದಕ್ಷಿಣ ಭಾರತದ ಮೂಲ ನಿವಾಸಿಗಳೆಂಬ ಅಭಿಪ್ರಾಯವಿದೆ. ಇದರಿಂದಾಗಿ ದಕ್ಷಿಣ ಭಾರತದ ನೀಲಗಿರಿಯಿಂದ ಉತ್ತರದ ಗಂಗಾ-ಶೋಣ ಭದ್ರಾನದಿಯವರೆಗೂ ವ್ಯಾಪಿಸಿಕೊಂಡಿದ್ದರೆಂದು ತಿಳಿದುಬರುತ್ತದೆ.

ಪಶುಪಾಲನೆ ಮತ್ತು ಕೃಷಿಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿದ್ದ ಕುರುಬರು ಕಾಲಕ್ರಮೇಣ ರಾಜಕೀಯದಲ್ಲಿ ಆಸಕ್ತಿ ವಹಿಸಿದರು. ಪ್ರಾಚೀನ ಮರವ ಸಮುದಾಯಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಿದ್ದ ಸೂತಪತಿಗಳು ದಕ್ಷಿಣ ಭಾರತದಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಅವರನ್ನು ಸೋಲಿಸಿ ರಾಜ್ಯವನ್ನು ವಶಪಡಿಸಿಕೊಂಡರು. "ಮಲಾಲದ ರಾಜ" ಎಂದು ಕರೆಸಿಕೊಂಡ ದ್ರಾವಿಡ ದೇಶದ ಅಧಿಪತಿಯಾದ ಕುರುಬ ಮುಖಂಡನನ್ನು "ಕಾಮಂಡ ಕುರುಬ ಪ್ರಭು" ಎಂದು ಕರೆಯುತ್ತಿದ್ದರು. ನಂತರ ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುತ್ತ ರಾಜವಂಶಗಳನ್ನು ನಿರ್ಮಿಸಿದರು. ಅವುಗಳಲ್ಲಿ ಶಾತವಾಹನರು, ಕದಂಬರು, ಪಲ್ಲವರು, ನೊಳಂಬ ಪಲ್ಲವರು, ವಿಜಯನಗರ ಸಾಮ್ರಾಜ್ಯ, ಮೈಸೂರಿನ ಒಡೆಯರು, ಹಂಡೆ ಪಾಳೆಯಗಾರರು ಮೊದಲಾದ ಪ್ರಮುಖ ರಾಜವಂಶಗಳಿವೆ. ಕುರುಬರು ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರಲ್ಲದೆ, ಮಂತ್ರಿ, ದಂಡನಾಯಕ, ದಳಪತಿ, ನಾಡಗೌಡ, ಪಟೇಲ, ಓಲೇಕಾರ, ತಳವಾರ, ಗುರಿಕಾರ  ಮೊದಲಾದ ಪದವಿಗಳ ಪಡೆದು ಕಾರ್ಯನಿರ್ವಹಿಸಿದರು. ಇಂದಿಗೂ ಗ್ರಾಮಗಳಲ್ಲಿ ಗೌರವಯುತ ಸ್ಥಾನ ಪಡೆದಿರುವುದನ್ನು ಕಾಣಬಹುದಾಗಿದೆ.

ಕುರುಬರು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಸಮಾಜದಲ್ಲಿ ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ಸಂಪ್ರದಾಯ, ಆಚರಣೆಗಳು, ವಿಧಿ-ನಿಷೇದ, ನಂಬಿಕೆಗಳನ್ನು ಹೊಂದಿದ್ದಾರೆ. ಪ್ರಾಚೀನ ಕಾಲದಿಂದಲೂ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಕುರುಬನಿರುವ ಊರು ಕುಬೇರನಾಗರ, ಕುರುಬನ ಬೋಣಿಯಾದರೆ ಲಾಭ ಎಂಬ ಗಾದೆಗಳು ಕುರುಬರು ಸಮಾಜದಲ್ಲಿ ಹೊಂದಿರುವ ಗೌರವವನ್ನು ಸೂಚಿಸುತ್ತವೆ. ಕುರಬರು ನ್ಯಾಯ ಹೇಳುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ಹಾಗೆಯೇ ವೈದ್ಯಪದ್ಧತಿಯಲ್ಲಿ ಪ್ರವೀಣರಾಗಿದ್ದರೆಂದು ಸಂಶೋಧನಾ ಅಧ್ಯಯನದ ಮೂಲಕ ಚಿತ್ರಿಸಲಾಗಿದೆ.

ಧಾರ್ಮಿಕವಾಗಿ ವಿಶಿಷ್ಟವಾದ ಪರಂಪರೆಯನ್ನು ಹೊಂದಿದ್ದಾರೆ. ಕಾಲದಿಂದ ಕಾಲಕ್ಕೆ ವೈಷ್ಣವ, ಬೌದ್ಧ, ಜೈನ, ವೀರಶೈವ ಧರ್ಮಗಳಿಗೆ ಪ್ರಭಾವಿತರಾಗಿ ಮತಾಂತರಗೊಂಡಿರುವರೆಂದು ತಿಳಿಯುತ್ತದೆ. ಮೂಲತಃ ಶೈವ ಧರ್ಮದ ಅನುಯಾಯಿಗಳು ಎಂಬುದಕ್ಕೆ ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧ, ಅಮೋಘಸಿದ್ಧ ಮೊದಲಾದ ಶೈವ ದೇವರುಗಳನ್ನು ಆರಾಧಿಸುವುದೇ ಕಾರಣವಾಗಿದೆ. ಇಂದಿಗೂ ವೈಷ್ಣವ ಧರ್ಮದ ಅನುಯಾಯಿಗಳನ್ನು ಸಹ ಕಾಣಬಹುದಾಗಿದೆ. ಧಾರ್ಮಿಕವಾಗಿ ಅನೇಕ ರೀತಿಯ ವಿಶಿಷ್ಟ ಆಚರಣೆ ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಹರಕೆಗಳು, ನಂಬಿಕೆಗಳು ತಮ್ಮದೇ ಆದ ಪಾತ್ರವಹಿಸುವುದು ಕಂಡುಬರುತ್ತದೆ. ಕುರುಬರು ಅನೇಕ ಗುರುಮಠಗಳನ್ನು ಹೊಂದಿರುವುದು ಅವರ ಧಾರ್ಮಿಕ ವೈಶಿಷ್ಟ್ಯತೆಗೆ ಸಾಕ್ಷಿಯಾಗಿದೆ.

ಕುರಬರ ಕಲೆ ಎಂದೇ ಪ್ರಸಿದ್ಧಿಯಾದ ಡೊಳ್ಳು ಕುಣಿತ, ಡೊಳ್ಳಿನ ಹಾಡುಗಾರಿಕೆಗಳು ವಿಶೇಷವಾದ ಸ್ಥಾನ ಪಡೆದಿವೆ. ಪ್ರಾಚೀನ ಕಾಲದಿಂದಲೂ ಸಾಹಿತ್ಯ, ಕಲೆಗೆ ಪ್ರಾಮುಖ್ಯತೆ ನೀಡಿದ್ದಾರೆ. ಸಾಹಿತ್ಯದಲ್ಲಿ ಕಾಳಿದಾಸ, ಶರಣ ವೀರಗೊಲ್ಲಾಳ, ಕನಕದಾಸ, ಸಂಗಮವಂಶದ ಗಂಗಾಬಿಕೆ, ಅಲ್ಲದೆ ಅನೇಕರು ವಿಪುಲ ಸಾಧನೆ ಮಾಡಿದ್ದಾರೆ. ಡೊಳ್ಳುಕುಣಿತ, ಹಾಡುಗಾರಿಕೆ ಮೂಲಕ ಕನ್ನಡ ಸಂಸ್ಕೃತಿಗೆ ವಿಶೇಷ ಕೊಡುಗೆ ನೀಡಿರುವುದು ಕಂಡುಬರುತ್ತದೆ. ಇಂದಿಗೂ ಡೊಳ್ಳು ಕುರುಬರಿಗೆ ಮೀಸಲಾದ ವಾದ್ಯ ಎಂಬ ನಂಬಿಕೆಯಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಈ ಹಿನ್ನೆಲೆಯಲ್ಲಿ ಹಾಲುಮತ ಸಂಸ್ಕೃತಿ ಬೇಟೆಗಾರ, ಪಶುಪಾಲಕ-ಕೃಷಿಕ ಸಂಸ್ಕೃತಿಯಾಗಿದೆ ಎಂದು ತಿಳಿಯುತ್ತದೆ. ಹೀಗಾಗಿ ಇಂಥ ವಿಶಿಷ್ಟ ಪರಂಪರೆ, ಸಂಸ್ಕೃತಿಯುಳ್ಳ ಕುರುಬರ ಬಗ್ಗೆ ಒಂದು ಚಾರಿತ್ರಿಕ ಅಧ್ಯಯನ ಕೈಗೊಳ್ಳುವುದು ಅವಶ್ಯಕ ಎಂದೆನಿಸುತ್ತದೆ.

**ಅಧ್ಯಯನದ ಉದ್ದೇಶ**

ಭವ್ಯವಾದ ಪರಂಪರೆಯನ್ನು ಹೊಂದಿರುವ ಕುರುಬ ಸಮುದಾಯದ ಬಗ್ಗೆ ಆಮೂಲಾಗ್ರವಾದ ಅಧ್ಯಯನ ನಡೆದಿಲ್ಲ ಎನ್ನಬಹುದಾಗಿದೆ. ಸುಮಾರು ೨೦ನೇ ಶತಮಾನದ ಆರಂಭದಲ್ಲಿ ಬ್ರಿಟಿಷರ ಆಡಳಿತಾತ್ಮಕ ಕಾರಣಗಳಿಂದಾಗಿ ಭಾರತದ ವಿಭಿನ್ನ ಜನಪದ ಸಮುದಾಯಗಳನ್ನು ಕುರಿತಂತೆ ಜನಾಂಗಿಕ ಸಮೀಕ್ಷೆ ನಡೆಸಲಾಯಿತು. ಆಗ ಗ್ರಿಯರ್‌ಸನ್, ಪಾಸೆಟ್, ಥರ್‌ಸ್ಟನ್, ಹಯವದನರಾವ್, ಅನಂತ ಕೃಷ್ಣಅಯ್ಯರ್ ಮೊದಲಾದವರು ಬುಡಕಟ್ಟುಗಳ ಬಗ್ಗೆ ಅಧ್ಯಯನ ನಡೆಸಿದರು. ಮಾನವಶಾಸ್ತ್ರಜ್ಞನಾದ ಥರಸ್ಟನ್ ತಮ್ಮ ಕೃತಿ "ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌಥರ್ನ ಇಂಡಿಯಾ"ದಲ್ಲಿ ಇತರೆ ಜಾತಿಗಳೊಂದಿಗೆ

ಕುರುಬರ ಬಗ್ಗೆ ಸ್ಥೂಲವಾಗಿ ವಿವರಿಸಿದ್ದಾರೆ.

ಎಲ್.ಕೆ.ಅನಂತಕೃಷ್ಣ ಅಯ್ಯರ್ ರವರು ತಮ್ಮ ಕೃತಿ ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್ ಸಂಪುಟ-೪ರಲ್ಲಿ ಕುರುಬರ ಸಮುದಾಯದ ಬಗ್ಗೆ ತಿಳಿಸಿದ್ದಾರೆ. ಇದು ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಕೆಲವು ಪ್ರದೇಶಗಳ ಜನಸಮುದಾಯಗಳೊಂದಿಗೆ ಕುರುಬರ ಬಗ್ಗೆಯೂ ತಿಳಿಸುತ್ತದೆ. ನಂತರ ಸಯ್ಯದ್ ಸಿರಾಜ್ ಉಲ್‌ಹಸನ್‌ರವರು "ದಿ ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಹೆಚ್.ಇ.ಹೆಚ್. ದಿ ನಿಜಾಮ್ ಡೊಮಿನಿಯನ್ಸ್" ಎಂಬ ಕೃತಿಯಲ್ಲಿ ಕುರುಬರ ಜೀವನ ಮತ್ತು ಸಂಸ್ಕೃತಿಯನ್ನು ವಿವರಿಸಿದ್ದಾರೆ.

ಆರ್.ಇ.ಎಂಥೋವೆನ್‌ರವರ "ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ" ಸಂಪುಟ೨ರಲ್ಲಿ ದಕ್ಷಿಣ ಪ್ರದೇಶದ ಕುರುಬರ ಬಗ್ಗೆ ವಿವರಿಸಿದ್ದಾರೆ. ಇದರಲ್ಲಿ ಕುರುಬರ ಜೀವನ ಸಂಸ್ಕೃತಿಯೊಂದಿಗೆ ರಾಜಕೀಯ ವಿಷಯಗಳ ಬಗ್ಗೆ ಉಲ್ಲೇಖಿಸಲಾಗಿದೆ. ನಂತರ ಸಚ್ಚಿದಾನಂದರವರ "ಎನ್‌ಸೈಕ್ಲೋಪೆಡಿಕ್ ಪ್ರೊಫೈಲ್ ಆಫ್ ಇಂಡಿಯನ್ ಟ್ರೈಬ್ಸ್" ಸಂಪುಟ-೨ರಲ್ಲಿ ಕುರುಬರ ಬಗ್ಗೆ ಸೂಕ್ಷ್ಮವಾಗಿ ವಿವರಿಸಿದ್ದಾರೆ.

ಕುರುಬರ ಇತಿಹಾಸವನ್ನು ಸಮಗ್ರವಾಗಿ ತಿಳಿದುಕೊಳ್ಳಲು ಕೆ.ಆರ್. ಹನುಮಂತಯ್ಯನವರು ರಚಿಸಿದ ಕುರುಬರ ಚರಿತ್ರೆ (೧೯೨೬) ಸಹಾಯಕವಾಗುತ್ತದೆ. ಇದು ಕುರುಬರ ರಾಜಕೀಯ ಧಾರ್ಮಿಕ ಜೀವನದ ಬಗ್ಗೆ ವಿವರಿಸುತ್ತದೆ. ಆದರೆ ಕುರುಬರ ರಾಜಕೀಯ ಜೀವನದ ಬಗ್ಗೆ ಸ್ಪಷ್ಟ ಆಧಾರಗಳ ಕೊರತೆ ಎದ್ದುಕಾಣುತ್ತದೆ. ಕುರುಬರ ಸಂಸ್ಕೃತಿ, ಪರಂಪರೆಯನ್ನು ಶಂಭಾ ಜೋಶಿಯವರು ತಮ್ಮ "ಹಾಲುಮತ ದರ್ಶನ" ಕೃತಿಯಲ್ಲಿ ವಿವರಿಸಿದ್ದಾರೆ. ಈ ಕೃತಿಯು ಕುರುಬರ ಪ್ರಾಚೀನತೆ ಹಾಗೂ ಕ್ಷಾತ್ರವನ್ನು ಸ್ಥೂಲವಾಗಿ ವಿವರಿಸುತ್ತದೆ.

ಕುರುಬರಲ್ಲಿ ಮೌಖಿಕ ಚರಿತ್ರೆ ಪ್ರಮುಖ ಸ್ಥಾನಪಡೆದಿದೆ. ಮೌಖಿಕ ಕಥೆ, ಡೊಳ್ಳಿನ ಹಾಡುಗಳ ರೂಪದಲ್ಲಿದ್ದ ಚರಿತ್ರೆಯು ಇತ್ತೀಚೆಗೆ ಹಾಲುಮತ ಪುರಾಣಗಳ ರೂಪದಲ್ಲಿ ಲಿಖಿತವಾಗಿ ಹೊರ ಹೊಮ್ಮಿದೆ. ಅವುಗಳಲ್ಲಿ ರಸ್ತಾಪುರ ಭೀಮಕವಿ ರಚಿಸಿದ "ಹಾಲ್ಮತೋತ್ತೇಜಕ ಪುರಾಣ", ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿಯವರ "ಹಾಲುಮತದ ಪುರಾಣ", ಚನ್ನಬಸವ ಕವಿಗಳ "ಹಾಲುಮತದ ಪುರಾಣ", ಅಪ್ಪಣ್ಣ ಪೂಜಾರಿಯವರ "ಶ್ರೀ ಸಿದ್ಧಬೀರೇಶ್ವರ ಪುರಾಣ", ಅಡಿವೆಪ್ಪ ಮಾಳಪ್ಪ ಸೋಮುತ್ತೆ ಒಡೆಯರ್‌ರವರ "ಸುಕ್ಷೇತ್ರ ಹುಲಿಜಂತಿ ಮಹಾಲಿಂಗರಾಯರ ಹಾಲುಮತ ಪುರಾಣ", ಡಾ.ವೀರಣ್ಣ ದಂಡೆಯವರು ಸಂಪಾದಿಸಿದ ಸಿದ್ದಪ್ಪಮೇಟಿ ಹಾಡಿದ "ಜನಪದ ಹಾಲುಮತ ಮಹಾಕಾವ್ಯ", "ತಗರಪವಾಡ ಹಸ್ತಪ್ರತಿ", ಗಂಗಾಧರ ದೈವಜ್ಞರು ಸಂಪಾದಿಸಿದ, ಅಡಿವೆಪ್ಪ ಒಡೆಯರ್ ಹಾಡಿದ "ಮಾಳಿಂಗರಾಯನ ಕಾವ್ಯ" ಮೊದಲಾದವು ಕುರುಬರ ಮೂಲವನ್ನು ಪೌರಾಣಿಕವಾಗಿ ಉಲ್ಲೇಖಿಸುತ್ತವೆ. ಶಿವ-ಪಾರ್ವತಿಯರು ಕುರುಬರ ಸೃಷ್ಟಿಕರ್ತರು ಎಂಬ ಅಂಶ ಇಲ್ಲಿ ಪ್ರಮುಖವಾಗಿದೆ. ಅಲ್ಲದೆ ಕುರುಬರ ಧಾರ್ಮಿಕ ಪರಂಪರೆಯ ಸ್ಪಷ್ಟ ಚಿತ್ರಣ ದೊರೆಯುತ್ತದೆ.

ಉತ್ತರ ಭಾರತದ ಡಾ.ಶ್ಯಾಂಸಿಂಗ್ ಶಶಿಯವರು "ದಿ ಶೆಪರ್ಡ್ಸ್ ಆಫ್ ಇಂಡಿಯಾ" ಕೃತಿಯನ್ನು ರಚಿಸಿದರು. ಈ ಕೃತಿಯನ್ನು ಬಿ.ಕೆ.ರವಿಯವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕೃತಿ ಭಾರತದಾದ್ಯಂತ ನೆಲೆಸಿರುವ ವಿವಿಧ ಹೆಸರಿನ ಕುರುಬರನ್ನು ವಿಶ್ಲೇಷಿಸುತ್ತದೆ. ಆದರೆ ಇದು ಕುರುಬರ ರಾಜಕೀಯ ಚರಿತ್ರೆಯನ್ನು ನೀಡುವುದಿಲ್ಲ. ಇತ್ತೀಚೆಗೆ ಅನೇಕ ಲೇಖಕರು

ಕುರುಬರ ಬಗ್ಗೆ ಕೃತಿಗಳನ್ನು, ಲೇಖನಗಳನ್ನು ರಚಿಸುತ್ತಿರುವುದು ಕಂಡುಬರುತ್ತದೆ. ಶಿವಾನಂದ ಗುಬ್ಬಣ್ಣವರ "ಕರ್ನಾಟಕದ ಕುರುಬರು" ಕೃತಿಯು ಕೇವಲ ಕುರುಬರ ಪೌರಾಣಿಕ ಹಿನ್ನೆಲೆಯೊಂದಿಗೆ ಧಾರ್ಮಿಕ, ಸಾಮಾಜಿಕ ಜೀವನವನ್ನು ನಿರೂಪಿಸುತ್ತದೆ. ಇದರಲ್ಲಿ ರಾಜಕೀಯ ಚರಿತ್ರೆಯ ಸ್ಪಷ್ಟತೆಯನ್ನು ಪಡೆದಿರುವುದಿಲ್ಲ. ಮೈಸೂರಿನ ಒಡೆಯರ್ ಡಿ ಹೆಗ್ಗಡೆಯವರು ಅನೇಕ ಉತ್ತಮ ಕೃತಿಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ಚಾರಿತ್ರಿಕವಾಗಿ ಹಕ್ಕ-ಬುಕ್ಕ, ಪ್ರೌಢದೇವರಾಯ, ಸಂಗೊಳ್ಳಿರಾಯಣ್ಣ, ಕುರುಬರ ರಾಜ ವಂಶಗಳು, ಸಾಮಾಜಿಕ ಧಾರ್ಮಿಕ, ಸಾಹಿತ್ಯಿಕ ಕೃತಿಗಳಲ್ಲಿ ಹಾಲುಮತ ಕುರುಬ ಜನಾಂಗದ ಇತಿಹಾಸ, ಶ್ರೀ ಮೈಲಾರಲಿಂಗ, ಶ್ರೀ ಕನಕದಾಸರು, ವಚನಕಾರ ಶಿವಯೋಗಿ ಸಿದ್ಧರಾಮ, ಶ್ರೀ ರೇವಣಸಿದ್ಧೇಶ್ವರ ಮತ್ತು ಶ್ರೀ ಬೀರೇಶ್ವರರು, ಕುರುಬ ಜನಾಂಗದ ಅಭಿವೃದ್ಧಿ ಸಮಸ್ಯೆಗಳು, ಕವಲುದಾರಿಯಲ್ಲಿ ಕುರುಬರು ಎಂಬ ಮೊದಲಾದ ಅಧ್ಯಯನಗಳು ಈ ಕುರಿತು ಬೆಳಕು ಚೆಲ್ಲಿದರೂ ಸಾಂಸ್ಕೃತಿಕ ಅಧ್ಯಯನಗಳ ಕೊರತೆಯು ಎದ್ದುಕಾಣುತ್ತದೆ. ಪ್ರಸ್ತುತ ಅಧ್ಯಯನವನ್ನು ಚರಿತ್ರೆಯ ಹಿನ್ನೆಲೆಯ ದೃಷ್ಟಿಕೋನದ ಮೂಲಕ ನೋಡಲಾಗಿದೆ.

ಬೋನಾ ಬಸವರಾಜರವರ "ಹಾಲುಮತದ ಹುಟ್ಟು", ಬ.ಪ.ನಾಯ್ಕರವರ "ಹಾಲುಮತಸ್ಥರು", ಎಂ.ಬಿ.ನೇಗಿನಹಾಳರ "ಮೈಲಾರ ಮತ್ತು ಖಂಡೋಬ", ಎಂ.ಕರಿಯಪ್ಪನವರ "ಮೇಷ ವಿಜಯ", ಮತ್ತು "ಮೇಷ ಸಮೀಕ್ಷೆ", ಇವುಗಳಲ್ಲದೆ ಅನೇಕ ಲೇಖನಗಳನ್ನೊಳಗೊಂಡ ಕೃತಿಗಳು ಸಂಪಾದನೆಗೊಂಡಿವೆ. ಅವುಗಳಲ್ಲಿ ಡಾ.ಶ್ರೀರಾಮ ಇಟ್ಟಣ್ಣನವರ "ಹಾಲಕೆನೆ", ಎಂ.ಕರಿಯಪ್ಪನವರ "ಹಾಲತೊರೆ", ಎಂ.ಜೈಕುಮಾರ ರವರ "ಪಾವನ", ಕಾ.ತ.ಚಿಕ್ಕಣ್ಣನವರ "ಕಾಗಿನೆಲೆ", ಡಾ.ಎಂ.ಬಿ.ಕೊಟ್ರೆಶೆಟ್ಟಿಯವರ "ಮೈಲಾರಲಿಂಗ", ಡಾ.ನಿಂಗಣ್ಣ ಸಣ್ಣಕ್ಕಿಯವರ "ಕಾಯಕಯೋಗಿ", ಮಲ್ಲೇಪುರಂ ಜಿ.ವೆಂಕಟೇಶರವರ "ಶಂಭಾಕೃತಿ ಸಂಪುಟಗಳು" ಕುರುಬರ ಕುರಿತು ಅನೇಕ ಲೇಖನಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ.

ಕುರುಬರ ಬಗ್ಗೆ ಅಧ್ಯಯನ ಮಾಡಿ ಲೇಖನ ಬರೆದವರಲ್ಲಿ ಪ್ರೊ.ಸುಧಾಕರ, ಡಾ.ಕೆ. ಎಂ.ಮೈತ್ರಿ, ಡಾ.ಶ್ರೀರಾಮ ಇಟ್ಟಣ್ಣವರ, ಡಾ.ವೀರಣ್ಣ ದಂಡೆ, ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಪುರುಷೋತ್ತಮ ಬಿಳಿಮಲೆ, ಡಾ. ಎಂ.ಎಂ.ಪಡಶೆಟ್ಟಿ, ಪ್ರೋ.ಜ್ಯೋತಿ ಹೊಸೂರ, ಡಾ.ವಿ.ಎಸ್.ವಾಳಿ, ಡಾ.ಡಿ.ಬಿ. ನಾಯಕ, ಬೋನಾ ಬಸವರಾಜ, ಡಾ.ಎಸ್.ಸಿ.ಪಾಟೀಲ, ಡಾ.ಎಂ.ಚಿದಾನಂದಮೂರ್ತಿ, ಡಾ.ಮಲ್ಲಿಕಾ ಘಂಟಿ, ಡಾ.ನಿಂಗಣ್ಣ ಸಣ್ಣಕ್ಕಿ, ದೊಡ್ಡಣ್ಣ ಗದ್ದನಕೇರಿ, ಎನ್.ಬಿ.ತೋಂಟಾಪುರ, ಡಾ.ಶಿವನಾಂದ ಗುಬ್ಬಣ್ಣವರ, ಡಾ.ಎಚ್.ಜೆ.ಲಕ್ಕಪ್ಪಗೌಡ, ಡಾ.ರಾಜಪ್ಪ ದಳವಾಯಿ, ಎಂ.ಜೈಕುಮಾರ, ರುದ್ರಣ್ಣ ಹರ್ತಿಕೋಟೆ, ಬಸವರಾಜ ಆಕಳವಾಡಿ, ಎಂ.ಎಲ್.ವಿಜಯಕುಮಾರಿ, ಡಾ.ಚಿಕ್ಕಣ್ಣ ಯಣ್ಣೆಕಟ್ಟೆ, ಎಂ.ಕೆ.ಪುಷ್ಪಾ. ಹೆಚ್.ಎಂ.ಆರ್.ಗೌಡ, ಶಿವಪ್ಪ ನ.ನೀರಲಗಿ, ಲಕ್ಕವಳ್ಳಿ ಮಂಜುನಾಥ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಪ್ರೋ.ಮಲ್ಲೇಪುರಂ ಜಿ.ವೆಂಕಟೇಶ ಮೊದಲಾದವರಾಗಿದ್ದಾರೆ.

ಕುರುಬರ ಬಗ್ಗೆ ಎಂ.ಫಿಲ್, ಪಿಎಚ್.ಡಿ ಪ್ರಬಂಧಗಳು ಕೂಡ ರಚಿಸಲ್ಪಟ್ಟಿವೆ. ಶಾಂತಪ್ಪ ಶಿ.ತಳ್ಳಿಹಾಳರವರ ಹಾಲುಮತ ಮಹಾಕಾವ್ಯದಲ್ಲಿ ಉಲ್ಲೇಖಿತ ಸ್ಥಳಗಳ ಪರಿವೀಕ್ಷಣೆ, ಹಾಗೂ ಪಿಎಚ್‌ಡಿ ಮಹಾ ಪ್ರಬಂಧಗಳಲ್ಲಿ ವಾಯ್.ಕೆ.ಗುಂಡಕರ್ಜಗಿಯವರ ಹಂಡೆಕುರುಬರು ಒಂದು ಅಧ್ಯಯನ, ಎಸ್.ಬಿ.ಬಿರಾದಾರ್ ರವರ ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ವಾಸ್ತು ಶಿಲ್ಪಕಲೆ, ಬಿರಾದಾರ ವಿಠ್ಠಲರವರ ಬೀದರ್ ಜಿಲ್ಲೆಯ ಕುರುಬರ ಸಾಂಸ್ಕೃತಿಕ ಅಧ್ಯಯನ, ಸಿದ್ಧಲಿಂಗ ಶಾಖಾಪುರ

ಅವರ ಹೈದ್ರಾಬಾದ ಕರ್ನಾಟಕದ ಕುರುಬರು, ನಾಗೇಂದ್ರ ಪೂಜಾರಿಯವರ ಹಾಲುಮತ ಮಹಾಕಾವ್ಯ ಅಧ್ಯಯನ ಮೊದಲಾದವುಗಳಿವೆ. ಇತ್ತೀಚೆಗೆ ಇನ್ನೂ ಕೆಲವು ಪ್ರಬಂಧಗಳು ರಚಿಸಲ್ಪಡುತ್ತಿರುವುದು ಕಂಡುಬರುತ್ತದೆ. ಆದರೆ ಸಂಪೂರ್ಣವಾಗಿ ಕುರುಬರ ಚಾರಿತ್ರಿಕ ಅಧ್ಯಯನವಾಗಿಲ್ಲವೆಂದು ಹೇಳಬಹುದಾಗಿದೆ.

ಹೈದರಾಬಾದ ಕರ್ನಾಟಕ ಪ್ರದೇಶವು ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಹೊಂದಿದೆ. ಈ ಪ್ರದೇಶದಾದ್ಯಂತ ಕುರುಬರು ನೆಲೆಸಿರುವುದು ಕಂಡು ಬರುತ್ತದೆ. ಬೀದರ್, ಗುಲ್ಬರ್ಗಾ, ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ನೆಲೆಸಿರುವ ಕುರುಬರು ಪ್ರದೇಶಕ್ಕನುಗುಣವಾಗಿ ವಿಭಿನ್ನ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಬೀದರ್, ಗುಲ್ಬರ್ಗಾದಲ್ಲಿ ಗೊಂಡರು, ಬಳ್ಳಾರಿಯಲ್ಲಿ ಹಂಡೆ ಕುರುಬರು, ಕೊಪ್ಪಳ, ರಾಯಚೂರುಗಳಲ್ಲಿ ಹಾಲುಮತದವರೆಂದು ಗುರುತಿಸಲ್ಪಡುತ್ತಾರೆ. ಆದರೆ ಇವರ ಸಂಸ್ಕಾರ, ಸಂಪ್ರದಾಯಗಳಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಪ್ರಾಚೀನ ಕಾಲದಿಂದಲೂ ನೆಲೆಗೊಂಡಿದ್ದು ರಾಜಪ್ರಭುತ್ವದಲ್ಲಿ ಅರಸರು, ಮಂತ್ರಿಗಳು, ದಂಡನಾಯಕರು, ಗೌಡರು, ತಳವಾರ, ಓಲೇಕಾರ, ದಳವಾಯಿ ಮೊದಲಾದ ಸ್ಥಾನ ಪಡೆದು ಆಳ್ವಿಕೆ ನಡೆಸಿದರು. ಈ ಹೆಸರಿನ ಮನೆತನಗಳು ಇಂದಿಗೂ ಈ ಭಾಗದಲ್ಲಿ ಕಂಡು ಬರುತ್ತವೆ.

ಕುರುಬರ ಆರಾಧ್ಯ ದೇವರುಗಳಾದ ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧ, ಮಾಳಿಂಗರಾಯ, ಅಮೋಘಸಿದ್ಧ ಮೊದಲಾದವರೊಂದಿಗೆ ಸ್ಥಳೀಯ ಪವಾಡ ಪುರುಷರನ್ನು ಸಹ ಆರಾಧಿಸುವುದು ಕಂಡು ಬರುತ್ತದೆ. ಬೀದರ್‌ನಲ್ಲಿ ಪ್ರೇಮಪುರ ಮೈಲಾರಲಿಂಗ, ಗುಲ್ಬರ್ಗಾದ ಯಾದಗಿರಿ ಮಲ್ಲಯ್ಯ, ಬಳ್ಳಾರಿಯಲ್ಲಿ ಮಣ್‌ಮೈಲಾರ ಎಂದು ಮೈಲಾರಲಿಂಗನನ್ನು ಗುರುತಿಸುವುದು ಕಂಡು ಬರುತ್ತದೆ. ಕೊಪ್ಪಳ ಭಾಗದ ಕುರುಬರು ಹೈದರಾಬಾದ ಕರ್ನಾಟಕದ ಪ್ರಸಿದ್ಧ ಆರಾಧನಾ ಸ್ಥಳಗಳಿಗೆ ಭೇಟಿ ಕೊಡುವುದು ಕಂಡು ಬರುತ್ತದೆ. ಪ್ರದೇಶ, ಭಾಷೆಗನುಗುಣವಾಗಿ ಧಾರ್ಮಿಕ ಆಚರಣೆ, ನಂಬಿಕೆಗಳಲ್ಲಿ ಸ್ವಲ್ಪ ವ್ಯತ್ಯಾಸವನ್ನು ಕಾಣಬಹುದಾಗಿದೆ.

ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಜೀವನದಲ್ಲಿ ಭಿನ್ನತೆ ಕಂಡು ಬರುತ್ತದೆ. ಕುರಿ ಸಾಕಾಣಿಕೆ, ಕೃಷಿ, ಕಂಬಳಿ ನೇಯ್ಗೆ, ಪ್ರಮುಖ ವೃತ್ತಿಗಳಾಗಿ ಕಂಡು ಬರುತ್ತವೆ. ಬೀದರ್‌ನ ಕುರುಬರನ್ನು ಪರಿಶಿಷ್ಟ ಪಂಗಡದವರೆಂದು ಗುರುತಿಸಲಾಗಿದೆ. ಇದರಿಂದ ಆ ಭಾಗದ ಕುರುಬರಿಗೆ ಶಿಕ್ಷಣ, ಉದ್ಯೋಗ, ಇನ್ನಿತರ ಸೌಕರ್ಯಗಳಲ್ಲಿ ಮೀಸಲಾತಿ ಪಡೆಯಲು ಅನುಕೂಲವಾಗಿದೆ. ಆದರೆ ಉಳಿದ ಭಾಗದ ಕುರುಬರಿಗೆ ಈ ರೀತಿಯ ಸೌಲಭ್ಯವಿಲ್ಲ. ಇದರಿಂದಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವಿಕೆ ಕಂಡು ಬರುತ್ತದೆ. ಕುರುಬರು ಡೊಳ್ಳಿನ ಕುಣಿತ, ಹಾಡುಗಾರಿಕೆ, ಸಂಗೀತ, ಸಾಹಿತ್ಯ, ಮೊದಲಾದ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದಾರೆ. ಒಟ್ಟಾರೆ ಹೈದರಾಬಾದ್ ಕರ್ನಾಟಕದ ಪ್ರತಿಯೊಂದು ಜಿಲ್ಲೆಯ ಕುರುಬರೂ ತಮ್ಮದೇ ಆದ ವೈಶಿಷ್ಟ್ಯತೆ ಹೊಂದಿದ್ದಾರೆ. ಅದರಲ್ಲೂ ಕೊಪ್ಪಳ ಜಿಲ್ಲೆಯ ಕುರುಬರ ವೈಶಿಷ್ಟ್ಯತೆಯನ್ನು ಗುರುತಿಸುವ ಹಿನ್ನೆಲೆಯಲ್ಲಿ ಹೈದರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ವಿಷಯವನ್ನು ಪಿಎಚ್.ಡಿ. ಪದವಿಯ ಮಹಾ ಪ್ರಬಂಧದ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಹೈದ್ರಾಬಾದ ಕರ್ನಾಟಕದ ಜಿಲ್ಲೆಗಳಲ್ಲಿ ಒಂದಾದ ಕೊಪ್ಪಳವು ಪ್ರಾಚೀನಕಾಲದಿಂದಲೂ ಕುರುಬ ಸಮುದಾಯದ ನೆಲೆಯಾಗಿರುವುದು ಕಂಡು ಬರುತ್ತದೆ. ಕೊಪ್ಪಳದಲ್ಲಿ ದೊರೆತಿರುವ ಕಲ್ಲು ಬಂಡೆ ಚಿತ್ರಗಳಲ್ಲಿ ಟಗರಿನ ಚಿತ್ರವಿದೆ ಇದರಿಂದಾಗಿ ಕೊಪ್ಪಳವು ಕುರುಬರ ಮೂಲಸ್ಥಳವಾಗಿದೆ ಎಂದು ಹೇಳಬಹುದು. ಇದರಿಂದಾಗಿ ಕುರುಬ

ಸಮುದಾಯವು ಈ ಪ್ರದೇಶದಲ್ಲಿ ತನ್ನದೇ ಆದ ಹಿನ್ನೆಲೆಯನ್ನು ಹೊಂದಿರುವುದು ಕಂಡುಬರುತ್ತದೆ.

ಕುರುಬ ಸಮುದಾಯದ ಪೌರಾಣಿಕ ಸೃಷ್ಟಿ ಮೂಲ, ಚಾರಿತ್ರಿಕ ಹಿನ್ನೆಲೆ, ಕುರುಬರ ನೆಲೆಗಳು, ಒಳಪಂಗಡಗಳ ಬಗ್ಗೆ ತಿಳಿಯುವುದು. ವಿಜಯನಗರ ಪೂರ್ವ ಹಾಗೂ ವಿಜಯನಗರೋತ್ತರ ಕಾಲದ ರಾಜಪ್ರಭುತ್ವದಲ್ಲಿ ಕುರುಬರ ಸ್ಥಾನವನ್ನು ಅವಲೋಕಿಸುವುದು. ಇಂದಿಗೂ ಕುರುಬ ಸಮಾಜದಲ್ಲಿ ನೆಲೆಸಿರುವ ಗುರಿಕಾರ, ಗೌಡ, ಓಲೇಕಾರ, ದಳಪತಿ ಮೊದಲಾದ ಮನೆತನಗಳು ಮಧ್ಯಕಾಲದಲ್ಲಿ ಹೊಂದಿದ್ದ ಸ್ಥಾನದ ಬಗ್ಗೆ ವಿಶ್ಲೇಷಿಸುವುದು. ಕುರುಬರ ಸಾಮಾಜಿಕ ಜೀವನ ವಿಧಾನ, ವಿಧಿ-ನಿಷೇಧಗಳ, ಧಾರ್ಮಿಕ ಪರಂಪರೆ, ಆರ್ಥಿಕ, ಶೈಕ್ಷಣಿಕ, ಕಲೆ ಮತ್ತು ಸಾಹಿತ್ಯದ ಅವಲೋಕನ ಮಾಡುವುದು. ಒಟ್ಟಾರೆ ಈ ಅಧ್ಯಯನದ ಪ್ರಮುಖ ಉದ್ದೇಶ ಕೊಪ್ಪಳ ಜಿಲ್ಲೆಯ ಕುರುಬ ಸಮುದಾಯವನ್ನು ಚಾರಿತ್ರಿಕ ದೃಷ್ಟಿಕೋನದ ಮೂಲಕ ಅವರ ಸಂಸ್ಕೃತಿಯನ್ನು ವಿಶ್ಲೇಷಿಸುವುದಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ವಿಜಯನಗರ ಕಾಲದಿಂದ ಇಂದಿನವರೆಗೆ (ಕ್ರಿ.ಶ. ೧೩೩೬ ರಿಂದ ೨೦೦೬ರವರೆಗೆ) ಎಂಬ ನಿರ್ದಿಷ್ಟ ಕಾಲಾವಧಿಯನ್ನು ಇಟ್ಟುಕೊಳ್ಳಲಾಗಿದೆ. ಮಧ್ಯಕಾಲದ ಆಡಳಿತ ವಿಭಾಗದಲ್ಲಿ ಮಂತ್ರಿ, ದಂಡನಾಯಕ, ದಳಪತಿ, ಗೌಡ, ಪಾಟೀಲ, ಗುರಿಕಾರ, ಹೆಗ್ಗಡೆ, ಓಲೇಕಾರ, ಮೊದಲಾದ ಹುದ್ದೆಗಳನ್ನು ಅಲಂಕರಿಸಿದ್ದರು. ಇಂದಿಗೂ ಈ ಹೆಸರಿನ ಮನೆತನದವರು ಕುರುಬ ಸಮುದಾಯದಲ್ಲಿರುವುದು ಇದಕ್ಕೆ ಸಾಕ್ಷಿಯಾಗಿದೆ. ಕೊಪ್ಪಳ ಭಾಗದಲ್ಲಿ ಗೌಡ, ಪೋಲಿಸ್ ಪಾಟೀಲ, ಮಾಲಿಪಾಟೀಲ, ಗುರಿಕಾರ, ಓಲೇಕಾರ ಮೊದಲಾದ ಮನೆತನದವರು ಕಂಡುಬರುವರಲ್ಲದೆ, ಅನೇಕ ಕುರುಬ ರಾಜವಂಶಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿವೆಯಾದ್ದರಿಂದ ಕೊಪ್ಪಳ ಜಿಲ್ಲೆಯನ್ನು ನಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಕೊಪ್ಪಳ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ತನ್ನ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ. ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಕುರುಬರು ನೆಲೆಸಿದ್ದರೆಂಬುದಕ್ಕೆ ಅನೇಕ ಆಧಾರಗಳಿವೆ. ವಿಜಯನಗರ ಸಾಮ್ರಾಜ್ಯದ ಪ್ರಥಮ ರಾಜಧಾನಿ ಆನೆಗೊಂದಿಯಾಗಿತ್ತು. ಈ ಆನೆಗೊಂದಿ ಇಂದಿನ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿದೆ. ಈ ಪರಿಸರದಲ್ಲಿ ಕುರುಬರ ಜನಸಂಖ್ಯೆ ಅಧಿಕ ಸಂಖ್ಯೆಯಲ್ಲಿದೆ. ಇದಲ್ಲದೆ ಕೊಪ್ಪಳ ಜಿಲ್ಲೆಯ ಕುರುಬರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಜೀವನ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ವಿಜಯನಗರ ಕಾಲದಿಂದ ಇಂದಿನವರೆಗೆ ಎಂಬ ಕಾಲಾವಧಿಯನ್ವಯ ಕೊಪ್ಪಳ ಜಿಲ್ಲೆಯ ಪ್ರಾದೇಶಿಕ ವ್ಯಾಪ್ತಿಯನ್ನು ಈ ಅಧ್ಯಯನಕ್ಕೆ ಇಟ್ಟುಕೊಳ್ಳಲಾಗಿದೆ. ಆದರೂ ವಿಷಯಕ್ಕನುಗುಣವಾಗಿ ವ್ಯಾಪ್ತಿ ಪ್ರದೇಶ ಹಾಗೂ ಕಾಲವನ್ನು ಮೀರಿ ಕುರುಬರ ಬಗ್ಗೆ ಅಧ್ಯಯನ ಮಾಡಿ ವಿಷಯ ಸಂಗ್ರಹಿಸಿ ಪ್ರಬಂಧಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವನ್ನು ಚಾರಿತ್ರಿಕ ದೃಷ್ಟಿಕೋನದ ಹಿನ್ನಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನವಿರುವುದರಿಂದ ಚಾರಿತ್ರಿಕತೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಇದು ಸಮುದಾಯದ ಅಧ್ಯಯನವಾದ್ದರಿಂದ ಅಂತರ ಶಿಸ್ತೀಯ ಅಧ್ಯಯನ ಕ್ರಮವನ್ನು

ಅನುಸರಿಸಲಾಗಿದೆ. ಇದಕ್ಕೆ ಸಂಬಂಧಿಸಿದ ರೀತಿಯಲ್ಲಿ ರಾಜ್ಯಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಧರ್ಮ, ಜಾನಪದ, ಲಲಿತಕಲೆ ಮೊದಲಾದವುಗಳನ್ನು ಬಳಸಿಕೊಳ್ಳಲಾಗಿದೆ. ಕುರುಬರಂಥ ಸಮುದಾಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮರ್ಪಕ ಆಕರಗಳ ಕೊರತೆಯಿರುವುದು ಕಂಡುಬರುತ್ತದೆ. ಹಾಗೂ ಈಗಾಗಲೇ ನಿರೂಪಿತಗೊಂಡಿರುವ ಚರಿತ್ರೆಯಲ್ಲಿ ಕುರುಬರ ಸ್ಪಷ್ಟ ಚಿತ್ರಣ ದೊರೆಯುವುದು ಕಷ್ಟ. ಕುರುಬರ ಬಗೆಗಿನ ದಾಖಲೆಗಳು, ಕಾಗದಪತ್ರಗಳು, ನಿರ್ಲಕ್ಷಕ್ಕೊಳಗಾಗಿ ನಾಶವಾಗಿವೆ. ಇದರಿಂದಾಗಿ ಇಲ್ಲಿಯವರೆಗೆ ಪ್ರಕಟಗೊಂಡ ಶಾಸನಗಳು, ಕೈಫಿಯತ್ತುಗಳು, ಸಂಶೋಧನ ಪ್ರಬಂಧಗಳು, ಪ್ರಮುಖ ಕೃತಿಗಳು, ವಂಶಾವಳಿಗಳನ್ನು ಅಧ್ಯಯನ ಮಾಡುವುದರ ಮೂಲಕ ಕುರುಬರಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಶಾಸನಗಳು, ವೀರಗಲ್ಲುಗಳು, ದೇವಾಲಯಗಳು, ಮೂರ್ತಿ ಶಿಲ್ಪ, ವಾಸ್ತು ಶಿಲ್ಪ, ಕೋಟೆ ಮೊದಲಾದವುಗಳ ಮೂಲಕ ಕುರುಬರ ಚಾರಿತ್ರಿಕ ಜೀವನವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನದ ಪ್ರಮುಖ ಅಂಗವೆಂದರೆ ಕ್ಷೇತ್ರಕಾರ್ಯ. ಅಧ್ಯಯನದ ವ್ಯಾಪ್ತಿ ಪ್ರದೇಶದಾದ್ಯಂತ ನೆಲೆಸಿರುವ ಕುರುಬರ ಪ್ರಮುಖ ಸ್ಥಳಗಳಿಗೆ ಭೇಟಿ ನೀಡಲಾಗಿದೆ. ಆ ಪ್ರದೇಶದ ಕುರುಬರಲ್ಲಿ ಹಿರಿಯ ವ್ಯಕ್ತಿಗಳನ್ನು ಸಂದರ್ಶನ ಮಾಡಿ ಕುರುಬರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಜೀವನದ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಅಲ್ಲದೆ ಕುರುಬರ ಶಾಸನಗಳು, ವೀರಗಲ್ಲುಗಳು, ದೇವಾಲಯಗಳು, ದೊರೆಯುವ ಪ್ರದೇಶಗಳಿಗೆ ಭೇಟಿ ನೀಡಿ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಕೆಲವು ಮೌಖಿಕ ವಿಷಯಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಅದರಲ್ಲಿ ಪುರಾಣಗಳು, ಜನಪದ ಸಾಹಿತ್ಯ, ಮೊದಲಾದವುಗಳನ್ನು ಸಂಗ್ರಹಿಸಿ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ವ್ಯಾಪ್ತಿ ಪ್ರದೇಶದ ಹೊರಗಡೆ ದೊರೆತ ಜನಪದ ಹಾಡು, ಪದ್ಯಗಳು, ಪುರಾಣ ಕತೆಗಳು, ಬೆಡಗುಗಳು, ದೇವರುಗಳು ಮತ್ತು ಸ್ಥಳನಾಮಗಳನ್ನು ಸಂಗ್ರಹಿಸಿ ಬಳಸಿಕೊಂಡು ದಾಖಲಿಸಲಾಗಿದೆ. ಪ್ರಕಟಗೊಂಡ ಸಾಹಿತ್ಯಿಕ ಕೃತಿಗಳು, ಚಾರಿತ್ರಿಕ ಕೃತಿಗಳು, ಅಪ್ರಕಟಿತ ಮಹಾಪ್ರಬಂಧಗಳು, ಲೇಖನಗಳು, ಪತ್ರಿಕೆಗಳನ್ನು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಒಟ್ಟಾರೆ ಈ ಅಧ್ಯಯನವನ್ನು ಒಟ್ಟು ಒಂಬತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳ ವಿವರ ಈ ಕೆಳಗಿನಂತಿವೆ.

**೧. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ**

ಪ್ರಥಮ ಅಧ್ಯಾಯವು ಕುರುಬ ಸಮುದಾಯದ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಳವಡಿಸಿಕೊಂಡ ವಿಧಾನಗಳ ಬಗ್ಗೆ ತಿಳಿಸುತ್ತದೆ.

**೨. ಹೈದರಾಬಾದ ಕರ್ನಾಟಕದ ಚಾರಿತ್ರಿಕ ಹಿನ್ನೆಲೆ**

ಹೈದ್ರಾಬಾದ ಕರ್ನಾಟಕವು ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಹೊಂದಿದೆ. ಅದೇ ರೀತಿ ಕೊಪ್ಪಳವೂ ಸಹ ತನ್ನದೇ ಅದ ಚಾರಿತ್ರಿಕ ಹಿನ್ನೆಲೆ ಹೊಂದಿದೆ. ಈ ಹಿನ್ನೆಲೆಯಲ್ಲಿ ಹೈದ್ರಾಬಾದ ಕರ್ನಾಟಕದ ಚಾರಿತ್ರಿಕ ಹಿನ್ನೆಲೆ ಜೊತೆಗೆ ಕೊಪ್ಪಳದ ಚಾರಿತ್ರಿಕ

ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**೩. ಕುರುಬರ ಚಾರಿತ್ರಿಕ ಹಿನ್ನೆಲೆ**

ದ್ವಿತೀಯ ಅಧ್ಯಾಯವು ಕುರುಬರ ಚಾರಿತ್ರಿಕ ಹಿನ್ನೆಲೆ ಎಂಬ ಶೀರ್ಷಿಕೆ ಹೊಂದಿದೆ. ಕುರುಬ ಪದದ ನಿಷ್ಪತ್ತಿ, ಕುರುಬರ ಪೌರಾಣಿಕ ಮತ್ತು ಚಾರಿತ್ರಿಕ ಮೂಲ, ಕುರುಬರ ನೆಲೆಗಳು, ಒಳಪಂಗಡಗಳ ಕುರಿತು ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

**೪. ರಾಜ ಪ್ರಭುತ್ವದಲ್ಲಿ ಕುರುಬರು**

ನಾಲ್ಕನೇ ಅಧ್ಯಾಯವು ರಾಜಪ್ರಭುತ್ವದಲ್ಲಿ ಕುರುಬರು ಎಂಬ ಶೀರ್ಷಿಕೆಯಡಿಯಲ್ಲಿ ವಿಜಯನಗರ ಪೂರ್ವ ಹಾಗೂ ವಿಜಯನಗರೋತ್ತರ ಕಾಲದ ರಾಜಪ್ರಭುತ್ವದಲ್ಲಿ ಕುರುಬರ ಬಗ್ಗೆ ವಿವರಿಸಲಾಗಿದೆ. ಇದರೊಂದಿಗೆ ಮಧ್ಯಕಾಲದ ಆಡಳಿತದಲ್ಲಿ ಪ್ರಮುಖವಾಗಿದ್ದ ಮಂತ್ರಿ, ದಂಡನಾಯಕ, ಗುರಿಕಾರ, ಓಲೇಕಾರ, ಗೌಡ ಮೊದಲಾದ ಸ್ಥಾನಗಳನ್ನು ಪಡೆದು ಆಡಳಿತ ನಡೆಸಿದ್ದ ಕುರುಬರ ಬಗ್ಗೆಯೂ ಚರ್ಚಿಸಲಾಗಿದೆ. ನಂತರ ಆಧುನಿಕ ಕಾಲದಲ್ಲಿ ಸ್ವಾತಂತ್ರದ ಹೋರಾಟಗಾರರು ಹಾಗೂ ಪ್ರಜಾಪ್ರಭುತ್ವದ ರಾಜಕೀಯದಲ್ಲಿ ಕುರುಬರ ಸ್ಥಾನದ ಬಗ್ಗೆ ವಿವರಿಸಲಾಗಿದೆ. ಇದರಲ್ಲಿ ಜಿಲ್ಲಾ, ತಾಲ್ಲೂಕಾ, ಗ್ರಾಮ, ಪಂಚಾಯಿತಿ ಮಟ್ಟದಲ್ಲಿಯ ಕುರುಬರ ರಾಜಕೀಯ ಸ್ಥಾನದ ಬಗ್ಗೆ ತಿಳಿಸಲಾಗಿದೆ.

**೫. ಸಾಮಾಜಿಕ ಜೀವನ**

ಐದನೆಯ ಅಧ್ಯಾಯದಲ್ಲಿ ಕುರುಬರ ಸಾಮಾಜಿಕ ಜೀವನವನ್ನು ವಿವರಿಸಲಾಗಿದೆ. ಅದರಲ್ಲಿ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ ಹಾಗೂ ಸಂಸ್ಕಾರಗಳು ಸಂಪ್ರದಾಯಗಳು ಎಂಬ ವಿಭಾಗ ಮಾಡಿ ಅಧ್ಯಯನ ಮಾಡಲಾಗಿದೆ. ಜಾತಿವ್ಯವಸ್ಥೆ, ಕುಲಗೋತ್ರಗಳು, ಕುಟುಂಬ ಪದ್ಧತಿ, ವೈದ್ಯಪದ್ಧತಿಗಳಲ್ಲದೆ, ಜನನ, ನಾಮಕರಣ, ಜಾವುಳ, ಋತುಮತಿ, ವಿವಾಹ, ವಿಧವಾ ವಿವಾಹ, ಬಹುಪತ್ನಿತ್ವ, ಬಸವಿ ಬಿಡುವ ಪದ್ಧತಿ, ಮರಣ ಮೊದಲಾದವುಗಳ ಬಗ್ಗೆ ಸವಿಸ್ತಾರವಾಗಿ ಚಾರಿತ್ರಿಕ ಅಂಶಗಳೊಂದಿಗೆ ಚರ್ಚಿಸಲಾಗಿದೆ.

**೬. ಧಾರ್ಮಿಕ ಜೀವನ**

ಆರನೆಯ ಅಧ್ಯಾಯವು ಕುರುಬರ ಧಾರ್ಮಿಕ ಜೀವನ ವಿಧಾನವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಕುರುಬರ ದೇವ-ದೇವತೆಗಳು, ಕುರುಬರ ಮೇಲೆ ಇತರೆ ಧರ್ಮಗಳ ಪ್ರಭಾವ, ಧಾರ್ಮಿಕ ಆಚರಣೆಗಳು, ನಂಬಿಕೆಗಳು, ಹರಕೆಗಳು, ಗುರುಮಠಗಳು ಎಂಬ ಉಪಶೀರ್ಷಿಕೆಯಡಿ ಧಾರ್ಮಿಕ ಜೀವನದ ಬಗ್ಗೆ ಸವಿಸ್ತಾರವಾಗಿ ಚಾರಿತ್ರಿಕ ಅಂಶಗಳ ಮೂಲಕ ವಿವರಿಸಲಾಗಿದೆ.

**೭. ಆರ್ಥಿಕ ಮತ್ತು ಶೈಕ್ಷಣಿಕ ಜೀವನ**

ಏಳನೆ ಅಧ್ಯಾಯವು ಕುರುಬರ ಆರ್ಥಿಕ ಮತ್ತು ಶೈಕ್ಷಣಿಕ ಜೀವನವನ್ನು ಒಳಗೊಂಡಿದೆ. ಆರ್ಥಿಕ ವ್ಯವಸ್ಥೆಯಲ್ಲಿ ಪಶುಪಾಲನೆ,

ಕೃಷಿ, ಕಂಬಳಿ ನೇಯ್ಗೆ, ವ್ಯಾಪಾರ ಮೊದಲಾದ ವೃತ್ತಿಗಳ ಬಗ್ಗೆ ಚಾರಿತ್ರಿಕ ಹಿನ್ನೆಲೆಯ ಮೂಲಕ ಚರ್ಚಿಸಲಾಗಿದೆ. ಅದೇ ರೀತಿ ಶೈಕ್ಷಣಿಕ ವಿಭಾಗದಲ್ಲಿ ಹಿಂದಿನ ಕಾಲದ ಶಿಕ್ಷಣ ಪದ್ಧತಿಯೊಂದಿಗೆ ಇಂದಿನ ಶೈಕ್ಷಣಿಕ ಸ್ಥಿತಿಗತಿಯನ್ನು ಹೇಳಲಾಗಿದೆ. ಇಂದು ಕುರುಬರು ಸ್ಥಾಪಿಸಿಕೊಂಡಿರುವ ಶಿಕ್ಷಣ ಸಂಸ್ಥೆಗಳ ಜೊತೆಗೆ ಅವರ ಶೈಕ್ಷಣಿಕ ಸ್ಥಿತಿಯನ್ನು ವಿವರಿಸಲಾಗಿದೆ.

**೮. ಕಲೆ ಮತ್ತು ಸಾಹಿತ್ಯ**

ಎಂಟನೆಯ ಅಧ್ಯಾಯ ಕುರುಬರ ಕಲೆ ಮತ್ತು ಸಾಹಿತ್ಯಿಕ ಜೀವನಕ್ಕೆ ಸಂಬಂಧಿಸಿದೆ. ಇದರಲ್ಲಿ ಕುರುಬರ ಡೊಳ್ಳು ತಯಾರಿಕೆ, ಡೊಳ್ಳು ಕುಣಿತ, ಡೊಳ್ಳಿನ ಹಾಡುಗಳ ಹಾಡುಗಾರಿಕೆಯೊಂದಿಗೆ ಸಾಹಿತ್ಯದಲ್ಲಿ ಸಾಧನೆ ಮಾಡಿದ ಪ್ರಮುಖ ವ್ಯಕ್ತಿಗಳ ಬಗ್ಗೆ ವಿವರಿಸಲಾಗಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ಕುರುಬರು ಕನ್ನಡ ನಾಡಿನ ಸಂಸ್ಕೃತಿಗೆ ನೀಡಿದ ಕೊಡುಗೆಗಳ ಬಗ್ಗೆ ಪ್ರಾಮುಖ್ಯತೆ ನೀಡಲಾಗಿದೆ.

**೯. ಉಪಸಂಹಾರ**

ಒಂಬತ್ತನೆಯ ಅಧ್ಯಾಯ ಉಪಸಂಹಾರವಾಗಿದ್ದು, ಇದರಲ್ಲಿ ಎಲ್ಲಾ ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಗಳನ್ನು ವಿವರಿಸಲಾಗಿದೆ. ಕೊನೆಯ ಭಾಗವಾದ ಅನುಬಂಧದಲ್ಲಿ ವಕ್ತೃಗಳ ಪಟ್ಟಿ, ಅಧ್ಯಯನಕ್ಕೆ ಬಳಸಿಕೊಂಡ ಗ್ರಂಥಗಳ ಸೂಚಿ, ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

ಒಟ್ಟಾರೆ ಶಾಸನಗಳು, ವೀರಗಲ್ಲುಗಳು, ಸ್ಮಾರಕಗಳು, ದಾಖಲೆಗಳು, ಸಾಹಿತ್ಯಿಕ ಕೃತಿಗಳು, ಕೈಫಿಯತ್ತುಗಳಲ್ಲದೆ, ಕ್ಷೇತ್ರಕಾರ್ಯದ ಮೂಲಕ ದೊರೆತ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡು ಕುರುಬರ ಚಾರಿತ್ರಿಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

## ೨. ಹೈದರಾಬಾದ ಕರ್ನಾಟಕದ ಚಾರಿತ್ರಿಕ ಹಿನ್ನೆಲೆ

ದಕ್ಷಿಣ ಭಾರತದಲ್ಲಿ ದಂಡಯಾತ್ರೆ ಕೈಗೊಂಡ ದೆಹಲಿಯ ಚಕ್ರವರ್ತಿ ಔರಂಗಜೇಬ ಬಿಜಾಪುರದ ಆದಿಲ್ ಷಾಹಿಗಳ ಆಳ್ವಿಕೆಯನ್ನು ಅಂತ್ಯಗೊಳಿಸಿದನು. ಇದರಿಂದಾಗಿ ಮುಂಬಯಿ, ಮದ್ರಾಸ, ಕರ್ನಾಟಕ ಭಾಗಗಳು ಮೊಗಲ ಸಾಮ್ರಾಜ್ಯಕ್ಕೆ ಸೇರಿದವು.[೧] ದಖನ್ ಪ್ರಾಂತ್ಯವನ್ನು ನೋಡಿಕೊಳ್ಳುವ ಸಲುವಾಗಿ ಮೀರ್ ಕಮರುದ್ದೀನ್ ಎಂಬ ಸುಬೇದಾರ್‌ನನ್ನು ನೇಮಿಸಿದನು. ದಂಡಯಾತ್ರೆ ಕೊನೆಗೊಳಿಸಿ ತನ್ನ ಮೂಲ ಸ್ಥಾನವಾದ ಉತ್ತರದ ಕಡೆಗೆ ಮರಳಿದನು. ನಂತರ ದಖ್ಖನ್ ಪ್ರಾಂತ್ಯದ ಸುಬೇದಾರ್ ಮೀರ್ ಕಮರುದ್ದೀನ್ ಕ್ರಿ.ಶ. ೧೭೨೪ ರಲ್ಲಿ ಸ್ವಾತಂತ್ರ್ಯ ಘೋಷಿಸಿಕೊಂಡು ಆಳ್ವಿಕೆ ನಡೆಸತೊಡಗಿದನು. ಇವನಿಗೆ ಆಸಫಜಾ ಎಂಬ ಬಿರುದಿತ್ತು.[೨] ಇವರ ವಂಶಜರು ನಿಜಾಮರೆಂದು ಗುರುತಿಸಲ್ಪಟ್ಟರು.

ಬ್ರಿಟಿಷರು ಕರ್ನಾಟಕವನ್ನು ಆಡಳಿತಾತ್ಮಕ ದೃಷ್ಟಿಯಿಂದ ಬಾಂಬೆ ಕರ್ನಾಟಕ, ಮದ್ರಸಾ ಕರ್ನಾಟಕ, ಹೈದ್ರಾಬಾದ ಕರ್ನಾಟಕ ಮತ್ತು ಮೈಸೂರು ಪ್ರಾಂತ್ಯವೆಂದು ವಿಭಾಗಿಸಿದರು. ಟಿಪ್ಪುವಿನ ಮರಣದ ನಂತರ ಹೈದರಾಬಾದ ಕರ್ನಾಟಕ ಪ್ರದೇಶವು ಸಂಪೂರ್ಣವಾಗಿ ನಿಜಾಮನ ಕೈವಶವಾಯಿತು. ಅಂದು ಈ ಪ್ರದೇಶದಲ್ಲಿ ಬೀದರ್, ಕಲ್ಬುರ್ಗಿ ಹಾಗೂ ರಾಯಚೂರು ಜಿಲ್ಲೆಗಳಿದ್ದವು. ಇಂದು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳು ಸೇರಿ ಹೈದರಾಬಾದ ಕರ್ನಾಟಕವು ಐದು ಜಿಲ್ಲೆಗಳನ್ನೊಳಗೊಂಡಿದೆ. ಈ ಪ್ರಾಂತ್ಯ ತನ್ನದೇ ಆದ ಚಾರಿತ್ರಿ ಕ ಹಿನ್ನೆಲೆಯನ್ನು ಹೊಂದಿರುವುದು ಕಂಡು ಬರುತ್ತದೆ.

ಹೈದ್ರಾಬಾಬ್ ಕರ್ನಾಟಕದ ಐತಿಹಾಸಿಕ ಹಿನ್ನೆಲೆಯು ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನತೆ ಹೊಂದಿದೆ. ಈ ಪ್ರದೇಶದಲ್ಲಿ ನಡೆಸಿದ ಪ್ರಾಚೀನ ನೆಲೆಗಳ ಉತ್ಖನನದಲ್ಲಿ ದೊರೆತಿರುವ ವಸ್ತುಗಳ ಆಧಾರದ ಮೇಲೆ ಈ ಪ್ರಾಂತ್ಯವು ಪ್ರಾಚೀನ ಕಾಲದಿಂದಲೂ ಆಸ್ತಿತ್ವದಲ್ಲಿತ್ತೆಂದು ತಿಳಿಯುತ್ತದೆ. ತೆಕ್ಕಲಕೋಟೆ, ಮಸ್ಕಿ, ಗಂಗಾವತಿ ಮೊದಲಾದ ಭಾಗಗಳಲ್ಲಿ ಶಿಲಾಯುಗದ ಹಂತದಿಂದ ಕಬ್ಬಿಣ ಯುಗದ ಹಂತದವರೆಗಿನ ಜನಜೀವನ ಕ್ರಮವನ್ನು ತಿಳಿಯಲು ಅನೇಕ ಆಧಾರಗಳು ಲಭ್ಯವಾಗಿವೆ.[೩] ಈ ಹಿನ್ನೆಲೆಯಲ್ಲಿ ಕ್ರಿ.ಪೂ.೨೦೦೦ ವರ್ಷಗಳಿಂದಲೂ ನಿಬಿಡವಾದ ಜನವಸತಿಯಿದ್ದು ಸಾಂಸ್ಕೃತಿಕ, ಆರ್ಥಿಕ ಚಟುವಟಿಕೆಗಳು ನಡೆದಿದ್ದವೆಂದು ತಿಳಿಯುತ್ತದೆ.

ಹೈದ್ರಾಬಾದ ಕರ್ನಾಟಕದ ಪ್ರಾಂತ್ಯವು ಅನೇಕ ರಾಜವಂಶಗಳಿಂದ ಆಳಲ್ಪಟ್ಟಿತ್ತು. ಮೌರ್ಯರು ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಮಸ್ಕಿ, ಕೊಪ್ಪಳ ಪ್ರದೇಶದಲ್ಲಿ ದೊರತಿರುವ ಅಶೋಕನ ಶಿಲಾಶಾಸನಗಳು ಸಾಕ್ಷಿಯಾಗಿವೆ. ಮಸ್ಕಿ ಶಾಸನದಲ್ಲಿ ಅಶೋಕನನ್ನು "ದೇವನಾಂಪ್ರಿಯ ಅಶೋಕ" ಎಂದು ಉಲ್ಲೇಖಿಸಿರುವುದು ವಿಶೇಷ. ಇಲ್ಲಿ ಬೌದ್ಧ ಧರ್ಮ ಪ್ರಚಾರ ಮಾಡಿದನೆಂದು ತಿಳಿಯುತ್ತದೆ. ಕ್ರಿ.ಶ. ಆರಂಭದಿಂದ ಸುಮಾರು ೨ ನೇ ಶತಮಾನಗಳವರೆಗೆ ಶಾತವಾಹನರು ರಾಜ್ಯಭಾರ ಮಾಡಿದರು. ಇವರನ್ನು ಆಂಧ್ರ ಭೃತ್ಯರೆಂದು ಕರೆದರು. ಬಳ್ಳಾರಿ ಜಿಲ್ಲೆಯ ಉತ್ತರ ಭಾಗಕ್ಕೆ ಸಂಬಂಧಿಸಿದವರೆಂದು ಅಭಿಪ್ರಾಯವಿದೆ. ಸನ್ನತಿಯಲ್ಲಿ ಶಾತವಾಹನರ

ಅವಶೇಷಗಳು ದೊರೆತಿವೆ. ಕೊಪ್ಪಳ ಭಾಗಗಳಲ್ಲಿ ನಾಣ್ಯಗಳು, ಮಡಿಕೆ ಚೂರುಗಳು ದೊರೆತಿವೆ. ನಂತರ ಬನವಾಸಿ ಕದಂಬರು, ತಲಕಾಡಿನ ಗಂಗರು, ನೊಳಂಬರು, ಅನೇಕ ಪಾಳೆಯಗಾರರು ಆಳ್ವಿಕೆ ಮಾಡಿದರು. ಇವರ ಆಳ್ವಿಕೆ ಬಗ್ಗೆ ಆಧಾರಗಳ ಕೊರತೆ ಕಂಡು ಬರುತ್ತದೆ.

ಬಾದಾಮಿ ಚಾಲುಕ್ಯರು ಆಳ್ವಿಕೆ ನಡೆಸಿ ಭಾಷೆ, ಸಾಹಿತ್ಯ, ಧರ್ಮಕಲೆ ಮೊದಲಾದ ಸಾಂಸ್ಕೃತಿಕ ಬೆಳವಣಿಗೆಗೆ ಸಹಾಯಕರಾದರು. ನಂತರ ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಅಮೋಘವರ್ಷ ನೃಪತುಂಗನ ಆಸ್ಥಾನ ಕವಿಯಾದ "ಶ್ರೀ ವಿಜಯ" ತನ್ನ ಕವಿರಾಜ ಮಾರ್ಗದಲ್ಲಿ "ತಿರುಳ್ಗನ್ನಡನಾಡು" ಎಂದು ಉಲ್ಲೇಖಿಸಿದ್ದಾನೆ. ಕಲ್ಯಾಣದ ಚಾಲುಕ್ಯರು ಆಳ್ವಿಕೆ ನಡೆಸಿ ಕಲ್ಯಾಣವನ್ನು ರಾಜಧಾನಿಯನ್ನಾಗಿಸಿಕೊಂಡಿದ್ದರು. ಬೀದರ್, ರಾಯಚೂರುಗಳಲ್ಲಿ ೬ನೇ ವಿಕ್ರಮಾದಿತ್ಯನ ಶಾಸನಗಳು ದೊರೆತಿವೆ. ಈ ಪ್ರಾಂತ್ಯದಾದ್ಯಂತ ನಿರ್ಮಿಸಿದ ದೇವಾಲಯಗಳನ್ನು ಇಂದಿಗೂ ಕಾಣಬಹುದಾಗಿದೆ. ನಂತರ ಆಳ್ವಿಕೆ ಮಾಡಿದ ಕಲಚೂರಿಗಳು ಸಹ ಕಲ್ಯಾಣವನ್ನು ರಾಜಧಾನಿ ಮಾಡಿಕೊಂಡು ಆಳಿದರು. ಬಸವಣ್ಣನವರ ಧಾರ್ಮಿಕ ಚಳುವಳಿ ನಡೆದದ್ದು ವಿಶೇಷವಾಗಿದೆ.

ಕಲ್ಯಾಣದ ಕಲಚೂರಿಗಳ ನಂತರ ಈ ಪ್ರಾಂತ್ಯವನ್ನು ಕಾಕತೀಯರು, ಸೇವುಣರು, ಹೊಯ್ಸಳರು ಆಳಿದರು. ಯಾದವರಿಗೆ ಸಂಬಂಧಿಸಿದ ಶಾಸನಗಳು ಈ ಪ್ರಾಂತ್ಯದ ಸಿರವಾಳ, ಸಗರ, ಇಂಗಳಗಿ, ಹಗರಿಟಗಿ, ಯಾಳಗಿ ಮೊದಲಾದ ಸ್ಥಳಗಳಲ್ಲಿ ಲಭ್ಯವಾಗಿವೆ. ಹೊಯ್ಸಳರ ಪ್ರಸಿದ್ಧ ಅರಸ ವಿಷ್ಣುವರ್ಧನ ಈ ಪ್ರಾಂತ್ಯದ ಕುಮ್ಮಟದುರ್ಗವನ್ನು ಆಳಿದನು.[೪]

ವಿಜಯನಗರ ಅರಸರು ಈ ಪ್ರಾಂತ್ಯವನ್ನು ಆಳಿದರೆಂಬುದಕ್ಕೆ ಚಿಂಚನಸೂರು, ಮಸ್ಕಿ, ಶಿರವಾಳ, ಕಲಬುರ್ಗಿ, ಸೇಡಂ, ಹಲಕರಟಿ ಮೊದಲಾದ ಪ್ರದೇಶಗಳಲ್ಲಿ ದೊರೆತ ಶಾಸನಗಳು ಸಾಕ್ಷಿಯಾಗಿವೆ. ರಾಯಚೂರ ಜಿಲ್ಲೆಯ ಮಸ್ಕಿ ಶಾಸನವು "ಅಳಿಯ ರಾಮರಾಯನು ಸದಾಶಿವರಾಯರಿಗೆ ಪುಣ್ಯನಿಮಿತ್ತವಾಗಿ ನಾವಿಂದರ ಮೇಲೆ ವಿಧಿಸಲಾಗಿದ್ದ ಕೆಲವೊಂದು ವೃತ್ತಿ ಕಂದಾಯಕ್ಕೆ ಸಂಬಂಧಿಸಿದ ಅನ್ನು ಪೊನ್ನು ಬಿಟ್ಟ ಹಾಗೂ ಕಡ್ಡಾಯ ಸೇವೆ ಮೊದಲಾದವುಗಳನ್ನು ಮುಕ್ತಗೊಳಿಸಿದನು" ಎಂದು ಉಲ್ಲೇಖಿಸುತ್ತದೆ.[೫] ಹೀಗಾಗಿ ವಿಜಯನಗರದ ಕಾಲದಲ್ಲಿ ಈ ಪ್ರಾಂತ್ಯ ಪ್ರಮುಖ ಸ್ಥಾನ ಪಡೆದಿತ್ತೆಂದು ತಿಳಿಯುತ್ತದೆ. ನಂತರ ಹಸನಗಂಗು ಸ್ಥಾಪಿಸಿದ ಬಹಮನಿ ರಾಜ್ಯವು ಈ ಪ್ರಾಂತ್ಯದಲ್ಲಿತ್ತು. ಗುಲಬರ್ಗಾ ಮೊದಲ ರಾಜಧಾನಿಯಾಗಿ ನಂತರ ಬೀದರಿಗೆ ಸ್ಥಳಾಂತರಿಸಲ್ಪಟ್ಟಿತು. ನಂತರ ಬೀದರ್ ಷಾಹಿಗಳು ಆಳಿದರು, ಔರಂಗಜೇಬನ ಅಧಿಕಾರಿಯಾದ ಮೀರ್ ಕಮುರುದ್ದೀನ್ ಸ್ವತಂತ್ರವಾಗಿ ಔರಂಗಾಬಾದನ್ನು ಆಳಿದನು. ಇವನ ವಂಶಸ್ಥರಾದ ನಿಜಾಮರು ಈ ಭಾಗವನ್ನು ಆಳಿದರು. ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಆಳ್ವಿಕೆ ನಡೆಸಿದರು. ನಿಜಾಮರಿಗೆ ದೊರೆತ ಹೈದರಾಬಾದ್ ಕರ್ನಾಟಕ ರಾಯಚೂರು, ಗುಲ್ಬರ್ಗಾ, ಬೀದರ್ ಪ್ರದೇಶಗಳನ್ನು ಒಳಗೊಂಡಿತ್ತು. ಆದರೆ ಬ್ರಿಟಿಷರು ಪರೋಕ್ಷವಾಗಿ ಆಳ್ವಿಕೆ ನಡೆಸಿದರು. ಭಾರತಕ್ಕೆ ೧೯೪೭ ರಲ್ಲಿ ಸ್ವಾತಂತ್ರ್ಯ ದೊರೆತರೂ ಈ ಪ್ರಾಂತ್ಯಕ್ಕೆ ನಿಜಾಮ ಸ್ವಾತಂತ್ರ್ಯ ನೀಡಲಿಲ್ಲ. ಒಂದು ವರ್ಷದ ನಂತರ ನಿಜಾಮರಿಂದ ಈ ಪ್ರಾಂತ್ಯ ಸ್ವಾತಂತ್ರ್ಯಗೊಂಡಿತು. ಹೀಗಾಗಿ ಹೈದ್ರಾಬಾದ್ ಕರ್ನಾಟಕ ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿರುವುದು ಕಾಣಬಹುದಾಗಿದೆ.

ಹೈದರಾಬಾದ ಕರ್ನಾಟಕ ಸರ್ವಧರ್ಮಗಳ ಆಶ್ರಯ ತಾಣವಾಗಿದೆ. ಹನ್ನೆರಡನೇ ಶತಮಾನದಲ್ಲಾದ ವಚನ ಚಳವಳಿಯು ಈ ಭಾಗದ ಪ್ರಮುಖ ಕೊಡುಗೆಯಾಗಿದೆ. ಅನೇಕ ಪವಾಡ ಪುರುಷರು, ವಚನಕಾರರು, ಸಾಧು-ಸಂತರು, ಈ ಪ್ರದೇಶದಲ್ಲಿ ನೆಲೆಸಿ ಸಾಮಾಜಿಕ, ಧಾರ್ಮಿಕ ಸುಧಾರಣೆಗೆ ಪ್ರಯತ್ನಿಸಿರುವುದು ಕಂಡು ಬರುತ್ತದೆ. ಈ ಪ್ರದೇಶದಾದ್ಯಂತ ಕಲೆ, ಶಿಕ್ಷಣ, ಸಾಹಿತ್ಯ ಮೊದಲಾದವುಗಳು ಉನ್ನತ ಹಂತ ತಲುಪಿದ್ದವೆಂಬುದಕ್ಕೆ ಅನೇಕ ಆಧಾರಗಳಿವೆ. ಅದೇ ರೀತಿ ಈ ಭಾಗದ ಪ್ರತಿಯೊಂದು ಜಿಲ್ಲೆಗಳು ತಮ್ಮದೇ ಆದ ಚಾರಿತ್ರಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವುದು ಕಂಡುಬರುತ್ತದೆ. ಅವುಗಳಲ್ಲಿ ಕೊಪ್ಪಳವೂ ಒಂದಾಗಿದೆ.

### ೨.೧ ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಕೊಪ್ಪಳ ಪ್ರದೇಶವು ಸುಮಾರು ೨೦೦೦ ಕ್ಕೂ ಹೆಚ್ಚು ವರ್ಷಗಳ ಸುದೀರ್ಘ ಚಾರಿತ್ರಿಕ ಪರಂಪರೆಯನ್ನು ಹೊಂದಿದೆ. ಕೊಪ್ಪಳವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಆಧಾರಗಳಿವೆ. ಕನ್ನಡ ಮತ್ತು ಸಂಸ್ಕೃತದ ಅನೇಕ ಶಾಸನಗಳು ಹಾಗೂ ಸಾಹಿತ್ಯಕ ಕೃತಿಗಳೂ ಕೊಪ್ಪಳದ ಪ್ರಾಚೀನತೆಗೆ ಪ್ರಮುಖ ಆಧಾರವನ್ನು ನೀಡುತ್ತವೆ. ಕೊಪ್ಪಳವನ್ನು ಶಾಸನಗಳಲ್ಲಿ ಆದಿತೀರ್ಥ, ಮಹಾತೀರ್ಥ ಎಂದು ವರ್ಣಿಸಲಾಗಿದೆ. ಕ್ರಿ. ಶ. ನಾಲ್ಕನೇ ಶತಮಾನದ ಚಂದ್ರವಳ್ಳಿ ಶಾಸನದಲ್ಲಿ ಕುಪಣ ನಗರದ ಉಲ್ಲೇಖವಿದೆ.[೬] ಅಂದಿನ ಕುಪಣವೇ ಇಂದಿನ ಕೊಪ್ಪಳವಾಗಿದೆ. ಕುಪಣೆ, ಕೂಪಣ, ಕೂಪಣಪುರ, ಕುಪಣಾದ್ರಿ, ಕೂಪಣ ತೀರ್ಥ, ಕೂಪಂ, ಕೂಪಣಪುರುಂ, ಮುಜಾಫರನಗರ, ಸುಲ್ತಾನಗಡ, ನಿಜಾಮಗಡ, ಕೊಪಬಾಲ್, ಕೊಪ್ಪಳ ಎಂಬ ಹೆಸರುಗಳ ಮೂಲಕ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಹೀಗಾಗಿ ಅಂದಿನ ಪ್ರಮುಖ ನಗರವಾಗಿತ್ತೆಂದು ಹೇಳಬಹುದಾಗಿದೆ.

ಸಾಹಿತ್ಯದಲ್ಲಿ ಕೊಪ್ಪಳ ಪ್ರದೇಶ ತಿರುಳ್ಗನ್ನಡ ನಾಡೆಂದು ಗುರುತಿಸಲ್ಪಟ್ಟಿದೆ. ಕ್ರಿ.ಶ. ೯ ನೇ ಶತಮಾನದ ಕವಿರಾಜ ಮಾರ್ಗದಲ್ಲಿ "ಅದರೊಳಗಂ ಕಿಸುವೊಳಲಾ ವಿಧಿತಮಹಾಕೊಪಣನಗರದಾ ಪುಲಿಗೆರೆಯೂ ಸದಭಿಸ್ತುಮಪ್ಪಂ ಕುಂದದಂದದ ನಡುವಣವಾಡೇ ಕನ್ನಡ ತಿರುಳ್" ಎಂದಿದೆ.[೭] ಇದರಿಂದ ಈ ನಗರವು ಪುಲಿಗೆರೆಯ ತಿರುಳ್ಗನ್ನಡ ನಾಡಿನಲ್ಲಿ ಸೇರಿತ್ತೆಂದು ತಿಳಿಯುತ್ತದೆ.

ರನ್ನ ಕವಿ ತನ್ನ ಅಜಿತನಾಥ ಪುರಾಣದಲ್ಲಿ, ಮಂತ್ರಿ ಚಾವುಂಡರಾಯ ತನ್ನ ತ್ರಿಷಷ್ಠಿ ಲಕ್ಷಣ ಮಹಾಪುರಾಣದಲ್ಲಿ, ಹರಿಹರನ ಆದಯ್ಯನ ರಗಳೆಯಲ್ಲಿ, ರಾಘವಾಂಕನ ಸೋಮನಾಥ ಚಾರಿತ್ರದಲ್ಲಿ, ಕೊಪ್ಪಳವು ಉಲೇಖಿಸಿಲ್ಪಟ್ಟಿದೆ. ಹೀಗೆ ಶಾಸನ, ಕಾವ್ಯಗಳಲ್ಲಿ ಕೊಪ್ಪಳದ ಚಾರಿತ್ರಿಕ ಹಿನ್ನೆಲೆ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುವುದು ಕಾಣುತ್ತದೆ.

ಕೊಪ್ಪಳದ ಪ್ರಾಚೀನ ಕಾಲದ ಅವಶೇಷಗಳ ಬಗ್ಗೆ ಹೆಚ್ಚಿನ ಮಾಹಿತಿಗಳಿಲ್ಲವಾದರೂ ಅನೇಕ ಕಲ್ಗೋರಿಗಳು, ಒರಟುಕಲ್ಲಿನ ಆಯುಧಗಳು, ಮಡಿಕೆ ಚೂರುಗಳು ಲಭ್ಯವಾಗಿವೆ. ಮಳೆಮಲ್ಲಪ್ಪ ಗುಡ್ಡದಲ್ಲಿ ದೊರೆತಿರುವ ಕಲ್ಗೋರಿಗಳು ಬೃಹತ್ ಶಿಲಾಯುಗದ ಕಾಲದ್ದೆಂದು ತಿಳಿಯುತ್ತದೆ. ಗವಿಮಠದ ಬೆಟ್ಟದ ಮೇಲೆ ದೊರೆತಿರುವ ರೇಖಾ ಚಿತ್ರಗಳು ಕಲ್ಗೋರಿಗಳು, ವಿವಿಧಾಕಾರದ ಶಿಲಾಯುಧಗಳು ಕೊಪ್ಪಳ ಕ್ರಿ.ಪೂ.ದಲ್ಲಿಯೇ ಅಸ್ತಿತ್ವದಲ್ಲಿರುವ ಒಂದು ಪಟ್ಟಣವಾಗಿತ್ತೆಂಬುದಕ್ಕೆ ಸಾಕ್ಷಿಯಾಗಿವೆ.

ಕೊಪ್ಪಳದ ಪ್ರದೇಶವನ್ನು ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿವೆ. ಮೌರ್ಯರು ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಕೊಪ್ಪಳದಲ್ಲಿ ದೊರೆತಿರುವ ಶಾಸನಗಳೂ ಆಧಾರವಾಗಿವೆ. ಅಶೋಕನ ಬಂಡೆಗಲ್ಲು ಶಾಸನಗಳಲ್ಲಿ ಎರೆಡು ಶಾಸನಗಳು ದೊರೆತಿವೆ. "ಈ ಶಾಸನಗಳು ಕೇವಲ ಬಲ್ಲವರು ಮಾತ್ರವಲ್ಲದೇ ತೀರಾ ಸಾಮಾನ್ಯನೂ, ಬಡವನೂ, ಹಿಂದುಳಿದವನೂ ಸಹ ತನ್ನ ಪ್ರಯತ್ನಶೀಲತೆಯಿಂದ ಸ್ವರ್ಗ ಸುಖವನ್ನು ಪಡೆಯಬಹುದೆಂದು ಸಾರುತ್ತವೆ."[೯] ಇದರಿಂದ ಕೊಪ್ಪಳದ ಪ್ರದೇಶ ಬೌದ್ಧ ಧರ್ಮದ ಧಾರ್ಮಿಕ ಕೇಂದ್ರವಾಗಿತ್ತೆಂದು ತಿಳಿಯುತ್ತದೆ. ಅಶೋಕನು ಇಲ್ಲಿ ಬೌದ್ಧ ಧರ್ಮವನ್ನು ಪ್ರಚಾರಮಾಡಿದನೆಂಬುದು ಸ್ಪಷ್ಟ.

ಶಾತವಾಹನರು ಕ್ರಿ.ಶ. ಆರಂಭದಿಂದ ಮೂರು ಶತಮಾನಗಳವರೆಗೆ ಆಳ್ವಿಕೆ ನಡೆಸಿದರು. ಶಾತವಾಹನರು ಬಳ್ಳಾರಿ ಜಿಲ್ಲೆಯ ಉತ್ತರ ಭಾಗಕ್ಕೆ ಸಂಬಂಧಿಸಿದವರೆಂದು ರಾಬರ್ಟ್ ಸಿವೆಲ್ ಮೊದಲಾದವರು ಅಭಿಪ್ರಾಯಪಟ್ಟಿದ್ದಾರೆ.[೧೦] ಕೊಪ್ಪಳ ತಾಲೂಕಿನ ಚಿಕ್ಕಸಿಂದೋಗಿಯಲ್ಲಿ ಶಾತವಾಹನ ಕಾಲದ ಮುದ್ರಾಂಕಿತ ನಾಣ್ಯಗಳೂ, ಮಡಿಕೆ ತುಂಡುಗಳು ದೊರೆತಿವೆ. ಸುಮಾರು ೫೫೨೫ ನಾಣ್ಯಗಳು ದೊರೆತಿವೆ. ಇದು ಶಾತವಾಹನರ ಕಾಲದ ಸಿರಿಶಾತಕರ್ಣಿಯದೆಂದು ದೃಢವಾಗುತ್ತದೆ. ಈ ಹಿನ್ನೆಲೆಯಲ್ಲಿ ಶಾತವಾಹನರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದರೆಂದು ಸ್ಪಷ್ಟಪಡುತ್ತದೆ. ಶಾತವಾಹನರ ನಂತರ ಅನೇಕ ಸಣ್ಣ–ಪುಟ್ಟ ರಾಜ ಮನೆತನಗಳು ಆಳ್ವಿಕೆ ನಡೆಸಿದವು.

ಕದಂಬರು ಕೊಪ್ಪಳವನ್ನು ಆಳಿದ ಬಗ್ಗೆ ಉಲ್ಲೇಖಗಳಿವೆ. ಮಯೂರವರ್ಮ ಚಂದ್ರವಳ್ಳಿಯ ಶಾಸನದಲ್ಲಿ 'ಕುಪಣದ ಚಾಮ' ನ ಉಲ್ಲೇಖವಿದೆ.[೧೧] ಇದರಿಂದ ಅಂದು ಕೊಪ್ಪಳವನ್ನು ಕುಪಣ ಎಂದು ಕರೆಯುತ್ತಿದ್ದರೆಂದು ತಿಳಿಯುತ್ತದೆ. ಈ ಶಾಸನವನ್ನು ಕೆತ್ತಿದ ಚಾಮ ಕೊಪ್ಪಳದವನಾಗಿರುವುದು ವಿಶೇಷ.

ಬಾದಾಮಿ ಚಾಲುಕ್ಯರು ಕದಂಬರ ನಂತರ ಆಳ್ವಿಕೆ ನಡೆಸಿದರು. ಕೊಪ್ಪಳ ಜಿಲ್ಲೆಯ ಕೆಲವು ಶಾಸನಗಳಲ್ಲಿ ಬಾದಾಮಿ ಚಾಲುಕ್ಯರ ಉಲ್ಲೇಖವಿದೆ. ಚಾಲುಕ್ಯ ವಂಶದ ಅರಸು ವಿಜಯಾದಿತ್ಯನ ಕಾಲದಲ್ಲಿ ಇವನು ವಿತ್ತಸಚಿವ ಸರೋಜನು ಕೊಪ್ಪಳದಲ್ಲಿದ್ದ ಬಗ್ಗೆ ತಾಲೂಕಿನ ಹಲಗೇರಿ ಶಾಸನ ತಿಳಿಸುತ್ತದೆ.[೧೨] ಅದೇ ರೀತಿ ಕುಕನೂರಿನಲ್ಲಿ ದೊರೆತಿರುವ ಒಂದು ಶಾಸನ ಬಾದಾಮಿ ಚಾಲುಕ್ಯರ ಮೊದಲನೇ ವಿಕ್ರಮಾದಿತ್ಯನನ್ನು ಉಲ್ಲೇಖಿಸುತ್ತದೆ. ಹ್ಯೂ–ಯನ್–ತ್ಸಾಂಗ್ ಹೆಸರಿಸಿದ ಸ್ಥಳಗಳಲ್ಲಿ ಕೊಂಕಿನ ಪೋಲೋ ಇಂದಿನ ಕೊಪ್ಪಳ ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಶ್ರೀ ವಿಜಯನ ಕವಿರಾಜ ಮಾರ್ಗದಲ್ಲಿ ಕೊಪ್ಪಳವನ್ನು "ಮಾಹಾಕೊಪಣ" ಎಂದಿದೆ. ಪಟ್ಟದಕಲ್ಲು, ಕೊಪ್ಪಳ, ಲಕ್ಷ್ಮೇಶ್ವರ ಮತ್ತು ವಕ್ಕಂದ ಇವುಗಳ ನಡುವಿನ ನಾಡೇ ತಿರುಳ್ಗನ್ನಡವಾಗಿತ್ತು ಎಂದಿದ್ದಾನೆ.[೧೩] ಹೀಗಾಗಿ ಕೊಪ್ಪಳ ತಿರುಳ್ಗನ್ನಡ ನಾಡಿನ ಪ್ರಮುಖ ಭಾಗವಾಗಿತ್ತೆಂದು ತಿಳಿಯುತ್ತದೆ. ಕೊಪ್ಪಳ ಜಿಲ್ಲೆಯ ಮುಧೋಳದ ಒಂದು ವೀರಗಲ್ಲು ರಾಷ್ಟ್ರಕೂಟ ಇಮ್ಮಡಿ ಕೃಷ್ಣನನ್ನು ಉಲ್ಲೇಖಿಸುತ್ತದೆ. ರಾಷ್ಟ್ರಕೂಟರ ಕಾಲದ ಕರಮುಡಿಯ ಕಲ್ಲೇಶ್ವರ, ಕುಸುಮೇಶ್ವರ, ಕಡೂರಿನ ಕಲ್ಲೇಶ್ವರ, ಮುಧೋಳದ ಸಿದ್ಧೇಶ್ವರ, ಹಲಗೇರಿಯ ಕಲ್ಲೇಶ್ವರ ಹಾಗೂ ಕುಕನೂರಿನ ನವಲಿಂಗೇಶ್ವರ ದೇವಾಲಯಗಳು ಪ್ರಮುಖವಾಗಿವೆ.

ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರು ಆಳ್ವಿಕೆ ನಡೆಸಿದರು. ಕ್ರಿ.ಶ. ೧೦೬೯ ರ ಶಾಸನವು ತಳಕಲ್ಲಿನಲ್ಲಿ ದೊರೆತಿದೆ. ಅದು "ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಲತಿಲಕ ಚಾಲುಕ್ಯಾಭರಣ ಶ್ರೀ ಮದಾಹವಮಲ್ಲದೇವ " ಎಂದು ವರ್ಣಿಸಿದೆ.[೧೪] ಇದರಿಂದ ೨ ನೇ ತೈಲಪ ಆಳ್ವಿಕೆ ನಡೆಸಿದ್ದನೆಂದು ತಿಳಿದುಬರುತ್ತದೆ. ೨ನೇ ತೈಲಪನ ಮಗ ಸತ್ಯಾಶ್ರಯನ ಬಗ್ಗೆ ಕುಕನೂರಿನ ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೨ ರ ಸಂಕನೂರು ಶಾಸನ ವಿಕ್ರಮಾದಿತ್ಯನ ೨೮ನೇ ವರ್ಷವನ್ನು ಹೇಳುವುದಲ್ಲದೆ, ಅಂದಿನ ಸೂರ್ಯಗ್ರಹಣದಂದು ಶ್ರೀ ಮನ್ಮಹಾಮಂಡಳೇಶ್ವರ ಆಚರಸನು ದೇವರಾಸಿ ಪಂಡಿತರಿಗೆ ದಾನ ನೀಡಿದ ಬಗ್ಗೆ ಉಲ್ಲೇಖಿಸಿದೆ.[೧೫] ಕೊಪ್ಪಳ ಜಿಲ್ಲೆಯ ಕುಕನೂರಿನ ಇನ್ನೊಂದು ಶಾಸನ ಹರೀತ ಸತ್ತಿಮದೇವ, ತೈಲಪ ಜಯಸಿಂಹ, ತ್ರೈಲೋಕ್ಯಮಲ್ಲ, ಅಹವಮಲ್ಲ, ಸೋಮೇಶ್ವರ, ವಿಕ್ರಮ, ಜಗದೇಕಮಲ್ಲರವರೆಗಿನ ಚಾಲುಕ್ಯ ವಂಶಾವಳಿಯನ್ನು ತಿಳಿಸುತ್ತದೆ.[೧೬] ಅದೇ ರೀತಿ ಅನೇಕ ದೇವಾಲಯಗಳನ್ನು ನಿರ್ಮಿಸಿದ ಬಗ್ಗೆ ಏಕಕೂಟ, ದ್ವಿಕೂಟ, ತ್ರಿಕೂಟ, ಪಂಚಕೂಟ ಹಾಗೂ ನವಕೂಟ ದೇಗುಲಗಳು ಕೊಪ್ಪಳ ಪ್ರದೇಶದಲ್ಲಿ ಕಂಡು ಬಂದಿವೆ. ಅಳವಂಡಿ, ಇರಕಲ್ಲಗಡ, ಉಪ್ಪಿನ ಬೆಟಗೇರಿ, ಕವಲೂರು, ಕೊಪ್ಪಳ, ಹಿರೇಸಿಂದೋಗಿ, ಗೊಂಡಬಾಳ, ಮಾದಿನೂರು, ಹಲಗೇರಿ ಮೊದಲಾದ ಕಡೆ ದೇವಾಲಯಗಳನ್ನು ಕಾಣಬಹುದಾಗಿದೆ.

ಕಲ್ಯಾಣ ಚಾಲುಕ್ಯರ ಮಾಂಡಲೀಕರೂ ಸಂಬಂಧಿಕರೂ ಆದ ಕಲಚೂರಿಗಳೂ ಕ್ರಿ.ಶ. ೧೧೯೨ ರಲ್ಲಿ ಆಳ್ವಿಕೆಗೆ ಬಂದರು. ಕಲಚೂರಿ ವಂಶದ ಅರಸನಾದ ಬಿಜ್ಜಳನ ಕುರಿತು ಕುಕನೂರಿನ ಶಾಸನ "ಮೀರುವ ಮಂಡಲಿಕರ್ತ್ತಲೆದೊರುವ ಮನ್ನೆಯರಿದಿರ್ಚ ತನ್ನಿಧಿರೊಳೆಯ್ದೋರುವ ನೃಪೇಂದ್ರರಿಲ್ಲೇನೆ ತೋರದ ನದಟಂ ಪ್ರತಾಪಿ" ಎಂದು ಬಣ್ಣಿಸಿದೆ[೧೭]. ಬಸವಣ್ಣನೊಡನೆ ನೂರಾರು ಶರಣರು ಕೂಡಿ ರಚಿಸಿದ ವಚನಗಳು ಸಮಾಜದ ಪರಿವರ್ತನೆಗೆ ಪ್ರೇರಕವಾಗಿದ್ದವು. ಕಲಚೂರಿಗಳ ನಂತರ ಹೊಯ್ಸಳರು ಪ್ರಬಲರಾದರು.

ಹೊಯ್ಸಳರ ಆಳ್ವಿಕೆಯು ಬಲ್ಲಾಳನ ಕಾಲದಲ್ಲಿ ಕೊಪ್ಪಳ ಪ್ರದೇಶಕ್ಕೆ ವಿಸ್ತರಿಸಿದ್ದಿತು. ಹೊಯ್ಸಳ ವಂಶದ ಪ್ರಸಿದ್ಧ ದೊರೆ ವಿಷ್ಣುವರ್ಧನ ಈ ಪ್ರದೇಶದ ಕುಮ್ಮಟದುರ್ಗವನ್ನು ತನ್ನ ಅಧೀನಕ್ಕೆ ತೆಗೆದುಕೊಂಡನು. ಬಲ್ಲಾಳ ದಂಡನಾಯಕ ಬೊಪ್ಪಶೆಟ್ಟಿ ಕೊಳತೋರು, ಲೊಕ್ಕಿಗುಂಡಿ, ಕೊಪ್ಪಳ, ಹೂಲಿ, ಕೋಗಳಿ, ಮುಳ್ಗುಂದ, ಹಾನಗಲ್ಲು ಮೊದಲಾದ ಪ್ರದೇಶಗಳಲ್ಲಿ ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದ್ದನೆಂದು ಕ್ರಿ.ಶ. ೧೨೦೪ರ ಶಾಸನ ತಿಳಸುತ್ತದೆ.[೧೮] ಕ್ರಿ.ಶ.೧೨೦೪ ರಲ್ಲಿ ಬಲ್ಲಾಳನು ಕೊಪ್ಪಳದ ಅಳವಂಡಿಯಲ್ಲಿ ಶ್ರೀರಂಗನಾಥದೇವರ ಅಂಗಭೋಗಕ್ಕೆ ನೀಡಿದನೆಂದು ತಿಳಿಯುತ್ತದೆ.[೧೯] ಆನೆಗೊಂದಿಯಲ್ಲಿ ಹೊಯ್ಸಳರು ಒಂದು ದೇವಾಲಯವನ್ನು ನಿರ್ಮಿಸಿದ್ದರು. ಹೊಯ್ಸಳರು ಈ ಭಾಗಕ್ಕೆ ತಮ್ಮದೇ ಆದ ಕೊಡುಗೆ ನೀಡಿರುವುದನ್ನು ಕಾಣಬಹುದಾಗಿದೆ.

ಹೊಯ್ಸಳರ ನಂತರ ಆಳ್ವಿಕೆ ನಡೆಸಿದ ದೇವಗಿರಿ ಯಾದವರು ಕೊಪ್ಪಳವನ್ನು ಆಳಿದರೆಂದು ಶಾಸನಗಳ ಮೂಲಕ ತಿಳಿಯುತ್ತದೆ. ಸಿರವಾರ, ಕುಕನೂರು, ಸಂಕನೂರು ಶಾಸನಗಳು ಯಾದವರ ಬಗ್ಗೆ ಮಾಹಿತಿ ನೀಡುತ್ತವೆ. ಕುಕನೂರು ಶಾಸನ " ಗೊಪ್ಪಲಶೆಟ್ಟಿ ಎಂಬುವನು ಮಹಳದಿಂದ ಬಂದ ಒಂದು ಬಾಗಿಲನ್ನು ಮೂಲಸ್ಥಾನ ದೇವರಿಗೆ ಮಾಡಿಸಿಕೊಟ್ಟಿದ್ದನೆಂದು" ಉಲ್ಲೇಖಿಸುತ್ತದೆ.[೨೦] ಕ್ರಿ.ಶ. ೧೨೨೮ ರ ಸಂಕನೂರು ಶಾಸನವು ಯಾದವ ಎರಡನೇ ಸಿಂಘಣನ ಕಾಲದ್ದಾಗಿದೆ. ಈ ಶಾಸನದಲ್ಲಿ ಸಿಂಘಣನ

ಸರ್ವಾಧಿಕಾರಿ ವಾಮನ ದೇವನಾಯ್ಕ ತನ್ನ ಪುತ್ರೋತ್ಸವ ಸಂದರ್ಭದಲ್ಲಿ ಕಿಸುಕಾಡಿ ೨೦ರ ಸಂಕಲೂರು ಸಂಕಲಾದೇವರಿಗೆ ದಾನವನ್ನು ನೀಡಿದ ವಿವರಣೆಯಿದೆ.[೨೦] ಯಲಬುರ್ಗಾದ ಶಾಸನವು ಯಾದವ ಅರಸ ಮೂರನೇ ಸಿಂಘಣನನ್ನು ಜೈನ ವಿರೋಧಿಯಾಗಿ ಚಿತ್ರಿಸಿದೆ.[೨೧] ಇವರ ಕಾಲದಲ್ಲಿ ಕೊಪ್ಪಳ ಒಂದು ಜೈನ ಕೇಂದ್ರವಾಗಿತ್ತೆಂದು ಕಂಡುಬರುತ್ತದೆ.

ದಕ್ಷಿಣ ಭಾರತದ ಅರಸು ಮನೆತನಗಳಲ್ಲಿಯೇ ಮಹತ್ವದ ಪಾತ್ರವಹಿಸಿದ ವಿಜಯನಗರ ಸಾಮ್ರಾಜ್ಯ ಈ ಭಾಗಕ್ಕೆ ತನ್ನದೇ ಆದ ಕೊಡುಗೆ ನೀಡಿದೆ. ಈ ಕಾಲದ ಕುಕನೂರು ಶಾಸನವು "ಹರಿಹರ ದೇವರಾಯನು ರಾಯರಾಜಗುರು ಕ್ರಿಯಾಶಕ್ತಿ ಆಚಾರ್ಯರ ನಿರೂಪದಿಂದ ಖಿಲವಾಗಿದ್ದು ಕುಕನೂರು ಗ್ರಾಮ ಹಾಗೂ ಅಲ್ಲಿನ ಸ್ಥಳದೇವತೆಗಳನ್ನು ಜೀರ್ಣೋದ್ದಾರಗಳಿಸಲೋಸುಗ ಅಗ್ರಹಾರದ ಗುಂಡಿನ ಭಟ್ಟಪ್ಪಯ್ಯನಿಗೆ ಚತಃ ಸೀಮೆಗಳ ಅಂತರ್ಗತವಾದ ಭೂಮಿ ಹಾಗೂ ಕುಕನೂರು ಅಗ್ರಹಾರದ ಗೌಡಿಕೆಯನ್ನು ವಹಿಸಿಕೊಟ್ಟನೆಂದು" ತಿಳಿಸುತ್ತದೆ.[೨೨] ಈ ಕಾಲದಲ್ಲಿ ಕೊಪ್ಪಳ, ಆನೆಗೊಂದಿ, ಹಿರೇಜಂತಕಲ್ಲು, ಕನಕಗಿರಿ, ಪುರದೇವಿ ಘಾಟ, ಹೇಮಗುಡ್ಡ ಮೊದಲಾದೆಡೆ ದೇವಾಲಯ ನಿರ್ಮಾಣಗೊಂಡವು. ಕ್ರಿ.ಶ. ೧೩೯೨ ರಲ್ಲಿ ಬುಕ್ಕರಾಯನ ಮಗ ಎರಡನೇ ಹರಿಹರನು ನಷ್ಟವಾಗಿ ಹೋಗಿದ್ದ ಕುಕನೂರಿನ ಅಗ್ರಹಾರವನ್ನು ಜೀರ್ಣೋದ್ದಾರಗೊಳಿಸಿದ್ದನು. ಹಾಗೆಯೇ ಅಲ್ಲಿನ ಮಹಾಮಾಯೆ ಮೊದಲಾದ ದೇವಾಲಯಗಳಿಗೆ ದಾನ ನೀಡಿದನು. ಪ್ರೌಢದೇವರಾಯ ಆನೆಗೊಂದಿ ಭೈರವ ಮತ್ತು ಪುರದ ಸೋಮನಾಥ ಕನಕಗಿರಿಯ ಲಕ್ಷ್ಮೀ ನರಸಿಂಹ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದನು. ಸದಾಶಿವರಾಯ ಹಿರೇಜಂತಕಲ್ಲಿನಲ್ಲಿ ಬ್ರಹ್ಮದೇವರು ಕುಣಿರಾಮಯ್ಯ ವಿರೂಪಾಕ್ಷ, ಕೇಶವ, ಅಚ್ಯುತಮೂರ್ತಿ, ಹನುಮಂತ, ಮೈಲಾರಲಿಂಗ ವೀರಭದ್ರ, ಬಸವ, ಹರಿಹರ, ರಾಮಾಪುರದ ಬಸದಿಗಳಿಗೆ ಭೂಮಿಯನ್ನು ದಾನವಾಗಿ ನೀಡಿದ್ದನೆಂದು ತಿಳಿಯುತ್ತದೆ.[೨೩] ಕನಕಗಿರಿ ವಿಜಯನಗರ ಕಾಲದ ಕಲಾ ಮತ್ತು ವಾಸ್ತು ಶಿಲ್ಪಕ್ಕೆ ಪ್ರಸಿದ್ಧಿ ಪಡೆದ ಸ್ಥಳವಾಗಿತ್ತು.

ಮುಸಲ್ಮಾನರ ಆಳ್ವಿಕೆಗೂ ಈ ಪ್ರದೇಶ ಒಳಪಟ್ಟಿತ್ತು. ಬಿಜಾಪುರದ ಆದಿಲ್‌ಷಾನ ಕಾಲದಲ್ಲಿ ಕೊಪ್ಪಳವನ್ನು ಮುಜಫರ್ ನಗರ ಎಂದು ಕರೆಯುತ್ತಿದ್ದರು.[೨೪] ನಂತರ ಈ ಸ್ಥಳವು ೨ನೇ ಬಹುಲೋಲ ಎಂದು ಕರೆಯಲಾಗುತ್ತಿದ್ದ ಅಬ್ದಲ್ ರಹೀಮನಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಇವನ ಪ್ರತಿನಿಧಿಯಾಗಿದ್ದ ಹುಸೇನಮಿಯಾನನ್ನು ಶಿವಾಜಿ ಸೆರೆ ಹಿಡಿದು ಕೊಪ್ಪಳ ಕೋಟೆಯನ್ನು ಕೊಟ್ಟರೆ ಅವನನ್ನು ಬಿಡುಗಡೆ ಮಾಡುವುದಾಗಿ ತಿಳಿಸಿದನು.[೨೫] ನಂತರ ಶಿವಾಜಿ ಕೊಪ್ಪಳವನ್ನು ಸುಭಾನುಜೀರಾವ್ ಎಂಬುವವನಿಗೆ ನೀಡಿದನು. ಕೊಪ್ಪಳದ ಮೂಲಕ ಮರಾಠರು ತಮ್ಮ ರಾಜ್ಯವನ್ನು ತುಂಗಭದ್ರಾ ತೀರದಾಚೆಗೂ ಹಬ್ಬುವಂತೆ ಮಾಡಿದರು. ನಂತರ ಹೈದರಾಲಿ ಕೊಪ್ಪಳವನ್ನು ವಶಪಡಿಸಿಕೊಂಡನು. ಮಹ್ಮದ್ ಉಸ್ಮಾನ್ ಕೋವಾರ್ ಎಂಬುವನನ್ನು ಈ ಪ್ರದೇಶವನ್ನು ಆಳಲು ನೇಮಿಸಿದನು. ಮರಾಠರಿಂದ ಕೊಪ್ಪಳವನ್ನು ವಶಪಡಿಸಿಕೊಂಡು ಟಿಪ್ಪುಸುಲ್ತಾನ ಈ ಸ್ಥಳವನ್ನು 'ಸುಲ್ತಾನಗಡ' ಎಂದು ಕರೆದನು.[೨೬] ಹೀಗೆ ಅನೇಕ ಅರಸರು, ಪಾಳೆಯಗಾರರು, ಕೊಪ್ಪಳವನ್ನು ಆಳಿರುವುದು ಕಂಡು ಬರುತ್ತದೆ.

ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಕ್ರಿ.ಶ. ೧೭೯೯ ರಲ್ಲಿ ಕರ್ನಲ್ ಕಿಡನ್ ಸವಣೂರು, ಬೆಂಗಳೂರು ಜೊತೆಗೆ ಕೊಪ್ಪಳವನ್ನು ವಶಪಡಿಸಿಕೊಂಡಿದ್ದನು.[೨೭] ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಅನೇಕ ದಂಗೆಗಳು ಈ ಭಾಗದಲ್ಲಿ ನಡೆದವು. ಅವುಗಳಲ್ಲಿ ಜಮೀನ್ದಾರ ವೀರಪ್ಪನ ದಂಗೆ ಪ್ರಮುಖವಾಗಿದೆ. ಅದೇ ರೀತಿ ಮುಂಡರಗಿ ಭೀಮರಾಯನು ಸಹ ದಂಗೆ ಎದ್ದಿದ್ದನು. ಕ್ರಿ.ಶ.

೧೮೫೮ ರಲ್ಲಿ ಈ ದಂಗೆಗಳನ್ನು ಬ್ರಿಟಿಷರು ದಮನ ಮಾಡಿದರು. ಕ್ರಿ.ಶ. ೧೮೯೧ ರಲ್ಲಿ ಈ ಸ್ಥಳವನ್ನು ನವಾಬ ಸಾಲಾರಜಂಗ ಅವ್ವಲ್‌ನಿಗೆ ಜಹಗೀರಾಗಿ ಕೊಡಲ್ಪಟ್ಟಿತ್ತು.[೫] ಭಾರತ ಸ್ವಾತಂತ್ರ್ಯಗೊಳ್ಳುವವರೆಗೂ ಕೊಪ್ಪಳ ಪ್ರದೇಶ ಸಾಲಾರಜಂಗನ ಅಧೀನದಲ್ಲಿತ್ತು.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕೊಪ್ಪಳದ ಅನೇಕ ಹೋರಾಟಗಾರರು ತಮ್ಮ ಪ್ರಾಣವನ್ನು ಮುಡುಪಾಗಿಟ್ಟರು. ಕ್ರಿ.ಶ. ೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರಕಿದರೂ ಹೈದ್ರಾಬಾದ್ ನಿಜಾಮ ಈ ಭಾಗಕ್ಕೆ ಸ್ವಾತಂತ್ರ್ಯ ನೀಡಲು ನಿರಾಕರಿಸಿದನು. ರಜಾಕಾರರ ಹಾಗೂ ನಿಜಾಮರ ಆಳ್ವಿಕೆಯ ವಿರುದ್ಧ ಹೋರಾಡುವ ಸ್ಥಿತಿ ಉದ್ಭವಗೊಂಡಿತು. ಕೊನೆಗೆ ಕ್ರಿ.ಶ. ೧೯೪೮ ರಲ್ಲಿ ನಿಜಾಮನಿಂದ ಈ ಪ್ರಾಂತ್ಯ ಸ್ವತಂತ್ರವಾಯಿತು. ಈ ಹೋರಾಟದಲ್ಲಿ ಅಸಂಖ್ಯಾತ ಮಹನೀಯರು ಹುತಾತ್ಮರಾದರು.

ಕೊಪ್ಪಳ ಪ್ರದೇಶವು ಸರ್ವಧರ್ಮಗಳ ಸಮನ್ವಯತೆಯನ್ನು ಹೊಂದಿತ್ತು. ಅನೇಕ ಧರ್ಮಗಳು ಇಲ್ಲಿ ಆಶ್ರಯಪಡೆದಿದ್ದವು. ಶೈವ, ವೈಷ್ಣವ, ಜೈನ, ಬೌದ್ಧ, ವೀರಶೈವ, ಮುಸ್ಲಿಂ, ಕ್ರೈಸ್ತ, ಧರ್ಮಗಳು ನೆಲೆಯೂರಿದ್ದವು. ಪ್ರಾಚೀನ ಕಾಲದಲ್ಲಿ ಶೈವ, ವೈಷ್ಣವ ಧರ್ಮ ಪ್ರಬಲವಾಗಿದ್ದರೆ, ನಂತರದಲ್ಲಿ ಜೈನ, ಬೌದ್ಧ ಧರ್ಮ ಪ್ರಬಲಗೊಂಡವು. ಅಶೋಕನ ಕಾಲದಲ್ಲಿ ಕೊಪ್ಪಳ ಬೌದ್ಧ ಧರ್ಮದ ಪ್ರಚಾರ ಕೇಂದ್ರವಾಗಿತ್ತು. ಜೈನ ಧರ್ಮ ಪ್ರಬಲವಾಗಿ ಬೆಳೆದು ಅನೇಕ ಬಸದಿಗಳು, ಚೈತ್ಯಾಲಯಗಳು ನಿರ್ಮಾಣಗೊಂಡವು. ಈ ಸ್ಥಳಕ್ಕೆ ತಪಸ್ಸಿಗೆ, ಯಾತ್ರೆಗೆ, ಸಲ್ಲೇಖನ ವ್ರತಕ್ಕೆಂದು ಅನೇಕರು ಆಗಮಿಸುತ್ತಿದ್ದರು. ಸುಮಾರು ೨೨ ಜಿನಾಲಯಗಳಿದ್ದವೆಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ಸುಮಾರು ೨ನೇ ಶತಮಾನದಿಂದ ೧೫೬೦ ರವರೆಗೆ ಈ ಸ್ಥಳ ಜೈನ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.

ಕೊಪ್ಪಳ ಗವಿಮಠದಲ್ಲಿ ದೊರೆತಿರುವ ಹೋಳಿಯ ಹಂಪಯ್ಯನ ಶಾಸನ ವೀರಶೈವ ಧರ್ಮ ಪ್ರಭಾವ ಬೀರಿತ್ತೆಂದು ತಿಳಿಸುತ್ತದೆ. ವಿಜಯನಗರ ಕಾಲದ ಶಾಸನವು ಈ ಭಾಗದಲ್ಲಿ ವೈಷ್ಣವ ಧರ್ಮ ಪ್ರಬಲವಾಗಿತ್ತೆಂದು ತಿಳಿಸುತ್ತದೆ. ಕೊಪ್ಪಳದಾದ್ಯಂತ ಕಂಡುಬರುವ ಶಿವದೇವಾಲಯಗಳು ಶೈವಧರ್ಮದ ಪ್ರಭಾವಕ್ಕೆ ಸಾಕ್ಷಿಯಾಗಿವೆ. ಅದೇ ರೀತಿ ಬಿಜಾಪುರದ ಆದಿಲ್ ಶಾಹಿಗಳು, ಹೈದರ ಅಲಿ, ಟಿಪ್ಪುಸುಲ್ತಾನ, ನಿಜಾಮ ಮೊದಲಾದ ಮುಸ್ಲಿಂರ ಆಳ್ವಿಕೆಯಿಂದಾಗಿ ಮುಸ್ಲಿಂ ಸಂಸ್ಕೃತಿಯು ಬೆಳೆದಿದೆ. ಬ್ರಿಟಿಷರ ಆಳ್ವಿಕೆಯಿಂದ ಕ್ರೈಸ್ತ ಧರ್ಮವು ಆಶ್ರಯ ಪಡೆದಿತ್ತೆಂದು ಹೇಳಬಹುದಾಗಿದೆ. ಹೀಗಾಗಿ ಕೊಪ್ಪಳ ಎಲ್ಲ ಧರ್ಮಗಳ ಬೀಡಾಗಿತ್ತೆಂದು ಕಂಡುಬರುತ್ತದೆ.

ಕೊಪ್ಪಳ ಪ್ರದೇಶದಲ್ಲಿ ಶಿಕ್ಷಣ ಕ್ಷೇತ್ರ ತನ್ನದೇ ಆದ ಮಹತ್ವ ಪಡೆದುಕೊಂಡಿತೆಂದು ತಿಳಿಯುತ್ತದೆ. ಅಗ್ರಹಾರಗಳು, ಮಠಗಳು, ಘಟಿಕಗಳು ಅಸಂಖ್ಯಾತವಾಗಿದ್ದವು. ಅಳವಂಡಿ, ಕವಲೂರು, ಮಾದಿನೂರು, ಇಟಗಿ, ಕುಕನೂರು, ಮುಧೋಳ ಪ್ರಮುಖ ಅಗ್ರಹಾರಗಳಾಗಿದ್ದವು. ಕುಕನೂರು ಕರ್ನಾಟಕದ ಪ್ರಮುಖ ಘಟಿಕಗಳಲ್ಲಿ ಒಂದಾಗಿತ್ತು. ಕ್ರಿ.ಶ. ೧೩೪೭ ರಿಂದ ೧೯೪೮ ರ ವರೆಗಿನ ಆರನೂರು ವರ್ಷಗಳಲ್ಲಿ ಪ್ರತಿಶತ ೧೨ ರಷ್ಟು ಜನರ ಆಡುಭಾಷೆ ಹಾಗೂ ಮಾಧ್ಯಮ ಉರ್ದು ಆಗಿತ್ತು. ಕನ್ನಡ ಮಾತೃಭಾಷೆಯಾಗಿ ಮಾತ್ರ ಚಾಲನೆಯಲ್ಲಿತ್ತೆಂದು ತಿಳಿಯುತ್ತದೆ.

ಶಿಲ್ಪಕಲೆಯಲ್ಲಿ ಕೊಪ್ಪಳವು ಮಹತ್ವದ ಸ್ಥಾನ ಪಡೆದಿದೆ. ಜಿನಾಲಯಗಳ ಕೇಂದ್ರ ಸ್ಥಾನವಾಗಿತ್ತು. ಇಂದ್ರಗಿರಿ, ಚಂದ್ರಗಿರಿ ಬೆಟ್ಟಗಳಿವೆ. ಅನೇಕ ರಾಜಮನೆತನದವರ ಅಸಂಖ್ಯಾತ ದೇವಾಲಯಗಳಿವೆ. ದ್ರಾವಿಡ, ವೇಸರ, ನಾಗರಶೈಲಿಯಲ್ಲಿ

ನಿರ್ಮಿಸಲ್ಪಟ್ಟಿರುವ ದೇವಾಲಯಗಳು ಎಲ್ಲೆಡೆ ಕಂಡು ಬರುತ್ತವೆ. ದೇವಾಲಯಗಳ ಚಕ್ರವರ್ತಿ ಎಂದು ಬಣ್ಣಿಸಲ್ಪಟ್ಟಿರುವ ಇಟಗಿಯ ಮಹಾದೇವ ದೇವಾಲಯ, ಕನಕಗಿರಿಯ ಕನಕಾಚಲ ದೇವಾಲಯ. ಪುರದ ಕೋಟಿಲಿಂಗ ದೇವಾಲಯ, ತಳಕಲ್ಲಿನ ಹುಸೇನ ಮೌಲಾದರ್ಗಾ, ಕೊಪ್ಪಳದ ರಾಜಾಬಕ್ಷಿದರ್ಗಾ ಮೊದಲಾದವು ಈ ಭಾಗದ ಪ್ರಸಿದ್ಧ ಧಾರ್ಮಿಕ ಕೇಂದ್ರಗಳಲ್ಲದೆ, ಶಿಲ್ಪಕಲೆಗೆ ಪ್ರಸಿದ್ಧವಾದ ಸ್ಥಳಗಳಾಗಿವೆ.

ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚಾರಿತ್ರಿಕ, ಧಾರ್ಮಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿತ್ತಲ್ಲದೆ, ಶಿಲ್ಪಕಲೆಗೆ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿರುವುದು ಕಂಡು ಬರುತ್ತದೆ.

**ಟಿಪ್ಪಣಿಗಳು**

೧. ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ, ಲೇ: ಅಮರೇಶ ನುಗಡೋಣಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೦, ಪು–೪

೨. ಅದೇ, ಪು–೪

೩. ಕೊಪ್ಪಳ: ಸಾಂಸ್ಕೃತಿಕ ಪರಂಪರೆ, ಲೇ: ಬಿ.ಸಿ.ಪಾಟೀಲ್, ಪ್ರ: ಹರಿಹರ ಪ್ರಕಾಶನ, ಕೊಪ್ಪಳ–೧೯೯೮, ಪು–೧೫

೪. ಅಕ್ಷಯ–ಸವಿಸಂಚಿಕೆ, ಪ್ರ.ಸಂ: ಡಾ. ಶರಣಬಸಪ್ಪ ಕೋಲ್ಕರ್, ಪ್ರ: ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತು, ಗಂಗಾವತಿ–೨೦೦೨, ಪು–೬

೫. ಹೈದ್ರಾಬಾದ ಕರ್ನಾಟಕ ಭಾಗದ ಶಿಲಾಶಾಸನಗಳು, ಸಂ: ಡಾ. ವಿ.ಶಿವಾನಂದ, ಪ್ರ: ಕನ್ನಡ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ–೧೯೯೨, ಪು–೨೫೫

೬. ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ. ಪ್ರಬಂಧ, ಸಂಶೋಧಕ: ಡಿ.ಎಸ್. ಅಶ್ವಥ, ಪ್ರ: ಕನ್ನಡ ವಿಶ್ವ ವಿದ್ಯಾಲಯ, ಹಂಪಿ–೨೦೦೧, ಪು–೩೮

೭. ಅದೇ ಪು–೩೮

೮. ಅದೇ ಪು–೪೯

೯. ಕೊಪ್ಪಳ: ಸಾಂಸ್ಕೃತಿಕ ಪರಂಪರೆ, ಲೇ: ಬಿ.ಸಿ.ಪಾಟೀಲ್, ಪ್ರ: ಹರಿಹರ ಪ್ರಕಾಶನ, ಕೊಪ್ಪಳ–೧೯೯೮, ಪು–೧೯

೧೦. ಸಿದ್ಧಶ್ರೀ, ಸಂ: ಡಾ. ಬಿ.ವಿ. ಶಿರೂರ, ಪ್ರ: ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಾ–೨೦೦೦, ಪು–೨೯

೧೧. ಕರ್ನಾಟಕ ದೇವಾಲಯ ಕೋಶ (ಕೊಪ್ಪಳ ಜಿಲ್ಲೆ), ಸಂ: ಡಾ. ಕೆ. ಎಂ. ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೧, ಪು–ಪ್ರಸ್ತಾವನೆ–XX

೧೨. ಅದೇ ಪುಟ-ಪ್ರಸ್ತಾವನೆ-xx

೧೩. ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನಾ ಚಳುವಳಿ, ಲೇ: ಅಮರೇಶ ನುಗಡೋಣಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦, ಪು-೫

೧೪. ಸಿದ್ಧಶ್ರೀ, ಸಂ: ಡಾ. ಬಿ.ವಿ. ಶಿರೂರ, ಪ್ರ: ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಾ-೨೦೦೦, ಪು-೨೯

೧೫. ಅದೇ ಪು-೩೦

೧೬. ಅದೇ ಪು-೩೧

೧೭. ಅದೇ ಪು-೩೨

೧೮. ಅದೇ ಪು-೩೩

೧೯. ಕರ್ನಾಟಕ ದೇವಾಲಯ ಕೋಶ (ಕೊಪ್ಪಳ ಜಿಲ್ಲೆ), ಸಂ: ಡಾ. ಕೆ. ಎಂ. ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೧, ಪು-ಪ್ರಸ್ತಾವನೆ-xxviii

೨೦. ಅದೇ ಪು-ಪ್ರಸ್ತಾವನೆ-xxix

೨೧. ಹೈದ್ರಾಬಾದ ಕರ್ನಾಟಕ ಭಾಗದ ಶಿಲಾಶಾಸನಗಳು, ಸಂ: ಡಾ. ವಿ.ಶಿವಾನಂದ, ಪ್ರ: ಕನ್ನಡ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ-೧೯೯೨, ಪು-೨೪೨

೨೨. ಕರ್ನಾಟಕ ದೇವಾಲಯ ಕೋಶ (ಕೊಪ್ಪಳ ಜಿಲ್ಲೆ), ಸಂ: ಡಾ. ಕೆ. ಎಂ. ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೧, ಪು-ಪ್ರಸ್ತಾವನೆ-xxix

೨೩. ಅದೇ ಪು-ಪ್ರಸ್ತಾವನೆ-xxix

೨೪. ಹೈದ್ರಾಬಾದ ಕರ್ನಾಟಕ ಭಾಗದ ಶಿಲಾಶಾಸನಗಳು, ಸಂ: ಡಾ. ವಿ.ಶಿವಾನಂದ, ಪ್ರ: ಕನ್ನಡ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ-೧೯೯೨, ಪು-೨೫೬

೨೫. ಕರ್ನಾಟಕ ದೇವಾಲಯ ಕೋಶ (ಕೊಪ್ಪಳ ಜಿಲ್ಲೆ), ಸಂ: ಡಾ. ಕೆ. ಎಂ. ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೧, ಪು-ಪ್ರಸ್ತಾವನೆ-xxxi

೨೬. ಕೊಪ್ಪಳ ಜಿಲ್ಲಾ ದರ್ಶನ, ಸಂ: ಶ್ರೀ ಹೆಚ್.ಎಸ್.ಪಾಟೀಲ್, ಲೇ: ಡಾ. ಬಿ.ವಿ.ಶಿರೂರು, ಪ್ರ: ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೨೦೦೫, ಪು-೧೦

೨೭. ಅದೇ ಪು-೧೨

೨೮. ಅದೇ ಪು-೧೨

೨೯. ಅದೇ ಪು-೧೨

೩೦. ಅದೇ ಪು-೧೨

# ಅಧ್ಯಾಯ ೩

## ಕುರುಬರ ಚಾರಿತ್ರಿಕ ಹಿನ್ನೆಲೆ

೩.೧ ಕುರುಬ ಪದದ ನಿಷ್ಪತ್ತಿ

೩.೨ ಕುರುಬರ ಮೂಲ

೩.೩ ಕುರುಬರ ನೆಲೆಗಳು

೩.೪ ಕುರುಬರ ಒಳಪಂಗಡಗಳು

ಆದಿಕಾಲದ ಮಾನವ ಅಲೆಮಾರಿ ಜೀವನ ನಡೆಸುತ್ತಿದ್ದ. ಬೇಟೆ ಮತ್ತು ಆಹಾರ ಸಂಗ್ರಹಣೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದ ಮಾನವನಿಗೆ ಮರ, ಗಿಡ, ಗುಹೆ, ಪೊಟರೆಗಳು ರಕ್ಷಣಾ ಸ್ಥಳಗಳಾಗಿದ್ದವು. ಕಲ್ಲಿನಿಂದ ಮಾಡಿದ ಆಯುಧಗಳನ್ನು ಹಾಗೂ ಬಿದಿರು ಬಳ್ಳಿಗಳಿಂದ ಮಾಡಿದ ಬಿಲ್ಲು ಬಾಣಗಳನ್ನು ಬೇಟೆಗಾಗಿ ಬಳಸತೊಡಗಿದ. ದಿನವಿಡೀ ಪ್ರಾಣಿಗಳ ಹಿಂದೆ ಅಲೆಯುತ್ತ ಬೇಟೆಯಾಡಿ ಅವುಗಳ ಹಸಿ ಮಾಂಸವನ್ನು ಸೇವಿಸುತ್ತಿದ್ದ. ಕಾಲಾನಂತರ ಪ್ರಾಣಿಗಳನ್ನು ಬೇಯಿಸಿ ತಿನ್ನುವುದನ್ನು ಕಲಿತನು. ನಂತರ ಬೇಟೆಯಿಂದ ಕವಲೊಡೆದು ಪಶುಪಾಲನೆಯನ್ನು ಕೈಗೊಂಡನು. ಕೆಲವು ಸಾದು ಪ್ರಾಣಿಗಳನ್ನು ಸಾಕಲಾರಂಭಿಸಿದನು. ಅವುಗಳಲ್ಲಿ ಹಸು, ಎಮ್ಮೆ, ಆಡು, ಕುರಿ, ಕತ್ತೆ ಮೊದಲಾದ ಪ್ರಾಣಿಗಳಿದ್ದವು. ಈ ಪ್ರಾಣಿಗಳ ಪಾಲನೆಯಿಂದ ಅವನಿಗೆ ಹಾಲು, ಬೆಣ್ಣೆ, ಮಾಂಸ, ಚರ್ಮ ಮೊದಲಾದವುಗಳು ಅತಿಯಾದ ಪ್ರಯಾಸವಿಲ್ಲದೆ ದೊರೆತವು. ಆದರೆ ಬೇಟೆಗಾರರೆಲ್ಲರೂ ಪಶುಪಾಲಕರಾಗಿರಲಿಲ್ಲ. ಪಶುಪಾಲಕರು ತಮ್ಮ ದನಕರುಗಳಿಗೆ ಹುಲ್ಲು, ನೀರು ಸಮೃದ್ಧಿಯಾಗಿರುವ ಫಲವತ್ತಾದ ಭೂಮಿಯಲ್ಲಿ, ನದಿ ತೀರಗಳಲ್ಲಿ ಹಾಗೂ ಎತ್ತರವಾದ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸತೊಡಗಿದರು. ಈ ಪ್ರದೇಶಗಳಲ್ಲಿ ಸೌಲಭ್ಯಗಳ ಕೊರತೆಯುಂಟಾದಾಗ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಕಾಲ ಕ್ರಮೇಣ ಪಶುಪಾಲನೆಯಲ್ಲಿಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕೃಷಿಯನ್ನು ಅವಲಂಭಿಸಿದ್ದರು. ನಂತರ ಒಂದೆಡೆ ಸ್ಥಿರವಾಗಿ ನೆಲೆಯೂರಿದರು. ಕೃಷಿಯ ಜೊತೆಗೆ ಪಶುಪಾಲನೆಯನ್ನು ಕೈಗೊಂಡ ಮಾನವ ತಾನು ನೆಲೆಸಿದ ಸ್ಥಳದಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಂಡನು. ನಂತರ ಹಲವಾರು ಹಟ್ಟಿಗಳು ಸೇರಿ ಊರುಗಳಾದವು. ಈ ಕಾಲದಲ್ಲಿ ಆಹಾರದ ಸಮಸ್ಯೆಯು ಸಾಕಷ್ಟು ಮಟ್ಟಿಗೆ ಕಡಿಮೆಯಾಯಿತಲ್ಲದೆ, ಜನರಿಗೆ ಬಿಡುವು ದೊರೆಯಲಾರಂಬಿಸಿದ್ದರಿಂದ ಸಂಗೀತ, ಸಾಹಿತ್ಯ, ಕಲೆಗಳು ಸೃಷ್ಟಿಯಾದವು. ಹೀಗೆ ನಾಗರಿಕತೆಯೆಡೆಗೆ ಸಾಗಿದ ಮಾನವ ಸಮುದಾಯದಲ್ಲಿ ಹಲವು ಕಾರಣಗಳಿಂದ ಅನೇಕ ಸಣ್ಣ–ದೊಡ್ಡ ಪಂಗಡಗಳಾದವು. ಕಾಲಾನಂತರ ಪಂಗಡಗಳ ನಡುವೆ ಪರಸ್ಪರ ಸಂಬಂಧ ಕಡಿದು ಹೋಗಿ ತಮ್ಮ ತಮ್ಮ ಜಾತಿಗಳು ಸ್ವತಂತ್ರವೆಂದೇ ಭಾವಿಸಿಕೊಳ್ಳಲಾರಂಭಿಸಿದವು. ಅಲ್ಲದೆ ಅವುಗಳು ತಮ್ಮದೇ ಆದ ಧಾರ್ಮಿಕ, ಸಾಮಾಜಿಕ, ಆಚಾರ–ವಿಚಾರಗಳನ್ನು ಹೊಂದಿದವು. ಅವುಗಳಲ್ಲಿ ಕುರುಬ ಸಮುದಾಯವು ಒಂದು.

### ೩.೧ ಕುರುಬ ಪದದ ನಿಷ್ಪತ್ತಿ

ಪ್ರಾಚೀನ ಕಾಲದಿಂದಲೂ ಕುರಿಗಳ ಪಾಲನೆ, ಪೋಷಣೆ ಈ ಸಮುದಾಯದ ಮುಖ್ಯ ಕಸುಬು. ಇಂದಿಗೂ ಕುರಿಸಾಕಾಣಿಕೆ ಇವರ ಪ್ರಮುಖ ವೃತ್ತಿಯಾಗಿರುವುದರಿಂದ ಇವರಿಗೆ "ಕುರುಬ" ಎಂಬ ಹೆಸರು ಬಂದಿದೆಯೆಂಬುದು ಸಾಮಾನ್ಯವಾದ ಅಭಿಪ್ರಾಯವಾಗಿದೆ. ಆದರೆ ಇನ್ನೊಂದು ಅರ್ಥದಲ್ಲಿ 'ಕುರು' ಎಂಬ ಶಬ್ದಕ್ಕೆ 'ಎತ್ತರ' ಎಂಬ ಅರ್ಥವಿದೆ. ಇದರಿಂದ ಎತ್ತರವಾದ ಪ್ರದೇಶಗಳಲ್ಲಿ ವಾಸಿಸುವವನು ಕುರುಬ ಎಂಬ ಹೆಸರಿನಿಂದ ಕರೆಯಲ್ಪಟ್ಟನು ಎಂಬ ಅಭಿಪ್ರಾಯವಿದೆ.[೧] ಕುರುಬರು ತಮ್ಮ ಜೀವನ ಹಾಗೂ ಪಶುಗಳ ಸಂರಕ್ಷಣೆಗಾಗಿ ಗುಡ್ಡ–ಬೆಟ್ಟಗಳ, ಜಲಾಶ್ರಯವುಳ್ಳ ಎತ್ತರವಾದ ಪ್ರದೇಶವನ್ನು ಹುಡುಕಿಕೊಂಡು ಹೋಗುತ್ತಿದ್ದರು ಎಂಬುದನ್ನು ನೆನೆದಾಗ ಈ ಅರ್ಥ ಸಂಭವನೀಯವೆನಿಸುತ್ತದೆ.

ಪ್ರಾಚೀನ ತಮಿಳು ಕಾವ್ಯಗಳಲ್ಲಿ ಕುರುಬರಿಗೆ "ಮಲೆಯರು" ಎಂದು ವರ್ಣಿಸಿದ್ದಾರೆ. ಆದ್ದರಿಂದ ಕುರುಬರು, ಮಲೆಯರು ಎಂದರೆ ಗುಡ್ಡದಲ್ಲಿ ವಾಸವಾಗಿದ್ದವರು ಎಂಬುದು ಸ್ಪಷ್ಟ.[೨]

ಔತ್ತರೇಯರ ಉಚ್ಚಾರದಲ್ಲಿ ಕುರುಬ ಶಬ್ದವು ಕುರುಕ–ಕುರ್ವ ಎಂದು ಸ್ವಲ್ಪ ವ್ಯತ್ಯಾಸ ಹೊಂದಿದೆ ಎಂಬ ಅಭಿಪ್ರಾಯವಿದೆ[೩]. ಕುರುಬ ಶಬ್ದದ ಅರ್ಥವು ತಿಳಿಯದ್ದರಿಂದ ಅಲ್ಲಿಯ ಜನರು ಇವರಿಗೆ ಕುರುಕ–ಧನಗಾರರೆಂದು ಕರೆದರು. ಇವರಿಗೆ ಓರಾಜನೆಂಬ ಇನ್ನೊಂದು ಹೆಸರಿದೆ.

ದ್ರಾವಿಡ ಭಾಷೆಯಲ್ಲಿ ಕು–ಕೋ ಎಂದರೆ ಬೆಟ್ಟಗಳು, ಕೋರಿ ಎಂದರೆ ಕುರು, ಕುರು ಎಂದರೆ ಕುರುಚು, ಕುಳ್ಳು ಎಂಬರ್ಥವಿದೆ. ಈ ಅರ್ಥಾನುಸಾರವಾಗಿ ಕುರುಬರು ಬೆಟ್ಟ, ಗುಡ್ಡ ಹಾಗೂ ಎತ್ತರದ ಪ್ರದೇಶಗಳಲ್ಲಿ ವಾಸಮಾಡಿಕೊಂಡು ಕುರಿಗಳನ್ನು ಕಾಯುತ್ತಿದ್ದರಿಂದ ಕುರುಬರೆಂಬ ಹೆಸರು ದ್ರಾವಿಡ ಭಾಷೆಯಲ್ಲಿ ಮೂಡಿತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ[೪].

ಕುರು ದೇಶದ ಕೆಲವು ಭಾಗಗಳಲ್ಲಿ 'ಕುರು' ಎನ್ನುವುದು 'ಪ' ಎನ್ನುವ ಪದದೊಂದಿಗೆ ಕೂಡಿ ಆದು ಎಲ್ಲ ದ್ರಾವಿಡ ಭಾಷೆಗಳಲ್ಲಿ ಒಡೆಯ, ಅರಸ, ಕುರಿಯ ಯಜಮಾನ, ಗೋಪಾಲ ಎಂದು ಅರ್ಥವಾಗುತ್ತದೆ. ಕಾಲಾನಂತರ ಕುರುಪ ಎಂಬ ಪದ ಬಳಕೆಗೆ ಬಂದಿತು. ಕುರುಪ ಎಂದರೆ ಬೆಟ್ಟ–ಗುಡ್ಡಗಳಲ್ಲಿ ವಾಸಿಸುವವನು[೫]. ಹೀಗಾಗಿ "ಕುರುಪ"ಎಂಬ ಪದವೇ ಮುಂದೆ "ಕುರುಬ" ಎಂದು ನಿಷ್ಪತ್ತಿಗೊಂಡಿರುವ ಸಾಧ್ಯತೆಯಿದೆ.

ಕಿಟ್ಟೆಲ್‌ರು ತಮ್ಮ ಕನ್ನಡ ಇಂಗ್ಲೀಷ್ ನಿಘಂಟಿನಲ್ಲಿ ಕುರುಬ ಪದವನ್ನು "ಕುಟುಂಬ" ಶಬ್ದದೊಂದಿಗೆ ಸಮೀಕರಿಸುತ್ತಾರೆ.[೬] ಅಲ್ಲದೆ ಕುರುಬ ಎಂಬುದು "ಕಂದಮಿಳ" ಶಬ್ದ ಹಳೆಹ ಕುರುಂಬ ಈಗ ಕುರುಬ ಆಗಿದೆ. ಕುರು=ಗುಡ್ಡ, ಮರಡಿ, ಎತ್ತರದ ಪ್ರದೇಶ ಎಂಬ ಅರ್ಥವಿರುವುದರಿಂದ ಕುರುಬರೂ, ಮರವರೂ, ಮಲವರೂ, ಮಲೆಯರೂ ಮೂಲತಃ ಅರಣ್ಯವಾಸಿಗಳಾಗಿದ್ದು ಒಂದೇ ಕುಟುಂಬದವರಾಗಿದ್ದರೆಂದು ತಿಳಿಯಬಹುದಾಗಿದೆ.

ವೇದದಲ್ಲಿ ಕುರಿ ಎಂಬುದು ಜ್ಞಾನವೆಂದು, ಅದನ್ನು ರಕ್ಷಿಸುವವನು ಕುರುಬನೆಂದು ಕುರಿ ಎಂದರೆ ಕುರುಬ, ಕುರುಬನೆಂದರೆ ಜ್ಞಾನೋಪಾಸಕನಾಗಿ ತೋರು ಎಂದು ಉಲ್ಲೇಖಿಸಲಾಗಿದೆ[೭]. ಅಲ್ಲದೆ ಮೇಷ ಮ್ಯಾ......... (ಮ+ಉ+ಅ) ಎಂದು ಜಪಿಸುವುದು. ಇದನ್ನು ಅನುಸರಿಸುತ್ತ ಮಾನವ ಭಾಷೆ ಕಲಿತಿರಬಹುದಾದ ಸಾಧ್ಯತೆಯಿದೆ. ಮೇಷದ ಧ್ವನಿಯಲ್ಲಿರುವ ಮ್ಯಾ ಪದದಲ್ಲಿ ಮ+ಉ+ಅ ಎಂಬ ಅಕ್ಷರಗಳಿವೆ. ಈ ಅಕ್ಷರಗಳನ್ನು ಮೇಷಪಾಲಕನು ಅನುಕರಿಸಲಾಗಿ ಮ+ಉ+ಅ ಅಕ್ಷರಗಳು ತಿರುವು ಮುರುವಾಗಿ ಅ+ಉ+ಮ ಎಂದು ಪರಿವರ್ತನೆಗೊಂಡವು. ಹೀಗಾಗಿ ಮೇಷದ ಪದ ಮ್ಯಾ ಮೇಷಪಾಲಕನ ಅನುಕರಣೆಯಲ್ಲಿ ಅ+ಉ+ಮ ಆಗಿ ಓಂ ಆಗಿರುವುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಹೀಗೆ ಓಂಕಾರ ಮಾನವ ಮೂಲ ಬೀಜ ಜಪಿಸುವ ಮೇಷ ಮಾನವನಿಗೆ ಜ್ಞಾನದ ಪ್ರತೀಕವಾಯಿತು. ನಂತರ ಮೇಷದ ಇನ್ನೊಂದು ಹೆಸರು ಆಧ್ಯಾತ್ಮದಲ್ಲಿ ಕುರಿಯಾಗಿ ಅದರ ಪಾಲಕನಿಗೆ ಕುರುಬ ಎಂದು ಹೆಸರು ರೂಢಿಯಲ್ಲಿ ಬಂದಿತು.[೮] ಈ ಹಿನ್ನೆಲೆಯಲ್ಲಿ ಕುರುಬ ಎಂದ ಪದ ಜ್ಞಾನಿ ಎಂಬರ್ಥ ನೀಡುತ್ತದೆ. ಕುರುಬ ಎಂಬುದು ಜಾತಿ ಸೂಚಕ ಅಥವಾ ವೃತ್ತಿ ಸೂಚಕ ಪದವಾಗಿರದೆ ಆಧ್ಯಾತ್ಮವನ್ನು ಪ್ರತಿನಿಧಿಸುವ ಪದವಾಗಿದೆ ಎಂಬುದು ಸ್ಪಷ್ಟ.

ಕುರುಬರು ಪಶುಪಾಲನೆಯಲ್ಲಿ ಕೋವಿ(ಬಂಬು) ಹಿಡಿದಿದ್ದರಿಂದ ಕೊರವರು ಅಥವಾ ಬಾಂಬರು ಎಂದು ಕರೆಯಲ್ಪಟ್ಟಿದ್ದಾರೆ. ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿ ಬಾಮ್ಬರ ಎಂದು ಕೊರವರ್ ಎನ್ನುಂ, ಕುರುಂಬರ ಎಂದಿದೆ.[೯] ಅಲ್ಲದೆ ಕಿಟ್ಟೆಲ್‌ರು ಸಹ ಶಬ್ದಕ್ಕೆ ಕುರುಬ ಎಂಬ ಅರ್ಥ ನೀಡಿದ್ದಾರೆ.[೧೦] ಇದರಿಂದ ಪಶುಪಾಲನೆಯಲ್ಲಿ ಕೋವಿ (ಬಂಬು) ಹಿಡಿದ ಕುರುಬ ಆ ಬಂಬಿನಿಂದ ಬುಟ್ಟಿ ಹೆಣೆದು ಕೊರಚನಾದನು. ಕೊರಚ ಶಬ್ದಕ್ಕೆ ಕಿಟ್ಟೆಲ್‌ರು ಎತ್ತರದ ಪ್ರದೇಶಗಳಲ್ಲಿ ವಾಸಿಸುವವರು ಎಂದಿದ್ದಾರೆ. ಇದರಿಂದ ಕುರುಬರು ಕೊರಚರು ಮೂಲತಃ ಒಂದೇ ಪ್ರಬೇಧಕ್ಕೆ ಸೇರಿದ ಸಮುದಾಯ ಎಂಬುದು ಎಂಬುದು ಸ್ಪಷ್ಟ.

ಸಂಸ್ಕೃತದಲ್ಲಿ ಬರೆದ ಆಗ್ನೇಯ ಪುರಾಣದಲ್ಲಿ ಕೌರುಭ ಋಷಿಯ ತಪಸ್ಸಿನ ಫಲವಾಗಿ ಕುರುಬ ಸಮುದಾಯ ಸೃಷ್ಟಿಯಾಯಿತೆಂದು ನಿರೂಪಣೆಯಿದೆ.[೧೧] ಇದರಿಂದ ಕೌರುಬ ಎಂಬ ಪದವೇ ಮುಂದೆ ಕುರುಬ ಎಂದು ಪರಿವರ್ತನೆಗೊಂಡಿದೆ ಎಂದು ಹೇಳಬಹುದು.

ಸಂಸ್ಕೃತ ಸಾಹಿತ್ಯದಲ್ಲಿ 'ಕುರುದೇಶ' ಎನ್ನುವ ಪದ ಉಪಲಬ್ಧವಿದೆ. ಅದ ಕುರುವಂಶದವರಿಂದ ಆಳಲ್ಪಟ್ಟಿತ್ತೆಂದು ತಿಳಿಯುತ್ತದೆ. ಈ ಕುರು ವಂಶಕ್ಕೆ ಸೇರಿದ ಕೌರವರು ಕಾಲಾನಂತರ ಕುರುವ ಅಥವಾ ತರುವರೆಂದು ಗುರುತಿಸಲ್ಪಟ್ಟರು. ಮುಂದೆ ತರುವ ಎನ್ನುವ ಪದ ಕುರುಬ ಎಂದು ಮಾರ್ಪಾಡಾಗಿರುವ ಸಾಧ್ಯತೆಯಿದೆ.[೧೨]

ಒಟ್ಟಾರೆ ಈ ಸಮುದಾಯವು ಕುರಿ, ಆಡು ಮೇಯಿಸುವುದಕ್ಕೆ ಅನುಕೂಲವಾಗುವಂತ ಅರಣ್ಯ, ಬೆಟ್ಟ ಎತ್ತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದರಿಂದ ಇವರಿಗೆ ಕುರುಬರು ಎಂಬ ಹೆಸರು ನಿಷ್ಪತ್ತಿಗೊಂಡಿರುವುದು ಸ್ಪಷ್ಟ.

### ೩.೨ ಕುರುಬರ ಮೂಲ

ಮಾನವ ಬೇಟೆಯಿಂದ ಪಶುಪಾಲನೆ ವೃತ್ತಿಗೆ ಪರಿವರ್ತನೆಗೊಂಡಾಗಿನಿಂದಲೇ ಕುರುಬರು ಇತಿಹಾಸ ಪ್ರಾರಂಭವಾಗುತ್ತದೆ. ಕುರುಬರ ಮೂಲತಃ ಅಲೆಮಾರಿಗಳಾಗಿದ್ದು ನಂತರ ನೆಲೆಗೊಂಡ ಬುಡಕಟ್ಟು ಸಮುದಾಯವಾಗಿ ಜೀವಿಸುತ್ತಿದ್ದರು. ವಿಶ್ವದ ಎಲ್ಲ ಜಲಾನಯನ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಕುರುಬರ ಮೂಲದ ಬಗ್ಗೆ ಅನೇಕ ಪುರಾಣಗಳು ಮಾಹಿತಿ ನೀಡುತ್ತವೆ. ಆದರೆ ಇವರ ಐತಿಹಾಸಿಕ ಮೂಲದ ಬಗ್ಗೆ ಹೆಚ್ಚಿನ ಆಧಾರಗಳಿಲ್ಲ. ಅಲ್ಲದೆ ವಿದ್ವಾಂಸರಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿವೆ. ಈ ಹಿನ್ನೆಲೆಯಲ್ಲಿ ಕುರುಬರ ಮೂಲವನ್ನು ಪೌರಾಣಿಕ ಮೂಲ ಮತ್ತು ಐತಿಹಾಸಿಕ ಮೂಲವೆಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

#### ೩.೨.೧ ಪೌರಾಣಿಕ ಮೂಲ

ಯಾವುದೇ ಸಮುದಾಯದ ಚರಿತ್ರೆಯನ್ನು ತಿಳಿಯಲು ಪುರಾಣಗಳು ಮತ್ತು ಐತಿಹ್ಯಗಳು ಪ್ರಮುಖ ಆಕರಗಳಾಗಿರುತ್ತವೆ. ಇವುಗಳು ಸಮುದಾಯದ ಹುಟ್ಟು, ಬೆಳವಣಿಗೆ, ಕುಲ ಗೋತ್ರ, ದೇವರುಗಳ ಬಗ್ಗೆ ತಿಳಿಯಲು ಸಹಾಯಕವಾಗುತ್ತವೆ. ಈ ಜನಪದ ಪುರಾಣಗಳು ಕಟ್ಟು ಕಥೆಗಳಲ್ಲ, ಅತ್ಯಂತ ಕ್ರಿಯಾಶೀಲವಾದ ಸಾಂಸ್ಕೃತಿಕ ಶಕ್ತಿ ಎಂದು ಮ್ಯಾಲಿನೋವಸ್ಕಿಯವರು ಅಭಿಪ್ರಾಯಪಟ್ಟಿದ್ದಾರೆ.[೧೩] ಈ ಹಿನ್ನೆಲೆಯಲ್ಲಿ ಕುರುಬ ಸಮುದಾಯದ ಮೂಲವನ್ನು ತಿಳಿಯಲು ಪುರಾಣಗಳು ಪ್ರಮುಖ ಆಧಾರಗಳಾಗಿವೆ.

ಕುರುಬರಿಗೆ ಸಂಬಂಧಿಸಿದ ಪುರಾಣಗಳು ಮೊದಲು ಮೌಖಿಕವಾಗಿ, ಡೊಳ್ಳಿನ ಹಾಡುಗಳ ರೂಪದಲ್ಲಿದ್ದವು. ಆದರೆ ಇತ್ತೀಚೆಗೆ ಈ ಪುರಾಣಗಳು ಲಿಖಿತ ರೂಪ ಪಡಿದಿವೆ. ಅವುಗಳನ್ನು ಹಾಲುಮತ ಪುರಾಣ ಎಂಬ ಹೆಸರಿನಿಂದ ಕರೆಯಲಾಗಿದೆ. ಬಸವಣೆಪ್ಪ ನೀಲಪ್ಪ ಹಳವಳ್ಳಿಯವರು ರಚಿಸಿದ ಹಾಲುಮತ ಪುರಾಣ, ರಸ್ತಾಪುರ ಭೀಮಕವಿ, ಶಂಕರದಾಸರು ಬರೆದ ಹಾಲ್ಮತೋತ್ತೋಜಕ ಪುರಾಣ, ಅಣ್ಣಪ್ಪ ವಾಸುದೇವ ರಾಯರ ಶ್ರೀ ಸಿದ್ಧಬೀರೇಶ್ವರ ಅರ್ಥಾತ್ ಶ್ರೀ ಕರಿಸಿದ್ಧೇಶ್ವರ ಪುರಾಣ, ಅಡಿವೆಪ್ಪ ಮಾಳೆಪ್ಪ ಒಡೆಯರ ಸುಕ್ಷೇತ್ರ ಹುಲಿಜಂತಿ ಮಾಳಿಂಗರಾಯನ ಹಾಲುಮತ ಪುರಾಣ, ಡಾ.ವೀರಣ್ಣ ದಂಡೆಯವರು ಸಂಪಾದಿಸಿದ ಜನಪದ ಹಾಲುಮತ ಮಹಾಕಾವ್ಯ, ತಗರ ಪವಾಡ, ಶಾಂತವಿಜಯ ಪುರಾಣ ಸಿದ್ಧರಾಮ ಸಾಂಗತ್ಯ ಮೊದಲಾದ ಪುರಾಣಗಳು ಕುರುಬರ ಪೌರಾಣಿಕ ಮೂಲವನ್ನು ಕೆಲವು ಬದಲಾವಣೆಯೊಂದಿಗೆ ಒಂದೇ ಕಥೆಯನ್ನು ವಿವರಿಸುತ್ತವೆ.

ತಗರ ಪವಾಡ ಅಥವಾ ವಿಜಯ ಪುರಾಣವೆಂಬ ಕೃತಿಯ ಕರ್ತೃವಿನ ಬಗ್ಗೆ ಯಾವುದೇ ರೀತಿಯ ಆಧಾರಗಳಿಲ್ಲ. ಇದು ೮ ಸಂಧಿಗಳಿಂದ ಕೂಡಿದ ಒಂದು ಸಾಹಿತ್ಯ ಗ್ರಂಥವಾಗಿದ್ದು, ಇದರಲ್ಲಿ ಒಟ್ಟು ೬೩೮ ಪದ್ಯಗಳಿವೆ.[೧೪] ಇದರ ಪ್ರಕಾರ ಒಂದು ದಿನ ಶಿವ ಕೈಲಾಸದಲ್ಲಿ ಭೃಂಗಿ ಮೊದಲಾದ ಗಣಗಳೊಡನೆ ಒಡ್ಡೋಲಗದಲ್ಲಿರುತ್ತಾನೆ. ಆ ಸ್ಥಳಕ್ಕೆ ನಾರದನು ಬಂದು ಶಿವನಲ್ಲಿ ಈ ರೀತಿ ವಿವರಿಸುತ್ತಾನೆ. ಭೂಲೋಕದಲ್ಲಿ ಕೊಲ್ಲಾಪುರವೆಂಬ ಪಟ್ಟಣದಲ್ಲಿ ಮಾಯೆ ಎಂಬ ಒಬ್ಬ ವೇಶ್ಯೆಯಿದ್ದಾಳೆ, ಅವಳ ರೂಪ ಲಾವಣ್ಯಕ್ಕೆ ಮರುಳಾಗಿ ಅನೇಕ ಸಿದ್ಧರು ಅವಳ ಬಳಿ ಹೋಗುತ್ತಾರೆ. ಹೀಗೆ ಮೋಹದಿಂದ ಹೋದ ಸಿದ್ಧರಿಗೆ ಮಾಯೆಯು ವಿಷವನ್ನು ನೀಡುತ್ತಾಳೆ. ಆದ್ದರಿಂದಾಗಿ ಅವರೆಲ್ಲ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಆದ್ದರಿಂದ ಶಿವನೇ ನೀನು ಆ ಮಾಯೆಯನ್ನು ಸಂಹರಿಸಿ ಸಿದ್ಧರನ್ನು ಬಂಧ ಮುಕ್ತರನ್ನಾಗಿ ಮಾಡಬೇಕೆಂದು ಕೇಳಿಕೊಂಡನು.

ತಕ್ಷಣ ಕೊಲ್ಲಾಪುರಿಯಲ್ಲಿದ್ದ ಮಾಯೆಯ ಬಳಿ ಹೋದ ಶಿವ ಅವಳು ನೀಡಿದ ವಿಷವನ್ನು ಸೇವಿಸುತ್ತಾನೆ. ಇದನ್ನು ಕಂಡ ಮಾಯೆ ಶಿವನಲ್ಲಿ ಕ್ಷಮೆಕೋರುತ್ತಾಳೆ. ಆದರೆ ಶಿವ ಅವಳ ಮೂಗು ಮುಂದಲೆಗಳನ್ನು ಕೊಯ್ದು ರಂಡೆ ನೀ ಹೋಗೆಂದು ಝುಂಕಿಸುತ್ತಾನೆ. ನಂತರ ಅವಳ ಸೆರೆಯಾಗಿದ್ದ ನವಕೋಟಿ ಸಿದ್ಧರುಗಳನ್ನು ಕುರಿಗಳಾಗಿರೆಂದು ಶಾಪಕೊಡುತ್ತಾನೆ. ಆಗ ಆ ಸಿದ್ಧರೆಲ್ಲ ಕುರಿಗಳಾಗುತ್ತಾರೆ. ಆ ಕುರಿಗಳನ್ನೆಲ್ಲ ಕೆಲವು ಕಾಲ ದೇವತೆಗಳು ಕಾಯುತ್ತಾರೆ. ಆದರೆ ಕೊನೆಗೆ ಶಿವ ತಾನೇ ಕುರಿಗಳನ್ನು ಮೇಯಿಸುತ್ತ ತೊಗರಿಸಿ ಎಂಬ ಊರಿಗೆ ಬರುತ್ತಾನೆ. ಅಲ್ಲಿ ಆದಿಗೊಂಡನೆಂಬ ಒಕ್ಕಲಿಗನು ತನ್ನ ಏಳು ಮಂದಿ ಮಕ್ಕಳೊಂದಿಗೆ ಕೃಷಿ ವೃತ್ತಿಯಲ್ಲಿ ತೊಡಗಿರುತ್ತಾನೆ. ಆದಿಗೊಂಡನ ಹೊಲದಲ್ಲಿದ್ದ ಒಂದು ಹುತ್ತದಲ್ಲಿ ಕುರಿಗಳನ್ನು ಅಡಗಿಸಿಟ್ಟನಲ್ಲದೆ ಅದರ ಕಾವಲಿಗಾಗಿ ಬೀರೇಶನನ್ನು ಸೃಷ್ಟಿಸುತ್ತಾನೆ.

ಕಾಲಾನಂತರ ಆದಿಗೊಂಡನ ಮಕ್ಕಳಲ್ಲಿ ಕೊನೆಯವನಾದ ಉಂಡಾಡು ಪದ್ಮಣ್ಣ ಎಲ್ಲರ ಒತ್ತಾಯದ ಮೇರೆಗೆ ಹೊಲದಲ್ಲಿ ಕೆಲಸ ಮಾಡಲು ಹೊರಡುತ್ತಾನೆ. ಹೊಲದಲ್ಲಿ ಕೆಲಸ ಮಾಡುತ್ತಿದ್ದ ಪದ್ಮಣ್ಣ ಅಲ್ಲಿದ್ದ ಹುತ್ತವನ್ನು ಒಡೆಯುತ್ತಾನೆ. ಅದರೊಳಗಿದ್ದ ಕುರಿಗಳೆಲ್ಲ ಹೊರಬರುತ್ತವೆ. ಇದನ್ನು ಕಂಡು ಆಶ್ಚರ್ಯಗೊಂಡ ಪದ್ಮಣ್ಣನನ್ನು ಶಿವನು ಸಮಾಧಾನಗೊಳಿಸುತ್ತಾನೆ. ಈ ಕುರಿಗಳನ್ನು ಪಾಲಿಸುವುದು ನಿನ್ನ ಕರ್ತವ್ಯವೆಂದು ತಿಳಿಸಿ ಅವನ ಜೊತೆಗೆ ವೀರ ಬೀರಯ್ಯನನ್ನು ಕೂಡಿಸುತ್ತಾನೆ. ಅಂದಿನಿಂದ ಪದ್ಮಣ್ಣ ಕುರಿಗಳನ್ನು ಕಾಯುತ್ತ ಅಡವಿಯಲ್ಲಿ ಸಂಚರಿಸುತ್ತಾನೆ. ಹೀಗಾಗಿ ಪದ್ಮಣ್ಣನನ್ನು ಕುರುಬರ ಮೂಲ ಪುರುಷನೆಂದು ಹೇಳಲಾಗಿದೆ. ನಂತರ ಪದ್ಮಣ್ಣನ ಹಿರಿಯ ಹೆಂಡತಿ ಲಿಂಗಮ್ಮನ ಮಕ್ಕಳು ಹತ್ತಿಕಂಕಣ, ಕಿರಿಯ ಹೆಂಡತಿ ಸಿರಿವಂತೆಯ ಮಕ್ಕಳು ಉಣ್ಣೆ ಕಂಕಣದ ಕುರುಬರೆಂದು ಕರೆಯಲ್ಪಟ್ಟ ಬಗ್ಗೆ ಈ ಪುರಾಣದಲ್ಲಿ ಉಲ್ಲೇಖವಿದೆ.

ಹಾಲುಮತ ಪುರಾಣ ಕುರುಬರ ಮೂಲವನ್ನು ಕುರಿತು ಈ ರೀತಿ ವಿವರಿಸುತ್ತದೆ. ಒಂದು ದಿನ ಶಿವನ ಸಭಾಂಗಣದಲ್ಲಿ ಭೃಂಗಿಯು ಶಿವನಿಗೆ ಒಂದೇ ಕೈಯಿಂದ ನಮಸ್ಕರಿಸುತ್ತಾನೆ. ಇದನ್ನು ಸಹಿಸದ ಪಾರ್ವತಿ ಭೃಂಗಿಯ ಮೇಲೆ ಕೋಪಗೊಂಡು ಅವನ ದೇಹದ ಮಾಂಸ ಖಂಡಗಳಿಗೆ ನಾನೇ ಕಾರಣವೆಂದು ಹೇಳಿ ಅವುಗಳನ್ನೆಲ್ಲ ಹಿಂತಿರುಗಿ ಪಡೆಯುತ್ತಾಳೆ. ಇದರಿಂದ ಭೃಂಗಿ ಅಸ್ತಿಪಂಜರವಾದನು. ಆದರೆ ಶಿವನನ್ನು ಭೃಂಗಿ ಪ್ರಾರ್ಥಿಸಿದ್ದರಿಂದ ಮೊದಲಿನಂತಾದನು. ಇದನ್ನು ಕಂಡ ಸಭಿಕರೆಲ್ಲ ನಗುತ್ತಾರೆ. ಆಗ ಪಾರ್ವತಿಯು ತನ್ನ ಹಿಂದೆ ನಕ್ಕವರೆಲ್ಲ ಮೇಕೆಗಳಾಗಿ ಮುಂದೆ ನಕ್ಕವರೆಲ್ಲ ಕುರಿಗಳಾಗಿ ಎಂದು ಶಾಪ ಕೊಡುತ್ತಾಳೆ. ನಂತರ ಆ ಕುರಿ–ಮೇಕೆಗಳನ್ನು ಭೂಲೋಕದಲ್ಲಿ ದೇವಾನು–ದೇವತೆಗಳು ಸಾಕುತ್ತಾರೆ. ಕೊನೆಗೆ ಆ ಕುರಿಗಳನ್ನೆಲ್ಲ ಸಾಕುತ್ತ ಬೇಸತ್ತ ಪಾರ್ವತಿ ಅವುಗಳನ್ನೆಲ್ಲ ಒಂದು ಗವಿಯಲ್ಲಿ ಕೂಡಿ ಹಾಕಿ ಅದರ ಬಾಗಿಲ ಕೊಂಡಿಗೆ ತನ್ನ ಮೂಗುತಿಯನ್ನಿಟ್ಟು ಕೈಲಾಸಕ್ಕೆ ಹೊರಡುತ್ತಾಳೆ. ಆ ಮೂಗುತಿ ಮುತ್ತಲ ಮರವಾಗಿ ಬೆಳೆಯುತ್ತದೆ.

ಪಾರ್ವತಿ ಕುರಿಗಳನ್ನು ಕೂಡಿಟ್ಟ ಪ್ರದೇಶವು ಮಹಾಭಾರತದ ಕುರುಕ್ಷೇತ್ರದ ಹತ್ತಿರವಿರುವ ಕುರುವರೇಶ್ವರ ಹಾಗೂ ಸ್ಯಾಮಂತ ಪಂಚಕ ಪ್ರವಾಹಕ್ಕೆ ಸಮೀಪದಲ್ಲಿತ್ತು. ಈ ಪ್ರದೇಶಕ್ಕೆ ಕುರಪತಿಪುರವೆಂದು ಕರೆಯುತ್ತಿದ್ದರು.[೨೫] ಈ ಕುರು ಶಬ್ದಕ್ಕೆ ಕನ್ನಡದಲ್ಲಿ ಎತ್ತರ ಎಂಬ ಅರ್ಥವಿದೆ ಹಾಗೆಯೇ ಕುರುಬ ಶಬ್ದಕ್ಕೆ ಎತ್ತರ ಪ್ರದೇಶದಲ್ಲಿ ವಾಸಿಸುವವನು ಎಂಬ ಅರ್ಥವಿರುವುದರಿಂದ ಈ ಕುರು ಶಬ್ದವೇ ನಂತರ ಕುರುವ, ಕುರುಬ ಎಂದಾಗಿರುವ ಸಾಧ್ಯತೆಯಿದೆ. ಈ ಹಿನ್ನೆಲೆಯಲ್ಲಿ ಕುರಪತಿಪುರವು ಕುರುಬರ ಪ್ರಾಚೀನ ನೆಲೆಯಾಗಿರಬಹುದೆಂದು ಊಹಿಸಬಹುದಾಗಿದೆ.

ಶಿವ–ಪಾರ್ವತಿಯರು ಮತ್ತೊಮ್ಮೆ ಭೂಲೋಕ ಸಂಚಾರ ಮಾಡಲು ಬಂದರು. ಭೂಲೋಕದ ಸುಂದರ ತಾಣಗಳನ್ನು ನೋಡಿದ ಉತ್ಸಾಹದಲ್ಲಿ ಪಾರ್ವತಿಯ ಮೊಲೆಗಳಿಂದ ಹಾಲು ಉಕ್ಕುತ್ತದೆ. ಆ ಹಾಲನ್ನು ಹಾಳು ಮಾಡದೆ ಮಣ್ಣಿನಲ್ಲಿ ಬೆರಸಿ ಮಣ್ಣಿನ ಮುದ್ದೆಗಳನ್ನು (ಗೊಂಬೆಗಳನ್ನು) ಮಾಡುತ್ತಾಳೆ. ಅವುಗಳಿಗೆ ಶಿವ ಜೀವ ನೀಡುತ್ತಾನೆ. ಗಂಡು ಗೊಂಬೆಗೆ ಮುದ್ದಪ್ಪನೆಂದು, ಹೆಣ್ಣುಗೊಂಬೆಗೆ ಮುದ್ದವ್ವನೆಂದು ನಾಮಕರಣ ಮಾಡುತ್ತಾರೆ. ನೀವಿಬ್ಬರು ಸತಿ–ಪತಿಗಳಾಗಿ ಬಾಳಿರೆಂದು ಹರಸಿ ಕೈಲಾಸಕ್ಕೆ ಹಿಂದಿರುಗುತ್ತಾರೆ. ನಂತರ ಮುದ್ದಪ್ಪ–ಮುದ್ದವ್ವನಿಗೆ ಆದಿಗೊಂಡನೆಂಬ ಮಗನು ಹುಟ್ಟುತ್ತಾನೆ. ಪಾರ್ವತಿಯ ಎದೆಹಾಲಿನಿಂದ ಸೃಷ್ಟಿಗೊಂಡಿದ್ದರಿಂದ ಹಾಲು ಮತದವರೆಂದೂ ಕುರುಬರಿಗೆ ಹೆಸರಿದೆ. ಪಾರ್ವತಿ ಕುರಿಗಳನ್ನು ಕೂಡಿಟ್ಟ ಪ್ರದೇಶದಲ್ಲಿ ಆದಿಗೊಂಡನು ನೆಲೆಸಿದ್ದನು. ಅವನಿಗೆ ಆರು ಜನ ಮಕ್ಕಳಿದ್ದರು. ಐದು ಜನ ಅಣ್ಣ–ತಮ್ಮಂದಿರು ಹೊಲದಲ್ಲಿ ಕಷ್ಟಪಟ್ಟು ಕೆಲಸ ಮಾಡಿದರೆ ಆರನೆಯವನಾದ ಪದ್ಮಣ್ಣ ಉಂಡಾಡು ಗುಂಡನಾಗಿದ್ದ. ಇದನ್ನು ಸಹಿಸದ ಅಣ್ಣಂದಿರು ಪದ್ಮಣ್ಣನು ಕೆಲಸ ಮಾಡಬೇಕೆಂದು ಹಟ ಮಾಡಿದರು. ಇದರಿಂದಾಗಿ ಪದ್ಮಣ್ಣನು ಹೊಲದಲ್ಲಿ ಕೆಲಸ ಮಾಡಲಾರಂಭಿಸಿದನು. ಆ ಹೊಲದಲ್ಲಿ ಬೆಳೆದಿದ್ದ ಹುತ್ತದ ಮರವನ್ನು ಕಡಿದನು. ತಕ್ಷಣ ಅದರೊಳಗಿನಿಂದ ನೂರಾರು ಕುರಿಗಳು ಹೊರ ಬಂದವು. ಇದನ್ನು ಕಂಡು ಆಶ್ಚರ್ಯಗೊಂಡ ಪದ್ಮಣ್ಣನಿಗೆ ಶಿವನು ಪ್ರತ್ಯಕ್ಷನಾಗಿ ನೀನು ಈ ಕುರಿ ಕಾಯುವ ವೃತ್ತಿ ಕೈಗೊಳ್ಳುವಂತೆ ಆಜ್ಞೆ ಮಾಡಿದನು. ಅಂದಿನಿಂದ ಕುರಿ ಕಾಯುವ ವೃತ್ತಿ ಅರಂಭವಾಯಿತೆಂದು ಹೇಳುವ ಪ್ರತೀತಿ ಇದೆ.

ಪದ್ಮಣ್ಣನ ಹಿರಿಯ ಹೆಂಡತಿ ಲಿಂಗಮ್ಮನ ಮಕ್ಕಳು ಹತ್ತಿಕಂಕಣದ ಕುರುಬರೆಂದು ಕರೆಯಲ್ಪಟ್ಟರು. ಅಲ್ಲದೆ ಇವರು ಊರಲ್ಲಿ ವಾಸಿಸುತ್ತಿದ್ದರಿಂದ ಊರು ಕುರುಬರೆಂದೂ ಗುರುತಿಸಲ್ಪಟ್ಟರು. ಆದರೆ ಎರಡನೆ ಹೆಂಡತಿ ಶುಚಿಲಾದೇವಿಯ ಮಕ್ಕಳು ಉಣ್ಣೆ

ಕಂಕಣದವರೆಂದು ಹಾಗೂ ಕಾಡಿನಲ್ಲಿ ಕುರಿಕಾಯುತ್ತಿದ್ದರಿಂದ ಕಾಡು ಕುರುಬರೆಂದು ಕರೆಯಲ್ಪಟ್ಟರು. ಇಂದಿಗೂ ಕುರುಬರಲ್ಲಿ ನಾಡು ಕುರುಬರು, ಕಾಡು ಕುರುಬರು, ಜೇನು ಕುರುಬರು ಎಂಬ ಬೇಧವಿದೆ. ಉಣ್ಣೆ ಕಂಕಣ ಮತ್ತು ಹತ್ತಿ ಕಂಕಣದವರು ಸವತಿ ಮಕ್ಕಳಾದ್ದರಿಂದ ಇವರ ನಡುವೆ ವಿವಾಹ ನಡೆಯುವುದಿಲ್ಲ. ಕಾಲಾನಂತರ ಹತ್ತಿ ಕಂಕಣದಲ್ಲಿ ಹಂಡೆ ಕುರುಬರು ಮತ್ತು ಬಂಡೆ ಕುರುಬರು ಎಂದು ಪಂಗಡಗಳಾದವು. ಹಾಗೆಯೇ ಉಣ್ಣೆ ಕಂಕಣದಲ್ಲಿ ಝುಂಡೆ ಕುರುಬರು ಮತ್ತು ಡಂಗೆ ಕುರುಬರು ಎಂದು ಪಂಗಡಗಳಾದವು. ಹೀಗೆ ಇವರ ವಂಶ ಬೆಳೆಯುತ್ತ ಅನೇಕ ಕುಲ ಗೋತ್ರಗಳಾದವು. ಈ ಕುಲ ಗೋತ್ರಗಳ ಆಧಾರದ ಮೇಲೆಯೇ ಇಂದಿಗೂ ವಿವಾಹ ಸಂಬಂಧವೇರ್ಪಡುತ್ತಿರುವುದು ಕಂಡುಬರುತ್ತದೆ.

ರಸ್ತಾಪುರದ ಭೀಮಕವಿ ರಚಿಸಿದ "ಹಾಲಮತ್ತೋತ್ತೇಜಕ ಪುರಾಣದಲ್ಲಿ" ಕುರುಬರ ಮೂಲದ ಬಗ್ಗೆ ಪ್ರಸ್ತಾಪವಿದೆ. ಭೀಮಕವಿ ಕುರುಬರ ಮೂಲದ ಬಗ್ಗೆ ಹೇಳುವಾಗ ಸಂಸ್ಕೃತದಲ್ಲಿ ರಚಿಸಿದ ಆಗ್ನೇಯ ಪುರಾಣದ ಆಧಾರ ನೀಡಿದ್ದಾನೆ. ಈ ಆಗ್ನೇಯ ಪುರಾಣದ ಪ್ರಕಾರ ಕೌರುಭ ಋಷಿಯ ಉಗ್ರ ತಪಸ್ಸಿನ ಫಲವಾಗಿ ಕುರುಬ ಸಮುದಾಯ ಸೃಷ್ಟಿಯಾಯಿತೆಂದು ತಿಳಿಯುತ್ತದೆ. ಈ ಮೇಲಿನ ಹೇಳಿಕೆಗೆ ಭೀಮಕವಿ ಈ ಕೆಳಗಿನ ಸಾಲುಗಳನ್ನು ಆಧಾರವಾಗಿ ಕೊಟ್ಟಿದ್ದಾನೆ.[೧೬]

'ಕುರರೇ ಮೃಗಸ್ತ್ರಾಣೇ ಕೃತ್ವವ್ಯೆ

ಕೌರುಭ ಋಷಿ

ತನಮಾ ಸಾರ್ಥಕಂ ಚಕ್ರದೇವಾನಾಂ

ಹಿತ ಕಾವ್ಯ'

ಇದರಿಂದ ಕೌರುಭ ಋಷಿಯಿಂದ ಕುರುಬರು ಸೃಷ್ಟಿಯಾದರೆಂದು ತಿಳಿಯುತ್ತದೆ ಕೌರುಭ ಎಂಬ ಶಬ್ದ ಕೌರವ>ಕುರುವ>ಕುರುಬ ಎಂದಾಗಿರುವುದು ಕಂಡು ಬರುತ್ತದೆ.

ಎಡ್ಗರ್ ಥರ್ಸ್ಟನ್ ರವರ "ದಿ ಟ್ರೈಬ್ಸ್ ಆಂಡ್ ಕ್ಯಾಸ್ಟ ಆಫ್ ಸೌರ್ಥನ್ ಇಂಡಿಯಾ" ಕೃತಿಯಲ್ಲಿ ಕುರುಬರ ಮೂಲದ ಬಗ್ಗೆ ಈ ರೀತಿ ನಿರೂಪಣೆಯಿದೆ.[೧೭] ಕುರುಬರು ಮೂಲತಃ ಕಾಡಿನವಾಸಿಗಳಾಗಿದ್ದರು. ಅವರ ಪೂರ್ವಜರಾದ ಮಸಿರೆಡ್ಡಿ ಮತ್ತು ನೀಲಮ್ಮ ದಂಪತಿಗಳು ಕಟ್ಟಿಗೆ ಮಾರಿ ಜೀವನ ಮಾಡುತ್ತಿದ್ದರು. ಅವರ ಬಡತನವನ್ನು ಕಂಡು ಮರುಗಿದ ಶಿವನು ಜಂಗಮ ವೇಷಧಾರಿಯಾಗಿ ಬಂದು ನಿಮಗೆ ಆರನೆಯ ಮಗುವಿನ ಜನನವಾಗುತ್ತಲೇ ಬಡತನ ನಿವಾರಣೆಯಾಗುವುದೆಂದು ಹೇಳಿ ಭಸ್ಮ ಕೊಟ್ಟು ಹೋದನು. ಅದರಂತೆ ಮಸಿರೆಡ್ಡಿ–ನೀಲಮ್ಮ ದಂಪತಿಗಳಿಗೆ ಹುಟ್ಟಿದ ಆರನೇ ಮಗನೇ ಪದ್ಮಣ್ಣ. ಇವನು ದೊಡ್ಡವನಾಗಿ ಬೆಳೆದ ಮೇಲೆ ಯಾವುದೇ ಕೆಲಸ ಮಾಡದೆ ಉಂಡಾಡಿಗುಂಡನಾಗಿದ್ದ. ಸಹೋದರರ ಒತ್ತಾಯದ ಮೇರೆಗೆ ಹೊಲದಲ್ಲಿ ಕೆಲಸ ಮಾಡಲಾರಂಭಿಸಿದನು. ಆ ಹೊಲದಲ್ಲಿದ್ದ ಹುತ್ತವನ್ನು ಕಡಿದಾಗ ಅದರೊಳಗಿಂದ ನೂರಾರು ಕುರಿಗಳು ಹೊರಬಂದವು. ಕೊನೆಗೆ ಶಿವನಾಜ್ಞೆಯಂತೆ ಕುರಿಗಳನ್ನು ಸಾಕಲಾರಂಭಿಸಿದನು. ಕುರಿ ಕಾಯುತ್ತಾ ಅಡವಿಯಲ್ಲಿ ಸಂಚರಿಸುತ್ತಿದ್ದಾಗ ರಾಕ್ಷಸಿಯ ಬಂಧನದಲ್ಲಿದ್ದ ಕನ್ಯೆಯ ಪರಿಚಯವಾಗುತ್ತದೆ. ಅವಳನ್ನು ರಾಕ್ಷಸಿಯ ಬಂಧನದಿಂದ ಬಿಡಿಸಿದನಲ್ಲದೆ ವಿವಾಹವಾದನು. ಕಾಡಿನಲ್ಲಿ ಅವಳಿಗೆ ಕುರಿಯ ಉಣ್ಣೆಯಿಂದ ಮಾಡಿದ ಕಂಕಣವನ್ನು ಕಟ್ಟಿದ್ದರಿಂದ ಉಣ್ಣೆ ಕಂಕಣದವರೆಂದು

ಕರೆಯಲ್ಪಟ್ಟರು. ಈ ಮೊದಲೇ ವಿವಾಹವಾಗಿದ್ದ ಸಮಯದಲ್ಲಿ ಹತ್ತಿ ಕಂಕಣವನ್ನು ಕಟ್ಟಿದ್ದನು. ಆದ್ದರಿಂದ ಅವರ ವಂಶಸ್ಥರನ್ನು ಹತ್ತಿ ಕಂಕಣದವರೆಂದು ಕರೆದರು. ಇಂದಿಗೂ ಕುರುಬರ ಮದುವೆಯಲ್ಲಿ ಹತ್ತಿಕಂಕಣ ಅಥವಾ ಉಣ್ಣೆಕಂಕಣ ಕಟ್ಟುವ ಸಂಪ್ರದಾಯವಿರುವುದೇ ಇದಕ್ಕೆ ಸಾಕ್ಷಿ.

ಕುರುಬರ ಸೃಷ್ಟಿ ಮೂಲದ ಬಗ್ಗೆ ಇನ್ನೊಂದು ಕಥೆ ಪ್ರಚಲಿತದಲ್ಲಿದೆ.[೧೮] ಅದರ ಪ್ರಕಾರ ಒಂದು ದಿನ ಶಿವ–ಪಾರ್ವತಿಯರು ತಾವು ಸೃಷ್ಟಿಸಿದ ಭೂಲೋಕವು ಎಷ್ಟರಮಟ್ಟಿಗೆ ಯೋಜನಾಬದ್ಧವಾಗಿದೆಯೆಂಬುದನ್ನು ತಿಳಿಯುವುದಕ್ಕೋಸ್ಕರ ಭೂಲೋಕಕ್ಕೆ ಬಂದರು. ಪ್ರಕೃತಿಯ ಸೊಬಗನ್ನು ಕಂಡು ಮಾರು ಹೋದರು. ಕೆಲ ಸಮಯದ ನಂತರ ಅವರಿಗೆದುರಾಗಿ ಕಾಲ್ನಡಿಗೆಯಿಂದ ಬ್ರಹ್ಮದೇವ ಬಂದನು. ಬ್ರಹ್ಮದೇವನನ್ನು ಕಂಡ ಶಿವದಂಪತಿಗಳು ಇದೇನು 'ಬ್ರಹ್ಮದೇವ ಕಾಲ್ನಡಿಗೆಯಿಂದ ಸಂಚಾರವೇ'? ಎಂದು ಪ್ರಶ್ನಿಸಿದರು. ಆಗ ಬ್ರಹ್ಮನು ಶಿವದಂಪತಿಗಳು ನನಗೆ ವಾಹನವನ್ನೇ ಒದಗಿಸಲಿಲ್ಲವೆಂದನು. ಆದ್ದರಿಂದ ಶಿವನು ನಾಲ್ಕು ಕಾಲಿನ ಎರಡು ಜೀವಿಗಳನ್ನು ಸೃಷ್ಟಿಸಿ ಒಂದಕ್ಕೆ ಮೇಷವೆಂದು ಇನ್ನೊಂದಕ್ಕೆ ಮೇಖ (ಮೇಕೆ) ಎಂದು ಹೆಸರಿಟ್ಟನು. ಮೇಷವು ವಿನಯ, ಮುಗ್ಧ, ಸೇವಾಭಾವಿ, ಸರಳ ಜೀವಿಯಾಗಿತ್ತಲ್ಲದೆ, ಮೈಮೇಲೆ ಮೃದುವಾದ ಊರ್ಣವನ್ನು ಹೊಂದಿತ್ತು. ಬ್ರಹ್ಮನು ಮೇಷವನ್ನು ವಾಹನವನ್ನಾಗಿ ಮಾಡಿಕೊಂಡು ಬ್ರಹ್ಮಪುರಿಗೆ ಮರುಳಿದನು. ಶಿವ ದಂಪತಿಗಳು ಕೈಲಾಸಕ್ಕೆ ತೆರಳಿದರು. ಆದರೆ ಮೇಷಿಣಿಗಳು ಭೂಲೋಕದಲ್ಲಿಯೇ ಉಳಿದವು.

ಕೈಲಾಸದಲ್ಲಿ ಶಿವನ ಒಡ್ಡೋಲಗ ನಡೆದಿತ್ತು. ಗರುಡ–ಗಂಧರ್ವರು, ಕಿನ್ನರ ಕಿಂಪುರುಷರು, ಸಿದ್ಧ–ವಿದ್ಯಾಧರರು, ಮತ್ಸ್ಯ–ನಾಗರು, ಕೌರಬಾದಿ ಸಕಲ ಋಷಿಗಳು ಸಭೆಯಲ್ಲಿ ಭಾಗವಹಿಸಿದ್ದರು. ಆಗ ಅನಿರೀಕ್ಷಿತವಾಗಿ ಭಯಂಕರ ಹಿಮಪಾತವಾಯಿತು. ದೇವ–ದೇವತೆಗಳೆಲ್ಲರೂ ಭಯ–ಭೀತರಾದರು. ಅವರ ಜೀವಕ್ಕೆ ಆಪತ್ತು ಬಂದಿತು. ತಕ್ಷಣ ಶಿವನು ಮೂರನೆ ಕಣ್ಣನ್ನು ತೆರೆದು ಬಿಸಿಯನ್ನು ಒದಗಿಸಿದನು. ದೇವತೆಗಳೆಲ್ಲರೂ ಗಂಡಾಂತರದಿಂದ ಪಾರಾದರು. ಆದರೆ ಈ ಪರಿಹಾರ ತಾತ್ಕಾಲಿಕವಾಗಿತ್ತು. ಹೀಗಾಗಿ ಎಲ್ಲರೂ ಶಿವನನ್ನು ಕುರಿತು ಶಾಶ್ವತವಾದ ಹಾಗೂ ಸುರಕ್ಷಿತವಾದ ಪರಿಹಾರವೊಂದನ್ನು ಕಂಡು ಹಿಡಿಯಲು ಕೇಳಿಕೊಂಡರು. ಶಿವನು ಇದಕ್ಕೆ ಪರಿಹಾರವನ್ನು ಸೂಚಿಸಲು ಕೌರಬರಿಗೆ ಹೇಳಿದನು. ಆಗ ಕೌರಬರು ಊರ್ಣವಸ್ತ್ರಗಳನ್ನು ನೇಯ್ದು ದೇವತೆಗಳಿಗೆ ಹೊದಿಸಿದರೆ ಈ ಶೀತಬಾಧೆಯಿಂದ ಮುಕ್ತರಾಗಬಹುದೆಂದು ತಿಳಿಸಿದರು. ಆದರೆ ಅದಕ್ಕೆ ಹೆಚ್ಚಿನ ಊರ್ಣವು ಬೇಕಾಗುತ್ತಲ್ಲದೇ, ಆ ಊರ್ಣಕ್ಕಾಗಿ ಹಿಂದೆ ತಾವು ಸೃಷ್ಟಿಸಿದ ಮೇಷಗಳ ಪಾಲನೆ ಆಗಬೇಕು ಎಂದು ಶಿವನು ತಿಳಿಸಿದನು. ಅದಕ್ಕಾಗಿ ಶಿವ ದಂಪತಿಗಳು, ಕೌರಭರನ್ನೊಳಗೊಂಡು ಭೂಲೋಕದ ಮೇಷ ಮಂಡಲಕ್ಕೆ ಬಂದರು. ಮೊದಲು ಭೂಲೋಕದಲ್ಲಿದ್ದ ಮೇಷಿಣಿಗಳಿಗೆ ಬ್ರಹ್ಮನ ವಾಹನವಾದ ಮೇಷದಿಂದ ಸಂಪರ್ಕ ಮಾಡಿಸಲಾಯಿತು. ಇದರಿಂದ ಅಸಂಖ್ಯಾತ ಮೇಷಗಳು ಉತ್ಪತ್ತಿಯಾದವು.

ಮೇಷ ಪಾಲನೆಗಾಗಿ ಕೌರಭರೊಂದಿಗೆ ದೇವ–ದೇವತೆಗಳ ಭೂಲೋಕದಲ್ಲಿಯೇ ಉಳಿದರು. ದಿನದಿಂದ ದಿನಕ್ಕೆ ಮೇಷಗಳ ಸಂಖ್ಯೆ ಬೆಳೆಯತೊಡಗಿತು. ಆದರೆ ಮೇಷ ಪಾಲಕನನ್ನು ಯಾವ ಹೆಸರಿನಿಂದ ಕರೆಯಬೇಕೆಂಬ ಬಗ್ಗೆ ಶಿವನಲ್ಲಿ ವಿಚಾರ ಬಂದಿತು. ಮೇಷ ಪಾಲನೆ ಮಾಡುವುದು ಮತ್ತು ಊರ್ಣವಸ್ತ್ರಗಳನ್ನು ನೇಯ್ದು ದೇವತೆಗಳಿಗೆ ಪೂರೈಸುವ ಉಪಾಯವನ್ನು ಸೂಚಿಸಿದವರು 'ಕೌರಭ'ರಾಗಿದ್ದರು. ಇದೊಂದು ಕೌರಭಸಿದ್ಧ ಯೋಜನೆಯಾಗಿತ್ತು. ಈ ಹಿನ್ನೆಲೆಯಲ್ಲಿ ಕೌರಭರ ಹೆಸರಿನಿಂದಲೇ

ಕರೆಯಲ್ಪಟ್ಟರು. ಮೇಷಪಾಲಕನು ಕೌರಭನಾದನು. ಕಾಲಾನಂತರ ಕೌರಭ ಶಬ್ದವು ಕುರುಬವಾಗಿ ಪರಿವರ್ತನೆಗೊಂಡಿತು. ಹೀಗೆ ಕೌರಬರು ಆದಿ ಕುರುಬರಾದರು. ಶಿವನು ಮೇಷ ಪಾಲಕನಾಗಿ ಪ್ರಥಮ ಕುರುಬನಾದರೆ, ಪಾರ್ವತಿಯ ಪ್ರಥಮ ಕುರುಬತಿಯಾದಳು.

ಕೌರಭರು ಶಿವನಿಂದ ಕುರುಬ ದೀಕ್ಷೆಯನ್ನು ಪಡೆದು ಕುರುಬರಾದರು. ಕಾಲಾನಂತರ ಕೌರಬರಿಂದ ಕೌಂಡಿಲ್ಯ, ಪೃಥುಕ, ಶೃಣಿ, ಗಣಕ, ವಿಭ್ರಾಜಿತ, ಕುಶಲ, ಪ್ರಭಾವ, ಕರುಣ, ಪ್ರಬಲ ಹಾಗೂ ವಿಭಾಗರೆಂಬ ಹನ್ನೊಂದು ಜನ ಪೂರ್ವಜರು ಜನಿಸಿದರು. ಇವರ ಹೆಸರಿನಲ್ಲಿ ಪ್ರಾಚೀನ ಗೋತ್ರಗಳು ಪ್ರಾರಂಭಗೊಂಡವು. ಇವರನ್ನು ಕೌರಭಗಳೆಂದು ಕರೆಯಲಾಯಿತು. ಈ ಕೌರಭಿಗಳೇ ಮುಂದೆ ಕುರುಬರಾದರೆಂಬ ಅಭಿಪ್ರಾಯವಿದೆ.

ಕುರುಬರ ಮೂಲವನ್ನು ಕುರಿತು ಹೇಳುವ ಈ ಪುರಾಣಗಳಲ್ಲಿ ಸತ್ಯ ಸಂಗತಿಗಳನ್ನು ಹೇಳುವುದು ಕಷ್ಟಸಾಧ್ಯ. ಆದರೆ ಅವುಗಳಲ್ಲಿ ಸಾಕಷ್ಟು ವಾಸ್ತವ ಹುದುಗಿಕೊಂಡಿರುವುದು ಸತ್ಯ. ಈ ಪುರಾಣಗಳಲ್ಲಿಯ ಕೆಲವು ವಿಷಯಗಳನ್ನು ಆಧಾರವಾಗಿಟ್ಟುಕೊಂಡರೆ ಕುರುಬರ ಮೂಲದ ಬಗ್ಗೆ ಸಾಕಷ್ಟು ವಾಸ್ತವ ಸಂಗತಿಗಳು ತಿಳಿದು ಬರುತ್ತವೆ. ಹೀಗಾಗಿ ಪುರಾಣಗಳ ಹಿನ್ನೆಲೆಯಿಂದ ಕೆಲವು ವಿಷಯಗಳು ಸ್ಪಷ್ಟಪಡುತ್ತವೆ. ಕುರುಬರ ಮೂಲ ಪುರುಷ ಪದ್ಮಗೊಂಡ, ಕುರಿಗಳನ್ನು ಕಾಯುವ ವೃತ್ತಿ ಪ್ರಾರಂಭವಾದಾಗಿನಿಂದಲೇ ಕುರುಬರೆಂದು ಕರೆಯಲ್ಪಟ್ಟರು, ಹಾಗೂ ಕುರುಬರ ಮೂಲ ದೇವತೆ ಶಿವ ಅಥವಾ ಬೀರದೇವ ಎಂಬ ಮೊದಲಾದ ವಿಷಯಗಳ ಬಗ್ಗೆ ಮಾಹಿತಿ ದೊರೆಯುತ್ತದೆ. ಹೀಗಾಗಿ ಪುರಾಣಗಳು ಕುರುಬರ ಮೂಲವನ್ನು ತಿಳಿಯಲು ಪ್ರಮುಖ ಆಕರಗಳಾಗಿವೆ ಎಂಬುದು ಸ್ಪಷ್ಟ.

**೩.೨.೨ ಐತಿಹಾಸಿಕ ಮೂಲ**

ಮಾನವನ ಮೊದಲನೆಯ ಅವಸ್ಥೆ ಆಹಾರ ಸಂಚಯವಾಗಿತ್ತು. ಈ ಅವಸ್ಥೆಯಲ್ಲಿ ಮಾನವನ ಪ್ರಗತಿ ಮಂದವಾಗಿತ್ತು. ಬೇಟೆಯಾಡುತ್ತ ಆಹಾರ ಸಂಗ್ರಹಕ್ಕಾಗಿ ಗುಡ್ಡ, ಕಾಡು, ಹಳ್ಳ-ಕೊಳ್ಳಗಳಲ್ಲಿ ಅಲೆದಾಡಬೇಕಾಗಿತ್ತು. ಒಂದೆಡೆ ನಿಲ್ಲುವುದು ಸಾಧ್ಯವಿದ್ದಿಲ್ಲ. ಜೀವನ ನಿರ್ವಹಣೆಗಾಗಿ ಮಾಡಬೇಕಾಗುವ ಹೋರಾಟದಲ್ಲಿ ಬಿಡುವು ಎಂಬುದಿರಲಿಲ್ಲ. ಕಾಲಾನಂತರ ಮಾನವನಿಗೆ ಆಹಾರ ನಿರ್ಮಾಣದ ಹದವು ತಿಳಿಯಿತು. ಈ ಆಹಾರ ನಿರ್ಮಾಣದ ಕಾಲದಿಂದಲೇ ಮಾನವನ ಸಂಸ್ಕೃತಿ ಆರಂಭವಾಯಿತೆಂದು ಹೇಳಬಹುದು. ಆಹಾರ ಉತ್ಪಾದನೆಯ ಕಾಲದ ಪ್ರಾಥಮಿಕ ಅವಸ್ಥೆಯೇ ದನಗಾರಿಕೆ. ಈ ಕಾಲದಲ್ಲಿ ಕುರಿ, ಆಕಳು, ದನ ಮೊದಲಾದ ಸಾಕು ಪ್ರಾಣಿಗಳ ಸಮೂಹವೇ ಆತನ ಜೀವನಾಧಾರವಾಗಿತ್ತು. ನಂತರ ಪ್ರಾಣಿಗಳ ಸಾಕಾಣಿಕೆಯ ಆಧಾರದ ಮೇಲೆ ಅವರನ್ನು ಗುರುತಿಸತೊಡಗಿದರು. ಉದಾ: ದನಗಳ ಪಾಲಕರು ಧನಗಾರರಾದರು, ಗೋವುಗಳ ಪಾಲಕರು ಗೊಲ್ಲರಾದರು ಹಾಗೂ ಕುರಿಗಳ ಪಾಲಕರು ಕುರುಬರಾದರು. ಹೀಗಾಗಿ ಬೇಟೆಯಿಂದ ಕವಲೊಡೆದು ಪಶುಪಾಲನೆ (ಕುರಿಗಳ ಪಾಲನೆ)ಯನ್ನು ಕೈಗೊಂಡಂದಿನಿಂದಲೇ ಕುರುಬರ ಇತಿಹಾಸ ಪ್ರಾರಂಭವಾಯಿತೆಂದು ಹೇಳಬಹುದು.

ಕುರು ಒಂದು ಗುಂಪು. ಕುರು ಶಬ್ದಕ್ಕೆ ಕನ್ನಡದಲ್ಲಿ ಎತ್ತರ ಎಂಬ ಅರ್ಥವಿದೆ. ಆದ್ದರಿಂದ ಕು ಅಥವಾ ಕೊ ಜನರು ಕುರುಬರಾದರು.[೯] ಕುರುಬರನ್ನು ತುರುಕಾರರೆಂದು ಕರೆಯಬಹುದು. ಈ ತುರುಕಾರರು ಮುಂದೆ ಕುರುಕಾರ> ಕುರಿಕಾರ>

ಕುರುವರು> ಕುರಿಕಾಯುವವರು ಎಂದು ಪರಿವರ್ತನೆ ಹೊಂದಿದರೆಂದು ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ.[೨೦] ಈ ಹೆಸರುಗಳೆಲ್ಲ ಅವರ ವೃತ್ತಿಯಿಂದಲೇ ಬಂದಿರುವುದು ಸ್ಪಷ್ಟ.

ಕುರುಬರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಕುರುಬರನ್ನು ಆರ್ಯ ಮೂಲದವರೆಂದು ಹೇಳಿದರೆ, ಇನ್ನು ಕೆಲವರು ದ್ರಾವಿಡ ಮೂಲದವರೆಂದು ಹೇಳುತ್ತಾರೆ. ಅಲ್ಲದೆ ಮತ್ತೆ ಕೆಲವರು ಕುರುಬರು ದ್ರಾವಿಡ ಪೂರ್ವಗುಂಪಿಗೆ ಸೇರಿದವರೆಂದು ಅಭಿಪ್ರಾಯ ಪಡುತ್ತಾರೆ.

ಭಾರತದ ವಿಭಿನ್ನ ಭಾಗಗಳಲ್ಲಿರುವ ಕುರುಬರನ್ನು ಭಾರತೀಯ ಆರ್ಯ ಹಾಗೂ ಆಗ್ನೇಯ ಏಷಿಯಾ ಮೂಲದವರೆಂದು ಎರಡು ವಿಧವಾಗಿ ರಿಸ್ಲೆ ಮತ್ತು ಹಟ್ಟನ್‌ರು ವಿಂಗಡಿಸಿದ್ದಾರೆ.[೨೧] ಇವರಿಬ್ಬರ ಪ್ರಕಾರ ಮೊದಲ ವರ್ಗದ ಕುರುಬರು ಉತ್ತರದಲ್ಲಿ ಹಾಗೂ ದ್ವಿತೀಯ ವರ್ಗದ ಕುರುಬರು ದಕ್ಷಿಣದಲ್ಲಿ ನೆಲೆಸಿದ್ದಾರೆ. ಆದರೆ ಇವರ ಉದ್ಯೋಗ, ಆರ್ಥಿಕ ಸ್ಥಿತಿಗಳು ಒಂದೇ ಬಗೆಯಾಗಿದ್ದವು. ಅಲ್ಲದೆ ಇವರ ದೇಹರಚನೆ ಲಕ್ಷಣಗಳು ಭಾರತೀಯ ಆರ್ಯರನ್ನು ಹೋಲುತ್ತಿದ್ದವು. ಕಂದಮಿಳರು ಆಯಜ್ಞೆಯರು ಹಾಗೂ ಅರೆಮತ್ತಿನವರೆಂದು ಅವರನ್ನು ಕರೆಯಲಾಗುತ್ತಿತ್ತು.[೨೨]

ಕುರುಬರು ಭಾರತದಲ್ಲಿ ನೆಲೆಸಿದ ತೀರ ಪ್ರಾಚೀನ ನಿವಾಸಿಗಳಾಗಿದ್ದು, ಭಾರತ ನೆಲದ ಉದ್ಯೋಗ ಪ್ರಾಶಸ್ತ್ಯದಲ್ಲಿ ದ್ರಾವಿಡ ವಂಶಜರ ಸಂಪರ್ಕಕ್ಕೆ ಬಂದವರೆಂದು ಗೆಸ್ಟೂವ್ ಓಪರ್ಟರವರು ಅಭಿಪ್ರಾಯಪಟ್ಟಿದ್ದಾರೆ.[೨೩] ಅಲ್ಲದೆ ಕುರುಬರು ಭಾರತದ ಪೂರ್ವ ಜನಸಂಖ್ಯೆಯ ಮಹತ್ವದ ಮೂಲಗಳಲ್ಲಿ ಓರ್ವ ಸಮುದಾಯವಾಗಿರುವರೆಂದು ಇಲಿಯಟ್‌ರು ಅಭಿಪ್ರಾಯ ಪಟ್ಟಿದ್ದಾರೆ.[೨೪] ಹೀಗಾಗಿ ಕುರುಬರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಭಾರತದಲ್ಲಿ ಆರ್ಯರಿಗಿಂತ ಪೂರ್ವದಲ್ಲಿ ಎರಡು ಜನಾಂಗಗಳು ಪ್ರಚಲಿತದಲ್ಲಿದ್ದವೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಒಂದನ್ನು ಆಸ್ಟ್ರೋ-ಏಶಿಯಾಟಿಕ ಎಂದು, ಇನ್ನೊಂದು ದ್ರಾವಿಡವೆಂದು ಹೆಸರಿಸಿದ್ದಾರೆ.[೨೫] ದ್ರಾವಿಡರು ಆಸ್ಟ್ರೋ-ಏಶಿಯಾಟಿಕ್ ಜನರ ಮೇಲೆ ಆಕ್ರಮಣ ಮಾಡಿ ಅವರ ಮೇಲೆ ತಮ್ಮ ವರ್ಚಸ್ಸನ್ನು ಸ್ಥಾಪಿಸಿದರು. ಆಸ್ಟ್ರೋ-ಏಶಿಯಾಟಿಕ್ ಜನರು ಮೂಲೆ ಗುಂಪಾಗಿ ಸಂಪೂರ್ಣ ದ್ರಾವಿಡರ ವಶವಾದರು. ಈ ದ್ರಾವಿಡರು ಮೊದಲು ಧನಗಾರ ಪಶುಪಾಲಕರಾಗಿದ್ದರು. ನಂತರ ಪದವಿಯನ್ನು ಸಂಪಾದಿಸಿದರೆಂದು ಪ್ರೊ. ವ್ಹಿ.ಬಿ.ದೀಕ್ಷಿತರವರು ಅಭಿಪ್ರಾಯಪಟ್ಟಿದ್ದಾರೆ. ಭಾರತದ ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ವಾಸಿಸುತ್ತಿದ್ದ ಜನರೆಲ್ಲ ದ್ರಾವಿಡರೇ ಆಗಿದ್ದರು. ಈ ದ್ರಾವಿಡರು ನಿಸ್ಸಂದಿಗ್ಧವಾಗಿ ಕುರುಬರು ಎಂದು ಆಧುನಿಕ ವಂಶಶಾಸ್ತ್ರಜ್ಞರಾದ ಹ್ಯಾಡೋನರು ಅಭಿಪ್ರಾಯ ಪಟ್ಟಿದ್ದಾರೆ.[೨೬] ಹೀಗಾಗಿ ಕಾವೇರಿಯಿಂದ ಗಂಗೆಯವರೆಗೆ ನೀಲಗಿರಿಯಿಂದ ರಾಜಮಹಲದವರೆಗೆ ವ್ಯಾಪಿಸಿಕೊಂಡಿರುವ ಹಟ್ಟಿಕಾರ-ದನಗಾರರು(ಕುರುಬರು) ದ್ರಾವಿಡ ಜನಾಂಗವೆಂಬುದು ದಾಖಲೆಗಳ ಮೂಲಕ ತಿಳಿದು ಬರುತ್ತದೆ.

ದ್ರಾವಿಡರು ಯೋಧರಲ್ಲ, ಶಾಂತವಾದ ಸಮುದಾಯವೆಂಬ ಅಭಿಪ್ರಾಯವಿದೆ. ಆದರೆ ಅದು ಸತ್ಯವಲ್ಲ. ಕಾರಣ ದ್ರಾವಿಡರಿಗಿಂತ ಮೊದಲು ಇಲ್ಲಿ ನೆಲೆಸಿದ್ದ ಆಸ್ಟ್ರೋ-ಏಶಿಯಾಟಿಕ್ ಜನಾಂಗವನ್ನು ಸೋಲಿಸಿದವರು ಇವರೇ. ಆದ್ದರಿಂದ ಇವರು ಶೂರರು, ಕಡುಗಲಿಗಳಾಗಿದ್ದರೆಂದು ಹೇಳಬಹುದು. ದ್ರಾವಿಡರು ಪಶುಪಾಲಕರಾಗಿದ್ದರು, ಅಲ್ಲದೆ ಒಕ್ಕಲುತನ,

ವ್ಯಾಪಾರಗಳನ್ನು ಮಾಡುತ್ತಿದ್ದರು. ದ್ರಾವಿಡರು (ಕುರುಬರು) ಗಂಗಾನದಿಯ ಬಯಲಿನ ಪ್ರದೇಶದಲ್ಲಿ ತಮ್ಮ ವಸತಿಗಳನ್ನು ನಿರ್ಮಿಸಿಕೊಂಡಿದ್ದರು. ಆದರೆ ನಾಗರಿಕ ಜೀವನ ಕ್ರಮ ತಿಳಿದಿರಲಿಲ್ಲ. ಕುರುಬರು ತಮಗೆ ಆಯ್ಕೆಯಾದ ಪ್ರದೇಶಕ್ಕೆ ಇನ್ನೊಂದು ಬುಡಕಟ್ಟು ಸಮುದಾಯ ಬೇಟೆ ಮತ್ತು ಪಶುಪಾಲನೆಗಾಗಿ ಆ ಪ್ರದೇಶಕ್ಕೆ ಆಕ್ರಮಿಸಿದರೆ ಅವರು ತಮ್ಮ ಹಕ್ಕುಗಳಿಗಾಗಿ ಮಾರಣಾಂತಿಕ ಸಂಘರ್ಷವನ್ನು ಮಾಡುತ್ತಿದ್ದರು. ಹೀಗಾಗಿ ಬೇರೊಂದು ಸಮುದಾಯದ ವಿರುದ್ಧ ಹೋರಾಡಲು ಹಾಗೂ ತಮ್ಮ ಸಮುದಾಯವನ್ನು ರಕ್ಷಿಸಿಕೊಳ್ಳಲು ಗುಂಪು ಗುಂಪಾಗಿ ವಾಸಮಾಡಬೇಕಾಗುತ್ತಲ್ಲದೆ, ಧೈರ್ಯಶಾಲಿಗಳಾಗಿರಬೇಕಾಗುತ್ತಿತ್ತು. ಬೆಟ್ಟ-ಗುಡ್ಡ, ನದಿ, ಕೊಳ್ಳ ಮೊದಲಾದ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು.

ಮೂಲತಃ ದ್ರಾವಿಡ ಸಮುದಾಯದ ಗುಣ ಲಕ್ಷಣಗಳನ್ನು ಹೊಂದಿದ ಕುರುಬರು ದೃಢಕಾಯರು, ಅಜಾನುಬಾಹುಗಳು, ಕೃಷ್ಣ ವರ್ಣದವರಾಗಿದ್ದರು. ಮೈಮೇಲೆ ಧೋತರ, ಕಂಬಳಿಗಳು ಪ್ರಮುಖ ವಸ್ತ್ರಗಳಾಗಿದ್ದವು. ಕೈಯಲ್ಲಿ ಕೋಲು ಹಿಡಿದು ಕುರಿಗಳನ್ನು ಸಾಕುತ್ತಿದ್ದರು. ಕುರಿಯ ಮಾಂಸವನ್ನು ಆಹಾರಕ್ಕೂ ಉಣ್ಣೆಯನ್ನು ಕಂಬಳಿನೇಯ್ಗೆಗೆ ಉಪಯೋಗಿಸುತ್ತಿದ್ದರು. ಪಶುಪಾಲನೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಕಾಡು-ಮೇಡುಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ ವಾಸಿಸುತ್ತಿದ್ದ ಕುರುಬರು ತಮ್ಮ ಹಾಗೂ ತಮ್ಮ ಪ್ರಾಣಿಗಳ ರಕ್ಷಣೆಗಾಗಿ ಅನೇಕ ಆಯುಧಗಳನ್ನು ಹೊಂದಿರುತ್ತಿದ್ದರು. ಶತ್ರುಗಳನ್ನು ಹೊಡೆದೊಡಿಸುವಲ್ಲಿ ಅಪಾರ ಶಕ್ತಿಯುತರಾಗಿದ್ದರಲ್ಲದೆ, ಯುದ್ದ ಕಲೆಗಳಲ್ಲಿ ಅನುಭವ ಉಳ್ಳವರಾಗಿದ್ದರು. ಕುರುಬರು ಎಂತಹ ದುಷ್ಟ ಮೃಗಗಳಿಗೂ ಅಂಜುವವರಲ್ಲ[೨೭]. ಇವರ ಎರಡು ವರ್ಷಗಳ ಮೇಲ್ಪಟ್ಟ ಮಕ್ಕಳೂ ಧೈರ್ಯವಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದರು. ಕೆಲವು ಸಲ ಎರಡು ಕೊಳ್ಳಿಗಳನ್ನು ಕ್ರೂರ ಮೃಗಗಳ ಮುಖದತ್ತ ಹಿಡಿದು ಅಬ್ಬರಿಸಿ ಓಡಿಸುತ್ತಿದ್ದರು. ಒಟ್ಟಿನಲ್ಲಿ ಇವರು ಕಷ್ಟ ಸಹಿಷ್ಣುಗಳು, ಧೈರ್ಯಶಾಲಿಗಳು, ಸತ್ಯವಂತರು ಆಗಿದ್ದರೆಂದು ಎಂಥೋವೆನ್ನರು ಅಭಿಪ್ರಾಯಪಟ್ಟಿದ್ದಾರೆ.[೨೮]

ಪಶುಪಾಲನೆ ಮತ್ತು ಕೃಷಿಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿದ್ದ ಕುರುಬರು ಕಾಲಾನಂತರ ರಾಜಕೀಯದಲ್ಲಿ ಆಸಕ್ತಿ ವಹಿಸತೊಡಗಿದರು. ಪ್ರಾಚೀನ ಮರವ ಸಮುದಾಯಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಿದ್ದ ಸೂತಪತಿಗಳು ದಕ್ಷಿಣ ಭಾರತದಲ್ಲಿ ರಾಜ್ಯ ಭಾರ ಮಾಡುತ್ತಿದ್ದರು. ಅವರನ್ನು ಸೋಲಿಸಿದರಲ್ಲದೆ, ದಕ್ಷಿಣದ ತುತ್ತತುದಿಗೆ ಓಡಿಸಿದರು.[೨೯] ಕುರುಬರ ಮುಖಂಡನನ್ನು 'ಕಾಮಂಡ ಕುರುಂಬ ಪ್ರಭು' ಎಂದು ಕರೆಯುತ್ತಿದ್ದರು. ಹಾಗೆಯೇ ಪುಲಾಲದ ರಾಜ ಎಂದು ಕರೆಯಿಸಿಕೊಂಡು ದ್ರಾವಿಡ ದೇಶದ ಅಧಿಪತಿಯಾದನು. ಅವನು ಆಳಿದ ರಾಜ್ಯ ಕುರುಬ ಭೂಮಿ ಎಂದು ಹೆಸರಾಯಿತು. ಅಲ್ಲದೆ ಆಡಳಿತದ ಎಲ್ಲ ದಾಖಲೆಗಳಲ್ಲಿ ಕುರುಬರ ನಾಡು ಎಂದು ಸೇರ್ಪಡೆಯಾಯಿತು. ಕುರುಬರನಾಡು ಎಂಬುದು ಈಗಲೂ ಮಲಬಾರ್ ತೀರದಲ್ಲಿ ಸುಪ್ರಸಿದ್ಧವಾಗಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಕುರುಬ(ದ್ರಾವಿಡ)ರು ಶೂರರಾದ ಸಮುದಾಯದವರೆಂದು ಸ್ಪಷ್ಟಪಡುತ್ತದೆ.

ಕುರುಬರು ಫಲವತ್ತಾದ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುತ್ತಾ ನಾಗರಿಕ ಜೀವನ ನಡೆಸತೊಡಗಿದರು. ಅನೇಕ ಸಣ್ಣ-ದೊಡ್ಡ ಪಟ್ಟಣಗಳನ್ನು ನಿರ್ಮಿಸಿದರು. ಪಶುಪಾಲನೆ, ವ್ಯವಸಾಯ, ನೇಕಾರಿಕೆ ಜೊತೆಗೆ ಕೆಲವು ಕುಶಲ ವಿದ್ಯೆಗಳು ತಿಳಿದಿದ್ದವು. ಅನ್ಯದೇಶಗಳೊಡನೆ ವ್ಯಾಪಾರ ಮಾಡುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಕನ್ನಡ, ತೆಲುಗು, ತುಳು, ತಮಿಳು, ಮಲೆಯಾಳ

ಎಂಬ ಐದು ಭಾಷೆಗಳನ್ನು ಆಡುತ್ತಿದ್ದರಿಂದ ಇವರನ್ನು ಪಂಚ ದ್ರಾವಿಡರೆಂದು ಕರೆಯುತ್ತಿದ್ದರು. ಆದರೆ ಕಾವೇರಿಯಿಂದ ಗಂಗೆಯವರೆಗೆ ವ್ಯಾಪಿಸಿರುವ ಹಟ್ಟಿಕಾರ–ದನಗಾರರು ದ್ರಾವಿಡರಲ್ಲದೆ, ಕನ್ನಡ ಶಾಖೆಗೆ ಸೇರಿದವರೆಂದು ಮಿ.ಗೆಟ್ ಎಂಬ ತಜ್ಞರು ಅಭಿಪ್ರಾಯಪಟ್ಟಿದ್ದಾರೆ.[೬೧] ಹೀಗಾಗಿ ಕುರುಬರ ಮಾತು ತಮಿಳು, ತೆಲುಗಿಗಿಂತಲೂ ಕನ್ನಡಕ್ಕೆ ತುಂಬ ಹತ್ತಿರವೆಂದು ತಿಳಿದು ಬರುತ್ತದೆ.

ಕಾವೇರಿಯಿಂದ, ಗಂಗೆಯವರೆಗೆ, ನೀಲಗಿರಿಯಿಂದ ರಾಜಮಹಲದವರೆಗೆ ವ್ಯಾಪಿಸಿಕೊಂಡಿದ್ದ ಕುರುಬರು ಆ ಪ್ರದೇಶದಲ್ಲೆಲ್ಲ ವಿಶೇಷವಾಗಿ ಪ್ರಬಲರಾಗಿದ್ದರು. ಸಿಂಧು, ಗಂಗಾ, ಯಮುನಾ ನದಿಗಳ ಫಲವತ್ತಾದ ಪ್ರದೇಶದಲ್ಲಿ ಸಿಂಧು ಕಣಿವೆ ನಾಗರಿಕತೆಯಂತಹ ಉನ್ನತ ಜೀವನ ಮಟ್ಟದ ವಾರಸುದಾರರಾಗಿದ್ದರು.[೬೨] ಕ್ರಿ.ಪೂ.೨೦೦೦ ವರ್ಷಗಳ ಸುಮಾರಿನಲ್ಲಿ ಮಧ್ಯ ಏಷ್ಯಾದಲ್ಲಿ ವಾಸಿಸುತ್ತಿದ್ದ ಆರ್ಯರು ತಮ್ಮ ನೆಲೆಯನ್ನು ಆವರಿಸಿದ ಭೀಕರ ಬರಗಾಲದಿಂದ ತತ್ತರಿಸಿ, ನೀರು, ನೆರಳು ಫಲವತ್ತಾದ ಭೂಮಿ ಹುಡುಕಿಕೊಂಡು ಭಾರತಕ್ಕೆ ಬಂದರು. ಸ್ಥಳೀಯ ಜನರಾದ ದ್ರಾವಿಡರ ಮೇಲೆ ಆಕ್ರಮಣ ಮಾಡಿ ಸೋಲಿಸಿದರು. ಸಿಂಧೂ, ಗಂಗ, ಯಮುನಾ ನದಿಗಳ ಸಮೃದ್ಧ ಭೂಮಿಯನ್ನು ವಶಪಡಿಸಿಕೊಂಡರು. ಆರ್ಯರಿಗೆ ಸೋತ ದ್ರಾವಿಡರು ದಾಸ್ಯರಾಗಿ ಅವರ ಸೇವೆ ಮಾಡತೊಡಗಿದರು. ಸ್ವಾಭಿಮಾನಿಗಳಾದ ಕೆಲವರು ತಂಡೋಪ ತಂಡವಾಗಿ ದಕ್ಷಿಣದ ಕಡೆಗೆ ವಲಸೆಹೋದರು.[೬೩] ಗಂಗಾತೀರದಿಂದ ಹೊರಟ ಪಂಗಡವು ಗೋದಾವರಿ ನದಿಯ ತೀರದಲ್ಲಿ ನೆಲೆಸಿತು. ಕೆಲವು ಪಂಗಡಗಳು ಗುಡ್ಡ–ಬೆಟ್ಟ, ಕಾಡು–ಮೇಡುಗಳಲ್ಲಿ ವಾಸಿಸತೊಡಗಿದವು. ಆರ್ಯೀಕರಣಕ್ಕೆ ಒಪ್ಪದ ಹಟ್ಟಿಕಾರ (ಕುರುಬ)ರನ್ನು ಹಠವಾದಿಗಳೆಂದು ಕರೆಯತೊಡಗಿದರು. ಹಟ್ಟಿಕಾರರೆಂಬುದಕ್ಕೆ ಹಠವುಳ್ಳವರೆಂದು ಕೆಲವು ಗೆಜೆಯಿಟರುಗಳಲ್ಲಿ ವಿವರಣೆಯಿದೆ. ಹೀಗೆ ವೀರ ಶೂರ ಜನಾಂಗದವಾದ ದ್ರಾವಿಡ(ಕುರುಬ)ರು ಆರ್ಯರ ಆಕ್ರಮಣಕ್ಕೆ ಸಿಕ್ಕು ದಿಕ್ಕು ಕಾಣದೆ ಆರ್ಯರಾಗಿ ಪರಿವರ್ತನೆ ಹೊಂದಿದರು. ಕೆಲವರು ಕಾಡಿಗೆ ವಲಸೆ ಹೋದರು. ಇದರಿಂದ ದ್ರಾವಿಡರು(ಕುರುಬರು) ಆರ್ಯ ಪೂರ್ವಿ ಸಮುದಾಯವೆಂಬುದಲ್ಲದೆ, ಅವರು ನಿಸ್ಸಂಶಯವಾಗಿ ದ್ರಾವಿಡರು ಎಂದು ಸಮರ್ಥಿಸಿಕೊಳ್ಳಬಹುದಾಗಿದೆ.

ಕುರುಬರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಮತ್ತೊಂದು ಅಭಿಪ್ರಾಯವಿದೆ. ಕೆಲವರು ಕುರುಬರನ್ನು ಆರ್ಯ ಮೂಲದವರೆಂದು ಹೇಳುತ್ತಾರೆ. ರಿಸ್ಲೆ ಮತ್ತು ಹಟ್ಟನ್‌ರವರು ಕುರುಬರು ಆರ್ಯ ಮೂಲದವರಾಗಿದ್ದಾರೆ, ಅಲ್ಲದೆ ಉತ್ತರ ಭಾಗದಲ್ಲಿ ನೆಲೆಸಿದ್ದರು ಎಂದು ಅಭಿಪ್ರಾಯ ಪಟ್ಟಿದ್ದಾರೆ.[೬೪] ಅವರ ಉದ್ಯೋಗ, ಆರ್ಥಿಕ ಸ್ಥಿತಿ ಹಾಗೂ ದೇಹ ರಚನೆಯ ಲಕ್ಷಣಗಳು ಭಾರತೀಯ ಆರ್ಯರನ್ನು ಹೋಲುತ್ತಿದ್ದವು ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಕುರುಬರು ಆರ್ಯ ಮೂಲದವರೆಂದು ಕೂಡಾ ಹೇಳಬಹುದಾಗಿದೆ.

ಭಾರತದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಎಲ್ಲಾ ಭಾಗಗಳಲ್ಲಿ ವಾಸಿಸುತ್ತಿದ್ದ ದ್ರಾವಿಡರ ಮೇಲೆ ಆರ್ಯರ ಆಕ್ರಮಣ ಮಾಡಿ ಸೋಲಿಸಿದರು. ಹೀಗಾಗಿ ಸಿಂಧು, ಗಂಗಾ, ಯಮುನಾ ನದಿಗಳ ಸಮೃದ್ಧ ಭೂಮಿಯು ಆರ್ಯರ ವಶವಾಯಿತು. ಆರ್ಯರಿಗೆ ಸೋತ ದ್ರಾವಿಡರಲ್ಲಿ ಕೆಲವರು ಆರ್ಯರಾಗಿ ಪರಿವರ್ತನೆ ಹೊಂದಿದರು. ಆರ್ಯರೆಂದರೆ ಪೂಜ್ಯರು, ಸುಸಂಸ್ಕೃತರು ಎಂಬ ಭಾವವಿದೆ. ವಾಯವ್ಯ ದಿಕ್ಕಿನಿಂದ ಭಾರತಕ್ಕೆ ಪ್ರವೇಶ ಮಾಡಿದವರಲ್ಲಿ ಇವರೇ ಪ್ರಥಮವಾಗಿದ್ದಾರೆ. ತಮ್ಮ ಕುರಿ ದನಗಳನ್ನು ಮೇಯಿಸುತ್ತಾ ಒಂದು ಪ್ರದೇಶದಿಂದ ಒಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಮೂಲತಃ ಆರ್ಯರಿಗೆ ಕೃಷಿ ಮತ್ತು

ಪಶುಪಾಲನೆ ಮುಖ್ಯ ವೃತ್ತಿಗಳಾಗಿದ್ದವು.[೫೫] ಆರ್ಯರು (ಪಂಜಾಬ್ ಕುರುಬರು) ಕಾಲಾನಂತರ ಬ್ರಾಹ್ಮಣರು ಮತ್ತು ರಜಪೂತರೆಂಬ ಅಭಿದಾನಗಳನ್ನು ಪಡೆದು ಕ್ರಮೇಣ ಭಾರತವನ್ನೆಲ್ಲ ಆಕ್ರಮಿಸಿಕೊಂಡರು ಎಂದು ಪ್ರೊ.ಮ್ಯಾಕ್ಸ್‌ಮುಲ್ಲರು ಅಭಿಪ್ರಾಯಪಟ್ಟಿದ್ದಾರೆ.[೫೬]

ಪ್ರಾಚೀನ ಕಾಲದಲ್ಲಿ ಆರ್ಯರಿಗೆ ಪಶುಪಾಲನೆಯೇ ಮುಖ್ಯ ವೃತ್ತಿಯಾಗಿತ್ತು. ಆರ್ಯರು ತಮ್ಮ ಹಾಗೂ ತಮ್ಮ ಪ್ರಾಣಿಗಳ ರಕ್ಷಣೆಗಾಗಿ ಎತ್ತರವಾದ ಅಥವಾ ಗುಡ್ಡ-ಬೆಟ್ಟಗಳ ಸ್ಥಳಗಳನ್ನು ಹುಡುಕಿ ಅಲ್ಲಿ ವಾಸಮಾಡುತ್ತಿದ್ದರು. ಅದೇ ರೀತಿ ಕುರುಬರು ಸಹ ಬೆಟ್ಟ-ಗುಡ್ಡ ಅಥವಾ ಎತ್ತರವಾದ ಸ್ಥಳಗಳನ್ನೇ ವಾಸಸ್ಥಾನಗಳನ್ನಾಗಿಸಿಕೊಂಡಿದ್ದರು. ದನ ಕುರಿಗಳ ಪಾಲನೆ ಪ್ರಮುಖವಾಗಿತ್ತು. ಆರ್ಯರು ಪಂಜಾಬಿನಿಂದ ಗಂಗಾ-ಯಮುನಾ ನದಿಗಳ ಬಯಲಿಗೆ, ಉತ್ತರ ಪ್ರದೇಶದ ಇಡೀ ಪಶ್ಚಿಮ ಭಾಗಕ್ಕೆ ವಿಸ್ತರಿಸಿಕೊಂಡರು. ಭರತರು ಮತ್ತು ಪುರುಗಳು ಒಂದಾಗಿ ಕುರು ಎಂಬ ರಾಜಕುಲವನ್ನು ರೂಪಿಸಿಕೊಂಡರು.[೫೭] ಆರಂಭದಲ್ಲಿ ನಡುಬಯಲಿನ ಅಂಚಿನಲ್ಲಿರುವ ಸರಸ್ವತಿ ಮತ್ತು ದೃಶದ್ವತಿ ನದಿಗಳ ನಡುವಿನ ಪ್ರದೇಶದಲ್ಲಿ ವಾಸಮಾಡತೊಡಗಿದರು. ನಂತರ ದೆಹಲಿ ಮತ್ತು ನಡುಬಯಲಿನ ಮೇಲು ಭಾಗವನ್ನು ವಶಪಡಿಸಿಕೊಂಡರು. ಉತ್ತರ ವೇದಕಾಲದಲ್ಲಿ ಗಂಗಾಬಯಲಿನ ಮೇಲುಭಾಗದಲ್ಲಿ ಈ ಕುರುಗಳು ಅಧಿಕಾರವನ್ನು ಸ್ಥಾಪಿಸಿದರು.[೫೮] ಕುರು ಎಂಬುದು ಕುರುದೇಶ, ಕುರುವಂಶ ಎಂಬ ಅರ್ಥ ಕೊಡುತ್ತದೆ. ಇದರಿಂದ ಮಹಾಭಾರತದಲ್ಲಿ ಪ್ರಸಿದ್ಧವಾದ ಕುರುವಂಶದ ಕೌರವ ಶಬ್ದದಿಂದಲೇ ಕುರುವ>ಕುರುಬ ಎಂದಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೫೯] ಅಲ್ಲದೆ ಕುರು ದೇಶದ ಕೆಲವು ಭಾಗವನ್ನು 'ಪ' ಎಂದರೆ ಪಾಲಿಸುತ್ತಿದ್ದ ಕಾರಣದಿಂದ 'ಕುರುಪ' ಎಂಬುದೇ ಕುರುಬ ಆಗಿದೆ ಎಂಬ ಮತ್ತೊಂದು ವಾದವಿದೆ.[೬೦] ಇದರಿಂದ ಕುರು ವಂಶದವರು ಕುರುಬರು ಎಂದು ಹೇಳಬಹುದಾಗಿದೆ. ಹೀಗಾಗಿ ಕುರುಬರು ಆರ್ಯ ಮೂಲದವರೆಂದು ಒಂದು ಅಭಿಪ್ರಾಯವಿದೆ.

ಕುರುಬರು ಪ್ರಾಚೀನ ಆರ್ಯ ಕುಲದವರೆಂದು ವೇದ-ಪುರಾಣಗಳು ತಿಳಿಸುತ್ತವೆ. ಆರ್ಯರು ತಮ್ಮ ಮೂಲ ಸ್ಥಳ ತೊರೆದು ಪಂಜಾಬಿಗೆ ಬಂದು ನೆಲೆಸಿದ ಸ್ಮಾರಕ ಗ್ರಂಥವೇ ಋಗ್ವೇದವೆಂಬ ಅಭಿಪ್ರಾಯವಿದೆ.[೬೧] ಋಗ್ವೇದದಲ್ಲಿ ಕುರುಬರು ಭಾರತದ ಮೂಲ ನಿವಾಸಿಗಳೆಂದು ಉಲ್ಲೇಖಿಸಲಾಗಿದೆ. ಆರ್ಯರು ಉತ್ತರ ಭಾಗದಲ್ಲಿ ನೆಲೆಸಿದರು. ಇದಕ್ಕೆ ಒಂದು ಕಥೆಯು ಪ್ರಚಲಿತದಲ್ಲಿದೆ. ಅಗಸ್ತ್ಯನೆಂಬೋರ್ವನು ವಿಂಧ್ಯ ಪರ್ವತವನ್ನು ಮೆಚ್ಚಿಸಿ, ಒಲಿಸಿ ಆರ್ಯರಿಗೆ ತೆಂಕಣಕ್ಕೆ ಬರಲು ಇದ್ದ ತೊಂದರೆಯನ್ನು ನಿವಾರಿಸಿದನೆಂದು ತಿಳಿಯುತ್ತದೆ.[೬೨] ಈ ವಿಂಧ್ಯ ಎನ್ನುವುದು ಒಂದು ಗೊಂಡಾರಣ್ಯವಾಗಿದೆ.[೬೩] ಅಲ್ಲಿ ಗೊಂಡರು ಎಂಬ ಕಾಡಾಡಿಗಳು ಇಂದಿಗೂ ನೆಲೆಸಿದ್ದಾರೆ. ಗೊಂಡರು ಎಂಬುದು ಕುರುಬರ ಒಂದು ಪಂಗಡವಾಗಿದೆ. ಇದರಿಂದ ಗೊಂಡ (ಕುರುಬ)ರು ಆರ್ಯರ ಪ್ರಭಾವಕ್ಕೊಳಗಾಗಿರುವುದು ಕಂಡು ಬರುವುದು.

ಕುರುಬರಿಗೆ ಕೆಲವೊಂದು ಭಾಗಗಳಲ್ಲಿ ಕುಂತಲರು ಎಂಬ ಇನ್ನೊಂದು ಹೆಸರಿದೆ.[೬೪] ಕುಂತಲ ಎಂದರೆ ಕೊಂದಲ-ಕೂದಲ ಎಂಬರ್ಥವಿದೆ. ಇವರಿಗೆ ಕ್ಷೌರ ವಿದ್ಯೆ ತಿಳಿದಿದ್ದಿಲ್ಲವೋ ಅಥವಾ ಕೂದಲಿನ ಮೇಲಿನ ವ್ಯಾಮೋಹದಿಂದಲೋ ಕೂದಲದ ಬಗ್ಗೆ ಸ್ವಲ್ಪ ವಿಶೇಷವಾದ ಮಹತ್ವವಿತ್ತು. ಅದರಲ್ಲೂ ಮೀಸೆಯ ಮೇಲೆ ಮಿತಿ ಮೀರಿದ ಅಭಿಮಾನವಿತ್ತೆಂದು ಪಿ.ಟಿ.ಶ್ರೀನಿವಾಸ ಅಯ್ಯಂಗಾರರು ಅಭಿಪ್ರಾಯಪಟ್ಟಿದ್ದಾರೆ.[೬೫] ಹಟ್ಟಿಕಾರರಿಗೆ ಮೀಸೆಯೆಂದರೆ ಪಂಚಪ್ರಾಣ. ಇವರ ಅಪಮಾನ ಮಾಡುವುದೆಂದರೆ ಮೀಸೆ ಬೋಳಿಸುವುದು. ಕುಡಿಮೀಸೆ, ಗಲ್ಲು ಮೀಸೆಗಳು ಇವರ ಅಭಿಮಾನದ ವಿಷಯ, ಪೌರುಷದ ಲಕ್ಷಣ, ಗಂಡುಗಾಡಿಯ ಕುರುಹುಗಳಾಗಿದ್ದವೆಂದು ತಿಳಿಯುತ್ತದೆ. ಆರ್ಯರು ಸಹ ಯಾವಾಗಲೂ ಮೀಸೆಯ ವಿಷಯದ

ಮೇಲೆ ಕತ್ತಿಯನ್ನೆತ್ತಿದವರು ಎಂಬ ಅಭಿಪ್ರಾಯವಿದೆ.[೪೬] ಈ ಕುಂತಲ, ಕುಂದಲ ಶಬ್ದಗಳು ಸಂಸ್ಕೃತ ಶಬ್ದವಲ್ಲ, ಅವು ದ್ರಾವಿಡರಿಂದ ಆರ್ಯರು (ಸಂಸ್ಕೃತದವರು) ಕೈಗಡ ತೆಗೆದುಕೊಂಡವುಗಳಾಗಿವೆ ಎಂದು ಕಿಟ್ಟೆಲ್‌ರು ಅಭಿಪ್ರಾಯಪಟ್ಟಿದ್ದಾರೆ.[೪೭]

ಕುರುಬರು ತಮ್ಮ ದನ-ಕುರಿಗಳನ್ನು ಕ್ರೂರ ಮೃಗಗಳಿಂದ ಮತ್ತು ಕಳ್ಳರಿಂದ ರಕ್ಷಿಸಿಕೊಳ್ಳಲು ನಾಯಿಯನ್ನು ಸಾಕುತ್ತಿದ್ದರು. ಇಂದಿಗೂ ಪ್ರತಿಯೊಂದು ಕುರುಬರ ಹಟ್ಟಿಯಲ್ಲಿ ನಾಯಿಯನ್ನು ಕಾಣಬಹುದಾಗಿದೆ. ಹಟ್ಟಿಕಾರ(ಕುರುಬ)ರ ನಾಯಿಗಳು ಬಹಳ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಹೊಂದಿವೆ. ಕ್ರಿ.ಶ.೨ನೇ ಶತಮಾನದ ಕವಿ ಮಾಮೂಲನಾರ್ ಹಟ್ಟಿಕಾರ (ಕುರುಬ)ರು ಕ್ರೂರವಾದ ನಾಯಿಗಳನ್ನು ಸಾಕಿಕೊಂಡಿರುತ್ತಾರೆಂದು ವರ್ಣಿಸಿದ್ದಾನೆ.[೪೮] ವಿದರ್ಭದ ನಾಯಿಗಳ ಗರ್ಜನೆಯ ಬಗ್ಗೆ ವೈದಿಕ ಸಾಹಿತ್ಯದಲ್ಲಿ ಉಲ್ಲೇಖವಿದೆ. ವಿದರ್ಭದಲ್ಲಿ ಹುಲಿಯನ್ನು ಕೊಲ್ಲುವ ನಾಯಿಗಳಿದ್ದವೆಂದು ಜೈಮಿನಿಯ ಉಪನಿಷತ್ ಬ್ರಾಹ್ಮಣದಲ್ಲಿ ಹೇಳಲಾಗಿದೆ.[೪೯] ಕುರೆ, ಕುರೆ ಎಂದು ಕನ್ನಡಿಗರಲ್ಲಿ ನಾಯಿಗೆ ಕರೆಯುವ ರೂಢಿಯಿದೆ. ಇದರಿಂದ ಸಂಸ್ಕೃತದಲ್ಲಿ ಕುರ್ಕುರ, ಕುಕ್ಕರ, ಕುಕುರ ಎಂಬ ಶಬ್ದಗಳು ಬಳಕೆಯಲ್ಲಿ ಬಂದಿರಬಹುದೆಂದು ಕಿಟ್ಟೆಲ್ಲರು ಅಭಿಪ್ರಾಯಪಟ್ಟಿದ್ದಾರೆ.[೫೦] ಛೋಟಾನಾಗಪುರದ, ಶೋಣನದಿ ತೀರದ ಜನರು ಕುರುಬರನ್ನು ಕುರುಕ-ದನಗರರೆಂದು ಕರೆಯುತ್ತಾರೆ, ಇದರಿಂದ ಕುರುಬರಿಗೂ, ನಾಯಿಗೂ ಅನ್ಯೋನ್ಯತೆ ಇರುವುದು ಕಂಡು ಬರುತ್ತದೆ. ಅಥರ್ವಣವೇದದಲ್ಲಿ ಕುರ್ಕುರವೆಂದು ನಾಯಿಗೆ ಹೆಸರಿದೆ.[೫೧] ಕುಕುರ (ನಾಯಿಗಳನಾಡು) ಎಂಬ ದೇಶವಿದ್ದ ಬಗ್ಗೆ ಕ್ರಿ.ಶ.೨ನೆಯ ಶತಮಾನದ ಶಾಸನಗಳಿಂದಲೂ ಹಾಗೂ ವರಾಹಮಿಹಿರನ ಬೃಹತ್ ಸಂಹಿತೆಯಿಂದಲೂ ಕಂಡು ಬರುತ್ತದೆ. ಕುರುಬರು ಬೀರಪ್ಪ ಹಾಗೂ ಮಲ್ಲಯ್ಯನನ್ನು ಪೂಜಿಸುತ್ತಾರೆ. ಕುರುಬರ ಕುಲದೇವರಾದ ಬೀರಪ್ಪನನ್ನು ಉತ್ತರದ ಆರ್ಯರು ಸ್ವೀಕರಿಸಿದಂತೆ ಕಂಡು ಬರುತ್ತದೆ. ಕುರುಬರ ಬೀರಪ್ಪನೇ ಆರ್ಯರ ಭಾಷೆಯಲ್ಲಿ ಭೈರಾವನಾಗಿದ್ದಾನೆ.[೫೨] ಈ ಭೈರವ, ಮಲ್ಲಯ್ಯನ ಮೂರ್ತಿಗಳಲ್ಲಿ ಮಲ್ಲಯ್ಯ ಕುದುರೆ ಮೇಲೆ ಸವಾರನಾಗಿದ್ದರೆ, ಕೆಳಗಡೆ ನಾಯಿಯ ಚಿತ್ರವಿರುತ್ತದೆ. ಹೀಗಾಗಿ ಕುರುಬರಲ್ಲಿ ನಾಯಿಗೆ ಪ್ರಮುಖ ಸ್ಥಾನವಿದೆ ಎಂಬುದು ಸ್ಪಷ್ಟ. ಕುರುಬರ ಮಲ್ಲಯ್ಯ ಆರ್ಯರ ಪ್ರಮುಖ ದೇವನಾಗಿದ್ದನೆಂಬುದಕ್ಕೆ ಅನೇಕ ಆಧಾರಗಳಿವೆ.

ಮಲ್ಲಯ್ಯ, ಮಲ್ಹಾರಿಗಳಲ್ಲಿ ಇವೆರಡು ಸಮುದಾಯಗಳ ಸಂಗಮವು ಆಗಿರುವುದು ಕಂಡುಬರುತ್ತದೆ. ಮಲ್ಲಯ್ಯನೆಂದರೆ ಪರ್ವತೇಶ್ವರ, ಮಲ್ಹಾರಿಯು ಮಲೆಗಳ ಅರಿ ಆದರೆ ಇವೆರಡೂ ಒಂದೇ ಅರ್ಥ ಕೊಡುತ್ತವೆ. ಮಲ್ಲಯ್ಯನು ಶಿವನು, ರುದ್ರನು ಆದರೆ ಮಲೆಗಳ ಅರಿಯು ಇಂದ್ರನು ಮಲ್ಹಾರಿ ಮಲ್ಲಯ್ಯಗಳ ಪೂಜೆಯಲ್ಲಿ ಇಂದ್ರ-ರುದ್ರರ ಜೋಡಿಯಿದೆ.[೫೩] ಇದರಿಂದ ಮಲ್ಲಯ್ಯ ಮಲ್ಹಾರಿಗಳ  ಪೂಜೆಯು ವೈದಿಕ ಕಾಲದಿಂದಲೂ ನಡೆದುಕೊಂಡು ಬಂದಿದೆ ಎಂಬುದು ಸ್ಪಷ್ಟ. ಆರ್ಯರ ಇಂದ್ರನು, ಹಟ್ಟಿಕಾರರ ರುದ್ರನೂ ಒಂದುಗೂಡಿ ಉಂಟಾದ ಮಲ್ಹಾರಿ ಮಲ್ಲಯ್ಯನು ಆರ್ಯ-ದ್ರಾವಿಡ ಸಂಸ್ಕೃತಿಯ ಪ್ರತಿನಿಧಿಯಾಗಿದ್ದಾನೆ.[೫೪] ಮಲ್ಲಾರಿಗೆ (ಮಲ್ಲಯ್ಯ) ಖಂಡೋಬನೆಂದು ಇನ್ನೊಂದು ಹೆಸರಿದೆ. ಈ ಖಂಡೋಬ ಪದ ಇಂದ್ರನಿಗಿರುವ ಅಖಂಡನೆಂಬ ಪರ್ಯಾಯ ನಾಮವನ್ನು ಸೂಚಿಸುತ್ತಿರಬಹುದೆಂದು ಕೆಲವರು ಅಭಿಪ್ರಾಯಪಟ್ಟಿದ್ಧಾರೆ. ಋಗ್ವೇದದೊಳಗಿನ ಅಹಂ ಸಪ್ತಹಾ ಎಂಬ ಸಂಸ್ಕೃತ ಮಂತ್ರಕ್ಕೆ ಕಾಲಾನಂತರ ಕುರುಬರು ತಮ್ಮ ಮಾತಿನಲ್ಲಿ ಏಳುಕೋಟಿ ಎಂದು ಜಯಜಯಕಾರವನ್ನು ಕನ್ನಡಿಸಿಕೊಂಡಿರುವ ಸಾಧ್ಯತೆಯಿದೆ. ನರ್ಮದಾ ಕಾವೇರಿಗಳ ನಡುವಿನ ನಾಡಿನ ರಾಷ್ಟ್ರೀಯ ದೇವತೆಯಾದ ಮಲ್ಲಯ್ಯ ಕುರುಬರಂತೆ ದೇಶಸ್ಥ, ಕಣ್ವ, ಕರ್ನಾಟಕ ಬ್ರಾಹ್ಮಣರಲ್ಲಿ ಅನೇಕರ ಕುಲದೇವನಾಗಿದ್ದಾನೆ.[೫೫] ಈ

ಮಲ್ಲಯ್ಯನನ್ನು ಬ್ರಾಹ್ಮಣರು ಮ್ಹಾಳಸಾ-ಮಾರ್ತಾಂಡ, ಮಲ್ಲಾರಿ ಮಾರ್ತಾಂಡ ಮಾಲತೇಶ ಹಾಗೂ ಖಂಡೋಬನೆಂಬ ಹೆಸರಿನಿಂದ ಕರೆಯುತ್ತಾರೆ. ಹೀಗೆ ಧಾರ್ಮಿಕವಾಗಿ ಕುರುಬರು ಮತ್ತು ಆರ್ಯರ ನಡುವೆ ಸಾಮ್ಯತೆಗಳಿರುವುದನ್ನು ಕಾಣಬಹುದು.

ಉತ್ತರದಲ್ಲಿ ದ್ವಾರಕೆ-ಛೋಟಾನಾಗಪುರದಿಂದ ದಕ್ಷಿಣಕ್ಕೆ ನೀಲಗಿರಿಯವರೆಗೆ, ಪೂರ್ವ-ಪಶ್ಚಿಮ ಸಮುದ್ರ ತೀರಗಳವರೆಗೂ ಹಟ್ಟಿಕಾರರು (ಕುರುಬರು) ಕುಂತಲರು, ಅಂಡೆಯರು, ಇಡೈಯರು ಮೊದಲಾದ ಹೆಸರುಗಳಿಂದ ವ್ಯಾಪಿಸಿಕೊಂಡು ಕ್ರಿ.ಶ.ದ ಆರಂಭಕಾಲದಲ್ಲಿ ಬಹಳ ಪ್ರಬಲವಾದ ಸಮುದಾಯವಾಗಿದ್ದರೆಂದು ತಮಿಳು ಸಾಹಿತ್ಯಗಳಿಂದ ಸ್ಪಷ್ಟಪಡುತ್ತದೆ.[೫೭] ತಮಿಳು ಭಾಷೆಯಲ್ಲಿ ಕ್ರಿ.ಶ.೫ನೇಯ ಶತಮಾನದಿಂದ ಸಂಸ್ಕೃತ ಶಬ್ದಗಳಿಗೆ ಇಂಬು ದೊರೆಯಿತೆಂದು ಪಿ.ಟಿ.ಶ್ರೀನಿವಾಸ ಅಯ್ಯಂಗಾರರು ಅಭಿಪ್ರಾಯಪಟ್ಟಿದ್ದಾರೆ.[೫೮] ಭೌಗೋಳಿಕ ಪರಿಸ್ಥಿತಿಯ ಆಧಾರದ ಮೇಲೆ ದ್ರಾವಿಡರಲ್ಲಿ ತಮಿಳರಗಿಂತ ಹಟ್ಟಿಕಾರ(ಕುರುಬ)ರಿಗೆ ಮೊಟ್ಟಮೊದಲು ಆರ್ಯರ ಸಂಪರ್ಕ ಉಂಟಾಯಿತೆಂದು ತಿಳಿಯುತ್ತದೆ. ಕ್ರಿಶ.೧೨ನೆ ಶತಮಾನದ ನಂತರದ ಕನ್ನಡ ವಾಕ್ಯದೊಳಗಿನ ಸಂಸ್ಕೃತ ಪರಿಭಾಷೆಯನ್ನು ನೋಡಿದರೆ ಆರ್ಯರೊಡನೆ ಈ ಸಮುದಾಯದ ಬಳಕೆ ಪ್ರಾರಂಭವಾಗಿ ಎಷ್ಟೋ ಕಾಲ ಕಳೆದು ಹೋಗಿರಬೇಕೆಂದು ತಿಳಿಯುತ್ತದೆ. ಈ ಹಿನ್ನಲೆಯಲ್ಲಿ ಕುರುಬರು ಆರ್ಯ ಮೂಲದವರೆಂದು ಹೇಳಬಹುದಾಗಿದೆ.

ಒಟ್ಟಾರೆ ಕುರುಬ ಸಮುದಾಯದ ಮೂಲದ ಬಗ್ಗೆ ವಿದ್ವಾಂಸರಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿದ್ದರೂ ಕುರುಬರು ಭಾರತದ ಪೂರ್ವಿಕರ ಮಹತ್ವದ ಮೂಲಗಳಲ್ಲಿ ಓರ್ವ ಸಮುದಾಯವಾಗಿದ್ದಾರಲ್ಲದೆ, ಕ್ರಿ.ಪೂ.೧೨೦೦-೨೦೦೦ವರ್ಷಗಳಷ್ಟು ಪ್ರಾಚೀನತೆಯನ್ನು ಹೊಂದಿದ್ದಾರೆ ಎಂಬುದು ಸ್ಪಷ್ಟಪಡುತ್ತದೆ.

### ೩.೩ ಕುರುಬರ ನೆಲೆಗಳು

ಆದಿಕಾಲದ ಮಾನವ ಅಲೆಮಾರಿಯಾಗಿದ್ದನು. ಬೇಟೆ ಮತ್ತು ಆಹಾರ ಸಂಗ್ರಹಣೆ ಪ್ರಮುಖ ಉದ್ಯೋಗಗಳಾಗಿದ್ದವು. ಕಲ್ಲಿನಿಂದ ತಯಾರಿಸಿದ ಚೂಪಾದ ಆಯುಧಗಳನ್ನು ಮತ್ತು ಬಿದಿರು ಬಳ್ಳಿಗಳಿಂದ ಮಾಡಿದ ಬಿಲ್ಲುಬಾಣಗಳನ್ನು ಬೇಟೆಯಾಡಲು ಬಳಸುತ್ತಿದ್ದನು. ಪ್ರಾಣಿಗಳ ಚರ್ಮ, ಮರದ ತೊಗಟೆ ಹಾಗೂ ಸೊಪ್ಪುಗಳು ಅವನ ವಸ್ತ್ರಗಳಾಗಿದ್ದವು. ದಿನವಿಡೀ ಪ್ರಾಣಿಗಳ ಹಿಂದೆ ಅಲೆಯುತ್ತ ಬೇಟೆಯಾಡಿ ಪ್ರಾಣಿಗಳ ಹಸಿಮಾಂಸವನ್ನು ತಿನ್ನುತ್ತಿದ್ದನು. ಕಾಲಾನಂತರ ಬೆಂಕಿಯ ಪರಿಚಯವಾಗಿ ಪ್ರಾಣಿಗಳನ್ನು ಬೇಯಿಸಿಕೊಂಡು ತಿನ್ನುವುದನ್ನು ಕಲಿತನು. ನಂತರ ಪ್ರಾಣಿಗಳನ್ನು ಸಾಕಲಾರಂಭಿಸಿದನು. ಅವುಗಳಲ್ಲಿ ಹಸು, ಎಮ್ಮೆ, ಕುರಿ, ಕತ್ತೆ, ಮೊದಲಾದ ಪ್ರಾಣಿಗಳಿದ್ದವು. ಈ ಪ್ರಾಣಿಗಳ ಪಾಲನೆಯಿಂದ ಅವನಿಗೆ ಹಾಲು, ಬೆಣ್ಣೆ, ಮಾಂಸ, ಚರ್ಮ ಮೊದಲಾದವುಗಳು ಅತಿಯಾದ ಪ್ರಯಾಸವಿಲ್ಲದೆ ದೊರೆಯುವಂತಾದವು. ಆದರೆ ಬೇಟೆಗಾರರೆಲ್ಲರೂ ಪಶುಪಾಲಕರಾಗಿರಲಿಲ್ಲ. ಪಶುಪಾಲಕರು ತಮ್ಮ ದನಕರುಗಳಿಗೆ ಹುಲ್ಲು , ನೀರು ಸಮೃದ್ಧಿಯಾಗಿರುವ ಫಲವತ್ತಾದ ಭೂಮಿಯಲ್ಲಿ, ನದಿ ತೀರಗಳಲ್ಲಿ ಹಾಗೂ ಎತ್ತರವಾದ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸತೊಡಗಿದರು. ಈ ಪ್ರದೇಶಗಳಲ್ಲಿ ಸೌಲಭ್ಯಗಳ ಕೊರತೆಯುಂಟಾದಾಗ ಮತ್ತೊಂದು ಪ್ರದೇಶಕ್ಕೆ ವಲಸೆಹೋಗುತ್ತಿದ್ದರು. ಕಾಲಾನಂತರ ಪಶುಪಾಲನೆ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕೃಷಿಯನ್ನು ಅವಲಂಬಿಸಿದರು. ಕೃಷಿಯನ್ನು ಕೈಗೊಂಡ ನಂತರ ಒಂದೆಡೆ ಸ್ಥಿರವಾಗಿ ನೆಲೆಯೂರಿದರು. ಕೃಷಿ ಮತ್ತು ಪಶುಪಾಲನೆಗಳೆರಡನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದರು. ಪ್ರಾಣಿಗಳ ಸಾಕಾಣಿಕೆಯ ಆಧಾರದ ಮೇಲೆ ಅವರನ್ನು ಗುರುತಿಸಲಾರಂಭಿಸಿದರು.

ಅಂದರೆ ಗೋವುಗಳ ಪಾಲಕರು ಗೊಲ್ಲರೆಂದು, ಕುರಿಗಳ ಪಾಲಕರು ಕುರುಬರೆಂದು ಕರೆಯಲ್ಪಟ್ಟರು. ಹೀಗೆ ಪ್ರಾಣಿಗಳ ಸಾಕಾಣಿಕೆ ವಿಭಿನ್ನ ಉದ್ಯೋಗಗಳ ಸೃಷ್ಟಿಗೆ ಕಾರಣವಾಯಿತು. ಅಲ್ಲದೆ ಹಲವಾರು ಸಣ್ಣ-ಪುಟ್ಟ ಪಂಗಡಗಳುಂಟಾದವು. ನಂತರ ಈ ಪಂಗಡಗಳ ಪರಸ್ಪರ ಸಂಬಂಧ ಕಡಿದು ಹೋಗಿ ತಮ್ಮ ತಮ್ಮ ಜಾತಿಗಳು ಸ್ವತಂತ್ರವೆಂದೇ ಭಾವಿಸಿಕೊಳ್ಳಲಾರಂಭಿಸಿದವು. ಅವುಗಳಲ್ಲಿ ಕುರುಬ ಸಮುದಾಯವೂ ಒಂದಾಗಿದೆ.

ಪಶುಪಾಲನೆ ವೃತ್ತಿ ಆರಂಭಗೊಂಡಾಗಿನಿಂದಲೇ ಕುರುಬರ ಇತಿಹಾಸ ಪ್ರಾರಂಭವಾಯಿತೆಂಬ ಅಭಿಪ್ರಾಯವಿದೆ. ದನ-ಕುರಿಗಳ ಪಾಲನೆ ಮಾಡುತ್ತ ಅಲೆಮಾರಿಗಳಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಹೀಗೆ ಪ್ರದೇಶದಿಂದ ಪ್ರದೇಶಕ್ಕೆ ಸಂಚಾರ ಕೈಗೊಂಡು ಆ ಪ್ರದೇಶಗಳಲೆಲ್ಲ ಹಟ್ಟಿಗಳನ್ನು ನಿರ್ಮಿಸತೊಡಗಿದರು. ಅತಿ ಪ್ರಾಚೀನ ಕಾಲದಲ್ಲಿ ಎಲ್ಲೆಡೆಗಳಲ್ಲಿ ಹಟ್ಟಿಗಳೇ ಹಟ್ಟಿಗಳು. ಪಟ್ಟಿ, ಹಟ್ಟಿ, ವಾಟ, ವಾಡ, ವಾಡಿ ಈ ಬಗೆಯ ಹೆಸರಿನ ಊರುಗಳಿಲ್ಲದ ಭಾಗವು ದಕ್ಷಿಣ ಪ್ರದೇಶದಲ್ಲಿ ಎಲ್ಲಿಯಾದರೂ ದೊರೆಯಬಹುದೇ ಎಂಬುದು ಸಂದೇಹ ಎಂದು ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ.[೫೯] ಹಟ್ಟಿಗಳಲ್ಲಿ ವಾಸವಾಗಿರುವವರನ್ನು ಹಟ್ಟಿಕಾರರು ಎಂದು ಕರೆಯಲ್ಪಟ್ಟರು. ಈ ಹಟ್ಟಿಕಾರರಲ್ಲಿ ಕುರುಬರು, ದನಗಾರರು ಎಂದು ಪ್ರಕಾರಗಳಾದವು. ಇವರನ್ನು ಮುಂದೆ ಹಟ್ಟಿಗಾರ-ದನಗಾರರು ಎಂದು ಗುರುತಿಸತೊಡಗಿದರು. ಕಾಲಾನಂತರ ಕೃಷಿಯನ್ನು ವೃತ್ತಿಯನ್ನಾಗಿ ಅವಲಂಬಿಸಿದ ಮೇಲೆ ಒಂದು ಸ್ಥಳದಲ್ಲಿ ನಿಲ್ಲುವುದು ಸಾಧ್ಯವಾಯಿತು. ಆದ್ದರಿಂದ ಮೊದಲು ಹಟ್ಟಿ ನಂತರ ಊರುಗಳು ಸೃಷ್ಟಿಯಾದವು.

ಕುರುಬರು ದಕ್ಷಿಣ ಭಾರತದ ಮೂಲ ನಿವಾಸಿಗಳೆಂಬ ಅಭಿಪ್ರಾಯವಿದೆ. ಇವರು ಭಾರತದಾದ್ಯಂತ ನೆಲೆಸಿದ್ದರೆಂಬುದಕ್ಕೆ ಇಂದಿಗೂ ಹಟ್ಟಿ, ಕೊಪ್ಪಗಳೆಂಬ ಹೆಸರಿನ ಊರುಗಳಿರುವುದು ಸಾಕ್ಷಿಯಾಗಿದೆ. ಕುರುಬರು ಭಾರತದಲ್ಲಿ ನೆಲೆಸಿದ ತೀರ ಹಳೆಯ ವಾಸಿಗಳಾಗಿದ್ದರೆಂದು ಗೆಸ್ಟೋವ್ ಓಪರ್ಟರವರು ಅಭಿಪ್ರಾಯ ಪಟ್ಟಿರುವುದರಿಂದ ಇವರು ಭಾರತದಾದ್ಯಂತ ವ್ಯಾಪಿಸಿದ್ದರೆಂಬುದು ಸ್ಪಷ್ಟವಡುತ್ತದೆ. ದಕ್ಷಿಣ ಭಾರತದಲ್ಲಿ ಸಾಮಾನ್ಯವಾಗಿ ನೀಲಗಿರಿಯಿಂದ ಕುರುಬರ ಸೀಮೆ ಆರಂಭವಾಗುತ್ತದೆ. ಉತ್ತರಕ್ಕೆ ಗಂಗಾ-ಶೋಣ ಭದ್ರಾನದಿಯವರೆಗೂ ಈ ಸಮುದಾಯವು ವ್ಯಾಪಿಸಿಕೊಂಡಿದ್ದಿತ್ತೆಂಬುದಕ್ಕೆ ಆಧಾರಗಳಿವೆ.[೬೦]

ಹಟ್ಟಿಕಾರ-ದನಗಾರ (ಕುರುಬ)ರೆಂಬ ಹೆಸರುಗಳಿಗೆ ಪ್ರಾಶಸ್ತ್ಯವಿದ್ದ ಒಂದು ಕಾಲವಿತ್ತು ಎಂಬುದಕ್ಕೆ ಈ ಕೆಳಗಿನ ಸಾಲು ಆಧಾರವಾಗಿದೆ.

'ತುರು-ಕರುವು ಇರದೂರು ನರಕಭಾಜನವಕ್ಕು;
ತುರುಕರು ಉಂಟಾದರೆ ಉಣಲು ಉಂಟು;'

ಆದ್ದರಿಂದ ಜಗಕ್ಕೆಲ್ಲ ತುರು-ಕರುವೆ ದೈವ ಎಂದು ಸರ್ವಜ್ಞನು ಹೇಳಿದ್ದಾನೆ.[೬೧] ಇಂದಿಗೂ ಪ್ರಚಲಿತದಲ್ಲಿರುವ 'ಕುರುಬನಿದ್ದ ಊರು ಕುಬೇರನಾಗರ' ಎಂಬ ಗಾದೆ ಇದಕ್ಕೆ ಪುಷ್ಟಿ ನೀಡುತ್ತದೆ.

ಭಾರತದ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದಕ್ಕಿಂತ ಮೊದಲು ಕುರುಬರು ನರ್ಮದಾ, ಗೋದಾವರಿ ಪ್ರದೇಶಗಳ ಉತ್ತರ ಭಾಗಗಳಲ್ಲಿ ನೆಲೆಸಿದ್ಧರು.[೬೨] ಹಿಂದು ಪವಿತ್ರ ಗ್ರಂಥಗಳ ಪ್ರಕಾರ ಕಂಧಾರ (ಗಂಧಾರ), ವಿಂದ್ಯಾರಣ್ಯ, ದಂಡಕಾರಣ್ಯ

ಕುರುಬರ ಮೂಲ ಪ್ರದೇಶಗಳಾಗಿದ್ದವು. ಕಾಲಾನಂತರ ಅವರು ಆಹಾರಕ್ಕಾಗಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆಹೋದರು.[೧೩] ಅದರಿಂದ ಅವರಿಗೆ ಹಟ್ಕಾಕರು ಹಾಗೂ ಕಂದಮೇಳರು ಎಂಬ ಹೆಸರು ಬಂದವು. ಹಟ್ಕಾಕರು ಗಂಧಾರದಿಂದ ಮರಾಠಾಕ್ಕೆ ವಲಸೆಹೋದರು. ಹಾಗೆಯೇ ಕಂದಮೇಳರು ವಿಂಧ್ಯಾರಣ್ಯ ಹಾಗೂ ದಂಡಕಾರಣ್ಯ ಪ್ರದೇಶಗಳಲ್ಲಿ ನೆಲೆಸಿದರು. ತಮ್ಮ ಪರಂಪರಾಗತ ಉದ್ಯೋಗವಾದ ಕುರಿಕಾಯುವದರೊಂದಿಗೆ ಕೃಷಿ ಕೆಲಸದಲ್ಲಿ ತೊಡಗಿಕೊಂಡರು.

ಪ್ರಾಚೀನ ಕಾಲದಲ್ಲಿ ನೇಕಾರಿಕೆಗೆ ಪ್ರಸಿದ್ಧವಾದ ಪಟ್ಟಣವೆಂದರೆ ಪೈಠಾಣ, ಉಜ್ಜೈನ್, ನಗರಗಳು ನೂಲಿನ ಬಟ್ಟೆಗಳಿಗಾಗಿ ಪ್ರಸಿದ್ಧವಾಗಿದ್ದವೆಂದು ಪೆರಿಪ್ಲಸ ಎಂಬ ಗ್ರಂಥದಿಂದ ತಿಳಿಯುತ್ತದೆ.[೧೪] ಹಟ್ಟಿಕಾರರು ಪೈಠಣದಿಂದ ಬಾದಾಮಿ ನಾಡಿಗೆ ವಲಸೆ ಹೋದರು ಎಂಬ ಅಭಿಪ್ರಾಯವಿದೆ. ಪರುಷ್ಣಿ ನದಿಯನಾಡು ಋಗ್ವೇದಕಾಲದಲ್ಲಿ ಉಣ್ಣೆಯ ಸಲುವಾಗಿ ಬಹಳ ಪ್ರಸಿದ್ಧಿಯಾಗಿತ್ತು.[೧೫] ಪರುಸ ಎಂದರೆ ಉಣ್ಣೆಯ ರಾಶಿ, ಪರುಸ ಎಂಬ ಶಬ್ದದಿಂದ ಪರುಷ್ಣಿಯಾಗಿದೆ ಎಂದು ಪಿಶೆಲ್ ರವರು ಅಭಿಪ್ರಾಯಪಟ್ಟಿದ್ದಾರೆ.[೧೬] ಋಗ್ವೇದದಲ್ಲಿ ಊರ್ಣಾವತಿ ಎಂದು ಸಿಂಧು ನದಿಗೆ ವಿಶೇಷಣವಿತ್ತೆಂದು ತಿಳಿಯುತ್ತದೆ. ಈ ಸಿಂಧು ನದಿ ಭಾಗದಲ್ಲಿ ಧನಗಾರರಾದ ಯದು ತುರ್ವಶರು ನೆಲೆಸಿದ್ದರು. ಮ್ಯಾಕಡೊನೆಲ್‌ರು ಋಗ್ವೇದ ಕಾಲದಲ್ಲಿ ಸಿಂಧೂ ತೀರವು ಇವರ ವಸತಿ ಸ್ಥಾನವಾಗಿತ್ತೆಂದು ಊಹಿಸಿದ್ದಾರೆ.[೧೭] ಹಾಗೆಯೇ ಋಗ್ವೇದದ ೨ನೇ ಪ್ರಕರಣದಲ್ಲಿ ತೋರಿಸಿದಂತೆ ದಕ್ಷಿಣ ಪ್ರಾಂತ್ಯದಲ್ಲಿ ಕುರುಬರು ಚಂದ್ರವಳ್ಳಿ, ನೀಲಗಿರಿ, ತಮಿಳುನಾಡಿನ ಆದಿತ್ಯನಲ್ಲೂರಗಳ ವರೆಗೆ ವ್ಯಾಪಿಸಿಕೊಂಡಿದ್ದರೆಂದು ಕಂಡು ಬರುತ್ತದೆ. ಕೆಲವರು ಪಟ್ಟಣಗಳನ್ನು ಕಟ್ಟಿಕೊಂಡರೆ ಇನ್ನೂ ಕೆಲವರು ಹಟ್ಟಿಗಳನ್ನು ನಿರ್ಮಿಸಿಕೊಂಡು ನೆಲೆಸಿದ್ದರು.

ಸೈಂಧವ ಹಾಗೂ ಈಜಿಪ್ಟ್ ಸಂಸ್ಕೃತಿಗಳು ವೇದ ಕಾಲದವು. ಈಜಿಪ್ಟ್‌ಗೆ ಬಟ್ಟೆ ಕಳಿಸುವ ನಂದಿ ಧ್ವಜರಾದ ಹಟ್ಟಿಕಾರರು ೬೦೦೦–೨೦೦೦ ವರ್ಷಗಳ ಪ್ರಾಚೀನ ಸಮುದಾಯದವರೆಂದು ಚಾರಿತ್ರಿಕವಾಗಿ ತಿಳಿದು ಬರುತ್ತದೆ.[೧೮] ಹಡಗಿನ ಚಿತ್ರಗಳುಳ್ಳ ಕುರುಬರ ನಾಣ್ಯಗಳು ಹಟ್ಟಿಕಾರರ ಬಟ್ಟೆ ಮೊದಲಾದ ಸರಕಿನ ವ್ಯಾಪಾರದ ದ್ಯೋತಕವಾಗಿವೆ. ದಕ್ಷಿಣ ಭಾಗದಲ್ಲಿ ದೊರೆಯುವ ಸಮಾಧಿ ಮೊದಲಾದ ಅವಶೇಷಗಳು ಪ್ರಾಚೀನ ಕಾಲದ ಕುರುಬರವೆಂದು ಸರ್ ಇಲಿಯಟ್‌ರು ಅಭಿಪ್ರಾಯಪಟ್ಟಿದ್ದಾರೆ.[೧೯] ಅವುಗಳು ಕ್ರಿ.ಪೂ.೪೦೦೦–೫೦೦೦ ವರ್ಷಗಳಷ್ಟು ಪ್ರಾಚೀನವಾದವುಗಳೆಂದು ತಿಳಿಯುತ್ತದೆ. ಸಿಂಧೂ ತೀರದಿಂದ ಸೌರಾಷ್ಟ್ರದ ಮಾರ್ಗವಾಗಿ ದಕ್ಷಿಣದ ಕಡೆಗೆ ವಲಸೆ ಬಂದವರೇ ಸಿಂಧರಾಗಿದ್ದಾರೆ. ಸಿಂಧ ಖೇಡ (ಖಾನಾದೇಶ), ಸಿಂಧಗಿ (ವಿಜಾಪುರ ಜಿಲ್ಲೆ), ಸಿಂಧವಾಡಿ (ಬಳ್ಳಾರಿ ಜಿಲ್ಲೆ), ಸಿಂಧೋಗಿ (ಕೊಪ್ಪಳ ಜಿಲ್ಲೆ) ಗಳು ಈ ಸಮುದಾಯದ ಅಸ್ತಿತ್ವದ ಸಾಕ್ಷಿಯನ್ನು ನೀಡುತ್ತವೆ.[೨೦] ಸಿಂಧೂ ತೀರದಿಂದ ವಲಸೆ ಹೊರಟ ಈ ಸಮುದಾಯದ ಒಂದು ಗುಂಪು ಮಥುರಾ–ಬೃಂದಾವನದ ಕಡೆಗೆ ನೆಲೆಸಿತು. ಇನ್ನೊಂದು ದ್ವಾರಾವತಿಯಿಂದ ಸೌರಾಷ್ಟ್ರಕ್ಕೆ ಬಂದಿತು. ಮತ್ತೊಂದು ವಿದರ್ಭದ ಭಾಗದಲ್ಲಿ ನೆಲೆನಿಂತಿತು. ರಾವೀ ತೀರದವರೆಗಿದ್ದ ಯದು–ತುರ್ವಶ (ಕುರುಬ)ರು ರೇವಾ ತೀರಕ್ಕೆ ಬಂದು ನೆಲೆಸಿದರು.[೨೧] ಕ್ರಮೇಣ ಶತಮಾನಗಳ ನಂತರ ರೇವಾ ನದಿಯೇ ಈ ಸಮುದಾಯದ ವಾಸಸ್ಥಾನವಾಗಿತ್ತು. ನಂತರ ಕುರುಬರು ಆರ್ಯರಾದರು. ಗಂಗಾ, ಯಮುನ ತೀರದ ಪಂಗಡದವರು ಆರ್ಯರಾಗಿ ಪರಿವರ್ತನೆ ಹೊಂದಿದರು. ಆದರೆ ಆರ್ಯರಾಗಲು ಸಮ್ಮತಿಸದ ಕುರುಬರು ಗಂಗಾತೀರದಿಂದ ತೆಂಗಣಕ್ಕೆ ವಲಸೆ ಹೋದರು.[೨೨] ಆರ್ಯರಿಗೆ ಹತ್ತಿ ಬಟ್ಟೆಯ ಪರಿಚಯವಿರಲಿಲ್ಲ. ಅವರು ಉಣ್ಣೆ ಬಟ್ಟೆಗಳನ್ನೆ ಅಧಿಕವಾಗಿ ಬಳಸುತ್ತಿದ್ದರು. ಇದರಿಂದ ಅಂದು ಕುರುಬರು ತಯಾರಿಸುತ್ತಿದ್ದ ಉಣ್ಣೆ ಬಟ್ಟೆಗಳಿಗೆ ಅಧಿಕ ಬೇಡಿಕೆಯಿತ್ತಲ್ಲದೆ ಕುರುಬರು ಎಲ್ಲೆಡೆ ವ್ಯಾಪಿಸಿದ್ದರೆಂದು ಪ್ರಾಚೀನ ಉಲ್ಲೇಖಗಳಿಂದ ತಿಳಿದು ಬರುವುದು.

ಪ್ರಾಚೀನ ಕಾಲದ ಶಾಸನಗಳಲ್ಲಿ ಕುರುಬರ ಹಟ್ಟಿ, ಹಳ್ಳಿ, ಓಣಿ,ಕೇರಿ, ಗೇರಿ, ಗಲ್ಲಿ ಎನ್ನುವ ವಿಷಯ ಹೇರಳವಾಗಿ ದೊರಕುತ್ತವೆ.[೭೩] ಅದೇರೀತಿ ಹಿಂದುಸ್ಥಾನದಲ್ಲೆಲ್ಲ ಕುರುಬರು ನೆಲೆಸಿದ್ದರೆಂಬುದಕ್ಕೆ ಹಟ್ಟಿ, ಹಳ್ಳಿ, ಪಟ್ಟಿ ಮೊದಲಾದ ಹೆಸರಿನ ಊರುಗಳು ಸಾಕ್ಷಿಯಾಗಿವೆ. ಕುರುಬ(ಹಟ್ಟಿಕಾರ)ರು ಅಸ್ಸಾಮದವರೆಗೂ ಹೋಗಿದ್ದರೆಂದು ತಿಳಿಯಲು ಗೋಹಟ್ಟಿ ಊರು ಆಧಾರವಾಗಿದೆ.[೭೪] ಬಂಗಾಳದಲ್ಲಿ ಪಟ್ಟಿ, ಹಟ್ಟಿ, ಪಾಟಿ, ವಾಟಿ, ವಾಡಗಳು ಇಂದಿಗೂ ಅಸಂಖ್ಯಾತವಾಗಿವೆ. ೫೦ ರಿಂದ ೧೦೦ ವರೆಗಿನ ಹಳ್ಳಿಗಳ ವಿಭಾಗಕ್ಕೆ ಗೊಂಡಜನರು ಪಟ್ಟಿ ಎಂದು ಕರೆಯುತ್ತಾರೆ.[೭೫] ಕುರುಬರು ಉತ್ತರ ಭಾರತದಲ್ಲಿದ್ದಾಗ ಪಟ್ಟಿ (ಘೋಷಾಃ)ಯಲ್ಲಿ ತಯಾರಿಸುವ ವಸ್ತ್ರವು ಉಣ್ಣೆಯದಾಗಿರುವ ಸಂಭವವೇ ಅಧಿಕವಾಗಿದೆ. ಜಾಡರಲ್ಲಿ ಹಳಬರು ಉಣ್ಣೆಕಂಕಣದವರು.[೭೬] ಹತ್ತಿ ವಸ್ತ್ರದ ಪರಿಚಯವಾಗುವ ಪೂರ್ವದಲ್ಲಿ ತಮ್ಮಲ್ಲಿ ದೊರೆಯುತ್ತಿದ್ದ ಉಣ್ಣೆಯಿಂದಲೇ ವಸ್ತ್ರಗಳನ್ನು ನೇಯುತ್ತಿದ್ದರು. ಹೀಗಾಗಿ ಈ ವಸ್ತ್ರವು ಹಟ್ಟಿನಾಡಿನಲ್ಲಿಯೇ ಮೊದಲ ಬಾರಿಗೆ ದೊಡ್ಡ ಪ್ರಮಾಣದಲ್ಲಿ ನೇಯಲಾರಂಭಿಸಿರಬೇಕೆಂದು ಊಹಿಸಬಹುದಾಗಿದೆ.

ಪ್ರಾಚೀನ ಮರವ ಸಮುದಾಯಕ್ಕೆ ಸೇರಿದ ಸೂತಪತಿಗಳನ್ನು ದಕ್ಷಿಣ ಭಾರತದಲ್ಲಿ ಕುರುಬರು ಸೋಲಿಸಿದರು. ನಂತರ ಕುರುಬರ ಮುಖಂಡ ಕಾಮಂಡ ಪ್ರಭು ಪುಲಾಲದ ರಾಜ ಹಾಗೂ ಕಾಮಂಡ ಕುರುಂಬ ಪ್ರಭು ಎಂಬ ಹೆಸರಿನಿಂದ ದ್ರಾವಿಡ ದೇಶದ ಅಧಿಪತಿಯಾದನು.[೭೭] ಅವನು ಆಳಿದ ರಾಜ್ಯ ಕುರುಬ ಭೂಮಿ ಎಂದು ಕರೆಯಲ್ಪಟ್ಟಿತ್ತು. ಕುರುಬರ ನಾಡಿ ಎಂದು ಈಗಲೂ ಮಲಬಾರ ತೀರದಲ್ಲಿ ಪ್ರಸಿದ್ಧವಾಗಿದೆ. ಕುಸುಬಾ ಕುರುಬರ ನಾಡಿನಲ್ಲಿ ೧)ಕುಸುಬಾ ಕುರುಬರ ನಾಡು. ೨) ವಾಯುನಾಡು. ೩) ಕೋಲ್ ಘಾಟ್. ೪) ಪಾಯುಮಲ್ಯೆ. ೫)ತೈಕುಂಪುರಮ್. ೬) ವಾರಕ್ಕಂಪುರಮ್. ೭)ಪೊತ್ಯೆ ಎಂಬ ಏಳು ತಾಲ್ಲೂಕುಗಳು ಮಾತ್ರ ಇದ್ದವು.[೭೮] ಒಂದು ಕಾಲದಲ್ಲಿ ನೀಲಗಿರಿ ಕುರುಬರ ಪ್ರಮುಖ ನೆಲೆಯಾಗಿತ್ತು. ಕಾಮಂಡ ಕುರುಬ ಪ್ರಭುವಿನ ವಂಶಕ್ಕೆ ಸಂಬಂಧಪಟ್ಟ ಶಾಖೆಯವರು ಎಯ್ಯೂರು ಮಲ್ಯೆ ಎಂಬುದನ್ನು ವಶಪಡಿಸಿಕೊಂಡರು.[೭೯] ಹಾಗೆಯೇ ೧) ಪುಲಾಲ್ ಕೋಟ್ಯೆ, ೨)ಅಮೂರು ಕೋಟ್ಯೆ, ೩)ಕಲ್ಲತೂರು ಕೋಟ್ಯೆ, ೪)ಮಲಿಯೂರು ಕೋಟ್ಯೆ, ೫)ಚೆಂಪೂರು ಕೋಟ್ಯೆ, ೬)ಊರು ಕೋಟ್ಯೆ, ೭) ವೆನಕುನ ಕೋಟ್ಯೆ, ೮) ಇಕ್ಕಟ್ಟು ಕೋಟ್ಯೆ, ೯) ಪಟ್ಟುವೂರು ಕೋಟ್ಯೆ, ೧೦) ಮನವೂರು ಕೋಟ್ಯೆ ಮೊದಲಾದ ಪಟ್ಟಣ ಪ್ರದೇಶದಲ್ಲಿ ಕುರುಬರು ಕೋಟೆ ಕಟ್ಟಿಸಿರುವುದು ತಿಳಿಯುತ್ತದೆ.[೮೦]

ಪಲ್ಲವರೆಂಬ ಹೆಸರಿನಿಂದ ರಾಜ್ಯಭಾರ ಮಾಡುತ್ತಿದ್ದ ಕುರುಬರು ಆದಂಡಚೋಳನೆಂಬ ರಾಜನಿಂದ ಪರಾಭವಗೊಂಡು ಶತೃರಾಜರ ಭಯದಿಂದ ಜೀವ ಉಳಿದರೆ ಸಾಕೆಂದು ಭಾರತದುದ್ದಕ್ಕೂ ಚದುರಿ ಹೋದರು. ಅನೇಕರು ಮಲಬಾರ, ನೀಲಗಿರಿ ಬೆಟ್ಟಗಳನ್ನು ಸೇರಿಕೊಡರು. ಇವರ ವಾಸಸ್ಥಾನಗಳಿಗೆ ಆಡಿ, ಮೊಟ್ಟ, ಕಂಬ್ಯೆ ಎಂಬ ಹೆಸರುಗಳಿವೆ.[೮೧]

ಕುರುಬರ ಉಪಗುಂಪಾದ ಕನ್ನಡ ಗೌಳಿಗರು ನರ್ಮದೆಯ ಉತ್ತರ ಭಾಗವಾದ ನಾಸಿಕ ಹಾಗೂ ಕುರುಕ್ಷೇತ್ರ ಪ್ರದೇಶದಲ್ಲಿ ನೆಲೆಸಿದರು. ಕನ್ನಡದ ಉಪಗುಂಪು ನಾಗಪುರಕ್ಕೆ ವಲಸೆಹೋಗಿ ಕೃಷಿಯನ್ನು ತಮ್ಮ ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡರು ನಂತರ ದಕ್ಷಿಣದ ತುತ್ತ ತುದಿಗೆ ವಲಸೆ ಹೋಗಿ ನೆಲೆಸಿದ್ದರಿಂದ ಮಲಬಾರ ಕುರುಬ, ಗೋವಾ ಕುರುಬರೆಂದು ಗುರುತಿಸಲ್ಪಟ್ಟರು.[೮೨]

ಮಹಾರಾಷ್ಟ್ರ, ಮಧ್ಯಪ್ರದೇಶ, ಗಂಗಾ, ಶೋಣಾ ಹಾಗೂ ಭದ್ರಾ ಪ್ರದೇಶಗಳಲ್ಲಿನ ಅನೇಕ ಅಧಿಪತ್ಯಗಳ ಮುಖ್ಯಸ್ಥ ಇಲ್ಲವೆ ಆಳರಸರಾಗಿ ಕುರುಬರು ಜನಪ್ರಿಯರಾದರು.[೮೩] ಮರಾಠ, ವರಾಠಾ, ಧನಗಾರ, ವತನದಾರ, ಪಾಟೀಲ ಹಾಗೂ ದೇಶಮುಖ ಮೊದಲಾದ ವಿಭಿನ್ನ ಹೆಸರುಗಳಿಂದ ಗುರುತಿಸಲ್ಪಟ್ಟರು. ಪ್ರಾಚೀನ ಕಾಲದಲ್ಲಿದ್ದ ಇಂದ್ರಪುರವೆಂಬ ಪ್ರಸಿದ್ಧ ಇಂದೂರ ರಾಜ್ಯವನ್ನು

ಕುರುಬ ಅರಸರ ಆಳುತ್ತಿದ್ದ.[೮೪] ಚಂದ ಭಂಡಾರ, ವರಾಠ ಇತ್ಯಾದಿ ಕುರುಬರ ಉಪಗುಂಪುಗಳು ನಾಗಪುರದಿಂದ ವಲಸೆ ಬಂದವು. ಕೊಂಬು, ಹಳಬರು, ಅನೇಕ ಕುಡಿ(ಗುಡಿ) ಗಳನ್ನು ನಿರ್ಮಿಸಿ ಕುಡಿಮಕ್ಕಳೆಂದೂ ಕರೆಯಲ್ಪಟ್ಟರು.[೮೫]

ದಕ್ಷಿಣಾಪಥದ ಉತ್ತರಕ್ಕೆ ನರ್ಮದಾ ತೀರದಲ್ಲಿಯೂ, ದಕ್ಷಿಣಕ್ಕೆ ಕಾವೇರಿ ತೀರದಲ್ಲಿಯೂ ಮರವರು, ಇಡೈಯರು, ಅಂಡರರು ಪ್ರಾಚೀನ ಕಾಲದಿಂದಲೂ ಕಂಡು ಬರುವರು. ನರ್ಮದಾ–ಕಾವೇರಿಗಳ ನಡುವಿನ ನಾಡು ಅಥವಾ ವಿಂಧ್ಯ– ನೀಲಗಿರಿಗಳ ಮಧ್ಯ ದೇಶವು ಆರ್ಯರು ದಕ್ಷಿಣಾಪಥಕ್ಕೆ ಬರುವ ಸುಮಾರಿಗೆ ವಡುಕ–ಹಟ್ಟಿಕಾರರ ವಾಸಸ್ಥಾನವಾಗಿದ್ದಿತೆಂದು ತಿಳಿಯುತ್ತದೆ.[೮೬] ಅದರಲ್ಲೂ ವಿದರ್ಭವು ಮರವ(ಕುರುಬ)ರ ಹೆಸರಿನಿಂದಲೇ ಪ್ರಸಿದ್ಧಿಗೊಂಡು ಮರಹಟ್ಟಿ ಎಂದು ಕರೆಯಲ್ಪಡುತ್ತಿತ್ತು.[೮೭] ಹೀಗೆ ಸುಮಾರು ಆರೇಳು ಸಾವಿರ ವರ್ಷಗಳ ಸುದೀರ್ಘ ಇತಿಹಾಸವನ್ನೊಳಗೊಂಡ ಕುರುಬರು ಭಾರತದಾದ್ಯಂತ ವ್ಯಾಪಿಸಿ ತಮ್ಮದೇ ಆದ ಸ್ಥಾನವನ್ನು ಹೊಂದಿದ್ದರೆಂಬುದು ಸ್ಪಷ್ಟ.

### ೨.೪ ಕುರುಬರ ಒಳಪಂಗಡಗಳು

ಕುರುಬರು ಪ್ರಾಥಮಿಕ ಹಂತದಲ್ಲಿ ಗುಡ್ಡ ಬೆಟ್ಟಗಳಲ್ಲಿ ಸಾಕು ಪ್ರಾಣಿಗಳೊಂದಿಗೆ ವಾಸಿಸುತ್ತಿದ್ದರು. ಕಾಲಾನಂತರ ಪಶು ಪಾಲನೆಯಿಂದ ಕೃಷಿಗೆ ಪರಿವರ್ತನೆಗೊಂಡರು. ಕೃಷಿಯನ್ನು ಅವಲಂಬಿಸಿದ ಮೇಲೆ ಇವರಲ್ಲಿ ಬಹಳಷ್ಟು ಪ್ರಗತಿಯಾಯಿತು. ಕೃಷಿಗೆ ಯೋಗ್ಯ ಜಮೀನು ಇರುವಲ್ಲಿ ಬಂದು ಹಟ್ಟಿಗಳನ್ನು ನಿರ್ಮಿಸಿಕೊಂಡರು. ಹಟ್ಟಿಗಳ ರೂಪಾಂತರವೇ ಗ್ರಾಮಗಳಾದವು. ಹೀಗೆ ಒಂದೆಡೆ ನೆಲೆಸಿದ ಮೇಲೆ ಕುರುಬರಲ್ಲಿ ಅನೇಕ ರೀತಿಯ ಬದಲಾವಣೆಗಳಾದವು.

ಮೂಲತಃ ಕುರುಬರಲ್ಲಿ ಹಾಲುಮತ ಎಂಬ ಒಂದೇ ಪಂಗಡವಿತ್ತು. ಕಾಲಾನಂತರ ಅನೇಕ ಕಾರಣಗಳಿಂದ ಅವರಲ್ಲಿ ಅನೇಕ ಉಪ ಪಂಗಡಗಳು ಸೃಷ್ಟಿಗೊಂಡವು. ಪ್ರತಿಯೊಂದು ಪಂಗಡಗಳು ತಮ್ಮದೇ ಆದ ವೃತ್ತಿ, ಆಚಾರ–ವಿಚಾರಗಳನ್ನು ಹೊಂದಿದವಲ್ಲದೇ ಮೂಲ ಪಂಗಡದಿಂದ ದೂರವಾದವು. ಅವು ತಮ್ಮದೇ ಆದ ಜೀವನ ಕ್ರಮವನ್ನು ಅನುಸರಿಸುತ್ತಾ ಹೊಸ ಹೆಸರನ್ನು ಪಡೆದುಕೊಂಡವು.

ಮೂಲ ಪಂಗಡದಿಂದ ಬೇರೆಯಾಗಿ ಭಾರತದ ಬೇರೆ ಬೇರೆ ಪ್ರದೇಶಗಳಿಂದ ವಲಸೆ ಹೋದವು. ಕಾವೇರಿಯಿಂದ ಗಂಗೆಯವರೆಗೆ, ನೀಲಗಿರಿಯಿಂದ ರಾಜ ಮಹಲ್‌ದವರೆಗೆ ವ್ಯಾಪಿಸಿಕೊಂಡಿದ್ದ ಕುರುಬರು ಪ್ರದೇಶಕ್ಕನುಗುಣವಾಗಿ ವೃತ್ತಿಯನ್ನು ಅವಲಂಬಿಸಿದರು. ನಂತರ ವೃತ್ತಿಯ ಆಧಾರದ ಮೇಲೆ ವಿವಿಧ ಹೆಸರನ್ನು ಪಡೆದುಕೊಂಡರು. ಪ್ರತಿಯೊಂದು ಪಂಗಡಗಳು ತಮ್ಮದೇ ಆದ ಸಂಸ್ಕಾರ, ಸಂಪ್ರದಾಯಗಳನ್ನು ಅನುಸರಿಸತೊಡಗಿದವಲ್ಲದೇ, ತಮ್ಮಲ್ಲೇ ಕೆಲವು ವಿಧಿ ನಿಷೇಧಗಳನ್ನು ಸೃಷ್ಟಿಸಿಕೊಂಡವು. ತಮ್ಮ ತಮ್ಮಲ್ಲಿ ಮೇಲು ಕೀಳು ಭಾವನೆ ಉಂಟು ಮಾಡಿಕೊಂಡು ಪರಸ್ಪರ ಕೊಡು ಕೊಳ್ಳುವಿಕೆಯನ್ನು ನಿಯಂತ್ರಿಸಿದವು. ಹೀಗಾಗಿ ಕುರುಬರಲ್ಲಿರುವ ಅನೇಕ ಉಪ ಪಂಗಡಗಳು ಇಂದಿಗೂ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವುದು ಸ್ಪಷ್ಟ.

ಹಾಲುಮತದಿಂದ ಬೇರ್ಪಟ್ಟ ಪಂಗಡಗಳಲ್ಲಿ ಒಡೆಯರು, ಧನಗಾರರು, ಕಾಡು ಕುರುಬರು, ಜೇನು ಕುರುಬರು, ಹಂಡೆ

ಕುರುಬರು, ಗೊರವರು, ಗೊಂಡರು, ಹತ್ತಿ ಕಂಕಣದವರು, ಉಣ್ಣೆ ಕಂಕಣದವರು, ಕಂಬಳಿ ಕುರುಬರು, ಕರೆಗಾರರು ಮೊದಲಾದವು ಪ್ರಮುಖವಾಗಿವೆ. ಈ ಪಂಗಡಗಳು ಪ್ರದೇಶಕ್ಕನುಗುಣವಾಗಿ ವಿಭಿನ್ನ ರೂಪ ಪಡೆದುಕೊಂಡಿರುವುದು ಕಂಡು ಬರುತ್ತದೆ. ಅಂಥವುಗಳಲ್ಲಿ ಕೆಲವು ಪ್ರಮುಖ ಪಂಗಡಗಳ ಬಗ್ಗೆ ಈ ಕೆಳಗೆ ವಿವರಿಸಲಾಗಿದೆ.

### ೩.೪.೧ ಹಾಲುಮತಸ್ಥರು

ಕುರುಬರಲ್ಲಿ ಹಾಲುಮತ ಪಂಗಡವು ಮೂಲ ಪಂಗಡವಾಗಿದೆ. ಈ ಹಾಲುಮತದಿಂದಲೇ ಅನೇಕ ಪಂಗಡಗಳುಂಟಾದವೆಂದು ತಿಳಿಯುತ್ತದೆ. ಆದರೆ ಇಂದಿಗೂ ಕುರುಬರನ್ನು ಹಾಲುಮತದವರೆಂದೇ ಗುರುತಿಸಲಾಗುತ್ತದೆ. ಹಾಲುಮತಸ್ಥರ ಪೌರಾಣಿಕ ಹಿನ್ನೆಲೆಯ ಬಗ್ಗೆ ಇದೇ ಅಧ್ಯಾಯದ ಕುರುಬರ ಪೌರಾಣಿಕ ಮೂಲದಲ್ಲಿ ತಿಳಿಸಲಾಗಿದೆ.

ದನ ಕುರಿಗಳ ಪಾಲಕರಾಗಿದ್ದ ಕುರುಬರು ಅವುಗಳ ಹಾಲನ್ನು ಮಾರಿ ಜೀವನ ನಡೆಸುತ್ತಿದ್ದರು. ಹಾಲು ಮಾರುವವರಾದ್ದರಿಂದ ಹಾಲುಮತದವರೆಂಬ ಹೆಸರು ಬಂದಿರಬಹುದೆಂದು ಹೇಳಬಹುದಾಗಿದೆ. ಹಾಲುಮತದವರಲ್ಲಿ ಕಾಲಾನಂತರ ಎರಡು ಪಂಗಡಗಳು ಸೃಷ್ಟಿಗೊಂಡವು. ಅವುಗಳಲ್ಲಿ ಹತ್ತಿಕಂಕಣ ಮತ್ತು ಉಣ್ಣೆಕಂಕಣ ಎಂದು ಗುರತಿಸಲಾಗಿದೆ. ಇವೆರಡೂ ತಮ್ಮದೇ ಆದ ಲಕ್ಷಣಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ.

#### ೧. ಉಣ್ಣೆ ಕಂಕಣ

ಹಾಲುಮತದಲ್ಲಿ ಉಂಟಾದ ಎರಡು ಭಾಗಗಳಲ್ಲಿ ಉಣ್ಣೆ ಕಂಕಣವೇ ಪ್ರಥಮವಾಗಿದೆ. ಕಾರಣ ಪಶುಪಾಲನೆಯ ಹಂತದಲ್ಲಿ ಉಣ್ಣೆ ಬಳಕೆಯಲ್ಲಿತ್ತು. ಕೃಷಿಯು ಬೆಳವಣಿಗೆಗೊಂಡ ಮೇಲೆ ಹತ್ತಿ ಪ್ರಚಲಿತಗೊಂಡಿತು. ಆದರೆ ಪುರಾಣಗಳು ಹತ್ತಿ ನಂತರ ಉಣ್ಣೆ ಕಂಕಣ ಬಂದಿತೆಂದು ಹೇಳುತ್ತವೆ. ಉಣ್ಣೆಯು ಹತ್ತಿಗಿಂತಲೂ ಪ್ರಾಚೀನವಾದುದೆಂದು ದೃಢಪಟ್ಟಿರುವುದರಿಂದ ಉಣ್ಣೆ ಕಂಕಣ ಪ್ರಥಮ ಎಂದು ಹೇಳಬಹುದಾಗಿದೆ. ಉಣ್ಣೆ ಕಂಕಣದವರು ಸೃಷ್ಟಿಮೂಲದ ಬಗ್ಗೆ ಇದೇ ಅಧ್ಯಾಯದ ಕುರುಬರ ಪೌರಾಣಿಕ ಮೂಲದಲ್ಲಿ ವಿವರಿಸಲಾಗಿದೆ.

ಉಣ್ಣೆ ಕಂಕಣ ಧರಿಸುವ ಪರಂಪರೆ ಭಾರತದಲ್ಲಿ ಪ್ರಥಮವಾಗಿ ಪ್ರಾರಂಭವಾಯಿತು. ಉಣ್ಣೆಯ ಕಂಕಣ ತೊಡುವ ಪದ್ಧತಿ ಮಹಾಭಾರತ ಕಾಲದಲ್ಲಿಯೇ ರೂಢಿಯಲ್ಲಿತ್ತೆಂಬುದಕ್ಕೆ ಉಲ್ಲೇಖಗಳಿರುವುದು ಕಂಡುಬರುತ್ತದೆ[೮೮]. ಉಣ್ಣೆಯ ನೂಲಿನ ಜನಿವಾರ ಧರಿಸುವ ಉಲ್ಲೇಖ ಮನುಸ್ಮೃತಿಯಲ್ಲಿದೆ[೮೯]. ಹೀಗಾಗಿ ಪ್ರಾಚೀನ ಕಾಲದಿಂದಲೂ ಉಣ್ಣೆ ವಸ್ತ್ರಕ್ಕೆ ಪ್ರಾಮುಖ್ಯತೆಯಿತ್ತು ಎಂಬುದು ಸ್ಪಷ್ಟ. ಪ್ರತಿಯೊಂದು ಶುಭಕಾರ್ಯಗಳಿಗೆ ಉಣ್ಣೆ ವಸ್ತ್ರವನ್ನು ಉಪಯೋಗಿಸುತ್ತಿದ್ದರು. ಇಂದಿಗೂ ಉಣ್ಣೆ ವಸ್ತ್ರ ಧಾರ್ಮಿಕವಾಗಿ ಪ್ರಾಧಾನ್ಯತೆ ಪಡೆದುಕೊಂಡಿದೆ. ಕುರುಬರಲ್ಲದೆ ಅನ್ಯ ಜಾತಿಯವರೂ ಸಹ ಶುಭಕಾರ್ಯಗಳಿಗೆ ಕಂಬಳಿ ಬಳಸುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಹತ್ತಿ ವಸ್ತ್ರಗಳಿಗಿಂತ ಉಣ್ಣೆ ವಸ್ತ್ರಕ್ಕೆ ಹೆಚ್ಚಿನ ಪ್ರಾಮುಖ್ಯತೆಯಿರುವುದು ಕಂಡುಬರುತ್ತದೆ.

ಉಣ್ಣೆ ಕಂಕಣದವರು ತುಮಕೂರು, ಬೀದರ, ಗುಲಬರ್ಗಾ, ಮಂಡ್ಯ, ಕೊಡಗು, ಬೆಳಗಾವ, ಮೈಸೂರು, ಹಾಸನ, ಕೊಪ್ಪಳ,

ಮೊದಲಾದ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಗುಡ್ಡ, ಬೆಟ್ಟ, ಹುಲ್ಲುಗಾವಲಿರುವ ಪ್ರದೇಶಗಳಲ್ಲಿ ಕುರಿಸಾಕಾಣಿಕೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ಕುರಿಸಾಕಾಣಿಕೆ ಹಾಗೂ ಕಂಬಳಿ ನೇಯ್ಗೆಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿರುತ್ತಾರೆ.

ಉಣ್ಣೆ ಕಂಕಣದವರು ಜನನ, ಋತುಮತಿ, ಮದುವೆ, ಮರಣ ಮೊದಲಾದ ಸಂಧರ್ಭಗಳಲ್ಲಿ ತಮ್ಮದೇ ಆದ ಆಚರಣೆಗಳನ್ನು ಹೊಂದಿದ್ದಾರೆ. ಇವರಲ್ಲಿ ಸಾವಂತ, ಹಾಲುಕುಲ, ಉಳ್ಳಕುಲ, ಕಣಿನ ಕುಲ, ಹರಿವಾನದಕುಲ, ಬಿಜ್ಜಳಕುಲ, ಬಾಲದಕುಲ, ಚಿಟ್ಟಿನಕುಲ, ಮಲ್ಲಿಗೆಕುಲ, ಓರಿಕುಲ, ಮಾಡಗಲಿಕುಲ, ಆನೆಕುಲ, ಗೌಡಕುಲ, ಊಟನಕುಲ, ಸತ್ಯಣ್ಣಕುಲ, ಪರ್ವತಕುಲ, ಗಂಗಿನಕುಲ, ಅಚ್ಚೆಕುಲ, ಶಾಂತಕುಲ, ಬಿಜ್ಜನಿಗಿಕುಲ, ಅರಸುಕುಲ, ಮೊಸಲಕುಲ, ಸೆಂಕಿನಕುಲ ಎಂಬ ಮೊದಲಾದ ಬೆಡಗುಗಳಿವೆ.

ಪುರುಷ ದೇವರಾದ ಬೀರಲಿಂಗ, ರೇವಣಸಿದ್ಧೇಶ್ವರ, ಕೆಂಚರಾಯ, ಅಮೋಘಸಿದ್ಧೇಶ್ವರ, ಮಾಳಿಂಗರಾಯ ಹಾಗೂ ಹಿರಿಮಾರದಮ್ಮ, ಓರಗಲಮ್ಮ ಹೊಸರಮ್ಮ ಎಲ್ಲಮ್ಮ ಮೊದಲಾದ ದೇವತೆಗಳನ್ನು ಆರಾಧಿಸುತ್ತಾರೆ. ಮಾಂಸಹಾರ ಮತ್ತು ಸಸ್ಯಹಾರಗಳೆರಡೂ ಇವೆ. ರಾಗಿ,ಅಂಬಲಿ ಜೋಳ, ನವಣೆ, ಭತ್ತ ಮೊದಲಾದವು ಪ್ರಮುಖ ಆಹಾರಗಳಾಗಿವೆ. ಹೈನುಗಾರಿಕೆ ಪ್ರಮುಖವಾಗಿರುವುದರಿಂದ ಹಾಲು ಮೊಸರು ತುಪ್ಪ ಸದಾ ದೊರೆಯುತ್ತವೆ.

**೨. ಹತ್ತಿ ಕಂಕಣ**

ಹಾಲುಮತದ ಮತ್ತೊಂದು ಭಾಗವೆಂದರೆ ಹತ್ತಿ ಕಂಕಣ. ಹತ್ತಿಯ ಅನ್ವೇಷಣೆಯ ನಂತರ ಹತ್ತಿ ಕಂಕಣ ಸೃಷ್ಟಿಯಾಗಿರುವ ಸಾಧ್ಯತೆಯಿದೆ. ಹತ್ತಿಕಂಕಣವನ್ನು ಧರಿಸುತ್ತಿದ್ದರಿಂದ ಇವರನ್ನು ಹತ್ತಿಕಂಕಣದವರೆಂದು ಕರೆಯಲಾಗಿದೆ. ಕೃಷಿ ಪ್ರಮುಖ ವೃತ್ತಿಯಾಗಿ ಒಂದೆಡೆ ನೆಲಸಿದ್ದರಿಂದ ಇವರನ್ನು ಊರು ಕುರುಬರೆಂದೂ ಕರೆಯಲಾಗಿದೆ. ಹತ್ತಿ ಕಂಕಣದವರ ಸೃಷ್ಟಿಮೂಲದ ಬಗ್ಗೆ ಇದೇ ಅಧ್ಯಾಯದ ಕುರುಬರ ಪೌರಾಣಿಕ ಮೂಲದಲ್ಲಿ ವಿವರಿಸಲಾಗಿದೆ.

ಹತ್ತಿಗಿಡದ ಆವಿಷ್ಕಾರವು ಕ್ರಿ.ಪೂ. ೧೨೦೦-೧೦೦೦ ದಲ್ಲಿ ಆಗಿರಬಹುದಾದ ಸಾಧ್ಯತೆಯಿದೆ ಎಂದು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ.[೯] ಹತ್ತಿಯ ವಸ್ತ್ರಗಳ ನೇಕಾರಿಕೆ ತಿಳಿದ ಮೇಲೆ ಉಣ್ಣೆ ವಸ್ತ್ರಗಳಿಗೆ ಬೇಡಿಕೆ ಕಡಿಮೆಯಾಯಿತು. ಇದರಿಂದಾಗಿ ಹತ್ತಿ ವಸ್ತ್ರಧರಿಸುವವರು ಉಣ್ಣೆ ವಸ್ತ್ರ ಧರಿಸುವವರಿಗಿಂತಲೂ ಶ್ರೀಮಂತರು ಹಾಗೂ ಉಚ್ಚ ವರ್ಗದವರು ಎಂಬ ಮನೋಭಾವನೆ ಬೆಳೆಯ ತೊಡಗಿತು. ಹೀಗಾಗಿ ಈ ನೇಕಾರಿಕೆಯ ವೃತ್ತಿ ಭೇದ ಪ್ರಾರಂಭವಾಗಿರುವ ಸಾಧ್ಯತೆಯಿದೆ. ಅಂದಿನಿಂದ ಕುರುಬರಲ್ಲಿ ವಿವಾಹ ಸಮಯದಲ್ಲಿ ಹತ್ತಿ ಕಂಕಣ ಕಟ್ಟುವವರು ಹತ್ತಿ ಕಂಕಣದವರೆಂದು, ಉಣ್ಣೆ ಕಂಕಣವನ್ನು ಕಟ್ಟುವವರು ಉಣ್ಣೆ ಕಂಕಣದವರೆಂದು ಗುರುತಿಸತೊಡಗಿದರೆಂದು ಹೇಳಬಹುದಾಗಿದೆ.

ಹತ್ತಿ ಕಂಕಣದವರು ಕರ್ನಾಟಕದ ಬಿಜಾಪುರ, ಧಾರವಾಡ, ಗದಗ, ಬಳ್ಳಾರಿ, ಗುಲ್ಬರ್ಗಾ, ಮೈಸೂರು, ಚಿಕ್ಕಮಗಳೂರು, ಬೆಂಗಳೂರು, ಕೊಪ್ಪಳ, ಮೊದಲಾದ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಕೃಷಿಯು ಪ್ರಧಾನ ವೃತ್ತಿಯಾಗಿದ್ದು, ಪಶುಪಾಲನೆ, ಕುರಿಸಾಕಾಣಿಕೆ ಹಾಗೂ ಕಂಬಳಿ ನೇಯ್ಗೆಯನ್ನು ಉಪವೃತ್ತಿಯನ್ನಾಗಿ ಅವಲಂಬಿಸಿರುವುದು ಕಂಡುಬರುತ್ತದೆ.

ಹತ್ತಿ ಕಂಕಣದವರು ಮೈಲಾರಲಿಂಗ, ರೇವಣಸಿದ್ಧೇಶ್ವರ, ಬೀರಪ್ಪ, ರಾವುತರಾಯ, ಅಮೋಘಸಿದ್ಧ, ಮಾಳಿಂಗರಾಯ, ದುರ್ಗಮ್ಮ, ಮಾಯಮ್ಮ , ಲಕ್ಷ್ಮಮ್ಮ, ಹುಲಿಗೆಮ್ಮ, ಎಲ್ಲಮ್ಮ ಮೊದಲಾದ ದೇವ ದೇವತೆಗಳನ್ನು ಆರಾಧಿಸುತ್ತಾರೆ. ಮಾಂಸಹಾರ ಮತ್ತು ಸಸ್ಯಹಾರಿಗಳಾಗಿದ್ದರೂ ಅಧಿಕವಾಗಿ ಸಸ್ಯಹಾರಕ್ಕೆ ಪ್ರಾಮುಖ್ಯತೆ ನೀಡುತ್ತಾರೆ. ಕುರುಬರು ಜೈನ, ಬೌದ್ಧ ಧರ್ಮಕ್ಕೆ ಮತಾಂತರಗೊಂಡಿದ್ದು, ಜೈನಧರ್ಮ ಅಹಿಂಸೆಗೆ ಪ್ರಾಮುಖ್ಯತೆ ನೀಡಿದ್ದರಿಂದ ಕುರುಬರು ಸಹ ಮಾಂಸಹಾರ ತ್ಯಜಿಸಿ ಸಸ್ಯಹಾರಿಗಳಾದರು. ೧೨ನೇ ಶತಮಾನದಲ್ಲಿಯ ವೀರಶೈವ ಧರ್ಮದ ಪ್ರಭಾವ ಹಾಗೂ ಕುರುಬರೂ ವಚನಕಾರಾಗಿದ್ದರಿಂದ ಸಸ್ಯಹಾರಿಗಳಾಗಿರುವ ಸಾಧ್ಯತೆಯಿದೆ.

ಹತ್ತಿ ಕಂಕಣದವರಲ್ಲಿ ಗಂಡುಗಲಿಯವರು, ಶೆಟ್ಟಲ್ಲವರು, ಮಳ್ಳೆನವರು, ಬೆಣ್ಣೆಲ್ಲವರು, ಮೀಶೆಯವರು, ಗೌಡಲ್ಲೇವರು, ಗಂಟೆಲ್ಲವರೂ, ಸಾವಾಂತನವರು, ಉಂಡೂದವರು, ಹೊನ್ನರಾಯರು, ಬಿಳೇಲ್ಲವರು, ಹುಲಿಣ್ಣವರ, ಬೆನ್ನವರ, ನಡಕೋಟಿಯವರು ಮೊದಲಾದ ಬೆಡಗುಗಳಿವೆ. ಗಂಡಿನವರ, ಹೆಣ್ಣಿನವರ ಬೆಡಗು ಬದಲಾದರೆ ಮಾತ್ರ ವಿವಾಹ ಮಾಡುವುದು ಕಂಡು ಬರುತ್ತದೆ. ಜನನ, ಋತುಮತಿ, ವಿವಾಹ, ಮರಣ ಮೊದಲಾದ ಸಂಸ್ಕಾರಗಳನ್ನು ತಮ್ಮದೇ ರೀತಿಯಲ್ಲಿ ಆಚರಿಸುವುದು ಕಂಡುಬರುತ್ತದೆ.

ಹತ್ತಿ ಕಂಕಣ ಮತ್ತು ಉಣ್ಣೆ ಕಂಕಣದವರು ಪದ್ಮಣ್ಣನ ಮಕ್ಕಳಾದ್ದರಿಂದ ತಮ್ಮನ್ನು ಸಹೋದರರೆಂದು ಭಾವಿಸುತ್ತಾರೆ. ಹೀಗಾಗಿ ಇವರಿಬ್ಬರ ನಡುವೆ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಹತ್ತಿ ಕಂಕಣದವರು ಶ್ರೇಷ್ಠರು, ನಾಡಕುರುಬರು ಎಂದು, ಉಣ್ಣೆ ಕಂಕಣದವರು ಕನಿಷ್ಟರು, ಕಾಡು ಕುರುಬರು (ಹಳೆಕುರುಬರು) ಎಂಬ ಭಾವನೆ ಹೊಂದಿದ್ದಾರೆ. ಆದರೆ ಇವೆರಡೂ ಕಂಕಣದವರ ಸಂಸ್ಕಾರ ಸಂಪ್ರದಾಯಗಳಲ್ಲಿ ಸಾಮ್ಯತೆಯಿರುವುದು ಕಂಡು ಬರುತ್ತದೆ.

**೩.೪.೨ ಹಂಡೆ ಕುರುಬರು**

ಕುರುಬ ಜನಾಂಗದ ಪಂಗಡಗಳಲ್ಲಿ ಹಂಡೆಕುರುಬರ ಪಂಗಡವು ಪ್ರಮುಖವಾದ ಪಂಗಡವಾಗಿದೆ. ಅರಸರು, ಸೇವಾದಳದ ಮುಖ್ಯಸ್ಥರು, ವಜೀರರು, ರಾವುತರಾಗಿ ಆಳ್ವಿಕೆ ನಡೆಸಿದ್ದರು. ಇದರಿಂದಾಗಿ ಹಂಡೆಕುರುಬರಿಗೆ ಹಂಡೆರಾವುತರು, ಹಂಡೆ ವಜೀರರು ಎಂಬ ಹೆಸರುಗಳಿವೆ[೧], ಇವರು ವೀರರು ಶೂರರಾದ ಜನಾಂಗವಾಗಿದ್ದರು. ತಮ್ಮ ಬಾಹುಬಲ, ಶಕ್ತಿಸಾಮರ್ಥ್ಯದಿಂದ ಜನರನ್ನು ಸಂಘಟಿಸಿ,ಕೋಟೆಕೊತ್ತಲಗಳ ನಿರ್ಮಿಸಿ, ಕನ್ನಡ ನಾಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರೆಂದು ತಿಳಿಯುತ್ತದೆ.

**೧. ಹಂಡೆ ಪದದ ಅರ್ಥ**

ಹಂಡೆ ಎಂದರೆ ತಾಮ್ರದ ದೊಡ್ಡ ಪಾತ್ರೆ ಎಂದು ಕರೆಯುವರು[೨]. ಪಶುಪಾಲನೆಯನ್ನು ಮೂಲ ವೃತ್ತಿಯನ್ನಾಗಿಸಿಕೊಂಡ ಕುರುಬರು ತಾಮ್ರದ ಪಾತ್ರೆಯನ್ನು ನೀರು ಅಥವಾ ಹಾಲು ಸಂಗ್ರಹಿಸಲು ಬಳಸುತ್ತಿದ್ದರು. ಹಂಡೆ ಎಂಬ ಪಾತ್ರೆಯನ್ನು ಬಳಸುತ್ತಿದ್ದರಿಂದ ಇವರಿಗೆ ಹಂಡೆ ಕುರುಬರೆಂಬ ಹೆಸರು ಬಂದಿರುವ ಸಾಧ್ಯತೆಯಿದೆ.

ಹಂಡೆ ಎಂದರೆ ಬಿದಿರಿನ ಬೊಂಬು ಅಥವಾ ಟೊಳ್ಳಾದ ವಸ್ತು ಎಂಬರ್ಥವಿದೆ[೩]. ಪ್ರಾಚೀನ ಕಾಲದಲ್ಲಿ ಅಲೆಲೆಮಾರಿಗಳಾಗಿದ್ದ ಇವರಿಗೆ ಸ್ಥಿರವಾದ ಮನೆಗಳಿರಲಿಲ್ಲ. ತಮ್ಮ ಬೆಲೆಬಾಳುವ ವಸ್ತುಗಳನ್ನು ಬಿದಿರು ಬೊಂಬುಗಳಲ್ಲಿಡುತ್ತಿದ್ದರು. ಹೀಗಾಗಿ ಬಿದಿರು ಬೊಂಬಿನಿಂದ ಹಂಡೆ ಎಂಬ ಪದ ನಿಷ್ಪತ್ತಿಗೊಂಡಿರುವುದೆಂಬ ಅಭಿಪ್ರಾಯವಿದೆ[೪].

ಅಂಡೆ-ಅಂಡಾರ್ ಪದವು ಗೋವಳ ಜನಾಂಗದೊಳಗಿನ ಅಂಧಕ-ವೃಷ್ಟಿ ಎಂಬ ಪಂಗಡದ ಪೂರ್ವೋತ್ತರವನ್ನು ತಿಳಿಯಲು ಉಪಯುಕ್ತವಾಗಿದೆ[೫]. ಸಂಸ್ಕೃತ ಪದ ಅಂಧ-ಅಂಧಕ, ಕಂದಮಿಳದ ಅಂಡೆ-ಅಂಡಾರ ಪದಗಳನ್ನು ಹೋಲುವುದು ಕಂಡುಬರುತ್ತದೆ. ಹಾಗೆಯೇ ಇದು ಧನಗಾರ ಪಂಗಡಕ್ಕೆ ಸಂಬಂಧಿಸಿದ್ದಾಗಿದೆ ಎಂದು ಶಂಬಾ ಜೋಶಿಯವರು ಅಭಿಪ್ರಾಯ ಪಟ್ಟಿದ್ದಾರೆ[೬].

ವೀರ ಜನಾಂಗವಾದ ಕುರುಬರಲ್ಲಿ ವೀರಕುಲದವರೆಂದು ಗುರುತಿಸಲ್ಪಟ್ಟವರು ಅಂಡೆರಾವುತರು, ಅಂಡೆ ವಜೀರರು ಅಥವಾ ಅಂಡೆಕುರುಬರು. ಅಂಡೆ ಎಂಬ ನುಡಿ ದ್ರಾವಿಡ ಪದವಾಗಿದ್ದು, ಒಡೆತನದ ದ್ಯೋತಕವಾಗಿದೆ. ಕುರುಬರ ಒಳಬಣಗಳಿಗೆ ರಾಜಕುಲ, ಗೌಡಕುಲ, ಅರಸುಕುಲ, ಸಂಗಮಕುಲ, ಒಡೆಯರಕುಲ, ಸಾಮಂತಕುಲ ಎಂಬ ಹೆಸರುಗಳು ರೂಢಿಯಲ್ಲಿವೆ ಎಂದು ಡಾ.ಪಿ.ಬಿ.ದೇಸಾಯಿಯವರು ಅಭಿಪ್ರಾಯಪಡುತ್ತಾರೆ[೭].

## ೨. ಪೌರಾಣಿಕ ಮೂಲ

ಅಂಧಕ ಅಥವಾ ಅಂಡೆಕುರುಬರ ಬಗ್ಗೆ ಶಿವ ಪುರಾಣದಲ್ಲಿ ಈ ರೀತಿ ಹೇಳಲಾಗಿದೆ. ಶಿವನು ಕಾಶೀಕ್ಷೇತ್ರದ ಮಂದಾರ ಪರ್ವತದಲ್ಲಿ ವಿಹಾರ ಮಾಡುತ್ತಿದ್ದನು. ಅದೇ ಸಮಯದಲ್ಲಿ ಪಾರ್ವತಿದೇವಿ ಪರಮೇಶ್ವರನ ಎರಡೂ ಕಣ್ಣುಗಳನ್ನು ತನ್ನ ಕೈಗಳಿಂದ ಮುಚ್ಚಿದಳು. ತಕ್ಷಣ ಶಿವನಿಗೆ ಕತ್ತಲು ಆವರಿಸಿತು. ಪಾರ್ವತಿಯ ಕೈಗಳು ಬೆವರಿನಿಂದ ಕೂಡಿದ್ದರಿಂದ ಜಾರಿದವು. ಅದರಿಂದಾಗಿ ಶಿವನ ಹಣೆಯಿಂದ ಬಿಸಿಯಾದ ನೀರು ಹೊರಟಿತು. ಆ ನೀರಿನಿಂದ ಕ್ರೂರವಾದ ಮುಖವುಳ್ಳ, ಕೋಪಿಷ್ಟನಾದ ದೈತ್ಯನೊಬ್ಬನು ಜನಿಸಿದನು.[೮] ಅಂದವಿಕಾರದ ರೂಪವುಳ್ಳ ದೈತ್ಯನನ್ನು ಕಂಡು ಶಿವನು ಗೌರಿಯನ್ನು ಕುರಿತು ದೇವಿಯೇ ನೀನು ನನ್ನ ಕಣ್ಣುಗಳನ್ನು ಮುಚ್ಚಿದ್ದರಿಂದ ಈ ವಿಕಾರ ಸ್ವರೂಪನಾದ ಅಂಧಕನು ಹುಟ್ಟಿದನೆಂದು ತಿಳಿಸಿದನು. ಮಹಾ ಪರಾಕ್ರಮಿಯಾದ ಇವನನ್ನು ನಿನ್ನ ಪುತ್ರನಂತೆ ಕಾಪಾಡಬೇಕೆಂದು ಹೇಳಿದನು.

ಕಶ್ಯಪನ ಪುತ್ರನಾದ ಹಿರಣ್ಯಾಕ್ಷನು ಪುತ್ರಸಂತಾನಕ್ಕಾಗಿ ಅರಣ್ಯದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಇವನ ತಪಸ್ಸಿಗೆ ಮೆಚ್ಚಿದ ಶಿವನು ವರವನ್ನು ಕೇಳಲು ತಿಳಿಸಿದನು. ಆಗ ಹಿರಣ್ಯಾಕ್ಷನು ನಮ್ಮಣ್ಣನಾದ ಹಿರಣ್ಯಕಶ್ಯಪನಿಗೆ ಪ್ರಹ್ಲಾದ ಮೊದಲಾದ ಐದು ಜನ ಮಕ್ಕಳಿರುವರು, ಆದರೆ ನನಗೆ ಒಬ್ಬ ಮಗನೂ ಇಲ್ಲ. ಆದ್ದರಿಂದ ನನಗೆ ಮಗನನ್ನು ಕರುಣಿಸೆಂದು ಕೇಳಿಕೊಂಡನು. ಶಿವನು ಹಿರಣ್ಯಾಕ್ಷ ನಿನ್ನ ವೀರ್ಯದಿಂದ ಉತ್ಪನ್ನವಾಗುವ ಪುತ್ರಯೋಗವು ನಿನಗಿಲ್ಲ ಅದಕ್ಕಾಗಿ ನಿನ್ನಷ್ಟೇ ಪರಾಕ್ರಮಿಯಾದ ನನ್ನ ಪುತ್ರ ಅಂಧಕನನ್ನು ಸ್ವೀಕರಿಸೆಂದು ತಿಳಿಸಿದನು.

ಹಿರಣ್ಯಾಕ್ಷ ಶಿವನ ಪುತ್ರನಾದ ಅಂಧಕನನ್ನು ಸ್ವೀಕರಿಸಿ ಆವಂತಿ (ಉಜ್ಜಯಿನಿ) ಕ್ಷೇತ್ರಕ್ಕೆ ಕರೆದೊಯ್ದನು. ನಂತರ ಅಂಧಕನ

ಸಹಾಯದಿಂದ ಹಿರಣ್ಯಾಕ್ಷನು ರಾಜ್ಯಭಾರ ಮಾಡಿದನು. ಹಿರಣ್ಯಾಕ್ಷನ ನಿಧನದ ನಂತರ ಅಂಧಕ ರಾಜ್ಯಭಾರ ವಹಿಸಿಕೊಂಡನು. ಅಧಿಪತಿಯಾದ ಮೇಲೆ ಪಾರ್ವತಿಯನ್ನು ವಶಪಡಿಸಿಕೊಳ್ಳುವ ಯೋಜನೆ ಹಾಕಿದ್ದನು. ಹೀಗಾಗಿ ಅಂಧಕ ಹಾಗೂ ಶಿವನ ನಡುವೆ ಉಜ್ಜೈನಿಯ ಮಂದರ ಪರ್ವತದಲ್ಲಿ ಯುದ್ಧನಡೆಯಿತು. ಸೋತು ಶರಣಾದ ಅಂಧಕನು ಶಿವನ ಪರಿವಾರದಲ್ಲಿ ಒಬ್ಬನಾದನು. ಇದರಿಂದಾಗಿ ಅಂಧಕ ಶಬ್ದವು ರಾಕ್ಷಸವಾಚಕದ ಸಂಕೇತವಾಗಿದೆ.[೯೯] ಆರ್ಯೀಕರಣಕ್ಕೆ ಒಳಗಾದ ಮೇಲೆ ಅಂಧಕ ಎಂಬ ಜನರು ದಕ್ಷಿಣದ ಭಾಗಕ್ಕೆ ಬಂದರು. ನಂತರದಲ್ಲಿ ಅಂಧಕ ಪದ ಅಂಡೆ ಎಂದು ಪರಿವರ್ತನೆಗೊಂಡಿತೆಂಬ ಅಭಿಪ್ರಾಯವಿದೆ. ಈ ಹಿನ್ನೆಲೆಯಲ್ಲಿ ಅಂಧಕ ರಾಕ್ಷಸನ ವಂಶಸ್ಥರು ನಂತರದಲ್ಲಿ ಹಂಡೆ ವಂಶಸ್ಥರಾದರೆಂದು ತಿಳಿಯುತ್ತದೆ.

### ೩. ಐತಿಹಾಸಿಕ ಮೂಲ

ಹಂಡೆಕುರುಬರು ಯಾದವರ ಸಂಬಂಧಿಗಳೆಂದು, ದ್ರಾವಿಡ ಭಾಷಾ ಪರಿವಾರದವರೆಂದು ಅನೇಕ ವಿದ್ವಾಂಸರ ಅಭಿಪ್ರಾಯವಿದೆ.[೧೦೦] ಕ್ರಿ.ಪೂ. ೨ನೇಶತಮಾನದ ತಮಿಳು ಕವಿಯೊಬ್ಬನು ಕೃಷ್ಣನ ಲೀಲೆಗಳ ವರ್ಣಿಸುವಾಗ ಯಾದವ ಸ್ತ್ರೀಯರಿಗೆ "ಅಂಡರ್ ಮಹಿಳಿರ್" ಎಂದಿರುವನು. ಅಂದರೆ ಗೋಪಾಲಕರಾದ ಯಾದವರು ಅಂಡರ್ ಅಂದರೆ ಅಂಡೆಕುರುಬರ ಪಂಗಡದವರೆಂದು ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ಅಭಿಪ್ರಾಯಪಟ್ಟಿದ್ದಾರೆ. ಅದೇ ರೀತಿ ಪ್ರಾಚೀನ ತಮಿಳು ಸಾಹಿತ್ಯವಾದ ನಾಲಾಯರ್ ದಿವ್ಯ ಪ್ರಬಂಧದಲ್ಲಿ "ಅಂಡರ್ ಮಿಡಿಪುದು" ಎಂಬ ಉಲ್ಲೇಖವಿದೆ.[೧೦೧] ಅಂಡರ್ ಅಂದರೆ ಯಾದವ ಸ್ತ್ರೀಯರು ಸ್ನಾನಮಾಡಿ ಶ್ರೀಕೃಷ್ಣ ಪರಮಾತ್ಮನಿಗೆ ಸಾಮೂಹಿಕವಾಗಿ ಪ್ರಾರ್ಥನೆ ಸಲ್ಲಿಸಿದರು ಎಂಬ ಅರ್ಥವಿದೆ. ಇದರಿಂದಾಗಿ ಹಂಡೆಕುರುಬರು ಮೂಲತಃ ಗೋಪಾಲಕರು ಅಥವಾ ಯಾದವರಾಗಿದ್ದು, ಹೈನದ ವ್ಯವಹಾರ ಮಾಡಿಕೊಂಡಿದ್ದರೆಂದು ತಿಳಿಯುತ್ತದೆ.

ಪ್ರಾಚೀನ ತಮಿಳು ಸಾಹಿತ್ಯದ ಶಿಲಪ್ಪದಿಗಾರಂ ಎಂಬ ಕೃತಿಯಲ್ಲಿ ಇಡೈಯರ್, ಕುರುಂಬರ್, ವಡುಗರ್ ಎಂಬ ಮೊದಲಾದ ಕನ್ನಡ ಹಟ್ಟಿಕಾರರ ಉಲ್ಲೇಖಗಳಿವೆ. ಇದರಿಂದ ಕ್ರಿ.ಪೂ. ೨ನೇ ಶತಮಾನದಲ್ಲಿ ಈ ಸಮುದಾಯ ತನ್ನ ಸ್ವತಂತ್ರ ಅಸ್ತಿತ್ವ ಪಡೆದುಕೊಂಡಿತ್ತೆಂದು ತಿಳಿಯುತ್ತದೆ.[೧೦೨] ಹಾಗೆಯೇ ಕ್ರಿ.ಶ.೨ನೇ ಶತಮಾನದಲ್ಲಿದ್ದ ಪ್ರಸಿದ್ಧ ಪ್ರವಾಸಿ ಟಾಲೆಮಿ ತನ್ನ ಕೃತಿಯಾದ ಭೂಗೋಳ ವಿಜ್ಞಾನ ಕೈಪಿಡಿಯಲ್ಲಿ ಹಂಡೆಕುರುಬರ ಹೆಸರನ್ನು ಉಲ್ಲೇಖಿಸಿದ್ದಾನಲ್ಲದೇ ಇವರನ್ನು ಕಾಡಾಡಿಗಳು ಎಂದು ಅಭಿಪ್ರಾಯಪಟ್ಟಿದ್ದಾನೆ[೧೦೩].

ಹಂಡೆಕುರುಬರಲ್ಲಿ ರಾಜಕುಲ, ಗೌಡಕುಲ, ಅರಸುಕುಲ, ಸಂಗಮಕುಲ, ಒಡೆಯರಕುಲ, ಸಾಮಂತಕುಲ ಎಂಬ ಕುಲಗಳಿವೆ.[೧೦೪] ಈ ಕುಲಗಳ ಆಧಾರದ ಮೇಲೆ ಹಂಡೆಕುರುಬರು ರಾಜಸೂತ್ರ ಹಿಡಿದು ಆಡಳಿತ ಮಾಡಿದ ಕ್ಷತ್ರಿಯ ಕುಲಕ್ಕೆ ಸಂಬಂಧಪಟ್ಟವರೆಂದು ದೃಢಪಡುತ್ತದೆ. ಇಂದಿಗೂ ಹಂಡೆ ಕುರುಬರು ತಮ್ಮನ್ನು ಕ್ಷತ್ರಿಯ ಕುಲದವರೆಂದು ಕರೆದುಕೊಳ್ಳುವುದನ್ನು ಕಾಣಬಹುದಾಗಿದೆ.

ಕುರುಬರ ಮೂಲ ಪಂಗಡವಾದ ಹಾಲುಮತದಿಂದ ಬೇರ್ಪಟ್ಟ ಪಂಗಡಗಳಲ್ಲಿ ಹಂಡೆ ಕುರುಬರ ಪಂಗಡವೂ ಒಂದಾಗಿದೆ. ಇವರು ಮೂಲತಃ ಪಶುಪಾಲಕರಾಗಿದ್ದರು. ಆದರೆ ಕುರಿಗಾರರಾಗಿರಲಿಲ್ಲ. ಗುಡ್ಡ ಬೆಟ್ಟಗಳಲ್ಲಿ ವಾಸಿಸುತ್ತಿದ್ದ ಹಂಡೆ ಕುರುಬರು

ಒರಟು ಸ್ವಭಾವದವರಾಗಿದ್ದರು. ಸಾಹಸಿಗಳು, ಯುದ್ಧಪ್ರಿಯರಾಗಿದ್ದರಿಂದ ಅನೇಕ ರಾಜಮನೆತನದವರು ಸೈನಿಕರನ್ನಾಗಿ ನೇಮಿಸಿಕೊಂಡರು. ಕುದುರೆ ಸವಾರಿಯಲ್ಲಿ ಪ್ರಾವಿಣ್ಯತೆ ಹೊಂದಿದ್ದ ಹಂಡೆ ಕುರುಬರು ಹಂಡೆರಾವುತರೆಂದು ಪ್ರಸಿದ್ಧಿಗೊಂಡರು.

ಹಂಡೆರಾವುತರೆಂಬ ಹೆಸರಿನಿಂದ ಪ್ರಸಿದ್ಧಿಗೊಂಡ ಹಂಡೆ ಕುರುಬರು ಅನೇಕ ರಾಜ ಮನೆತನಗಳಲ್ಲಿ ಉನ್ನತ ಪದವಿಗಳನ್ನು ಪಡೆದುಕೊಂಡರು. ಶಾತವಾಹನ, ಹೊಯ್ಸಳ, ಮೈಸೂರಿನ ಒಡೆಯರು, ಹೈದರಾಲಿ, ಟಿಪ್ಪು, ಶಿವಾಜಿಯ ಕಾಲದಲ್ಲಿ ಉತ್ತಮ ಕುದುರೆ ಸವಾರರಾಗಿದ್ದರೆಂದು ತಿಳಿಯುತ್ತದೆ. ವಿಜಯನಗರ ಸಾಮ್ರಾಜ್ಯ ಪತನವಾದ ನಂತರ ಸ್ವತಂತ್ರವಾದ ಪಾಳೆಯಗಾರಿಕೆಯನ್ನು ಪ್ರಾರಂಭಿಸಿದರು. ಬಳ್ಳಾರಿ ಹಂಡೆ ಪಾಳೆಯಗಾರರು, ಅನಂತಪುರದ ಹಂಡೆ ಪಾಳೆಯಗಾರರಾಗಿ ರಾಜ್ಯಭಾರ ಮಾಡಿದರು. ಹೊಯ್ಸಳರ ೨ನೇ ಬಲ್ಲಾಳನ ತಾಮ್ರ ಶಾಸನದಲ್ಲಿ ಹಂಡೆ ಕುರುಬರನ್ನು ಕುರಿತು ಈ ರೀತಿ ಹೇಳಲಾಗಿದೆ[೧೦೫].

ಶ್ರೀಮತು ಹಂಡೆವಜೀರ ಮುಂಮದಿ ದವಳ ಇರಾಗರಾಹು
ತಗೆ ಬರಸಿಕೊಟ್ಟ ನಿರುಪ ಆದಗಿ ಪಡವಲು ಬರಕನೂ
ರ ಮೇಲೆ ಲಡಯ ಮಾಡಿ ಜಯಿಸಿ ನಾಮ ನಿಸನಿ
ಹಾಕಿ ಮರ್ಜಲ ತೆಗೆದುಕೊಂಡು ಬಂದು ಸಲ
ಮುಮಡಿ ನಿನಿಂತೆಯಿಂದ ಕಾಣ ನಿಂನ ಪರಾಕ್ರಮ
ಕೆಮೆಚಿ ಯಿಟ್ಟ ಬಂದದ ಕೇಳಿಕೋಯಂದಲಿ ನೀ
ನು (ಕೇ)ಳಿ ಕೊಂಡನು ನನಗೆ ಮರುಕು ಸ್ವಸ್ತಿ ಬುವಿದೇವರು
ಮುಂತಗಿ ನೇಮಕ ಮಡಿಸಿ ಕೊಡಬೇಕೆಂಬುದಗಿ
ಅರ್‍ರಿಕೆಯ ಮಾಡಿಕೊಂಡ ಶರಣ ಆಸಂದಿ ನಾಡೊಳಗಣ
ಕನಗುಡದ ಪಡುವಣ ಬುಮಿಗೆ ಗ್ರಾಮ ಪ್ರತಿಷ್ಠ್ಯ
ಮಡ್ಡಿ ಗುಡ್ಡದ ಮೇಲೆ ರಾಗನಾತ ದೇವರ ನೆಲಸಿ
ಯಿ ದೇವರ್‍ರಿ (ಗೆ) ದೀಪರದೆಸಿಗೆ ಭೋಗೋತರ ಕೊ(ಟ್ಟು)
ಸ್ವೇತ, ಚತ್ರಿ, ಹಗಲ ದೀವಿಗೆಗೆ ಮಕರ ತೋರಣ (ಕೊ)ಟ್ಟ.

ದಳವಾಯಿ ಮುಮ್ಮಡಿ ರಂಗರಾವುತನೆಂಬುವನು ಬಾರಕೂರು ಯುದ್ಧದಲ್ಲಿ ಗೆದ್ದು ಬಂದಿದ್ದನು ಅವನ ಶೌರ್ಯ, ಸಾಹಸಕ್ಕೆ ಮೆಚ್ಚಿ, ಅವನ ಇಚ್ಛೆಯಂತೆ ಒಂದು ದೇವಾಲಯ ನಿರ್ಮಿಸಿದನಲ್ಲದೆ, ನಾಲ್ಕು ಗ್ರಾಮಗಳನ್ನು ಉಂಬಳಿಯಾಗಿ ನೀಡಿದನೆಂದು ಮೇಲಿನ ದತ್ತಿ ಶಾಸನ ಉಲ್ಲೇಖಿಸುತ್ತದೆ. ಇದರಿಂದಾಗಿ ಹಂಡೆ ಕುರುಬರು ಹೊಯ್ಸಳರ ಕಾಲದಲ್ಲಿ ಕುದುರೆ ಸವಾರರಾಗಿದ್ದರೆಂಬುದು ಸ್ಪಷ್ಟಪಡುತ್ತದೆ.

ಹಂಡೆ ಕುರುಬರಲ್ಲಿ ಸಿದ್ದಣ್ಣಗೌಡ, ಭೀಮನಗೌಡ, ಹನುಮಪ್ಪಗೌಡ, ಮಲಕಪ್ಪಗೌಡ, ರಾಮಣ್ಣಗೌಡ, ಮುದ್ದುಗೌಡ, ಕಲ್ಲಣ್ಣಗೌಡ, ನಿಂಗಣ್ಣಗೌಡ, ಕರಿಗೌಡ, ಲಕ್ಕಪ್ಪಗೌಡ, ಎಂಬ ಅಂಕಿತನಾಮಗಳಿವೆ. ಕೆಲವು ಪ್ರದೇಶದಲ್ಲಿ ಗೌಡ ಪದದ ಬದಲಿಗೆ ನಾಯಕ, ದೇಸಾಯಿ ಎಂದೂ ಕರೆಯುತ್ತಾರೆ. ಇವರು ಕುರುಬರು ಆಚರಿಸುವ ವಿಧಿ ವಿಧಾನಗಳನ್ನು ಅನುಸರಿಸುವುದು ಕಂಡುಬರುತ್ತದೆ.

೧೨ನೇ ಶತಮಾನದಲ್ಲಾದ ವೀರಶೈವ ಧರ್ಮದ ಪ್ರಭಾವದಿಂದಾಗಿ ಇಂದಿಗೂ ಹಂಡೆ ಕುರುಬರು ತಮ್ಮನ್ನು ಲಿಂಗಾಯತ ಕುರುಬರೆಂದು ಹೇಳಿಕೊಳ್ಳುತ್ತಾರೆ. ಜನನ, ಋತುಮತಿ, ಮದುವೆ, ಮರಣ ಮೊದಲಾದ ಸಂದರ್ಭಗಳಲ್ಲಿ ವೀರಶೈವ ಧರ್ಮದವರ ಆಚರಣೆಗಳ ಪ್ರಭಾವವೇ ಅಧಿಕವಾಗಿ ಕಂಡುಬರುತ್ತದೆ.

ಕುರುಬರು ಆರಾಧಿಸುವ ದೇವ-ದೇವತೆಗಳನ್ನು ಹಂಡೆ ಕುರುಬರು ಆರಾಧಿಸುವುದು ಕಂಡುಬರುತ್ತದೆ. ಮೈಲಾರಲಿಂಗ, ರೇವಣಸಿದ್ದೇಶ್ವರ ಪ್ರಮುಖ ಆರಾಧ್ಯ ದೇವರುಗಳಾಗಿದ್ದಾರೆ. ಅಮೋಘಸಿದ್ಧ, ಕರೆಸಿದ್ಧ, ಬೀರಪ್ಪ, ರಾವುತರಾಯ, ಎಲ್ಲಮ್ಮ, ಬನಶಂಕರಿ ಮೊದಲಾದ ದೇವರುಗಳನ್ನು ಆರಾಧಿಸುತ್ತಾರೆ. ಪ್ರತಿವರ್ಷ ಎಲ್ಲಮ್ಮನ ಜಾತ್ರೆಯಲ್ಲಿ ಉಟಗಿ ಉಟ್ಟು ಹರಕೆ ಸಲ್ಲಿಸುತ್ತಾರೆ. ಕೆಲವೆಡೆ ವೀರಭದ್ರನ ಗುಗ್ಗಳ ಕಾರ್ಯ ಮಾಡುತ್ತಾರೆ. ಧಾರ್ಮಿಕ ಆಚರಣೆಯಲ್ಲಿ ಕಂಬಳಿಯನ್ನು ಪ್ರಧಾನವಾಗಿ ಬಳಸುತ್ತಾರೆ. ಹಂಡೆ ಕುರುಬರಲ್ಲಿ ಹೆಚ್ಚಾಗಿ ಮಾಂಸಹಾರ ಕಂಡುಬರುವುದಿಲ್ಲವೆಂದು ಹೇಳಬಹುದು.

ಹಂಡೆಕುರುಬರು, ಕುರುಬರಂತೆ ಕುರಿಸಾಕಾಣಿಕೆ ಮಾಡುವುದಿಲ್ಲ. ಆದರೆ ಕಂಬಳಿಗಳನ್ನು ನೇಯುತ್ತಾರೆ, ಕುರಿಗಳ ಬದಲಿಗೆ ಆಕಳು, ದನಗಳನ್ನು ಸಾಕುತ್ತ ಹೈನುಗಾರಿಕೆ ಮಾಡುವುದು ಕಂಡುಬರುತ್ತದೆ. ಕೃಷಿ ಇವರಿಗೆ ಪ್ರಧಾನ ವೃತ್ತಿಯಾಗಿದೆ. ಇಂದಿನ ಆಧುನಿಕತೆಯ ಪ್ರಭಾವದಿಂದಾಗಿ ವಿವಿಧ ರೀತಿಯ ಉದ್ಯೋಗಗಳನ್ನು ಅವಲಂಬಿಸಿದ್ದಾರೆ.

ಒಟ್ಟಾರೆ ಹಂಡೆ ಕುರುಬರು, ತಮ್ಮ ವೀರ, ಶೂರ, ಪರಾಕ್ರಮಗಳಿಂದ ರಾಜಕೀಯದಲ್ಲಿ ಉತ್ತಮ ಸ್ಥಾನ ಪಡೆದು ಹಂಡೆರಾವುತರು, ಹಂಡೆ ವಜೀರರು, ಹಂಡೆ ಪಾಳೆಯಗಾರರಾಗಿ ಆಳ್ವಿಕೆ ನಡೆಸಿದರು. ಅನೇಕ ರಾಜಮನೆತನಗಳ ಏಳು-ಬೀಳುಗಳಿಗೆ ಕಾರಣವಾದ ಹಂಡೆ ಕುರುಬರು ಕನ್ನಡ ನಾಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ, ಚರಿತ್ರೆಯಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದಿದ್ದಾರೆಂಬುದು ಸ್ಪಷ್ಟ.

### ೩.೪.೩ ಕಾಡು ಕುರುಬರು

ಕುರುಬರ ಅನೇಕ ಉಪಪಂಗಡಗಳಲ್ಲಿ ಕಾಡು ಕುರುಬರ ಪಂಗಡವೂ ಒಂದಾಗಿದೆ. ಕಾಡು ಕುರುಬರು ಮೂಲತಃ ಕಾಡಿನ ವಾಸಿಗಳು ಬೇಟೆಗಾರರಾಗಿದ್ದರು. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುವ ಅಲೆಮಾರಿಗಳಾಗಿದ್ದಾರೆ. ಇಂದು ಬೇಟೆಯನ್ನು ನಿಷೇಧಿಸಿರುವುದರಿಂದ ಕಾಡು ಕುರುಬರು ಬುಟ್ಟೆಹೆಣೆಯುವ, ಮರದ ಕೆಲಸಗಳಲ್ಲಿ ನಿರತರಾಗಿದ್ದಾರೆ. ಮೈಸೂರು ಜಿಲ್ಲೆಯ ಬಂಡೀಪುರ, ಹುಣಸೂರ, ಪಿರಿಯಾಪಟ್ಟಣ, ನಾಗರಹೊಳೆ, ಹೆಗ್ಗಡದೇವನ ಕೋಟೆ ಅರಣ್ಯಗಳಲ್ಲಿ ಅಧಿಕವಾಗಿ ಕಂಡುಬರುತ್ತಾರೆ[೧೦೬]. ಕುರುಬರ ಒಂದು ಪಂಗಡವಾದರೂ ತಮ್ಮದೇ ಆದ ಜೀವನ, ಸಂಸ್ಕೃತಿಯನ್ನು ಹೊಂದಿರುವುದನ್ನು ಕಾಣಬಹುದು.

#### ೧. ಪೌರಾಣಿಕ ಮೂಲ

ಒಂದು ಕಾಲದಲ್ಲಿ ಭೂಮಿಯ ಮೇಲೆ ಯಾವುದೇ ಜೀವರಾಶಿಗಳಿರಲಿಲ್ಲ, ಭೂಮಿ ಬದಲಿಗೆ ಎಲ್ಲೆಡೆ ನೀರು ಕಾಣುತ್ತಿತ್ತು. ಒಂದು ಬಾರಿ ನೀರಿನ ಪ್ರಮಾಣ ಕಡಿಮೆಯಾದಾಗ ಆ ನೀರಿನಿಂದ ಅಣ್ಣ-ತಂಗಿಯರಿಬ್ಬರು ಎದ್ದು ಬರುತ್ತಾರೆ. ಅವರಿಬ್ಬರು

ಅಣ್ಣ–ತಂಗಿಯರಾದ್ದರಿಂದ ಲೈಂಗಿಕ ಸಂಬಂಧದಿಂದ ವಂಶ ಬೆಳೆಸಲು ಅವಕಾಶವಿಲ್ಲದಂತಾಯಿತು. ಆಗ ಅವರಿಬ್ಬರು ಶಿವನನ್ನು ಪ್ರಾರ್ಥಿಸುತ್ತಾರೆ. ಶಿವ ಪ್ರತ್ಯಕ್ಷಗೊಂಡು ಅವರ ಸಮಸ್ಯೆ ನಿವಾರಿಸಲು ಒಂದು ಉಪಾಯ ಹೇಳುತ್ತಾನೆ. ಅವರಿಬ್ಬರನ್ನು ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸುತ್ತಾನೆ. ನಂತರ ವಿರುದ್ಧ ದಿಕ್ಕಿನಲ್ಲಿ ನಿಂತವರು ಪರಸ್ಪರ ನೋಡಿಕೊಂಡಾಗ ಅಣ್ಣ–ತಂಗಿಯರ ಬದಲಿಗೆ ಗಂಡ–ಹೆಂಡತಿಯರಾಗಿರುತ್ತಾರೆ. ಅವರಿಂದ ವಂಶ ಬೆಳೆಯುತ್ತದೆ. ಅವರ ವಂಶಸ್ಥರನ್ನು ಕಾಡು ಕುರುಬರೆಂದು ಕರೆಯಲಾಗುತ್ತದೆ[೧೦೭]. ಪೌರಾಣಿಕ ಮೂಲ ಏನೇಯಿದ್ದರೂ ಶಿವನೇ ಸೃಷ್ಟಿಕರ್ತ ಎಂಬ ಅಂಶವನ್ನು ಇಲ್ಲಿ ಕಾಣಬಹುದಾಗಿದೆ.

### ೨. ಐತಿಹಾಸಿಕ ಮೂಲ

ಕುರುಂಬ ಅಥವಾ ಕುರುಬ ಜನರು ದಕ್ಷಿಣ ಭಾರತದಲ್ಲಿ ಬಹಳ ಪ್ರಬಲರಾಗಿದ್ದ ಪಲ್ಲವರ ಅಥವಾ ಪುರಾತನ ಕುರುಬರ ಆಧುನಿಕ ಪ್ರತಿನಿಧಿಗಳಾಗಿದ್ದರು[೧೦೮]. ಪಲ್ಲವ (ಕುರುಬ)ರು ರಾಜ್ಯಭಾರ ಮಾಡುತ್ತಿದ್ದಾಗ ಕೊಂಗು, ಚೋಳ, ಚಾಲುಕ್ಯ ಮೊದಲಾದ ರಾಜವಂಶಗಳು ಪ್ರಬಲಗೊಂಡವು. ನಂತರ ಪಲ್ಲವರ ಮೇಲೆ ಆಕ್ರಮಣಮಾಡಿ ಸೋಲಿಸಿದರು. ಸೋತ ಪಲ್ಲವರು ಪಲಾಯನ ಮಾಡಿದರು. ಅನೇಕರು ಬೆಟ್ಟ ಗುಡ್ಡ ಪ್ರದೇಶಗಳಿಗೆ ಹೋಗಿ ನೆಲೆಸಿದರು. ಹಲವರು ಮಲಬಾರ, ನೀಲಗಿರಿ, ಕೊಡಗು, ವೈನಾಡ್ ಹಾಗೂ ಮೈಸೂರು ರಾಜ್ಯಗಳ ಅರಣ್ಯಗಳಲ್ಲಿ ಆಶ್ರಯ ಪಡೆದರು[೧೦೯]. ಹೀಗೆ ನಾಗರಿಕ ಜನಸಮುದಾಯದಿಂದ ದೂರವಾದ ಕುರುಬರು ಕಾಡಿನ ವಾಸಿಗಳಾಗಿ ಕಾಡು ಕುರುಬರೆಂದು ಗುರುತಿಸಲ್ಪಟ್ಟರು.

ದೈಹಿಕ ಮಾನವಶಾಸ್ತ್ರದ ಆಧಾರದ ಮೇಲೆ ಕಾಡು ಕುರುಬರು, ಊರು ಕುರುಬರಿಗಿಂತ ಭಿನ್ನವಾದವರು ಎಂದು ಥರ್ಸ್ಟನ್ ಅಭಿಪ್ರಾಯಪಟ್ಟಿದ್ದಾರೆ[೧೧೦]. ಕಾಡಿನ ವಾಸಿಗಳಾಗಿದ್ದು ಬೆತ್ತ ಅಥವಾ ಬಿದಿರನ್ನು ಬಳಸಿ ಮರ, ಬುಟ್ಟಿ ಮೊದಲಾದ ವಸ್ತುಗಳನ್ನು ತಯಾರಿಸುವ ಬುಡಕಟ್ಟಿನ ಜನರನ್ನು ಬೆಟ್ಟ,ಬೆತ್ತ ಅಥವಾ ಕಾಡುಕುರುಬರೆಂದು ಕರೆಯಲಾಗುತ್ತದೆ.

ಕಾಡುಕುರುಬರು ಗಿಡ್ಡ ಅಥವಾ ಎತ್ತರವಲ್ಲದ ಮಧ್ಯಮ ಎತ್ತರದ ದೇಹವನ್ನು ಹೊಂದಿದ್ದಾರೆ[೧೧೧]. ಉದ್ದವಾದ ಅಥವಾ ಸ್ವಲ್ಪ ಗುಂಡಾಗಿರುವ ತಲೆ, ಗುಂಗುರು ಕೂದಲು, ಅಗಲವಾದ ಮುಖ, ದಪ್ಪವಾದ ತುಟಿಗಳನ್ನು ಹೊಂದಿದ್ದು, ಕಪ್ಪು ಅಥವಾ ಕಪ್ಪು ಮಿಶ್ರಿತ ಕಂದು ಬಣ್ಣದ ಚರ್ಮವನ್ನು ಹೊಂದಿದವರಾಗಿದ್ದಾರೆ. ಕಾಡಿನ ವಾಸಿಗಳಾದ್ದರಿಂದ ದೈಹಿಕ ಸೌಂದರ್ಯದ ಕಡೆ ಅಧಿಕ ಒಲವಿಲ್ಲದಿರುವುದು ಕಂಡುಬರುತ್ತದೆ.

ಕಾಡುಕುರುಬರು ವಾಸಮಾಡುವ ಪ್ರದೇಶವನ್ನು ಹಾಡಿ ಎನ್ನಲಾಗಿದೆ[೧೧೨]. ತಗ್ಗಾದ, ಚಿಕ್ಕದಾದ ಗುಡಿಸಲುಗಳೇ ಇವರ ಮನೆಗಳಾಗಿವೆ. ನೀರಿನ ಸೌಕರ್ಯಗಳಿರುವ ಪ್ರದೇಶಗಳಲ್ಲಿ ಕಾಡಿನಲ್ಲಿ ದೊರೆಯುವ ಬಿದಿರು, ಹುಲ್ಲು, ಗರಿಗಳನ್ನು ಬಳಸಿಕೊಂಡು ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಗುಡಿಸಲುಗಳನ್ನು ಪ್ರವೇಶಿಸುವ ಸಮಾರಂಭವನ್ನು ಹೊಸಮನೆ ಸೇರುವುದು ಎಂದು ಕರೆಯುತ್ತಾರೆ[೧೧೩]. ಕೆಲವು ಮಣ್ಣಿನ, ಬಿದಿರಿನ, ಕಂಚಿನ ಪಾತ್ರೆಗಳು ಹಾಗೂ ಚಾಪೆಗಳನ್ನು ಬಿಟ್ಟರೆ ಮತ್ತಾವ ಪಿಠೋಪಕರಣಗಳು ಕಂಡುಬರುವುದಿಲ್ಲ. ತುಂಬ ಸರಳ ಜೀವನ ವಿಧಾನವನ್ನು ಅವಲಂಬಿಸಿರುತ್ತಾರೆ. ಪುರುಷರು ಲಂಗೋಟಿ ಅಥವಾ ಒಂದು ತುಂಡು ಪಂಚೆಯನ್ನು ಸೊಂಟಕ್ಕೆ ಕಟ್ಟಿರುತ್ತಾರೆ. ಸ್ತ್ರೀಯರು ಸುಮಾರು ನಾಲ್ಕು ಗಜದ ಸೀರೆಯನ್ನು ಬಹಳ ಸರಳ ರೀತಿಯಲ್ಲಿ ದರಿಸುತ್ತಾರೆ. ಪುರುಷರು ಕಿವಿಯಲ್ಲಿ ಒಲೆ,ಮುಂದೋಳಿನಲ್ಲಿ ಕೈಬಂದಿ ಹಾಗೂ ಎಡಗೈನ ಬೆರಳುಗಳಲ್ಲಿ ರಾಜನ ಮುದ್ರೆಯಿರುವ

ನಾಣ್ಯಗಳ ಅಥವಾ ಲೋಹದ ಸುರುಳಿ ಸುತ್ತಿರುವ ಉಂಗುರವನ್ನು ಧರಿಸಿದರೆ, ಸ್ತ್ರೀಯರು ಕರಿಮಣಿಸರ, ಕಾಲುಂಗುರ, ಕೈ ಬೆರಳುಗಳ ಉಂಗುರ, ಓಲೆಗಳ ಧರಿಸುವುದು ಕಂಡು ಬರುತ್ತದೆ[೧೧೪]. ಇದರಿಂದ ಪುರುಷ ಮತ್ತು ಸ್ತ್ರೀಯರು ಅಲಂಕಾರ ಪ್ರಿಯರೆಂದು ತಿಳಿಯುತ್ತದೆ.

ಕಾಡು ಕುರುಬರಲ್ಲಿ ಅನೇಕ ಮಗೆ ಅಥವಾ ಕುಲಗಳಿವೆ. ಅವುಗಳಲ್ಲಿ ದಾಳು, ಕಲ್ಕರ್,ಕುಲ್,ಮೆಂಜಲ್, ಶಂಕಿರಲ್, ಸೇಲೇರ್,ಕುಪ್ಪಲ್ಲಿ, ನಾನ್ಲಿ, ಸಂಬಾಳಕ್ಕನ್, ಸರ್ಕಲಕ್ಕಿನ್, ಜೇಡ್ಲ, ಕೆಂಪಿಲಕ್ಕೆ ಇತ್ಯಾದಿ ಕುಲಗಳಿರುವುದು ಕಂಡುಬರುತ್ತದೆ[೧೧೫]. ಬೊಮ್ಮದೇವರು,ಗಂಗಾಸ್ಥಾನದ ದೇವರು, ಮುದ್ದಪ್ಪ, ಮೂಗಪ್ಪಾಜಿ, ಮಾದಪ್ಪ , ನೂರಳೆಯ್ಯ, ಚಿಕ್ಕದೇವಮ್ಮ, ಮಾರಮ್ಮ, ಕೂಡಗಿತಾತ, ಗುಡ್ಡದ ತಾಯಿ, ಕುಮಾರದೇವರು ಮೊದಲಾದ ಸ್ತ್ರೀ-ಪುರುಷ ದೇವರುಗಳನ್ನು ಆರಾಧಿಸುತ್ತಾರೆ[೧೧೬]. ಅನೇಕ ಹಬ್ಬ, ಉತ್ಸವಗಳನ್ನು ಆಚರಿಸುತ್ತಾರೆ.

ಆಹಾರ ಸಂಗ್ರಹಣೆ ಹಾಗೂ ಬೇಟೆ ಕಾಡು ಕುರುಬರ ಪ್ರಮುಖ ಕಸುಬುಗಳಾಗಿವೆ. ಸರಕಾರ ಬೇಟೆಯನ್ನಾಡುವ ವೃತ್ತಿಯನ್ನು ನಿಷೇಧಿಸಿದ್ದರಿಂದ ಕಾಡು ಕುರುಬರು ಅರಣ್ಯಗಳಲ್ಲಿ ದೊರೆಯುವ ಬಿದಿರು, ಬೆತ್ತವನ್ನು ಬಳಸಿ ಬುಟ್ಟಿ, ಕುಕ್ಕೆ, ತೊಟ್ಟಿಲು, ಮೀನು ಹಿಡಿಯುವ ಬಲೆ ಮೊದಲಾದವುಗಳನ್ನು ತಯಾರಿಸುತ್ತಿದ್ದಾರೆ[೧೧೭]. ಮೀನು ಹಿಡಿಯುವುದು ಇವರ ಮತ್ತೊಂದು ಉದ್ಯೋಗವಾಗಿದೆ. ಆಧುನಿಕತೆಯ ಪ್ರಭಾವದಿಂದಾಗಿ ಉದ್ಯೋಗಗಳಲ್ಲಿ ಬದಲಾವಣೆಗಳಾಗಿವೆ. ಅನೇಕರು ಕುರಿ, ಕೋಳಿ, ದನಗಳನ್ನು ಸಾಕುತ್ತಾರೆ. ಕಾಡುಕುರುಬರು ಸರ್ವಭಕ್ಷಕರೆಂದು ಗುರುತಿಸಲ್ಪಡುತ್ತಾರೆ. ಸಸ್ಯಹಾರ ಮತ್ತು ಮಾಂಸಹಾರಗಳೆರಡೂ ಇವರಲ್ಲಿ ಪ್ರಚಲಿತದಲ್ಲಿವೆ. ರಾಗಿ ಇವರ ಪ್ರಧಾನ ಆಹಾರ[೧೧೮]. ವಿಶೇಷ ಸಂದರ್ಭಗಳಲ್ಲಿ ಮಾತ್ರ ಅಕ್ಕಿಯನ್ನು ಬಳಸುತ್ತಾರೆ. ಗೋದಿ, ಜೋಳ, ಗೆಡ್ಡೆ-ಗೆಣಸು, ಅಣಬೆ, ನಾರು-ಬೇರು, ಸೊಪ್ಪು-ಸೊದೆ ಮೊದಲಾದವುಗಳನ್ನು ಆಹಾರವಾಗಿ ಬಳಸುತ್ತಾರೆ.

ಕಾಡು ಕುರುಬರ ಪ್ರತಿಯೊಂದು ಹಾಡಿಗೂ ಯಜಮಾನ ಇರುತ್ತಾನೆ[೧೧೯]. ಗುಂಪಿನ ಪ್ರತಿಯೊಂದು ನ್ಯಾಯಗಳು ಅವನ ತೀರ್ಮಾನವನ್ನು ಅವಲಂಬಿಸಿರುತ್ತವೆ. ಜನನ, ಋತುಮತಿ, ನಾಮಕರಣ, ಮದುವೆ, ಮರಣ ಮೊದಲಾದ ಸಂದರ್ಭಗಳಲ್ಲಿ ತಮ್ಮದೇ ಆದ ಸಂಪ್ರದಾಯ ಆಚರಣೆಗಳನ್ನು ಹೊಂದಿದ್ದಾರೆ. ಪ್ರತಿ ಆಚರಣೆಗಳಿಗೂ ಯಜಮಾನನ ಅಪ್ಪಣೆ ಅವಶ್ಯಕವಾಗಿರುತ್ತದೆ.

ಕಾಡು ಕುರುಬರ ಭಾಷೆ ಕನ್ನಡವಾಗಿದ್ದು, ಸಾಹಿತ್ಯಕ್ಕೆ ಬಹಳ ಪ್ರಾಮುಖ್ಯತೆ ನೀಡಿದ್ದಾರೆ. ತಮ್ಮ ಭಾಷೆಯನ್ನು 'ಕಾಡರಸಮಕ್ಕೆನಂಗ' ಅಥವಾ 'ನಂಗಭಾಷೆ' ಎಂದು ಕರೆಯುತ್ತಾರೆ[೧೨೦]. ಇದನ್ನು ವ್ಯಾಕರಣ ರಹಿತವಾದ ಕುರುಬನ ಭಾಷೆ ಎಂದು ಕರೆಯಲಾಗಿದೆ. ಅನೇಕ ಗಾದೆ, ಒಗಟುಗಳು, ಪದ್ಯಗಳನ್ನು ರಚಿಸಿ ಹಾಡುವುದು ಕಂಡುಬರುತ್ತದೆ. ಒಟ್ಟಾರೆ ಕಾಡು ಕುರುಬರು ಕುರುಬರ ಪಂಗಡವಾಗಿದ್ದರೂ ತಮ್ಮದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

### ೩.೪.೪ ಜೇನು ಕುರುಬರು

ಕುರುಬರ ಪ್ರಮುಖ ಪಂಗಡಗಳಲ್ಲಿ ಜೇನು ಕುರುಬರ ಪಂಗಡವೂ ಒಂದಾಗಿದೆ. ದ್ರಾವಿಡ ಮೂಲದ ಪ್ರಾಚೀನ ಬುಡಕಟ್ಟೆಂದು ಜೇನು ಕುರುಬರನ್ನು ಗುರುತಿಸಲಾಗಿದೆ. ಕಾಡು ಕುರುಬರಂತೆ ಜೇನು ಕುರುಬರು ಸಹ ಮೂಲತಃ ಕಾಡಿನ ವಾಸಿಗಳು, ಜೇನು

ಸಾಕಾಣಿಕೆ ಮೂಲ ಕಸುಬಾಗಿದ್ದರಿಂದ ಇವರನ್ನು ಜೇನು ಕುರುಬರೆಂದು ಕರೆಯಲಾಗಿದೆ. ಪ್ರಾಚೀನ ಕಾಲದಲ್ಲಿ ಕಾಡು ಕುರುಬರು ಮತ್ತು ಜೇನು ಕುರುಬರು ಒಂದೇ ಆಗಿದ್ದರು. ಕಾಲಾನಂತರ ಜೇನು ಸಂಗ್ರಹಣೆಯ ವೃತ್ತಿ ಆಧಾರದ ಮೇಲೆ ಪ್ರತ್ಯೇಕವಾಗಿರುವ ಸಾಧ್ಯತೆಯಿದೆ.

**೧. ಪೌರಾಣಿಕ ಮೂಲ**

ಪ್ರಳಯದಲ್ಲಿ ಈ ಪ್ರಪಂಚವೆಲ್ಲ ಮುಳುಗಿಹೋಗಿತ್ತು, ಎಲ್ಲೆಡೆ ನೀರು ಆವರಿಸಿತ್ತು. ಭೂಮಿಯ ಮೇಲೆ ಒಂದು ಕ್ರಿಮಿ ಕೀಟವೂ ಇರಲಿಲ್ಲ[೧೨]. ನೀರಿನಲ್ಲಿ ಒಂದು ಕಹಿ ಸೋರೆ ಬುರುಡೆ ತೇಲುತ್ತ ಒಂದು ಅಂಗೈ ಅಗಲ ಭೂಮಿಯಿರುವ ಸ್ಥಳದಲ್ಲಿ ಬಂದು ನಿಂತಿತು. ಆ ಸೋರೆ ಬುರುಡೆ ಒಳಗಿನಿಂದ ಒಂದು ಗಂಡು ಒಂದು ಹೆಣ್ಣು ಹೊರಬಂದವು. ಅವರಿಬ್ಬರು ಅಣ್ಣ-ತಂಗಿಯರಾಗಿದ್ದರು. ಆದ್ದರಿಂದ ತಮ್ಮ ಮುಷ್ಟಿಗಳಲ್ಲಿ ಮಣ್ಣನ್ನು ಹಿಡಿದು ಕೊಂಡು ಒಂದು ಗಂಡು ಒಂದು ಹೆಣ್ಣನ್ನು ಸೃಷ್ಟಿಸಿದರು[೧೩]. ಇವರಿಬ್ಬರಿಂದ ಬೆಳೆದ ಸಂತತಿಯೇ ಜೇನು ಕುರುಬರು ಎಂದು ಕರೆಯಲ್ಪಟ್ಟಿತು. ಮರಗಿಡಗಳಲ್ಲಿ ಹೊಸದಾಗಿ ಚಿಗಿದು, ಹೂವು, ಹಣ್ಣು ಬಿಡುವ ಸಮಯದಲ್ಲಿ ಗಂಡು ಕೊಂತ ಮತ್ತು ಹೆಣ್ಣು ಕೊಂತ ಜನಿಸಿದರೆಂದು ಜೇನು ಕುರುಬರಲ್ಲಿ ನಂಬಿಕೆಯಿದೆ[೧೪]. ಇವರ ಹುಟ್ಟಿನ ಸವಿನೆನಪಿಗಾಗಿ ಕೊಂತ ಪೂಜೆಯನ್ನು ಇಂದಿಗೂ ಆಚರಿಸುವುದು ಕಂಡುಬರುತ್ತದೆ. ಈ ಸೃಷ್ಟಿ ಕ್ರಿಯೆಯಿಂದ ಎಲ್ಲ ವಿಕಾಸವೂ ಪ್ರಕೃತಿಯ ಬೆಂಬಲದಿಂದಲೇ ಎಂಬ ಸತ್ಯವನ್ನು ಹೇಳುವುದು ಕಂಡುಬರುತ್ತದೆ.

**೨. ಚಾರಿತ್ರಿಕ ಮೂಲ**

ದ್ರಾವಿಡ ಮೂಲದ ಪ್ರಾಚೀನ ಬುಡಕಟ್ಟು ಎಂದು ಜೇನು ಕುರುಬರನ್ನು ಕರೆಯಲಾಗಿದೆ[೧೫]. ಜೇನು ಕುರುಬರು ವೀರರು, ಶೂರರು, ಪರಾಕ್ರಮಿಗಳಾಗಿ ಅನೇಕ ವರ್ಷಗಳವರೆಗೂ ದಕ್ಷಿಣ ಭಾರತವನ್ನು ಆಳಿದ ಪಲ್ಲವ ವಂಶಕ್ಕೆ ಸೇರಿದವರು ಎಂದು ಅಭಿಪ್ರಾಯವಿದೆ. ನಂತರ ಸುಮಾರು ೭ನೇ ಅಥವಾ ೮ನೇ ಶತಮಾನದಲ್ಲಿ ಕೊಂಗ, ಚೋಳ, ಹಾಗೂ ಚಾಲುಕ್ಯರ ಪ್ರಬಲವಾದ ದಾಳಿಗೆ ಸಿಲುಕಿ ಅವನತಿ ಹೊಂದಿದರು. ಇದರಿಂದ ಹತ್ತಿರದ ಗುಡ್ಡಬೆಟ್ಟಗಳಿಂದಾವೃತವಾದ ಮಲಬಾರ್, ನೀಲಗಿರಿ, ಕೊಡಗು, ವೈನಾಡು, ಮೈಸೂರು ಮೊದಲಾದ ಪ್ರದೇಶಗಳಲ್ಲಿನ ಅರಣ್ಯಗಳಲ್ಲಿ ಆಶ್ರಯ ಪಡೆದುಕೊಂಡರು[೧೬]. ಹೀಗೆ ನಾಗರಿಕ ಜನಸಮುದಾಯದಿಂದ ದೂರವಾಗಿ ನೆಲೆಸಿದ ಮೇಲೆ ಕಾಡಿನ ವಾಸಿಗಳೆಂದು ಗುರುತಿಸಲ್ಪಟ್ಟರು. ಜೇನು ಸಂಗ್ರಹಣೆ ಪ್ರಮುಖ ವೃತ್ತಿಯನ್ನಾಗಿ ಸ್ವೀಕರಿಸಿದ್ದರಿಂದ ಇವರನ್ನು ಜೇನು ಕುರುಬರೆಂದು ಕರೆಯಲಾಯಿತು.

ಜೇನು ಬೇಟೆಯಾಡುವುದರೊಂದಿಗೆ ಪ್ರಾಣಿ ಬೇಟೆಯಾಡುವುದರಲ್ಲಿಯೂ ನಿಪುಣರಾಗಿದ್ದರು. ಕಾಡಿನಲ್ಲಿರುವ ಪ್ರತಿಯೊಂದು ವಸ್ತು ಹಾಗೂ ಪ್ರತಿಯೊಂದು ಪ್ರಾಣಿಯ ಚಲನವಲನದ ಬಗ್ಗೆ ಸ್ಪಷ್ಟವಾಗಿ ತಿಳಿದುಕೊಂಡಿದ್ದರು. ಚೋಳ ಮತ್ತು ಪಲ್ಲವ ಅರಸರಿಗೆ ಆನೆಗಳನ್ನು ಹಿಡದುಕೊಡುತ್ತಿದ್ದರೆಂದು ತಿಳಿಯುತ್ತದೆ[೧೭]. ಇದರಿಂದ ಜೇನು ಕುರುಬರು ಧೈರ್ಯವಂತರೆಂಬುದು ಸ್ಪಷ್ಟವಾಗುತ್ತದೆ.

ಭಾರತದಲ್ಲಿದ್ದ "ಕೆನ್ನತ್ ಆಯಂಡರ್‌ಸನ್" ಎಂಬ ಬ್ರಿಟಿಷ ಅಧಿಕಾರಿ ತನ್ನ ಕೃತಿಯಾದ "ಒಂಬತ್ತು ನರಭಕ್ಷಕಗಳು

ಮತ್ತು ಒಂದು ಆನೆ" ಎಂಬ ಕೃತಿಯಲ್ಲಿ ಈ ರೀತಿ ಹೇಳಿದ್ದಾನೆ[೧೪೭] ಕಾಕನಕೋಟೆಯಲ್ಲಿ ತಾನು ಸಂಚರಿಸುತ್ತಿದ್ದ ಸಂದರ್ಭದಲ್ಲಿ ಹುಲಿ ಎದುರಾಯಿತೆಂದು, ಅದರಿಂದ ಜೇನು ಕುರುಬನೊಬ್ಬ ಧೈರ್ಯದಿಂದ ತನ್ನನ್ನು ರಕ್ಷಿಸಿದನೆಂದು, ಜೇನು ಕುರುಬರು ಆನೆಗಳ ನಾಡಿಯನ್ನು ಅದರ ವಾಸನೆ ಹಿಡಿಯುವುದನ್ನು ಅವರ ಜೊತೆಯಲ್ಲಿದ್ದು ತಿಳಿಯಬೇಕು ಎಂದಿದ್ದಾನೆ[೧೪೮]. ಇದರಿಂದ ಜೇನು ಕುರುಬರು ಜೇನು ಸಂಗ್ರಹಣೆಯೊಂದಿಗೆ ಆನೆಗಳನ್ನು ಪಳಗಿಸುವ ಕಲೆಯನ್ನು ಬಲ್ಲವರಾಗಿದ್ದರೆಂದು ತಿಳಿಯುತ್ತದೆ.

ಜೇನು ಕುರುಬರು ವಾಸ ಮಾಡುವ ಗುಡಿಸಲುಗಳನ್ನು ಕತ್ತರಿಸಿದ ಬಿದರುಗಳಿಂದ ಆಯತಾಕಾರದಲ್ಲಿ ಕಟ್ಟಿರುತ್ತಾರೆ[೧೪೯]. ಗುಡಿಸಲಿನ ಹೊರಭಾಗದ ಬಿದುರುಗಳಿಗೆ ನೆಲದಿಂದ ಮೂರು ಅಡಿ ಎತ್ತರದವರೆಗೆ ಮಣ್ಣನ್ನು ಮೆತ್ತಿ ಗೋಡೆಗಳನ್ನು ನಿರ್ಮಿಸುತ್ತಾರೆ. ಗೋಡೆಗಳ ಎತ್ತರ ಐದು ಅಡಿಯಿಂದ ಹತ್ತು ಅಡಿಯಿರುತ್ತದೆ. ಇಳಿಜಾರು ಮೇಲ್ಛಾವಣಿಯನ್ನು ಆನೆ ಹುಲ್ಲು ಎಂದು ಗುರತಿಸಲ್ಪಡುವ ಹುಲ್ಲಿನಿಂದ ಮುಚ್ಚಿರುತ್ತಾರೆ[೧೫೦]. ಬಾಗಿಲು ಅತ್ಯಂತ ಚಿಕ್ಕದಾಗಿರುತ್ತದೆ. ಒಳಗಡೆ ಊಟದ ತಾಣವಿರುತ್ತದೆ. ರಾತ್ರಿ ಅದು ಮಲಗುವ ಕೋಣೆಯಾಗಿ ಬದಲಾಗುವುದು ವಿಶೇಷವಾಗಿ ಕಂಡುಬರುತ್ತದೆ[೧೫೧]. ಇವರ ತಾಣಗಳೆಲ್ಲ ಬೇರೆಯಲ್ಲದಿದ್ದರೂ ಸಮಯಾನುಸಾರ, ಭಾವನಾತ್ಮಕವಾಗಿ ಬೇರೆಯಾಗುತ್ತವೆ.



ಜೇನು ಕುರುಬರು ಸರಳ ಜೀವಿಗಳು. ಪುರುಷರು ಲಂಗೋಟಿ ಅಥವಾ ಪಂಚೆಯನ್ನು ಸೊಂಟಕ್ಕೆ ಕಟ್ಟಿರುತ್ತಾರೆ. ಸ್ತ್ರೀಯರು ಸುಮಾರು ನಾಲ್ಕು ಗಜದ ಸೀರೆಯನ್ನು ಸರಳ ರೀತಿಯಲ್ಲಿ ಧರಿಸುತ್ತಾರೆ. ಸ್ತ್ರೀ ಮತ್ತು ಪುರುಷರಿಬ್ಬರೂ ಅಲಂಕಾರ ಪ್ರಿಯರಾಗಿರುತ್ತಾರೆ. ಕಾಡಿನಲ್ಲಿ ದೊರೆಯುವ ಗೆಡ್ಡೆ, ಗೆಣಸು, ನಾರು-ಬೇರು ಸೊಪ್ಪುಗಳನ್ನು ಆಹಾರವಾಗಿಯೂ, ಔಷಧಿಯಾಗಿಯೂ ಬೆಳಸುತ್ತಾರೆ[೧೫೨]. ರಾಗಿ, ಜೋಳ, ಅಕ್ಕಿ, ಸಾಂಬಾರ ಬಳಕೆ ಇತ್ತೀಚೆಗೆ ಇವರಲ್ಲೂ ಕಂಡುಬರುತ್ತಿದೆ.



ಜೇನು ಕುರುಬರಲ್ಲಿ ಕೊಂತಪೂಜೆ ವಿಶಿಷ್ಟವಾದ ಆಚರಣೆಯಾಗಿದೆ. ಪ್ರತಿವರ್ಷಕ್ಕೊಮ್ಮೆ ಏಪ್ರಿಲ್-ಮೇ ತಿಂಗಳಲ್ಲಿ ಆಚರಿಸಲಾಗುತ್ತದೆ[೧೫೩]. ಇದು ಫಲವತ್ತತೆಯನ್ನು ಪ್ರತಿನಿಧಿಸುವ ಆಚರಣೆ ಎಂದು ತಿಳಿದುಬರುತ್ತದೆ. ಒಂದು ನಿರ್ದಿಷ್ಟವಾದ ದಿನದಂದು ರಾತ್ರಿ ಹಾಡಿಯ ಯಜಮಾನನ ಸಮ್ಮುಖದಲ್ಲಿ ನದಿ, ಕೆರೆ, ಹಳ್ಳದಲ್ಲೋ ಹೋಗಿ ಯಾರೂ ತುಳಿಯದಿರುವ ನೀರಿನ ತಳದ ಮಣ್ಣನ್ನು ದೇವರಗುಡ್ಡ ಬೊಗಸೆಯಲ್ಲಿ ತರುತ್ತಾನೆ. ಆ ಮಣ್ಣಿನಿಂದ ಎರಡು ಗೊಂಬೆಗಳನ್ನು ಮಾಡುತ್ತಾನೆ. ಗಂಡು ಗೊಂಬೆಯನ್ನು ಕೊಂತ ಎಂದು, ಹೆಣ್ಣು ಗೊಂಬೆಯನ್ನು ಕೊಂತಿ ಎಂದು ಕರೆಯಲಾಗುತ್ತದೆ. ಕಲವೆಕೋಲು ಚಪ್ಪರಹಾಕಿ, ಎಲೆಗಳಿಂದ ಚಪ್ಪರ ಮುಚ್ಚುತ್ತಾರೆ. ಹೆಂಗಸರು ಚಪ್ಪರದ ನೆಲವನ್ನು ಸಾರಿಸುತ್ತಾರೆ. ಪವಿತ್ರ ಸ್ಥಳವಾಗಿ ಬದಲಾದ ಆ ಜಾಗದಲ್ಲಿ ಗಂಡು-ಹೆಣ್ಣು ಗೊಂಬೆಯನ್ನು ಕೂಡಿಸಿ ಪೂಜೆ ಸಲ್ಲಿಸುತ್ತಾರೆ. ದಿನಾ ಸಾಯಂಕಾಲ ಸ್ತ್ರೀಯರು ಹೂ-ಹಣ್ಣುಗಳಿಂದ ಪೂಜಿಸುತ್ತಾರೆ. ಒಟ್ಟು ನಲವತ್ತು ದಿನಗಳವರೆಗೆ ಪೂಜೆ ನಡೆಯುತ್ತದೆ. ಆ ನಲವತ್ತನೆ ದಿನ ಸೃಷ್ಟಿಕ್ರಿಯೆಯನ್ನು ಅಭಿನಯಿಸುತ್ತಾರೆ. ಅನೇಕ ಹಾಡು-ಕುಣಿತಗಳನ್ನು ಮಾಡುವುದು ಕಂಡು ಬರುತ್ತದೆ. ಅಲ್ಲದೆ ಚಿಕ್ಕಮ್ಮ, ದೊಡ್ಡಮ್ಮ, ಪಟಾಲಮ್ಮ ಮೊದಲಾದ ದೇವರುಗಳನ್ನು ಪೂಜಿಸುತ್ತಾರೆ[೧೫೪].

ಜೇನು ಕುರುಬರ ಪ್ರತಿಯೊಂದು ಹಾಡಿಗೂ ಯಜಮಾನನಿರುತ್ತಾನೆ. ತಮ್ಮ ಸಮುದಾಯಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನು

ತಮ್ಮ ಪಂಚಾಯಿತಿಯಲ್ಲಿಯೇ ಪರಿಹರಿಸಿಕೊಳ್ಳುತ್ತಾರೆ. ಪಿರಿಯಾ ಪಟ್ಟಣ, ಹೆಗ್ಗಡದೇವನಕೋಟೆ, ಗುಂಡ್ಲುಪೇಟೆ, ಮಡಿಕೇರಿ, ವಿರಾಜಪೇಟೆ, ಸೋಮವಾರಪೇಟೆ ತಾಲೂಕುಗಳಲ್ಲಿ ಇವರ ನೆಲೆಗಳನ್ನು ಕಾಣಬಹುದಾಗಿದೆ. ಕ್ರಿ.ಶ.೧೯೩೧ರ ಜನಗಣಗತಿಯಲ್ಲಿಯೇ ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿದ್ದಾರೆ[೧೩೫]. ೧೯೫೦ ರಿಂದಲೇ ಜೇನುಕುರುಬರು ಮೈಸೂರು ರಾಜ್ಯದಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದಾರೆ. ಕ್ರಿ.ಶ.೧೯೮೧ರ ಜನಗಣತಿಯ ಪ್ರಕಾರ ಇವರ ಜನಸಂಖ್ಯೆ ೩೪.೭೪೭ ಎಂದು ದಾಖಲಾಗಿದೆ[೧೩೬].

ಜೇನುಕುರುಬರು ಕನ್ನಡ ರೂಪದ ಭಾಷೆಯಾಡುತ್ತಾರೆ. ಇವರು ಅನೇಕ ಗಾದೆ, ಒಗಟು, ಪದ್ಯಗಳನ್ನು ರಚಿಸಿ ಹಾಡುವುದು ಕಂಡುಬರುತ್ತದೆ. ಶಿಕ್ಷಣದ ಮಹತ್ವ ತಿಳಿದಿಲ್ಲರುವುದಕ್ಕೆ ಕಾರಣ ಬಡತನ. ಇಂದಿಗೂ ಪಶುಪಾಲನೆ, ಬೇಟೆ ಆಂಶಿಕ ಜೀವನಾಧಾರಗಳಾಗಿವೆ. ಒಟ್ಟಾರೆ ಜೇನುಕುರುಬರು ಕುರುಬರ ಪಂಗಡಗಳಲ್ಲಿ ಒಬ್ಬರಾಗಿದ್ದರೂ ತಮ್ಮದೇ ಆದ ಪ್ರತ್ಯೇಕ ಜೀವನ ವಿಧಾನವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ.

### ೩.೪.೫ ಒಡೆಯರು

ಪುರೋಹಿತ ವರ್ಗವನ್ನು ಹೊಂದಿರುವ ಹಲವಾರು ಸಮುದಾಯಗಳಲ್ಲಿ ಕುರುಬ ಸಮುದಾಯವು ಒಂದಾಗಿದೆ. ಕುರುಬರು ಪುರೋಹಿತ ವರ್ಗವನ್ನು ಒಡೆಯರು ಎಂದು ಕರೆಯುತ್ತಾರೆ. ಒಡೆಯರು ಕುರುಬರ ಧಾರ್ಮಿಕ ಸಂಸ್ಕಾರದಲ್ಲಿ ದೀಕ್ಷೆ ನೀಡುವುದರಿಂದ ಕುರುಬರ ಕುಲಗುರುಗಳಾಗಿದ್ದಾರೆ.

#### ೧. ಒಡೆಯರ ಪದದ ಅರ್ಥ

ಒಡೆಯರು ಎಂದರೆ ಒಡೆತನವುಳ್ಳ ಸ್ವಾಮಿ, ಯಜಮಾನ, ನಾಯಕ, ಮುಂದಾಳು ಎಂಬರ್ಥವಿದೆ[೧೩೭]. ಕುರುಬರ ಪುರೋಹಿತ ವರ್ಗವನ್ನು ಕನ್ನಡದಲ್ಲಿ ಒಡೆಯರ್ ಎಂದು, ತಮಿಳು ಭಾಷೆಯಲ್ಲಿ ಇಡಿಯರ್ ಎಂದು, ತೆಲುಗಿನಲ್ಲಿ ಇಡಿಯರ್, ಎಡಿಯರ್ ಎನ್ನುವರು. ಮೂಲ ಶಬ್ದ ವಡಿ, ವಾಡ, ವೀಡಿ, ಆಡು ಭಾಷೆಯಲ್ಲಿ ವಕಾರ ವಿಕಾರವಾಗಿರುವುದರಿಂದ ವಿಡಿ–ಇಡಿ ಆಗಿದೆ. ಇದರ ಅರ್ಥ ಭೂಮಿಯ ಒಡೆತನ ಉಳ್ಳವನು ಎಂದಾಗುತ್ತದೆ[೧೩೮]. ತೆಲುಗಿನಲ್ಲಿ ಇಡಿಯರ್ ಎಂಬುದು ಕೂಡ ಭೂಮಿಯನ್ನು ಕುರಿತ ಅರ್ಥ ನೀಡುತ್ತದೆ. ಒಡೆಯರು ಎಂಬ ಪದ ಒ ಇದ್ದರೂ ವ ಎಂದು ಉಚ್ಚಾರಣೆಯಲ್ಲಿ ಬದಲಾವಣೆಯಾಗಿರುವುದು ಕಂಡು ಬರುತ್ತದೆ. ಒಡೆಯರು, ವಡೆಯರು ಎಂಬುದಾಗಿ ಉಚ್ಚಾರದಲ್ಲಿ ಒಂದೇ ವಿಧವಾದ ಧ್ವನಿ ಹೊರಡುವುದು ಇದಕ್ಕೆ ಸಾಕ್ಷಿಯಾಗಿದೆ. ಒಟ್ಟಾರೆ. ಒಡೆಯರೆಂದರೆ ಪೂಜ್ಯರು, ಭೂಮಿಯ ಒಡೆತನ ಉಳ್ಳವರೆಂಬ ಅರ್ಥವಿದೆ.

#### ೨. ಪೌರಾಣಿಕ ಮೂಲ

ತಗರ ಪವಾಡದ ಪ್ರಕಾರ ಉಂಡಾಡು ಪದ್ಮಣ್ಣನ ಮಗ ಶಾಂತ ಮುತ್ತಯ್ಯ ಇವನ ನಿತ್ಯದ ಕಾರ್ಯ ಕುರಿ ಕಾಯುವುದಾಗಿತ್ತು. ಶಾಂತಯ್ಯ ಶಿವಭಕ್ತನಾಗಿದ್ದನು. ಇವನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಶಿವನು ಅವನಲ್ಲಿಗೆ ಬರುತ್ತಾನೆ. ಶರಣನಾಗಿ ಬಂದ ಶಿವನು ಶಾಂತಯ್ಯನ ಆಶ್ರಯ ಪಡೆಯುತ್ತಾನೆ. ದಂಪತಿಗಳಿಬ್ಬರು ಶಿವನನ್ನು ತುಂಬು ಹೃದಯದಿಂದ ಸತ್ಕರಿಸುತ್ತಾರೆ. ಶಿವನು

ಶಾಂತಯ್ಯನ ಭಕ್ತಿಯನ್ನು ಪರೀಕ್ಷಿಸಲು ಜಂಗಮ ಕೋಟಿಯನ್ನು ಕರೆಯುತ್ತಾನೆ. ಬಂದಂತ ಜಂಗಮ ಕೋಟಿಗೆ ಶಾಂತಯ್ಯ ಸಂತೃಪ್ತಿಗೊಳಿಸುತ್ತಾನೆ. ಶಾಂತನ ಭಕ್ತಿಗೆ ಮೆಚ್ಚಿದ ಶಿವನು ಏನು ಬೇಕು ಕೇಳು ಎನ್ನುತ್ತಾನೆ. ಆಗ ಶಾಂತನು ನನಗೆ ನಿನ್ನ ದಯೆಯಿಂದ ಎಲ್ಲವೂ ಇದೆ. ನನಗೆ ದೀಕ್ಷೆ ಮೋಕ್ಷಗಳನ್ನಿತ್ತು ಸಲಹಬೇಕು ಎಂದು ಪ್ರಾರ್ಥಿಸುತ್ತಾನೆ. ಆಗ ಶಿವನು ಲೋಕದಲ್ಲಿರುವ ಶುಭ ವಸ್ತುಗಳನ್ನು ತರಿಸಿ ನಾಲ್ಕು ಕಲಶಗಳ ಮಧ್ಯೆ ಶಾಂತಯ್ಯನನ್ನು ಕುಳ್ಳಿರಿಸಿ ದೀಕ್ಷೆಗೆ ಅಣಿ ಮಾಡಿಸುತ್ತಾನೆ. ಈ ಸಮಾರಂಭಕ್ಕೆ ಪಂಡಿತಾರಾಧ್ಯ, ರೇವಣಾರಾಧ್ಯ, ಏಕೋರಾಮಾರಾಧ್ಯ, ಮರುಳಸಿದ್ಧ, ಮೊದಲಾದ ಶರಣರೆಲ್ಲ ಆಗಮಿಸುತ್ತಾರೆ[೧೩೯].

ದೀಕ್ಷೆ ಸಮಾರಂಭವು ಸಂಪೂರ್ಣವಾಗಬೇಕಾದರೆ ಪರಮೇಶ್ವರನ ಪುರದಲ್ಲಿರುವ ಕರಿಮಲ್ಲಿಗೆಯ ಪುಷ್ಪವನ್ನು ತರಬೇಕು ಎಂದು ಶರಣರೆಲ್ಲ ಹೇಳುತ್ತಾರೆ. ಅದಕ್ಕಾಗಿ ಶಾಂತಯ್ಯನು ಪರಮೇಶ್ವರನನ್ನು ಬಹುವಾಗಿ ಪ್ರಾರ್ಥಿಸುತ್ತಾನೆ. ಶಾಂತನ ಪ್ರಾರ್ಥನೆಗೆ ಮರುಗಿ ಶಿವ ಕರಿಮಲ್ಲಿಗೆ ಪುಷ್ಪವನ್ನು ನೀಡದಿದ್ದರೆ ತನ್ನ ಶಿರವನ್ನು ಕಡೆದುಕೊಳ್ಳುವೆನೆಂದು ಕೈಗೆ ಚಂದ್ರಾಯುಧವನ್ನು ತೆಗೆದುಕೊಳ್ಳುತ್ತಾನೆ. ಆಗ ಕೈಲಾಸದಿಂದ ಕರಿಮಲ್ಲಿಗೆ ಪುಷ್ಪವು ಸರಸರವಾಗಿ ಇಳಿದು ಬರುತ್ತದೆ. ಸರಸರವಾಗಿ ಕರಿಮಲ್ಲಿಗೆಯ ಪುಷ್ಪವು ಪರಮೇಶ್ವರನ ಪುರದಿಂದ ಇಳಿದು ಬಂದದ್ದರಿಂದ ಆ ಸ್ಥಳಕ್ಕೆ ಸರವೂರವೆಂದು ಹೆಸರಾಯಿತು[೧೪೦]. ಎಲ್ಲ ಶರಣರೂ ಜಯ ಜಯವೆಂದು ಹೊಗಳಿ ಶಾಂತನಿಗೆ ದೀಕ್ಷೆ ನೀಡುತ್ತಾರೆ. ಅಂದಿನಿಂದಲೇ ಶಾಂತಯ್ಯ ಕುರುಬರ ಕುಲಗುರುವಾದನು. ಸರವೂರ ಪ್ರದೇಶವು ಇಂದಿಗೂ ಕುರುಬರ ಮೂಲ ಪೀಠವಿರುವ ಸ್ಥಳವಾಗಿದೆ.

### ೩. ಐತಿಹಾಸಿಕ ಮೂಲ

ಇನ್ನೊಂದು ಪುರಾಣದ ಪ್ರಕಾರ ಕುರುಬರ ಮೂಲ ಪುರುಷನಾದ ಉಂಡಾಡು ಪದ್ಮಣ್ಣನ ಮೊದಲನೆಯ ಹೆಂಡತಿ ಸಿದ್ಧಮ್ಮನಿಗೆ ಐದು ಜನ ಮಕ್ಕಳು ಹುಟ್ಟುತ್ತಾರೆ. ಅವರೆಂದರೆ, ೧) ಜಗ್ಗಲಿ ಮುತ್ತಯ್ಯ, ೨) ಸಹಾಯ ಮುತ್ತಯ್ಯ, ೩) ಸೋಹ ಮುತ್ತಯ್ಯ, ೪) ಶಾಂತಿಮಯ ಮುತ್ತಯ್ಯ, ೫) ದೇವರಾಜ. ಅವರಲ್ಲಿ ನಾಲ್ಕನೆಯ ಮಗನಾದ ಶಾಂತಿಮಯ ಮುತ್ತಯ್ಯನೇ ರೇವಣಸಿದ್ಧೇಶ್ವರನ ತಂದೆ[೧೪೧]. ಶಾಂತಿಮಯ ಮುತ್ತಯ್ಯ ಶಿವಭಕ್ತನಾಗಿದ್ದು, ಸಮಾಜಹಿತ ಕಾರ್ಯಗಳನ್ನು ಮಾಡುತ್ತಾ ಕೊಲ್ಲಿಪಾಕಿಯಲ್ಲಿ ನೆಲೆಸುತ್ತಾನೆ. ಕೊಲ್ಲಿ ಪಾಕಿಯಲ್ಲಿಯೇ ರೇವಣಸಿದ್ಧ ಹುಟ್ಟಿದನು. ರೇವಣಸಿದ್ಧ ಒಬ್ಬ ಯೋಗಿಯಾಗಿದ್ದನೆಂದು, ಅವನು ೧೦೭ ವರ್ಷ ಬದುಕಿದ್ದನೆಂದು ಐತಿಹ್ಯವಿದೆ[೧೪೨]. ಇವನು ಸಮಾಜದ ಹಿತ ಕಾರ್ಯಗಳನ್ನು ಮಾಡುತ್ತ ಕರ್ನಾಟಕ, ಆಂಧ್ರ ಮೊದಲಾದೆಡೆ ಸಂಚರಿಸಿದನು. ನಂತರ ಕುರುಬನಾಗಿದ್ದ ರೇವಣಸಿದ್ಧ ವೀರಶೈವ ಧರ್ಮಿಯಾದನು. ಕುರುಬರಾಗಿದ್ದ ಒಡೆಯರು ರೇವಣಸಿದ್ಧೇಶ್ವರನ ಕೃಪೆಗೆ ಪಾತ್ರರಾಗಿ, ಅವನ ಅನುಯಾಯಿಗಳಾಗಿ ಲಿಂಗದೀಕ್ಷೆ ಪಡೆದುಕೊಂಡರು. ಕಲ್ಯಾಣ ಶಿವಶರಣರ ಪ್ರಭಾವದಿಂದ ವೀರಶೈವ ಧರ್ಮಕ್ಕೆ ಮಾರು ಹೋದರಲ್ಲದೇ, ಧಾರ್ಮಿಕ ದೀಕ್ಷೆ ನೀಡುವ ಗುರುಗಳಾಗಿ ಮಾರ್ಪಾಡಾದರು. ಅಂದಿನಿಂದ ಕುರುಬರಲ್ಲಿ ಒಡೆಯರು ಎಂಬ ಪಂಗಡ ನಿರ್ಮಾಣವಾಯಿತು ಎಂದು ತಿಳಿಯುತ್ತದೆ.

ಬಿಜಾಪುರ ಜಿಲ್ಲೆಯ ಮುದ್ದೇಬೀಹಾಳ ತಾಲ್ಲೂಕಿನ ಸರೂರ ಎಂಬ ಗ್ರಾಮದಲ್ಲಿ ರೇವಣಸಿದ್ಧೇಶ್ವರ ದೇವಾಲಯವಿದೆ. ಇದನ್ನು ಕುರುಬರ ಮೂಲ ಗುರುಪೀಠ ಎಂದು ಕರೆಯಲಾಗುತ್ತದೆ. ಇಲ್ಲಿ ಜೈನ ಧರ್ಮದ ಒಡೆದ ಮೂರ್ತಿಗಳಿವೆ ಹಾಗೂ ಇಲ್ಲಿಯ ಒಡೆಯರ ಆಚಾರ-ವಿಚಾರ, ಸಂಸ್ಕೃತಿ ಸಂಸ್ಕಾರಗಳನ್ನು ನೋಡಿದಾಗ ಇವರು ಮೂಲತಃ ಜೈನ-ಶ್ವೇತಾಂಬರ

ಪಂಗಡದವರಾಗಿದ್ದು, ಕಾಲಾನಂತರ ವೀರಶೈವ ಧರ್ಮದ ಪ್ರಭಾವದಿಂದ ವೀರಶೈವರಾಗಿರುವರೆಂದು ತಿಳಿಯುತ್ತದೆ. ಈ ದೇವಾಲಯದಲ್ಲಿ ದೊರೆತ ಒಂದು ಶಾಸನ ಇದಕ್ಕೆ ಸಹಾಯಕವಾಗುತ್ತದೆ[೧೪೩].

ಕರೆಯಿಂ ಒಡಗ ಸರವೂರ
ಸೀಮೆಯಲು ಅರಸನಹಳ್ಳಿಯ
ಹೊಲದಲು ಸರವೂರು ಮಲ್ಲಿನಾಥ
ದೇವರಿಗೆ ಮತ್ತರುನೆಲ್ವತ್ತು
ಧ.... ಪೂರ್ವವಾಗಿ ನೆರೆಯ ಆಯ
ಮರಿ ಆಲವರಿ ತೊಳಿಕಾಯಿ
ಗಳು ಸಿದ್ಧರಾಮ ತಂದೆಯ ಮಕ್ಕಳು
ಊರಪೂಜೆ ಹುದಲಿವರ ಹಸತಿ
ಲಕಹಾಗವಂಬಿರಚಿ .. .. .. .. .... ದಾಯವಲ್ಲಿ
ನಾತನಡೆವ ಹೊನಗು(ಂ)ದ
ದ ಬೀಚಗುರು ತಂನ ಮಗ ಮಂಕಯನ
ಕಾಲದಾ ಗುರುವಿನ ಮಂಕಯನು
ಮಲನಾಥ ದೇವರ ಸ್ಥಾನವಧಾರಾ
ಪೂರ್ವಕ ಮಾಡಿಕೊಟ್ಟರು.

ಈ ಶಾಸನದಲ್ಲಿ ಮಲ್ಲಿಕಾರ್ಜುನ, ಮಲ್ಲಿನಾಥ ಎಂಬ ಪದವಿರುವುದರಿಂದ ಇವರು ಪೂಜೆಗಳಲ್ಲಿ ಬಿಳಿ ಕಂಬಳಿಯನ್ನು ಉಪಯೋಗಿಸುವುದು ಕಡ್ಡಾಯವಾಗಿತ್ತೆಂದು ತಿಳಿಯುತ್ತದೆ. ಕೆಲವೆಡೆ ಒಡೆಯರು ಇಷ್ಟಲಿಂಗವನ್ನು ಧರಿಸುವುದಿಲ್ಲ ಹಾಗೂ ಮಾಂಸಹಾರ ಸೇವಿಸುವುದಿಲ್ಲ. ಹೀಗಾಗಿ ಇವರು ಮೂಲತಃ ಜೈನಧರ್ಮದ ಅನುಯಾಯಿಗಳಾಗಿದ್ದು ನಂತರ ವೀರಶೈವ ಧರ್ಮದ ಪ್ರಭಾವದಿಂದ ಲಿಂಗಾಂಗಿಗಳಾದ ಮೇಲೆ ಒಡೆಯರು ಎಂದು ಕರೆಯಲ್ಪಟ್ಟರೆಂಬ ಅಭಿಪ್ರಾಯವಿದೆ.

### ೪. ಒಡೆಯರ ಸ್ಥಾನ

ಕುರುಬರ ಧಾರ್ಮಿಕ ಜೀವನದಲ್ಲಿ ಒಡೆಯರಿಗೆ ಪ್ರಮುಖ ಸ್ಥಾನವಿದೆ. ಕುರುಬರಿಗೆ ಪುರೋಹಿತ ವರ್ಗವಾಗಿರುವ ಒಡೆಯರು ಅವರ ಪ್ರತಿಯೊಂದು ಧಾರ್ಮಿಕ ಕ್ರಿಯೆಗಳಲ್ಲಿ ಮುಂದಾಳತ್ವವನ್ನು ವಹಿಸುತ್ತಾರೆ. ಹೀಗಾಗಿ ತಾವು ಉಳಿದವರಿಗಿಂತ ಶ್ರೇಷ್ಠ ಎಂಬ ಭಾವನೆ ಇವರಲ್ಲಿದೆ. ಕುರುಬರಿಗೆ ಒಡೆಯರು ಗುರುಸ್ಥಾನದಲ್ಲಿರುವುದರಿಂದ ಕುರುಬರು ಅವರನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೆ.

ರೇವಣಸಿದ್ಧರು ಕುರುಬರ ಕುಲಗುರುಗಳಾಗಿದ್ದರು. ಮದುವೆಗಳಲ್ಲಿ ಬ್ರಾಹ್ಮಣ ಪುರೋಹಿತರು ಬಡವರನ್ನು ಶೋಷಣೆ ಮಾಡುವುದನ್ನು ತಿಳಿದು, ಒಡೆಯರು ಎಂಬ ಗುರುವರ್ಗವನ್ನು ಸೃಷ್ಟಿಸಿದರು. ಒಡೆಯರು ರೇವಣಸಿದ್ಧರ ವಂಶಸ್ಥರು ಅಥವಾ ಅವರಿಂದ ಸೃಷ್ಟಿಗೊಂಡವರೆಂಬ ನಂಬಿಕೆಯಿರುವುದರಿಂದ ಒಡೆಯರಿಗೆ ಉನ್ನತಸ್ಥಾನ ನೀಡಿರುವುದು ಸ್ಪಷ್ಟವಾಗುತ್ತದೆ. ಇವರನ್ನು ಕುರುಬರ ಗುರುಗಳೆಂದು, ಕುರುಬ ಜಂಗಮರೆಂದು ಗುರ್ತಿಸುತ್ತಾರೆ. ಆದರೆ ಲಿಂಗಾಯತ ಜಂಗಮರಿಗೆ ಇವರು ವಂದಿಸುತ್ತಾರೆ.

ಒಡೆಯರು ಲಿಂಗಾಂಗಿಗಳಾಗುವ ಪೂರ್ವದಲ್ಲಿ ಕುರುಬರಾಗಿದ್ದರು. ರೇವಣಸಿದ್ಧೇಶ್ವರನ ಕೃಪೆಯಿಂದ ಒಡೆಯರಾದ್ದರಿಂದ ತಮ್ಮ ದೇವರೆಂದು ರೇವಣಸಿದ್ಧೇಶ್ವರರನ್ನು ಪೂಜಿಸುತ್ತಾರೆ. ಕರ್ನಾಟಕದಾದ್ಯಂತ ನೆಲೆಸಿರುವ ಕುರುಬ ಒಡೆಯರು ಲಿಂಗ ಧರಿಸುತ್ತಾರೆ. ಕೆಲವು ಪ್ರದೇಶಗಳಲ್ಲಿ ಗುರು ಮಠಗಳನ್ನು ನಿರ್ಮಿಸಿಕೊಂಡಿದ್ದಾರೆ. ಬಿಜಾಪುರ ಜಿಲ್ಲೆಯ ಸರೂರು ಇವರ ಮೂಲ ಗುರುಪೀಠವಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲೂ ಅನೇಕ ಒಡೆಯರ ಮನೆತನಗಳಿರುವುದು ಕಂಡು ಬರುತ್ತದೆ. ಮಠಗಳಲ್ಲಿ ರೇವಣಸಿದ್ಧೇಶ್ವರ, ಶಾಂತಮುತ್ತಯ್ಯ, ಅಮೋಘಸಿದ್ಧನ ಮಠಗಳನ್ನು ನಿರ್ಮಿಸಿದ್ದಾರೆ. ಪೂಜಾ ಕ್ರಮಗಳನ್ನು ದಿನ ನಿತ್ಯವೂ ನೆರವೇರಿಸುತ್ತಾರೆ. ದೀಪಾವಳಿ, ದಸರಾ, ಶಿವರಾತ್ರಿ, ಮೊದಲಾದ ಹಬ್ಬದ ದಿನಗಳಂದು ವಿಶೇಷ ಪೂಜೆ ಮಾಡುವರಲ್ಲದೇ ಭಕ್ತರಿಗೆ ದಾಸೋಹವನ್ನು ಏರ್ಪಡಿಸುತ್ತಾರೆ.

ಕುರುಬರ ಕುಲಗುರುಗಳಾಗಿರುವುದರಿಂದ ಅವರ ಪ್ರತಿಯೊಂದು ಶುಭ-ಅಶುಭ ಕಾರ್ಯಗಳಲ್ಲೂ ಭಾಗವಹಿಸುತ್ತಾರೆ. ಜನನ, ಋತುಮತಿ, ವಿವಾಹ, ನಾಮಕರಣ, ಮರಣ, ಮೊದಲಾದ ಕಾರ್ಯಗಳೆಲ್ಲವೂ ಒಡೆಯರಿಲ್ಲದೆ ಪೂರ್ಣಗೊಳ್ಳುವುದಿಲ್ಲ. ಹೀಗಾಗಿ ಒಡೆಯರಿಗೆ ವಿಶಿಷ್ಠ ಸ್ಥಾನವಿದೆ. ವೀರಶೈವ ಧರ್ಮದ ಪ್ರಭಾವದಿಂದ ಲಿಂಗಧರಿಸಿ ವೀರಶೈವರಾದರು. ಅಂದಿನಿಂದ ಜೀವನದ ಆಚಾರ-ವಿಚಾರಗಳನ್ನು ಪರಿವರ್ತಿಸಿಕೊಂಡರು. ವೀರಶೈವ ಧರ್ಮದ ಸಂಸ್ಕಾರ-ವಿಧಿ-ಆಚರಣೆಗಳನ್ನು ಅನುಸರಿಸ ತೊಡಗಿದರು. ಮೂಲ ಕುರುಬರ ಒಂದು ಪಂಗಡವಾಗಿದ್ದ ಒಡೆಯರು ನಂತರದಲ್ಲಿ ಕುರುಬರಿಗಿಂತ ಶ್ರೇಷ್ಠರು ಹಾಗೂ ಭಿನ್ನರು ಎಂಬ ಭಾವನೆಯನ್ನು ತಳೆದರು.

ಜನಿಸಿದ ಮಗುವಿಗೆ ದೀಕ್ಷೆ ನೀಡಿ ಲಿಂಗಧಾರಣೆ ಮಾಡುತ್ತಾರೆ. ಲಿಂಗಧಾರಣೆಯಾದವನು ಜೋಳಿಗೆ ಹಿಡಿದು ಭಿಕ್ಷಾಟನೆ ಮಾಡುವ ಸಂಪ್ರದಾಯವಿದೆ. ಹೆಣ್ಣು ಮಗುವಿಗೆ ಲಿಂಗಧಾರಣೆ ಮಾಡುವುದಿಲ್ಲ. ೧೨ ಅಥವಾ ೧೫ ವರ್ಷದ ಒಳಗೆ ಲಿಂಗಧಾರಣೆ ಮಾಡುತ್ತಾರೆ. ರೇವಣಸಿದ್ಧೇಶ್ವರ ಮಠದಲ್ಲಿ ಕರಿ ಕಂಬಳಿಯ ಗದ್ದುಗೆ ಮಾಡುತ್ತಾರೆ[೧೪೪]. ಅದರ ಮೇಲೆ ಸೇಸಕ್ಕಿ ಹೊಯ್ದು ಪಂಚ ಕಳಸ ಹೂಡುವರು. ಲಿಂಗಧಾರಣೆಯಾಗುವ ಹುಡುಗನನ್ನು ಅದರ ಮೇಲೆ ಕೂಡಿಸುತ್ತಾರೆ. ಐವರು ಒಡೆಯರು ಕಂತೆ ಲಿಂಗವನ್ನು ಹುಡುಗನಿಗೆ ಕಟ್ಟಿ ಗುರು ಬೋಧನೆ ನೀಡುವರು. ಲಿಂಗಧಾರಣೆಯಾದ ಹುಡುಗ ಜೋಳಿಗೆ ಹಿಡಿದು ಭಿಕ್ಷಾಟನೆ ಮಾಡಬೇಕಾಗುತ್ತದೆ. ಅಂದಿನಿಂದ ಅವನು ಸಸ್ಯಹಾರಿಯಾಗಬೇಕು. ಮದ್ಯ-ಮಾಂಸ ಸೇವಿಸಬಾರದು ಎಂಬ ನಿಯಮವನ್ನು ಹಾಕುತ್ತಾರೆ. ಇದಕ್ಕೆ ಅಯ್ಯಾಚಾರವೆನ್ನುವರು.

ಒಡೆಯರಲ್ಲಿರುವ ಜನನ, ಋತುಮತಿ, ವಿವಾಹ, ಸೀಮಂತ, ಶವಸಂಸ್ಕಾರ ಮೊದಲಾದ ಆಚಾರಗಳು ವೀರಶೈವ ಧರ್ಮದ ಆಚರಣೆಗಳನ್ನು ಹೋಲುತ್ತವೆ. ಒಡೆಯರಲ್ಲಿ ಮರಣ ಹೊಂದಿದರೆ ಶವವನ್ನು ಸ್ನಾನ ಮಾಡಿಸಿ ಗೋಡೆಗೆ ಕೂಡಿಸುತ್ತಾರೆ.

ಹೊಸ ಮಡಿಕೆಯಲ್ಲಿ ಅಕ್ಕಿ ಹಾಕಿ ಗಂಧದ ಕಟ್ಟಿಗೆಯಿಂದ ಅನ್ನ ಮಾಡುತ್ತಾರೆ. ಅದನ್ನು ಸಮಾಧಿಯ ಸ್ಥಳದವರೆಗೂ ಒಯ್ಯುತ್ತಾರೆ. ಅಲ್ಲಿ ಗುಂಡಿಯನ್ನು ತೆಗೆದು ಅದಕ್ಕ ಮಂಟಪ ಕಟ್ಟುತ್ತಾರೆ. ಶವವನ್ನು ಪೂಜಾ ಭಂಗಿಯಲ್ಲಿ ಕೂಡಿತ್ತಾರೆ. ಬಿಲ್ವಪತ್ರೆ, ೧೧ ವಿಭೂತಿಗಳನ್ನು ಶವದ ಹತ್ತಿರವಿಡುತ್ತಾರೆ. ಜೀವಂತವಾಗಿದ್ದಾಗ ಕಟ್ಟಿದ ಗುಂಡಗಳಿಗೆಯಿಂದ ಲಿಂಗವನ್ನು ತೆಗೆದು ವಸ್ತ್ರದಲ್ಲಿಟ್ಟು ಕೊರಳಿಗೆ ಕಟ್ಟಿ ನಂತರ ಮುಚ್ಚುತ್ತಾರೆ. ಸಮಾಧಿಯ ಮೇಲೆ ಮಂಟಪ ಕಟ್ಟಿ ಆರಾಧನೆ ಮಾಡುವ ಸಂಪ್ರದಾಯವಿದೆ[೧೪೫]. ಗುಂಡಗಳಿಗೆಯ ಲಿಂಗವನ್ನು ಶವದ ಬಾಯಲ್ಲಿಡುವ ಪದ್ಧತಿಯಿದೆ.

ಪ್ರತಿಯೊಂದು ಗುರುಮಠಗಳು ತಮ್ಮ ಸುತ್ತ ಮುತ್ತಲಿನ ಗ್ರಾಮಗಳಲ್ಲಿಯ ಜನರನ್ನು ಭಕ್ತರನ್ನಾಗಿ ಹೊಂದಿರುತ್ತಾರೆ. ಅವರ ಪ್ರತಿಯೊಂದು ಧಾರ್ಮಿಕ ಕಾರ್ಯಗಳಲ್ಲಿಯೂ ಭಾಗವಹಿಸುತ್ತಾರೆ. ಹಾಗೂ ಅವರು ನೀಡಿದ ಭಿಕ್ಷೆಯನ್ನು ಸ್ವೀಕರಿಸುತ್ತಾರೆ. ಮಠಗಳ ಪ್ರಮುಖ ಆದಾಯ ಭಕ್ತರ ಕಾಣಿಕೆಯೇ ಆಗಿರುತ್ತದೆ. ಕೆಲವು ಮಠಗಳ ಗುರುಗಳು ಜಮೀನನ್ನು ಹೊಂದಿದ್ದಾರೆ. ಆದರೂ ವರ್ಷಕ್ಕೊಮ್ಮೆ ಭಕ್ತರ ಮನೆಗೆ ಭಿಕ್ಷೆಗೆ ಹೋಗುವ ಸಂಪ್ರದಾಯವಿದೆ.

ಕೊಪ್ಪಳ ಜಿಲ್ಲೆಯಲ್ಲಿ ಕೊಪ್ಪಳ, ಮೋರನಾಳ, ಬಿಸರಳ್ಳಿ, ಕೊರಡಕೇರಿ, ಕುಕನೂರು, ಬಸಾಪಟ್ಟಣ, ಮೊದಲಾದ ಭಾಗಗಳಲ್ಲಿ ಗುರುಮಠಗಳಿವೆ. ಸುತ್ತಮುತ್ತಲಿನ ಗ್ರಾಮದ ಕುರುಬರು ಈ ಮಠಗಳಿಗೆ ಭಕ್ತಿ ಭಾವದಿಂದ ನಡೆದುಕೊಳ್ಳುತ್ತಾರೆ. ಕೆಲವೆಡೆ ಜಾತ್ರೆ–ಉತ್ಸವದ ಸಂದರ್ಭದಲ್ಲಿ ಹೇಳಿಕೆಯನ್ನು ಹೇಳುತ್ತಾರೆ. ಗುರುಗಳ ಮಾರ್ಗದರ್ಶನದಂತೆ ನಡೆಯುವುದು ಇಂದಿಗೂ, ಕುರುಬರಲ್ಲಿ ಕಂಡುಬರುತ್ತದೆ.

ಒಟ್ಟಾರೆ ರೇವಣಸಿದ್ಧೇಶ್ವರನಿಂದ ಸೃಷ್ಟಿಗೊಂಡ ಒಡೆಯರ ಪಂಗಡವು ಕುರುಬರ ಕುಲಗುರುಗಳಾಗಿ ಇಂದಿಗೂ ಉನ್ನತ ಸ್ಥಾನ ಪಡೆದಿದೆ. ಹೀಗಾಗಿ ಕುರುಬರ ಧಾರ್ಮಿಕ–ಸಾಮಾಜಿಕ ಜೀವನದಲ್ಲಿ ಮಹತ್ವದ ಪಾತ್ರವನ್ನು ಒಡೆಯರು ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

**೩.೪.೫ ಗೊರವರು**

ಕುರುಬರು ಹಲವಾರು ಪಂಗಡಗಳಲ್ಲಿ ಗೊರವರ ಪಂಗಡವು ಒಂದಾಗಿದೆ. ಗೊರವರು ಮೈಲಾರಲಿಂಗನ ಭಕ್ತರು. ಇವರು ಕ್ರಿ.ಶ.೮ನೇ ಶತಮಾನಕ್ಕಿಂತ ಪೂರ್ವದಿಂದಲೂ ಕನ್ನಡ ನಾಡಿನಲ್ಲಿ ಜೀವನ ನಡೆಸುತ್ತಿದ್ದಾರೆ[೧೪೬]. ಭಿಕ್ಷೆ ಇವರ ಪ್ರಧಾನ ವೃತ್ತಿಯಾಗಿದ್ದರೂ ವ್ಯವಸಾಯವನ್ನು ಮಾಡುತ್ತಾರೆ. ಧಾರ್ಮಿಕ ಮತೀಯ ಸಾಮರಸ್ಯಕ್ಕೆ ಹೆಸರಾದ ಗೊರವರ ಸಂಸ್ಕೃತಿಯು ಭಾವೈಕ್ಯತೆಯ ಪ್ರತೀಕವಾಗಿದೆ. ಎಲ್ಲ ಜಾತಿಗಳಲ್ಲಿ ಗೊರವರು ಇರುವುದನ್ನು ಕಾಣಬಹುದು.

**೧. ಗೊರವ ಪದದ ಅರ್ಥ**

ಗುರು ಶಬ್ದದ ಪ್ರಥಮ ಬಹುವಚನ ರೂಪ ಗುರುವ ಎಂಬುದೇ ಕಾಲಾಂತರದಲ್ಲಿ ಗುರುವ, ಗೊರವ ಎಂದಾಗಿರುವ ಸಾಧ್ಯತೆಯಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ[೧೪೭]. ಡಾ.ಸಾಲೆತೊರೆಯವರು ತಮ್ಮ "ಸ್ಥಾನಿಕಲ್ ಅಂಡ್ ದೇರ್ ಹಿಸ್ಟಾರಿಕಲ್ ಇಂಪಾರ್ಟಿಯನ್ಸ್" ಎಂಬ ಲೇಖನದಲ್ಲಿ ಗೊರವ ಎಂಬುದು ಸಂಸ್ಕೃತದ ಗುರು+ಅಡಿಯ ತದ್ಭವವೆಂದೂ,

ಗೊರವ ಎಂದರೆ ದೇವಸ್ಥಾನದ ಗುರು ಅಥವಾ ಭಗವಂತನ ಪಾದದ ಸಮೀಪದಲ್ಲಿರುವವನು ಎಂದರ್ಥವಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ[೧೪೮].

ಕಿಟ್ಟೆಲ್ ನಿಘಂಟಿನಲ್ಲಿ ಗೊರವ ಎಂದರೆ ಶೈವ ತಿರುಕರ ಒಂದು ವರ್ಗ ಎಂದಿದೆ. ಗೊಗ್ಗ ಎನ್ನುವ ಪದಕ್ಕೆ ಮೈಲಾರಲಿಂಗನ ಹಿಂಬಾಲಕರು ಎಂದು ಕಿಟ್ಟೆಲ್‌ರು ಅಭಿಪ್ರಾಯಪಟ್ಟಿದ್ದಾರೆ[೧೪೯]. ಡಾ. ಎಂ. ಚಿದಾನಂದಮೂರ್ತಿಯವರು ಗುರು ಎಂಬ ಸಂಸ್ಕೃತ ಪದದ ಬಹುವಚನ ರೂಪ ಗುರುವ ಎಂಬುದೇ ಗೊರವ ಎಂದಾಗಿರುವುದು ಎಂದಿದ್ದಾರೆ. ಅಲ್ಲದೆ ಅದಕ್ಕೆ ಅಡಿಗಳ ಪದವು ಸೇರಿ ಗುರುವಡಿಗಳ್ ಅಥವಾ ಗೊರವಡಿಗಳ ಎಂದಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ[೧೫೦].

೨. ಪೌರಾಣಿಕ ಮೂಲ

ಮಣಿಚೂಲ ಪರ್ವತದಲ್ಲಿ ಮಲ್ಲನೆಂಬ ದೈತ್ಯನು ಬಂದು ಏಳು ಜನ ಪುತ್ರರನ್ನು ಹಿಂಸಿಸತೊಡಗಿದನು. ಮಲ್ಲನನ್ನು ಎದುರಿಸಲು ಯಾವ ದೇವತೆಗಳೂ ಮುಂದಾಗದಿದ್ದಾಗ ಋಷಿಗಳು ಶಿವನನ್ನು ಪ್ರಾರ್ಥಿಸಿದರು. ಆಗ ಶಿವನು ಮಾರ್ತಾಂಡ ಭೈರವ ರೂಪವನ್ನು ತಾಳಿ ಅಶ್ವಾರೋಹಿಯಾಗಿ ಖಡ್ಗ ಮೊದಲಾದ ಶಸ್ತ್ರಾಸ್ತ್ರಗಳೊಂದಿಗೆ ಯುದ್ಧಕ್ಕೆ ಹೊರಡುತ್ತಾನೆ. ಪಾರ್ವತಿಯು ಗಂಗಾಮ್ಹಾಲಸಿಕಾರೂಪ ಧರಿಸಿ ಶಿವನೊಡನೆ ಯುದ್ಧಕ್ಕೆ ಸಿದ್ಧಳಾಗುತ್ತಾಳೆ[೧೫೧]. ಏಳುಕೋಟಿ ದೇವಸೇನೆ ಮಲ್ಲಾಸುರನ ಮೇಲೆ ಯುದ್ಧ ಹೂಡಿತು, ಯುದ್ಧದಲ್ಲಿ ಮಣಿಕಾಸುರ ಕೊಲ್ಲಲ್ಪಡುತ್ತಾನೆ.

ಮಣಿಕಾಸುರನ ಮರಣದ ನಂತರ ಮಲ್ಲಾಸುರ ಸಂಧಿಗೆ ಒಪ್ಪಲಿಲ್ಲ. ಹೀಗಾಗಿ ಯುದ್ಧ ಪ್ರಾರಂಭವಾಯಿತು. ಕೊನೆಗೆ ಮಲ್ಲಾಸುರ ಯುದ್ಧದಲ್ಲಿ ಹತನಾದನು. ಹತನಾದ ಮಲ್ಲಾಸುರ ಶಿವನನ್ನು ಪ್ರಾರ್ಥಿಸಿ ಪರಶಿವನ ಹೆಸರಿನ ಪೂರ್ವಾರ್ಧದಲ್ಲಿ ತನ್ನ ಹೆಸರು ಉಳಿಯುವಂತೆ ಬೇಡಿಕೊಂಡನು. ಆದ್ದರಿಂದ ಶಿವನು ಮಲ್ಲಾರಿ ಎಂಬ ನಾಮಧೇಯ ಪಡೆದುಕೊಂಡನು[೧೫೨].

ಶಿವನು ರಾಕ್ಷಸರ ಸಂಹಾರಕ್ಕಾಗಿ ಭೂಲೋಕಕ್ಕೆ ಬಂದಾಗ ಗೊರವಯ್ಯನ ವೇಷ ಧರಿಸಿದ್ದನು. ಆಚರಿಸುವ ಆಚರಣೆಗಳು "ಮಲ್ಲಾರಿ ಮಹಾತ್ಮ" ಪುರಾಣದ ಪ್ರತಿಯೊಂದು ಘಟನೆಯ ಅನುಕರಣೆಯಾಗಿದೆ. ತುಪ್ಪದ ಮಾಳಮ್ಮನನ್ನು ಮದುವೆಯಾಗುವಾಗ ಬೆನ್ನಟ್ಟಿ ಬಂದ ಅವಳ ಅಣ್ಣಂದಿರಿಗೆ ಶಿವನೇ ಮೂರು ಕವಡೆಗಳನ್ನು ಅವರ ಕೊರಳುಗಳಿಗೆ ಕಟ್ಟಿದನು. ಐದು ಭಂಡಾರ ಬಟ್ಟಲು, ಐದು ಢಮರುಗ, ತ್ರಿಶೂಲಗಳನ್ನು ಕೊಟ್ಟು ದೋಣಿ ಸೇವೆ ಮಾಡಿಸಿದನು. ಆದ್ದರಿಂದ ಗೊರವರಿಗೆ ಮೈಲಾರಲಿಂಗನೇ ದೀಕ್ಷೆ ನೀಡಿದನೆಂದು ಹೇಳುತ್ತಾರೆ. ಶಿವನಿಂದಲೇ ಗೊರವರು ಸೃಷ್ಟಿಗೊಂಡಿದ್ದಾರೆಂದು ಈ ಪೌರಾಣಿಕ ಹಿನ್ನೆಲೆಯಿಂದ ಸ್ಪಷ್ಟಪಡುತ್ತದೆ.

೩. ಐತಿಹಾಸಿಕ ಮೂಲ

ಕರ್ನಾಟಕದಲ್ಲಿ ಬಹಳ ಹಿಂದಿನಿಂದಲೂ ಲಕುಲೀಶ ಪಾಶುಪತ ಎಂಬ ಹೆಸರಿನ ಮತದ ಶೈವರು ಪ್ರಬಲರಾಗಿದ್ದರು. ಇವರು ಶಿವನ ಆರಾಧಕರಾಗಿದ್ದರು. ಲಕುಲೀಶ ಪಾಶುಪತರು ಸಾತ್ವಿಕ ಸನ್ಯಾಸಿಗಳಾಗಿದ್ದರು. ಇವರಲ್ಲಿ ಮಾಂಸಹಾರ, ಮದ್ಯಪಾನ ಮೊದಲಾದ ಹೇಯ ಕೃತ್ಯಗಳಿರಲಿಲ್ಲ. ಇವರು ಜನತೆಯೊಡನೆ ಅತಿ ನಿಕಟವಾದ ಸಂಪರ್ಕವನ್ನಿಟ್ಟುಕೊಂಡಿದ್ದರು. ದೇವಸ್ಥಾನಗಳಲ್ಲಿ

ಸ್ಥಾಪಿತವಾಗಿದ್ದ ಸ್ಥಾವರ ಲಿಂಗಗಳ ಆರಾಧಕರಾಗಿದ್ದರು. ಕೆಲವರು ತನ್ಮಯತೆಯಿಂದ ಶಿವಭಕ್ತಿಯಲ್ಲಿ ತೊಡಗುತ್ತಿದ್ದರು. ಇವರನ್ನು ಜನರು ಗೊರವರೆಂದು ಕರೆಯುತ್ತಿದ್ದರು ಎಂದು ಡಾ.ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ[೧೩೫].

ಅನೇಕ ಶಾಸನಗಳು ಕಾಳಾಮುಖ ಪಾಶುಪತ ಪಂಥದವರು ಗೊರವರೆಂದು ಉಲ್ಲೇಖಿಸಿವೆ. ಕಾಳಾಮುಖರು ತಪೋಧನರು, ವ್ರತಿಗಳು, ಉನ್ನತ ವಿದ್ವಾಂಸರು, ಸಾತ್ವಿಕರು, ಜನಪ್ರಿಯ ರಾಜಪೂಜಿತರು ಆಗಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ಕಾಳಾಮುಖರ ಸಮಯವನ್ನು "ಏಕ್ಕೋಟಿ ಸಮಯ" ವೆಂದು, ಇವರ ಮಠಗಳನ್ನು ಏಕ್ಕೋಟಿ ಮಠಗಳೆಂದು, ಇವರನ್ನು ಏಕ್ಕೋಟಿ ಮುನೀಂದ್ರರೆಂದು ಕರೆಯುತ್ತಿದ್ದರೆಂಬುದಕ್ಕೆ ಶಾಸನಗಳು ಆಧಾರವಾಗಿವೆ[೧೩೬]. ಗೊರವರಲ್ಲಿ "ಏಳುಕೋಟಿ ಏಳುಕೋಟಿ ಮೈಲಾರಲಿಂಗ" ಎಂಬ ಉದ್ಘೋಷವನ್ನು ಮತ್ತು ಏಳಕ್ಕಿರುವ ಮಹತ್ವವನ್ನು ನೋಡಿದಾಗ ಕಾಳಾಮುಖರಿಗೂ ಗೊರವರಿಗೂ ಇರುವ ಸಂಬಂಧ ಸ್ಪಷ್ಟವಾಗುತ್ತದೆ.

ಗೊರವ ಶಬ್ದವು ಗೊಗ್ಗ ಎಂದಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕ್ರಿ.ಶ.೧೧ನೇ ಶತಮಾನದಲ್ಲಿ ಚಾಲುಕ್ಯ ಮತ್ತು ಶಿಲಾಹಾರರ ಮನೆತನದ ರಾಜರಲ್ಲಿ ಅನೇಕರು ಗೊಗ್ಗಿ ಎಂಬ ಹೆಸರಿನವರಾಗಿದ್ದರು. ರಾಷ್ಟ್ರಕೂಟ ಕೃಷ್ಣನ ಕ್ರಿ.ಶ.೧೦ನೇ ಶತಮಾನದ ಶಾಸನದಲ್ಲಿ ತಿಪ್ಪಯ್ಯ ಗೊರವ ಎಂಬ ಕಾಳಾಮುಖ ಗುರುವಿನ ಉಲ್ಲೇಖವಿದೆ[೧೩೭].

ಸರ್ವಜ್ಞನು ತನ್ನ ವಚನದಲ್ಲಿ ಮೈಲಾರನ ನಾಯಿಗೊರವರನ್ನು ಈ ರೀತಿ ಪ್ರಸ್ತಾಪಿಸಿದ್ದಾನೆ.

ಉದ್ದರೀಯ ಕೊಟ್ಟಣ್ಣ ! ಹಾವಾದ
ಎದ್ದೆದ್ದು ಬರುವ ನಾಯಾದ ! ಮೈಲಾರ
ಗೊಗ್ಗಯ್ಯನಾದ ಸರ್ವಜ್ಞ !!

ಜನ್ನನ ಅನಂತನಾಥ ಪುರಾಣ, ನೇಮಿಚಂದ್ರನ ಲೀಲಾವತಿ ಪುರಾಣ, ಹರಿಹರನ ಶಂಕರದಾಸಿಮಯ್ಯನ ರಗಳೆ, ವಿರಕ್ತ ತೋಂಟದಾರ್ಯನ ತೋಂಟದ ಸಿದ್ಧೇಶ್ವರ ಪುರಾಣ, ಕನಕದಾಸರ ಕೀರ್ತನೆಗಳು ಮೊದಲಾದವು ಮೈಲಾರಲಿಂಗ ಮತ್ತು ಗೊರವರ ಬಗ್ಗೆ ಉಲ್ಲೇಖಿಸುತ್ತವೆ[೧೩೮]. ಈ ಹಿನ್ನೆಲೆಯಲ್ಲಿ ಗೊರವರು ಕ್ರಿ.ಶ. ೮ ನೇ ಶತಮಾನದ ಪೂರ್ವದಲ್ಲಿಯೇ ಕನ್ನಡ ನಾಡಿನಲ್ಲಿ ನೆಲೆಸಿದ್ದರೆಂದು ಹೇಳಬಹುದಾಗಿದೆ.

ಗೊರವರು ಧರಿಸುವ ವೇಷಭೂಷಣಗಳು, ಹೊಂದಿರುವ ವಾದ್ಯಗಳು ಹಾಗೂ ಅವರ ವರ್ತನೆಗಳ ಆಧಾರದ ಮೇಲೆ ಗೊರವರನ್ನು ಕರಡಿ ಗೊರವರು, ಪಾರಿ ಗೊರವರು, ಮದ್ದಲೆ ಗೊರವರು, ನಾಯಿ ಗೊರವರು, ಕುದುರೆ ಗೊರವರು, ಕಾರಣಿಕದ ಗೊರವರು, ಚವರಿ ಗೊರವಿಯರು, ಎಲೆ ಗೊರವಿಯರು, ಶಿಬಾರದಾಳಿಯವರು ಎಂದು ವಿಂಗಡಿಸಬಹುದಾಗಿದೆ[೧೩೯].

ಗೊರವರು ಆಲದಮರ ಕುದುರೆ, ನಾಯಿ, ಕರಡಿ, ಸರ್ಪ, ಹುತ್ತ ಶಿಬಾರ, ಮೊದಲಾದವುಗಳನ್ನು ತಮ್ಮ ಕುಲಸಂಕೇತಗಳನ್ನಾಗಿ ಪೂಜಿಸುತ್ತಾರೆ. ಇವು ಗೊರವರ ಸಂಸ್ಕೃತಿಯ ವೈವಿಧ್ಯಮಯ ಮುಖಗಳನ್ನು ಪರಿಚಯಿಸುತ್ತವೆ.

ಗೊರವರು ಮೂಲತಃ ಮಾಂಸಾಹಾರಿಗಳಾಗಿದ್ದರು, ಕಾಡುಮೃಗಗಳನ್ನು ಬೇಟೆಯಾಡುವುದರ ಮೂಲಕ ಆಹಾರವನ್ನು ಸಂಗ್ರಹಿಸಿಕೊಳ್ಳುತ್ತಿದ್ದರು. ಪಶುಪಾಲನೆಯನ್ನು ಅವಲಂಬಿಸಿದ ಮೇಲೆ ಸಾತ್ವಿಕ ಆಹಾರವನ್ನು ರೂಢಿಸಿಕೊಂಡರು. ಇಂದು

ಗೊರವರ ಎಲ್ಲಾ ಧಾರ್ಮಿಕ ಆಚರಣೆಗಳಲ್ಲೂ ಸಸ್ಯಹಾರ ಪ್ರಧಾನವಾಗಿದೆ. ಹಾಲು, ತುಪ್ಪ, ಜೋಳ, ಸಜ್ಜೆ, ಕಾಳುಗಳು ಪ್ರಮುಖ ಆಹಾರ ಪದಾರ್ಥಗಳಾಗಿವೆ. ಬಿಳಿ ಅನ್ನದ ಹುಗ್ಗಿ, ಕರಿಗಡುಬು, ಹೂರಣದ ಅಡಿಗೆ, ಬದನೆಕಾಯಿ, ಸಜ್ಜರೊಟ್ಟಿ ಮೊದಲಾದವು ಪ್ರಮುಖ ಆಹಾರ ಪದಾರ್ಥಗಳಾಗಿ ಇಂದಿಗೂ ರೂಢಿಯಲ್ಲಿವೆ.

ಗೊರವರ ಉಡುಗೆ-ತೊಡುಗೆಯಲ್ಲಿ ಪ್ರಾಂತೀಯ ವ್ಯತ್ಯಾಸಗಳಿವೆ. ಉತ್ತರ ಕರ್ನಾಟಕದ ಗೊರವರು ತಲೆಗೆ ಮುಂಡಾಸು ಸುತ್ತಿ, ಮುದ್ರೆಗಳುಳ್ಳ ಕರಿಕಂಬಳಿಯ ನಿಲುವಂಗಿ ಧರಿಸಿ ಕೈಯಲ್ಲಿ ಡಮರು, ತ್ರಿಶೂಲಗಳನ್ನು ಹೊಂದಿರುತ್ತಾರೆ. ಕೊರಳಲ್ಲಿ ಹುಲಿ ಚರ್ಮದ ಭಂಡಾರ ಚೀಲ, ಕೈಯಲ್ಲಿ ಬೆತ್ತ, ಹಣೆಯಲ್ಲಿ ಭಂಢಾರ, ಹೆಗಲ ಮೇಲಿನ ಕಂಬಳಿಯ ಮೇಲೆ ಉಕ್ಕಿನ ಸರಪಳಿಯಿರುತ್ತದೆ.

ಗೊರವರು ಮೂಲತಃ ಕಸುಬುದಾರರಲ್ಲ. ಭಕ್ತ ಪರಂಪರೆಗೆ ಸೇರಿದವರು. ಭಿಕ್ಷಾವೃತ್ತಿಯೇ ಇವರ ಕುಲಕಸುಬಾಗಿದೆ. ಆದರೆ ಇಂದು ಭಿಕ್ಷೆಯನ್ನು ಅವಮಾನವೆಂದು ಭಾವಿಸಿ ವ್ಯವಸಾಯ, ಕೈಕಸುಬು, ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಕೆಲವರು ವೃತ್ತಿಗಾಯಕರೂ ಆಗಿದ್ದಾರೆ.

ಗೊರವರಲ್ಲಿ ಜನನ, ಋತುಮತಿ, ವಿವಾಹ, ಸೀಮಂತ, ಮರಣ ಮೊದಲಾದ ಸಂದರ್ಭಗಳಲ್ಲಿ ಹಲವು ಬಗೆಯ ಆಚರಣೆಗಳು ರೂಢಿಯಲ್ಲಿವೆ. ಗೊರವರ ಧಾರ್ಮಿಕ ಆಚರಣೆಗಳು ಕುರುಬರ ಧಾರ್ಮಿಕ ಆಚರಣೆಗಳನ್ನು ಹೋಲುತ್ತವೆ. ಇವುಗಳಲ್ಲಿ ವಿಶೇಷವಾದ ವೈಶಿಷ್ಟ್ಯವು ಗೋಚರಿಸುವುದಿಲ್ಲ.

ಗೊರವರಲ್ಲಿ ದೋಣಿಸೇವೆ, ಗೊರವರಿಗೆ ಇಡುವುದು, ಹೆಗ್ಗಪ್ಪನನ್ನು ಕಳಿಸುವುದು, ಕಾಯ್, ಕೋಲು ದೀವಟಿಗೆ, ಖಡ್ಗ ಸಾರುವುದು, ಕಾರಣಿಕ ಹೇಳುವುದು ಮೊದಲಾದ ಆಚರಣೆಗಳಿವೆ. ಶಸ್ತ್ರ ಪವಾಡಗಳಲ್ಲಿ ಕಾಲು ಪವಾಡ, ಕೈ ಪವಾಡ, ಶಿರಸ್ಸು ಪವಾಡ, ಕನ್ನೆ ಪವಾಡ, ಸರಪಣಿ ಪವಾಡ, ಮೊದಲಾದ ಪವಾಡಗಳನ್ನು ಮಾಡುತ್ತಾರೆ. ಧಾರ್ಮಿಕವಾಗಿ ತಮ್ಮದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡಿದ್ದಾರೆ.

ಒಟ್ಟಾರೆ ಮೈಲಾರಲಿಂಗನ ಭಕ್ತರಾದ ಗೊರವರು ಶೈವ ಸನ್ಯಾಸಿಗಳು. ವೈವಿಧ್ಯಮಯ ಆಚರಣೆಗಳುಳ್ಳ ಗೊರವರು ಹಾಗೂ ಕ್ರಿ.ಶ. ೮ ನೇ ಶತಮಾನಕ್ಕಿಂತಲೂ ಪೂರ್ವದಿಂದಲೂ ಇಲ್ಲಿ ನೆಲೆಸಿದ್ದಾರೆಂದು ಸ್ಪಷ್ಟ ಪಡುತ್ತದೆ.

**ಟಿಪ್ಪಣಿಗಳು**

೧. ಪಾವನ, ಸಂ:ಎಂ.ಜೈಕುಮಾರ, ಪ್ರ:ಶ್ರೀ ಕಾಗಿನೆಲೆ ಮಹಾಸಂಸ್ಥಾನ, ಕನಕ ಗುರುಪೀಠ, ಬೆಂಗಳೂರು-೧೯೯೨, ಪು-೧೬

೨. ಶಂಭಾಕೃತಿ, ಸಂಪುಟ-೧, ಸಂ:ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ ಮೈಸೂರು, ೧೯೯೯, ಪು-೨೭೪

೩. ಅದೇ, ಪು-೨೩೨

೪. ಕುರುಬರ ಚರಿತ್ರೆ, ಲೇ:ಸುಧಾಕರ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು, ೧೯೯೯, ಪು-೨೭೪

೫. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೯೩, ಪು-೩

೬. ಕನ್ನಡ-ಇಂಗ್ಲೀಷ್ ಶಬ್ದಕೋಶ, ಸಂ:ಎಫ್.ಕಿಟ್ಟೆಲ್, ಪ್ರ: ಏಶಿಯನ್ ಎಜುಕೇಷನ್ ಸೀರಿಸ್, ನ್ಯೂಡೆಲ್ಲಿ -೧೯೮೨, ಪು-೪೪೬

೭. ಹಾಲಕೆನೆ, ಸಂ:ಡಾ.ಶ್ರೀರಾಮ ಇಟ್ಟಣ್ಣವರ್, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ -೨೦೦೨, ಪು-೧೦

೮. ಅದೇ, ಪು-೧೦

೯. ಹಾಲುಮತ- ಒಂದು ಜಾನಪದೀಯ ಅಧ್ಯಯನ, ಎಂ.ಫಿಲ್ ಪ್ರಬಂಧ, (ಅಪ್ರಕಟಿತ) ಸಂ:ಶಾಂತಪ್ಪತಳ್ಳಿಹಾಳ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩, ಪು-೮

೧೦. ಕನ್ನಡ-ಇಂಗ್ಲೀಷ್ ಶಬ್ದಕೋಶ, ಸಂ:ಎಫ್.ಕಿಟ್ಟೆಲ್, ಪ್ರ: ಏಶಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ -೧೯೮೨, ಪು-೪೪೭

೧೧. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೯೩, ಪು-೨

೧೨. ಕಾಯಕಯೋಗಿ, ಪ್ರ.ಸಂ:ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ ರಜತ ಮಹೋತ್ಸವ ಸಮಿತಿ, ಗದಗ -೨೦೦೨, ಪು-೨೧೩

೧೩. ಗ್ರಾಮದೇವತೆಗಳು, ಲೇ:ಸಿದ್ದಲಿಂಗಯ್ಯ, ಪ್ರ:ಮೂಲಭಾರತಿ ಪ್ರಕಾಶನ, ಬೆಂಗಳೂರು-೧೯೯೭, ಪು-೫೭

೧೪. ಹಾಲತೊರೆ, ಸಂ:ಎಂ.ಕರಿಯಪ್ಪ, ಪ್ರ: ನಗರದ ಕುರುಬರ ಸಂಘ, ದಾವಣಗೆರೆ-೨೦೦೩, ಪು-೩೯

೧೫. ಕರ್ನಾಟಕದ ಕುರುಬರು, ಲೇ ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೯೩, ಪು-೧೨

೧೬. ಅದೇ, ಪು-೩

೧೭. ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ ಆಪ್ ಸೌಥರ್ನ ಇಂಡಿಯಾ, ಸಂ:೪, ಲೇ:ಎಡ್ಗರ್ ಥರ್ಸ್ಟನ್, ಪ್ರ: ಏಶಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ -೧೯೮೭, ಪು-೧೩೯

೧೮. ಹಾಲಕೆನೆ, ಸಂ:ಡಾ.ಶ್ರೀರಾಮ ಇಟ್ಟಣ್ಣವರ್, ಪ್ರ:ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ -೨೦೦೨, ಪು-೧೩೭

೧೯. ಬ್ಯಾಕ್‌ವರ್ಡ ಕ್ಲಾಸ್ ಅಂಡ್ ಕ್ಲಾಸ್ ಮೂವಮೆಂಟ್ ಇನ್ ಕರ್ನಾಟಕ ವಿಥ್ ಸ್ಪೆಷಲ್ ರೆಪರೆನ್ಸ್ ಟು ಕುರುಬ, ಪಿ.ಎಚ್.ಡಿ. ಪ್ರಬಂಧ (ಅಪ್ರಕಟಿತ) ಸಂಶೋ: ಕೆ.ಎಂ.ಬಸವರಾಜ ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೮೩, ಪು-೮೬

೨೦. ಅದೇ, ಪು–೮೬

೨೧. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ –೧೯೯೩, ಪು–೧

೨೨. ಅದೇ, ಪು–೨

೨೩. ಅದೇ, ಪು–೨

೨೪. ಅದೇ, ಪು–೨

೨೫. ಶಂಭಾಕೃತಿ, ಸಂಪುಟ–೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೧೯೯೯, ಪು–೨೭೩

೨೬. ಅದೇ, ಪು–೨೭೩

೨೭. ದಿಕ್ಯಾಸ್ಟ ಅಂಡ್ ಟ್ರೈಬ್ಸ್ ಆಫ್ ಬಾಂಬೆ, ಸಂಪುಟ–೨, ಲೇ: ಆರ್.ವಿ.ಎಂಥೋವೆನ, ಪ್ರ: ಏಶಿಯನ್ ಎಜ್ಯುಕೇಶನಲ್ ಸರ್ವಿಸಸ್, ನ್ಯೂಡೆಲ್ಲಿ –೧೯೯೦, ಪು–೩೧೭

೨೮. ಅದೇ, ಪು–೨೧೭

೨೯. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೯೩, ಪು–೩೬

೩೦. ಅದೇ, ಪು–೨೬

೩೧. ಶಂಭಾಕೃತಿ, ಸಂಪುಟ–೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು –೧೯೯೯, ಪು–೨೭೩

೩೨. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ, ಲೇ:ಎಂ.ಹೆಚ್.ನಾಗರಾಜು, ಪ್ರ: ಅನಿಕೇತನ ಪ್ರಕಾಶನ, ತುಮಕೂರು –೨೦೦೪, ಪು–೭೮

೩೩. ಅದೇ, ಪು–೭೬

೩೪. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ –೧೯೯೩, ಪು–೧

೩೫. ಪ್ರಾಚೀನ ಭಾರತ, ಲೇ:ಆರ್.ಎಸ್.ಶರ್ಮಾ, ಪ್ರ:ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು–೧೯೯೭, ಪು–೭೧

೩೬. ಕುರುಬರ ಚರಿತ್ರೆ, ಸಂ:ಸುಧಾಕರ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು –೧೯೯೩, ಪು–೩

೩೭. ಪ್ರಾಚೀನ ಭಾರತ, ಲೇ:ಆರ್.ಎಸ್.ಶರ್ಮಾ, ಪ್ರ:ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು– ೧೯೯೭, ಪು–೭೧

೩೮. ಅದೇ, ಪು–೭೧

೩೯. ಕುರುಬರ ಚರಿತ್ರೆ, ಸಂ:ಸುಧಾಕರ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು -೧೯೯೩, ಪು-೧೨

೪೦. ಅದೇ, ಪು-೧೨

೪೧. ಹಾಲುಮತ-ಒಂದು ಜಾನಪದೀಯ ಅಧ್ಯಯನ, ಎಂ.ಫಿಲ್ ಪ್ರಬಂಧ, (ಅಪ್ರಕಟಿತ) ಸಂಶೋ:ಶಾಂತಪ್ಪತಳ್ಳಿಹಾಳ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೯೩, ಪು-೨

೪೨. ಹಾಲುಮತ ದರ್ಶನ, ಲೇ:ಶಂಬಾ ಜೋಶಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೩, ಪು-೭೧

೪೩. ಅದೇ, ಪು-೮

೪೪. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೨೭೯

೪೫. ಅದೇ, ಪು-೨೩೬

೪೬. ಅದೇ, ಪು-೨೩೯

೪೭. ಕನ್ನಡ ಇಂಗ್ಲೀಷ್ ಶಬ್ದಕೋಶ, ಸಂ:ಎಫ್,ಕಿಟ್ಟೆಲ್, ಪ್ರ: ಏಶಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ-೧೯೮೨, ಪು-೪೪೬

೪೮. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೨೭೯

೪೯. ಅದೇ, ಪು-೨೭೯

೫೦. ಕನ್ನಡ ಇಂಗ್ಲೀಷ್ ಶಬ್ದಕೋಶ, ಸಂ:ಎಫ್. ಕಿಟ್ಟೆಲ್, ಪ್ರ: ಏಶಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ -೧೯೮೨, ಪು-೪೪೬

೫೧. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೨೭೯

೫೨. ಅದೇ, ಪು-೨೭೯

೫೩. ಅದೇ, ಪು-೩೪೧

೫೪. ಅದೇ, ಪು-೩೨೧

೫೫. ಅದೇ, ಪು-೩೨೨

೫೬. ಅದೇ, ಪು-೩೨೨

೫೭. ಅದೇ, ಪು-೨೭೪

೫೮. ಅದೇ, ಪು-೨೮೧

೫೯. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೨೬೨

೬೦. ಹಾಲುಮತ-ಒಂದು ಜಾನಪದೀಯ ಅಧ್ಯಯನ, ಎಂ.ಫಿಲ್ ಪ್ರಬಂಧ, (ಅಪ್ರಕಟಿತ) ಸಂಶೋ:ಶಾಂತಪ್ಪ ತಳ್ಳಿಹಾಳ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩, ಪು-೧೯

೬೧. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೨೬೧

೬೨. ಬ್ಯಾಕ್‌ವರ್ಡ ಕ್ಲಾಸ್ ಅಂಡ್ ಕ್ಲಾಸ್ ಮೂವಮೆಂಟ್ ಇನ್ ಕರ್ನಾಟಕ ವಿಥ್ ಸ್ಪೆಷಲ್ ರೆಫರೆನ್ಸ್ ಟು ಕುರುಬ, ಪಿ.ಎಚ್.ಡಿ. ಪ್ರಬಂಧ (ಅಪ್ರಕಟಿತ), ಸಂಶೋ: ಕೆ.ಎಂ.ಬಸವರಾಜ ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೮೩, ಪು-೮೬.

೬೩. ಅದೇ, ಪು-೮೬

೬೪. ಶಂಭಾಕೃತಿ, ಸಂಪುಟ--೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೩೦೯

೬೫. ಅದೇ, ಪು-೩೦೬

೬೬. ಅದೇ, ಪು-೩೦೬

೬೭. ಅದೇ, ಪು-೩೦೬

೬೮. ಅದೇ, ಪು-೨೯೨

೬೯. ಅದೇ, ಪು-೨೯೨

೭೦. ಅದೇ, ಪು-೩೦೭

೭೧. ಅದೇ, ಪು-೩೦೭

೭೨. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೩೦೮

೭೩. ಹಾಲುಮತ-ಒಂದು ಜಾನಪದೀಯ ಅಧ್ಯಯನ, ಎಂ.ಫಿಲ್ ಪ್ರಬಂಧ (ಅಪ್ರಕಟಿತ), ಸಂಶೋ:ಶಾಂತಪ್ಪ ತಳ್ಳಿಹಾಳ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೯೩,ಪು-೨೭

೭೪. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೩೧೩

೭೫. ಅದೇ, ಪು-೩೧೩

೭೬. ಅದೇ, ಪು-೩೧೪

೭೭. ಅದೇ, ಪು-೩೧೪

೭೮. ಕುರುಬರ ಚರಿತ್ರೆ, ಲೇ:ಸುಧಾಕರ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು-೧೯೯೯, ಪು-೨೭೪

೭೯. ಅದೇ, ಪು-೩೬

೮೦. ಅದೇ, ಪು-೩೬

೮೧. ದಿಕ್ಯಾಸ್ಟ ಅಂಡ್ ಟ್ರೈಬ್ಸ್ ಆಫ್ ಬಾಂಬೆ, ಸಂಪುಟ-೨, ಲೇ: ಆರ್.ವಿ.ಎಂಥೋವೆನ, ಪ್ರ: ಏಶಿಯರ್ನ ಎಜ್ಯುಕೇಶನಲ್ ಸರ್ವಿಸಸ್, ನ್ಯೂಡೆಲ್ಲಿ -೧೯೮೭, ಪು-೧೫೫

೮೨. ಕರ್ನಾಟಕದ ಕುರಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩, ಪು-೪

೮೩. ಅದೇ, ಪು-೫

೮೪. ಅದೇ, ಪು-೫

೮೫. ಅದೇ, ಪು-೫

೮೬. ಶಂಭಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೯, ಪು-೩೧೫

೮೭. ಅದೇ, ಪು-೩೧೫

೮೮. ಕುರುಬರ ಹೆಜ್ಜೆಗಳು: ಒಂದು ಅಧ್ಯಯನ, ಲೇ: ಚಂದ್ರಕಾಂತ ಬಿಜ್ಜರಗಿ, ಪ್ರ:ಶೈಲಚಂದ್ರ ಪ್ರಕಾಶನ, ವಿಜಾಪುರ-೨೦೦೬, ಪು-೧೭೩

೮೯. ಅದೇ, ಪು-೧೭೩

೯೦. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನದ ರಜತಮಹೋತ್ಸವ ಸಮಿತಿ, ಗದಗ-೨೦೦೨, ಪು-೨೨೧

೯೧. ಕುರುಬರ ಹೆಜ್ಜೆಗಳು: ಒಂದು ಅಧ್ಯಯನ, ಲೇ: ಚಂದ್ರಕಾಂತ ಬಿಜ್ಜರಗಿ, ಪ್ರ:ಶೈಲಚಂದ್ರ ಪ್ರಕಾಶನ, ವಿಜಾಪುರ-೨೦೦೬, ಪು-೧೭೪

೯೨. ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ವಾಸ್ತು ಶಿಲ್ಪಕಲೆ, ಪಿಎಚ್.ಡಿ. ಪ್ರಬಂಧ (ಅಪ್ರಕಟಿತ), ಸಂಶೋ : ಎಸ್.ಬಿ.ಬಿರಾದರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨, ಪು-೧೦೫

೯೩. ಕುರುಬರ ಚರಿತ್ರೆ, ಸಂ: ಸುಧಾಕರ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು, ೧೯೯೬, ಪು-೧೯

೯೪. ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ವಾಸ್ತು ಶಿಲ್ಪಕಲೆ, ಪಿಎಚ್.ಡಿ. ಪ್ರಬಂಧ (ಅಪ್ರಕಟಿತ),

ಸಂಶೋ: ಎಸ್.ಬಿ.ಬಿರಾದರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨, ಪು-೧೦೫

೯೫. ಅದೇ, ಪು-೧೦೫

೯೬. ಅದೇ, ಪು-೧೦೫

೯೭. ಅದೇ, ಪು-೧೦೫

೯೮. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನದ ರಜತಮಹೋತ್ಸವ ಸಮಿತಿ, ಗದಗ-೨೦೦೨, ಪು-೨೨೪

೯೯. ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ವಾಸ್ತು ಶಿಲ್ಪಕಲೆ, ಪಿಎಚ್.ಡಿ. ಪ್ರಬಂಧ (ಅಪ್ರಕಟಿತ), ಸಂಶೋ: ಎಸ್.ಬಿ.ಬಿರಾದರ ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨, ಪು-೧೦೫

೧೦೦. ಅದೇ, ಪು-೧೦೫

೧೦೧. ಅದೇ, ಪು-೧೦೯

೧೦೨. ಅದೇ, ಪು-೧೦೯

೧೦೩. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನದ ರಜತಮಹೋತ್ಸವ ಸಮಿತಿ, ಗದಗ-೨೦೦೨, ಪು-೨೨೪

೧೦೪. ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ವಾಸ್ತು ಶಿಲ್ಪಕಲೆ, ಪಿಎಚ್.ಡಿ. ಪ್ರಬಂಧ (ಅಪ್ರಕಟಿತ), ಸಂಶೋ: ಎಸ್.ಬಿ.ಬಿರಾದರ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨, ಪು-೧೦೯

೧೦೫. ಅದೇ, ಪು-೧೦೯

೧೦೬. ಹಂಡೇ ಕುರುಬರು: ಒಂದು ಅಧ್ಯಯನ, ಸಂಶೋ: ವೈ.ಕೆ.ಗುಂಡಕರ್ಜಗಿ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨, ಪು-೧೧೧

೧೦೭. ಕರ್ನಾಟಕದ ಬುಡಕಟ್ಟುಗಳು, ಸಂ:೧, ಪ್ರ.ಸಂ:ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರ:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು-೭೪೬

೧೦೮. ಬುಡಕಟ್ಟು ಸಮಾಜ, ಲೇ:ಗಂಗಾಧರ ದೈವಜ್ಞ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦, ಪು-೭

೧೦೯. ಬುಡಕಟ್ಟು ಕುಲಕಸುಬುಗಳು, ಲೇ:ಡಾ.ಕೆ.ಎಂ.ಮೈತ್ರಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨, ಪು-೧೦೨

೧೧೦. ಅದೇ, ಪು-೧೦೨

೧೧೧. ಕರ್ನಾಟಕ ರಾಜ್ಯಕೋಶ ಜನಸಮುದಾಯ, ಸಂಪುಟ:೪, ಸಂ:ಹೆಚ್.ಡಿ.ಪ್ರಶಾಂತ, ಪ್ರ:ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೧೬

೧೧೨. ಕಾಡು ಕುರುಬರು ಮತ್ತು ಜೇನುಕುರುಬರ ಸಂಸ್ಕೃತಿ, ಲೇ:ಎ.ಸಿ.ಲಲಿತಾ, ಪ್ರ:ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩, ಪು-೧೩

೧೧೩. ಅದೇ, ಪು-೧೩

೧೧೪. ಅದೇ, ಪು-೧೩

೧೧೫. ಕರ್ನಾಟಕದ ಬುಡಕಟ್ಟುಗಳು, ಸಂ:೧, ಪ್ರ.ಸಂ:ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರ:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು-೭೪೯

೧೧೬. ಅದೇ, ಪು-೭೫೦

೧೧೭. ಬುಡಕಟ್ಟು ಕುಲಕಸುಬುಗಳು, ಲೇ:ಡಾ.ಕೆ.ಎಂ.ಮೈತ್ರಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨, ಪು-೧೦೩

೧೧೮. ಅದೇ, ಪು-೧೦೩

೧೧೯. ಅದೇ, ಪು-೧೦೪

೧೨೦. ಕರ್ನಾಟಕದ ಬುಡಕಟ್ಟುಗಳು, ಸಂ:೧, ಪ್ರ.ಸಂ:ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರ:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು-೭೫೦

೧೨೧. ಕಾಡು ಕುರುಬರು ಮತ್ತು ಜೇನುಕುರುಬರ ಸಂಸ್ಕೃತಿ, ಲೇ:ಎ.ಸಿ.ಲಲಿತಾ, ಪ್ರ:ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩, ಪು-೧೫

೧೨೨. ಬುಡಕಟ್ಟು ಸಮಾಜ, ಲೇ:ಗಂಗಾಧರ ದೈವಜ್ಞ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦, ಪು-೬

೧೨೩. ಅದೇ, ಪು-೬

೧೨೪. ಬುಡಕಟ್ಟು ಕುಲಕಸುಬುಗಳು, ಲೇ:ಡಾ.ಕೆ.ಎಂ.ಮೈತ್ರಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨, ಪು-೧೦೩

೧೨೫. ಅದೇ, ಪು-೧೦೩

೧೨೬. ಬುಡಕಟ್ಟು ಸಮಾಜ, ಲೇ:ಗಂಗಾಧರ ದೈವಜ್ಞ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ -೨೦೦೦, ಪು-೫

೧೨೭. ಕರ್ನಾಟಕದ ಬುಡಕಟ್ಟುಗಳು, ಸಂ:೧, ಪ್ರ.ಸಂ:ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರ:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು-೭೧೧

೧೨೮. ಅದೇ, ಪು-೧೧೧

೧೨೯. ಅದೇ, ಪು-೭೧೧

೧೩೦. ಅದೇ, ಪು-೭೧೧

೧೩೧. ಕಾಡುಕುರುಬರು ಮತ್ತು ಜೇನುಕುರುಬರ ಸಂಸ್ಕೃತಿ, ಲೇ:ಎ.ಸಿ.ಲಲಿತಾ, ಪ್ರ:ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩, ಪು-೧೫

೧೩೨. ಅದೇ, ಪು-೧೫

೧೩೩. ಬುಡಕಟ್ಟು ಕುಲಕಸುಬುಗಳು, ಲೇ:ಡಾ.ಕೆ.ಎಂ.ಮೈತ್ರಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨, ಪು-೯೯

೧೩೪. ಕರ್ನಾಟಕದ ಬುಡಕಟ್ಟುಗಳು, ಸಂ:೧, ಪ್ರ.ಸಂ:ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರ:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು-೭೧೯

೧೩೫. ಅದೇ, ಪು-೭೧೯

೧೩೬. ಬುಡಕಟ್ಟು ಕುಲಕಸುಬುಗಳು, ಲೇ:ಡಾ.ಕೆ.ಎಂ.ಮೈತ್ರಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨, ಪು-೧೦೦

೧೩೭. ಕನ್ನಡ-ಇಂಗ್ಲೀಷ್ ಶಬ್ದಕೋಶ, ಸಂ:ಎಫ್.ಕಿಟ್ಟೆಲ್, ಪ್ರ: ಏಶಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ-೧೯೮೨, ಪು-೩೦೩

೧೩೮. ಹಂಡೆ ಕುರುಬರು : ಒಂದು ಅಧ್ಯಯನ, ಸಂಶೋ: ವೈ.ಕೆ.ಗುಂಡಕರ್ಜಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೫೩

೧೩೯. ಪ್ರಬುದ್ಧ ಕರ್ನಾಟಕ: ಸಂ. ೪೪, ಸಂಚಿಕೆ-೩, ಪ್ರ: ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೬೨, ಪು-೫೫

೧೪೦. ಹಂಡೆ ಕುರುಬರು : ಒಂದು ಅಧ್ಯಯನ, ಸಂಶೋ: ವೈ.ಕೆ.ಗುಂಡಕರ್ಜಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೫೩

೧೪೧. ಕಾಯಕಯೋಗಿ, ಪ್ರ.ಸಂ.ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನದ ರಜತ ಮಹೋತ್ಸವದ ಸಮಿತಿ, ಗದಗ - ೨೦೦೨, ಪು-೨೨೭

## ಅಧ್ಯಾಯ ೪

## ರಾಜಪ್ರಭುತ್ವದಲ್ಲಿ ಕುರುಬರು

೪.೧ ವಿಜಯನಗರ ಪೂರ್ವಕಾಲದ ರಾಜಪ್ರಭುತ್ವದಲ್ಲಿ

೪.೨ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ರಾಜಪ್ರಭುತ್ವದಲ್ಲಿ

೪.೩ ಆಡಳಿತ ವಿಭಾಗದಲ್ಲಿ ಕುರುಬರು

೪.೪ ಸ್ವಾತಂತ್ರ್ಯ ಹೋರಾಟಗಾರರು

೪.೫ ಪ್ರಸ್ತುತ ರಾಜಕೀಯದಲ್ಲಿ ಕುರುಬರ ಸ್ಥಾನ

## ೪.೧ ವಿಜಯನಗರ ಪೂರ್ವಕಾಲದ ರಾಜಪ್ರಭುತ್ವದಲ್ಲಿ

ಪಶುಪಾಲನೆ ವೃತ್ತಿ ಆರಂಭಗೊಂಡಂದಿನಿಂದಲೇ ಕುರುಬರ ಇತಿಹಾಸ ಪ್ರಾರಂಭವಾಯಿತೆಂದು ಹೇಳಬಹುದಾಗಿದೆ. ದನ–ಕುರಿಗಳ ಪಾಲನೆ ಮಾಡುತ್ತ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದರು. ಸಂಚಾರ ಕೈಗೊಂಡ ಪ್ರದೇಶಗಳಲ್ಲೆಲ್ಲಾ ಹಟ್ಟಿಗಳನ್ನು ನಿರ್ಮಿಸತೊಡಗಿದರು. ಹೀಗಾಗಿ ಎಲ್ಲೆಡೆ ಹಟ್ಟಿಗಳು ನಿರ್ಮಾಣಗೊಂಡವು. ಇಂದಿಗೂ ದಕ್ಷಿಣ ಪ್ರದೇಶದಲ್ಲಿ ಹಟ್ಟಿ, ವಾಟ, ವಾಡ, ವಾಡಿ ಪಟ್ಟಿ ಎಂಬ ಹೆಸರಿನ ಗ್ರಾಮಗಳು ಕಂಡುಬರುವುದು ಸಾಕ್ಷಿಯಾಗಿದೆ. ಈ ಹಟ್ಟಿಗಳಲ್ಲಿ ವಾಸವಾಗಿರುವವರನ್ನು ಹಟ್ಟಕಾರರೆಂದು ಕರೆಯತೊಡಗಿದರು. ಕಾಲಾನಂತರ ಕೃಷಿಯನ್ನು ವೃತ್ತಿಯನ್ನಾಗಿ ಅವಲಂಬಿಸಿದ ಮೇಲೆ ಒಂದು ಸ್ಥಳದಲ್ಲಿ ನೆಲೆನಿಂತರು. ಹೀಗೆ ನೆಲೆನಿಂತ ಕುರುಬರು ಉತ್ತರಕ್ಕೆ ಗಂಗಾ–ಶೋಣ ಭದ್ರಾನದಿಯವರೆಗೂ ವ್ಯಾಪಿಸಿಕೊಂಡರೆಂದು ತಿಳಿಯುತ್ತದೆ.

ಭಾರತದಾದ್ಯಂತ ನೆಲೆಸಿದ್ದ ದ್ರಾವಿಡರು ಖಚಿತವಾಗಿ ಕುರುಬರು ಎಂದು ಆಧುನಿಕ ವಂಶಶಾಸ್ತ್ರಜ್ಞರಾದ ಹ್ಯಾಡೋನರು ಅಭಿಪ್ರಾಯಪಟ್ಟಿದ್ದಾರೆ.[೧] ಮೂಲತಃ ದ್ರಾವಿಡ ಜನಾಂಗದ ಗುಣ–ಲಕ್ಷಣಗಳನ್ನು ಹೊಂದಿದ್ದ ಕುರುಬರು ದೃಢಕಾಯರು, ಅಜಾನುಬಾಹುಗಳು, ಕೃಷ್ಣವರ್ಣದವರಾಗಿದ್ದರು. ಬೆಟ್ಟ–ಕಾಡುಗಳಲ್ಲಿ ವಾಸಿಸುತ್ತಿದ್ದರಲ್ಲದೆ, ತಮ್ಮ ಹಾಗೂ ಪ್ರಾಣಿಗಳ ರಕ್ಷಣೆಗಾಗಿ ಅನೇಕ ಆಯುಧಗಳನ್ನು ಹೊಂದಿರುತ್ತಿದ್ದರು. ಶತೃಗಳನ್ನು ಸದೆಬಡಿಯುವಷ್ಟು ಶಕ್ತಿಯುತರಾಗಿದ್ದರು. ಯುದ್ಧ ಕಲೆಗಳಲ್ಲಿ ಅನುಭವ ಹೊಂದಿದ್ದರಿಂದ ಕಾಲಾನಂತರ ರಾಜಕೀಯದಲ್ಲಿ ಆಸಕ್ತಿ ವಹಿಸತೊಡಗಿದರು.

ಕುರುಬರ ರಾಜಕೀಯ ಚರಿತ್ರೆಗೆ ಸ್ಪಷ್ಟ ದಾಖಲೆಗಳು ದೊರೆಯುವುದು ಸುಮಾರು ೮ನೇ ಶತಮಾನದ ನಂತರ, ಇದಕ್ಕೂ ಪೂರ್ವದಲ್ಲಿ ರಾಜಕೀಯವಾಗಿ ಮನ್ನಣೆಗಳಿಸಿದ್ದರು. ಕುರುಬರ ರಾಜಕೀಯ ಜೀವನದ ಪ್ರಥಮ ಭಾಗದಲ್ಲಿ ಕೇವಲ ದೈಹಿಕಶಕ್ತಿ, ಪ್ರಭಾವದಿಂದ ರಾಜ್ಯವನ್ನಾಳುತ್ತಿದ್ದರು. ಈ ಕಾಲದಲ್ಲಿ ಬಲವೇ ಅಧಿಕಾರವನ್ನು ಕಬಳಿಸುವ ಪ್ರಮುಖ ಸಾಧನವಾಗಿತ್ತು. ಕುರುಬರು ಕಾಡಿನ ವಾಸಿಗಳಾಗಿದ್ದು, ಕಷ್ಟ ಸಹಿಷ್ಣುಗಳು, ದೈಹಿಕ ಬಲವುಳ್ಳವರಾಗಿದ್ದರಿಂದ ತಮ್ಮ ಬಲದ ಆಧಾರದ ಮೇಲೆ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡರೆಂದು ಹೇಳಬಹುದಾಗಿದೆ.

ದ್ರಾವಿಡರು (ಕುರುಬರು) ಆಸ್ಟ್ರೋ–ಏಶಿಯಾಟಿಕ್ ಜನಾಂಗದ ಮೇಲೆ ಆಕ್ರಮಣ ಮಾಡಿ ಅವರನ್ನು ಸೋಲಿಸಿದರು. ಆಸ್ಟ್ರೋ–ಏಶಿಯಾಟಿಕ್ ಜನರು ಮೂಲೆ ಗುಂಪಾಗಿ ದ್ರಾವಿಡರ ವಶವಾದರು. ನಂತರ ಗಂಗಾನದಿ ತೀರದ ಪ್ರದೇಶವನ್ನು ವಶಪಡಿಸಿಕೊಂಡರು. ಹಾಗೆಯೇ ತಮ್ಮ ಪ್ರದೇಶಕ್ಕೆ ಇನ್ನೊಂದು ಬುಡಕಟ್ಟು ಸಮುದಾಯ ಬೇಟೆ ಮತ್ತು ಪಶುಪಾಲನೆಗಾಗಿ ಆಗಮಿಸಿದರೆ ಅವರೊಂದಿಗೆ ಮಾರಣಾಂತಿಕ ಸಂಘರ್ಷ ಮಾಡುತ್ತಿದ್ದರು.

ಆರ್ಯರು ದ್ರಾವಿಡರ ಮೇಲೆ ಆಕ್ರಮಣ ಮಾಡಿ ಸೋಲಿಸಿದರು. ಆರ್ಯರಿಗೆ ಸೋತ ದ್ರಾವಿಡರಲ್ಲಿ ಕೆಲವರು ಸಂಪೂರ್ಣವಾಗಿ ವಶವಾದರಲ್ಲದೆ, ದಾಸರಾಗಿ ಅವರ ಸೇವೆಸಲ್ಲಿಸತೊಡಗಿದರು. ಸ್ವಾಭಿಮಾನಿಗಳಾದ ಕೆಲವರು ತಂಡೋಪ ತಂಡವಾಗಿ ದಕ್ಷಿಣದ ಕಡೆಗೆ ವಲಸೆ ಹೋದರು. ಆರ್ಯರಾಗಿ ಪರಿವರ್ತನೆ ಹೊಂದಿದ ಕುರುಬರು ಪಂಜಾಬ್ ಕುರುಬರೆಂದು ಗುರುತಿಸಲ್ಪಟ್ಟರಲ್ಲದೆ, ನಂತರ ಬ್ರಾಹ್ಮಣರು ಹಾಗೂ ರಜಪೂತರೆಂಬ ಅಭಿದಾನಗಳನ್ನು ಪಡೆದರು.[೨] ಭರತರು ಮತ್ತು ಪುರುಗಳು ಕೂಡ ಕುರು ಎಂಬ ರಾಜಕುಲವನ್ನು ರೂಪಿಸಿಕೊಂಡರು. ಕುರು ಎಂಬುದು ಕುರುದೇಶ, ಕುರುವಂಶ ಎಂಬ ಅರ್ಥ ನೀಡುತ್ತದೆ. ಮಹಾಭಾರತದಲ್ಲಿ ಪ್ರಸಿದ್ಧವಾಗಿ ಕುರುವಂಶದ ಕೌರವ ಶಬ್ದದಿಂದಲೇ ಕುರುವ, ಕುರುಬ ಎಂದಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೩] ಇದರಿಂದ ಕುರು ವಂಶದವರು ಕುರುಬರು ಎಂದು ಹೇಳಬಹುದಾಗಿದೆ.

ಆರ್ಯರಾಗದೆ ದಕ್ಷಿಣದ ಕಡೆಗೆ ವಲಸೆ ಹೋದ ಕುರುಬರು ತೆಂಕಣದಲ್ಲಿ ನೆಲೆಸಿದರು. ಗುಡ್ಡ–ಗಾಡು ಪ್ರದೇಶದಲ್ಲಿ ನೆಲೆಸಿ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡರು. ಕಾಲಾನಂತರ ಪ್ರಾಚೀನ ಮರವ ಜನಾಂಗಕ್ಕೆ ಸೇರಿದ್ದ ಸೂತಪತಿಗಳನ್ನು ದಕ್ಷಿಣ ಭಾರತದಲ್ಲಿ ಸೋಲಿಸಿದರು. ಕುರುಬರ ಮುಖಂಡ ಕಾಮಂಧ ಪ್ರಭು ಪುಲಾಲದ ರಾಜನಾಗಿ ಆಳ್ವಿಕೆ ನಡೆಸತೊಡಗಿದ. ಇವನನ್ನು ಪುಲಾಲದ ರಾಜ ಹಾಗೂ ಕಾಮಂಧ ಕುರುಂಬ ಪ್ರಭು ಎಂಬ ಹೆಸರಿನಿಂದ ಕರೆಯತೊಡಗಿದರು.

ಕಾಮಂಧಪ್ರಭು ಕುರುಬರ ಅರಸರಲ್ಲೇ ಪ್ರಮುಖನಾಗಿದ್ದಾನೆ. ಇವನು ಉತ್ತಮ ಆಡಳಿತ ಮತ್ತು ನ್ಯಾಯಕ್ಕೆ ಪ್ರಸಿದ್ಧನಾಗಿದ್ದನು. ತೊಂಡಮಂಡಲದಲ್ಲಿ ಆಳ್ವಿಕೆ ನಡೆಸಿದನು. ನಂತರ ಇವನ ಸಾಮ್ರಾಜ್ಯ ಕುರುಂಬ ಭೂಮಿ ಅಥವಾ ಕುರುಂಬನಾಡು ಎಂದು ಪ್ರಸಿದ್ಧಿಗೊಂಡಿತು. ಈ ಹೆಸರಿನ ಪ್ರದೇಶ ಇಂದಿಗೂ ಮಲಬಾರ್ ತೀರದಲ್ಲಿರುವುದು ಕಂಡುಬರುತ್ತದೆ. ಕುರುಂಬರ ನಾಡಿನಲ್ಲಿ ಕುಸುಬಾ ಕುರುಂಬರ ನಾಡು, ವಾಯುನಾಡು, ಕೋಲ್‌ಘಾಟ್, ಪಾಯುಮಲ್ಯೆ, ತೈಕಂಪುರಮ್, ವಾರಕ್ಕಂಪುರಮ್, ಪೊರ್ರೈ ಎಂಬ ಏಳು ತಾಲೂಕುಗಳನ್ನು ಒಳಗೊಂಡಿತ್ತು.[೪] ಹಾಗೆಯೇ ಪುಲಾಲ್ ಕೋಟ್ಟೈ, ಆಮೂರು ಕೋಟ್ಟೈ, ಕಲ್ಲತೂರು ಕೋಟ್ಟೈ, ಪುಲಿಯೂರು ಕೋಟ್ಟೈ, ಚೆಂಪೂರು ಕೋಟ್ಟೈ, ಊರುಕೋಟ್ಟೈ, ವೆನಕುನ ಕೋಟ್ಟೈ, ಇಕ್ಕಟ್ಟು ಕೋಟ್ಟೈ, ಪಟ್ಟವೂರು ಕೋಟ್ಟೈ, ಮನವೂರು ಕೋಟ್ಟೈ, ಮೊದಲಾದ ಪಟ್ಟಣ ಪ್ರದೇಶಗಳಲ್ಲಿ ಕುರುಬರು ಕೋಟೆ ಕಟ್ಟಿಸಿದ್ದರೆಂದು[೫] ತಿಳಿಯುತ್ತದೆ. ನಂತರ ಕುರುಬರು ಕುರುನಿಲ ಮನ್ನೆಯರು ಎಂದು ಪ್ರಸಿದ್ಧಿಗೊಂಡರು. ಕುರುನಿಲ ಮನ್ನೆಯರ್ ಎಂದರೆ ಸಾಮಂತರಾಜರು, ಪಾಳೆಯಗಾರರು ಎಂಬರ್ಥವಿದೆ. ಇವರು ತೊಂಡಮಂಡಲ ಹಾಗೂ ಸಾಲಂಪಾಕಮ್‌ನಲ್ಲಿ ಸಾಮ್ರಾಜ್ಯ ಸ್ಥಾಪಿಸಿ ಹಲವಾರು ವರ್ಷಗಳು ಆಳ್ವಿಕೆ ನಡೆಸಿದರು.

### ೪.೧.೧ ಶಾತವಾಹನರು

ದಖ್ಖನ್ ಪ್ರಾಂತ್ಯದಲ್ಲಿ ಪ್ರಥಮವಾಗಿ ಐತಿಹಾಸಿಕ ಸಾಮ್ರಾಜ್ಯವನ್ನು ನಿರ್ಮಿಸಿದವರು ಶಾತವಾಹನರು. ಸುಮಾರು ಕ್ರಿ.ಪೂ. ೨೩೦ ರಿಂದ ೨೨೦ ವರೆಗೆ ಅಂದರೆ ನಾನೂರು ವರ್ಷಗಳ ಸುದೀರ್ಘ ಆಳ್ವಿಕೆ ನಡೆಸಿದರು. ಇವರ ಸಾಮ್ರಾಜ್ಯವು ಸಿಮುಖನಿಂದ ಪ್ರಾರಂಭಗೊಂಡಿತು. ಆರಂಭದಲ್ಲಿ ಶ್ರೀಕಾಕುಲಂ, ಧಾನ್ಯ, ಕಟಕ ಪಟ್ಟಣಗಳಿಗೂ, ನಂತರ ಪೈಥಾನ್ ಅಥವಾ ಪ್ರತಿಷ್ಠಾನ ಪಟ್ಟಣವು ಶಾತವಾಹನರ ರಾಜಧಾನಿಯಾಗಿತ್ತೆಂದು ತಿಳಿಯುತ್ತದೆ.[೬] ಇಂದಿನ ಆಂಧ್ರಪ್ರದೇಶ, ಮಹಾರಾಷ್ಟ್ರ, ಹಾಗೂ ಕರ್ನಾಟಕ ರಾಜ್ಯಗಳ ಅಧಿಕ ಭಾಗಗಳನ್ನು ಪಶಪಡಿಸಿಕೊಂಡು ಆಳ್ವಿಕೆ ನಡೆಸಿದರು.

ಶಾತವಾಹನರ ಮೂಲಕ್ಕೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಶಾತವಾಹನರು ಮೂಲತಃ ಆಂಧ್ರದವರೆಂಬ ಅಭಿಪ್ರಾಯವಿದೆ. ಪುರಾಣಗಳಲ್ಲಿ ಆಂಧ್ರ ಅಥವಾ ಆಂಧ್ರಭೃತ್ಯರೆಂದು ಉಲ್ಲೇಖಿಸಲಾಗಿದೆ. ಈ ಆಂಧ್ರ ಎಂಬುದು ಒಂದು ಜಾತಿ ಅಥವಾ ಒಂದು ಬುಡಕಟ್ಟಿನ ಹೆಸರೆಂದು ಗುರುತಿಸಲಾಗಿದೆ.[೭] ಹೀಗಾಗಿ ಶಾತವಾಹನ ಮನೆತನದ ಪ್ರಥಮ ಅರಸ ಆಂಧ್ರ ಜಾತೀಯ ಅಥವಾ ಆಂಧ್ರ ಜನಾಂಗಕ್ಕೆ ಸೇರಿದವನಾಗಿರಬೇಕೆಂದು ತಿಳಿಯಲಾಗಿದೆ. ಇವರಲ್ಲಿ ಕೆಲವು ರಾಜರು ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಸೋತು ಆಂಧ್ರಕ್ಕೆ ವಲಸೆ ಹೋದರು. ನಂತರ ಕೃಷ್ಣನದಿ ಮುಖದಲ್ಲಿ ರಾಜ್ಯವಾಳುತ್ತಿದ್ದರಿಂದ ಇವರಿಗೆ ಆಂಧ್ರರೆಂಬ ಹೆಸರು ಬಂದಿರಬಹುದೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.[೮]

ಶಾತವಾಹನರು ಆಂಧ್ರರಲ್ಲ ಕರ್ನಾಟಕದವರೆಂಬ ಅಭಿಪ್ರಾಯವಿದೆ. ಕರ್ನಾಟಕದ ಬಳ್ಳಾರಿ ಪ್ರದೇಶವನ್ನು ಆಳ್ವಿಕೆ ನಡೆಸಿದರು. ಇವರ ಶಾಸನಗಳು ಬೆಳಗಾವಿ ಜಿಲ್ಲೆಯ ವಡಗಾಂವ್, ಬಳ್ಳಾರಿ ಜಿಲ್ಲೆಯ ಮ್ಯಾಕಡೋಣಿ, ಹಿರೇಹಡಗಲಿ, ಮಳವಳ್ಳಿ, ಬನವಾಸಿ, ಸನ್ನತಿ ಮೊದಲಾದ ಸ್ಥಳಗಳಲ್ಲಿ ಲಭ್ಯವಾಗಿವ್. ಕುಂತಳ ಶಾತಕರ್ಣಿ ಆಳ್ವಿಕೆ ನಡೆಸಿದ್ದರಿಂದ ಕುಂತಳ ಎಂಬ ಹೆಸರು ಬಂದಿರಬಹುದೆಂಬ ಅಭಿಪ್ರಾಯವಿದೆ.

ಶಾತವಾಹನರು ಕುರುಬರೆಂಬ ಅಭಿಪ್ರಾಯವಿದೆ. ಶಾತವಾಹನ ಎಂಬುದು ಒಂದು ಕುಲ ಅಥವಾ ಜಾತಿಯಾಗಿದೆ. ಶಾತ ಎಂದರೆ ವೇಗವಾದ, ಹರಿತವಾದ ಎಂದರ್ಥ. ಶಾತವಾಹನರೆಂದರೆ ಶೀಘ್ರಗಾಮಿ ಕುದುರೆಯನ್ನೇರಿ ಹೋಗುವ ರಾವುತರು. ಮಹಾರಾಷ್ಟ್ರದ ಹಟ್ಕಾರ (ಧನಗಾರ)ರಲ್ಲಿ ಭರ್ಜಿ ಹಿಡಿದು ಸ್ವಂತ ಕುದುರೆ ಮೇಲೆ ಸವಾರಿ ಮಾಡುವ ವೀರರಿದ್ದಾರೆ. ಇವರಿಗೆ ಭರ್ಗೆ ಅಥವಾ ಭರ್ಜಿಧನಗಾರರೆಂದು ಕರೆಯಲಾಗಿದೆ. ಕರ್ನಾಟಕದ ಹಂಡೆ ಕುರುಬರು, ಹಂಡೆ ವಜೀರರು ಸಹ ಕುದುರೆ ಸವಾರಕರಾಗಿದ್ದರು.

ಶಾತವಾಹನ ಎಂಬ ಪದವು ಪರ್ಶಿಯಾದೇಶದ ಅಥವಾ ಆಸ್ಟ್ರೋ ಏಶಿಯಾಟಿಕ್ ಭಾಷೆಯ ಪದ 'ಸಾತ' ಎಂದರೆ ಕುದುರೆ ಎಂಬರ್ಥವಿರುವುದರಿಂದ ಅದನ್ನೇ ವಾಹನವಾಗುಳ್ಳವರನ್ನು ಶಾತವಾಹನರೆಂದು ಗುರುತಿಸಲಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೦] ಶಾತವಾಹನ ಎಂಬ ಪದ ಸಾರ್ಥವಾಹನ ಎಂಬ ಪದದ ಪರ್ಯಾಯ ಪದವಾಗಿದೆ. ಇವರು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಎತ್ತು, ಕುದುರೆಗಳ ಮೇಲೆ ಸಾಮಾನು ಹೇರಿಕೊಂಡು ಹೋಗುತ್ತಿದ್ದ ವ್ಯಾಪಾರಸ್ಥರ ಪಂಗಡಕ್ಕೆ ಸೇರಿದವರೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ.[೧೧] ಕುರುಬರು ಸಹ ಪ್ರಾಚೀನ ಕಾಲದಲ್ಲಿ ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದರಿಂದ ಶಾತವಾಹನ ಪಂಗಡಕ್ಕೆ ಸೇರಿದವರೆಂದು ಹೇಳಬಹುದಾಗಿದೆ.

ಕುರುಬರ ಆರಾಧ್ಯ ದೈವವಾದ ಮೈಲಾರಲಿಂಗನ ವಾಹನ ಕುದುರೆ. ಗೊರವರು ಕುದುರೆಯನ್ನು ಪೂಜ್ಯಭಾವದಿಂದ ಕಾಣುತ್ತಾರೆ. ಇಂದಿಗೂ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಟೆಂಗುಂಟಿ ಗ್ರಾಮದಲ್ಲಿರುವ ಗ್ಯಾನಪ್ಪಯ್ಯನ ವಂಶಸ್ಥರು ಕುದುರೆ ಮೇಲೆ ಸವಾರಿ ಮಾಡುತ್ತಾರೆ. ಕೊಪ್ಪಳ ತಾಲೂಕಿನ ಹಿರೇಸಿಂಧೋಗಿಯಲ್ಲಿ "ಕುದುರೆಯರ್" ಎಂಬ ಬೆಡಗಿನವರಿದ್ದಾರೆ. ಈ ಹಿನ್ನೆಲೆಯಲ್ಲಿ ಶಾತವಾಹನರು ಕುರುಬರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದಾಗಿದೆ.

ಸಿಮುಖ ಶಾತವಾಹನ ಸಾಮ್ರಾಜ್ಯದ ಸ್ಥಾಪಕನಾಗಿದ್ದಾನೆ. ಇವನ ನಂತರ ಕೃಷ್ಣ, ಒಂದನೇ ಶಾತಕರ್ಣಿ, ಹಾಲ, ಗೌತಮಿಪುತ್ರ ಶಾತಕರ್ಣಿ ವಾಸಿಷ್ಟಪುತ್ರ ಪುಳುಮಾಯಿ, ಯಜ್ಞಶ್ರೀ ಶಾತಕರ್ಣಿ ಮೊದಲಾದವರು ಆಳ್ವಿಕೆ ನಡೆಸಿದರು.

### ೪.೧.೨ ಕದಂಬರು

ಕರ್ನಾಟಕವನ್ನಾಳಿದ ಪ್ರಾಚೀನ ಕನ್ನಡ ರಾಜವಂಶಗಳಲ್ಲಿ ಬನವಾಸಿಯ ಕದಂಬರು ಪ್ರಥಮರಾಗಿದ್ದಾರೆ. ಮಯೂರ ವರ್ಮನಿಂದ ಪ್ರಾರಂಭಗೊಂಡ ಈ ವಂಶವು ಸುಮಾರು ಕ್ರಿ.ಶ.೩೪೫ ರಿಂದ ೫೪೦ ರವರೆಗೆ ಆಳ್ವಿಕೆ ನಡೆಸಿ, ಕನ್ನಡ ನಾಡು-ನುಡಿಗೆ ತಮ್ಮದೇ ಕೊಡುಗೆ ನೀಡಿರುವುದು ಕಂಡುಬರುತ್ತದೆ.

ಕದಂಬರ ಮೂಲದ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳಿವೆ. ಕದಂಬರ ಶಾಸನಗಳಲ್ಲಿ ಉಲ್ಲೇಖವಾಗಿರುವ ಪೌರಾಣಿಕ ಕಥೆ ಈ ರೀತಿಯಾಗಿದೆ. ಶಿವನು ತ್ರಿಪುರಾಸುರನೊಡನೆ ಹೋರಾಡಿ ಅವನನ್ನು ಸಂಹರಿಸಿದನು. ಈ ಹೋರಾಟದಲ್ಲಿ ಶಿವನ ದೇಹದ ಬೆವರಿನ ಹನಿಯು ಕದಂಬ ವೃಕ್ಷದ ಮೇಲೆ ಬಿದ್ದಿತು. ಆ ಬೆವರಿನ ಹನಿಯಿಂದ ತ್ರಿಲೋಚನ ಕದಂಬ ಎಂಬುವವನು ಜನಿಸಿದನು. ಇವನ ಮಗನೇ ಸಾಮ್ರಾಜ್ಯದ ಸ್ಥಾಪಕನಾದ ಮಯೂರ ಶರ್ಮನಾಗಿದ್ದಾನೆ ಎಂಬ ಅಭಿಪ್ರಾಯವಾಗಿದೆ.[೧೨] ತಾಳಗುಂದ ಶಾಸನದಲ್ಲಿ ಮಾನವ್ಯ ಗೋತ್ರದ ಹಾರಿತೀ ಪುತ್ರರೆಂದು, ಬ್ರಾಹ್ಮಣರೆಂದು ಕರೆಯಲಾಗಿದೆ.

ಕದಂಬರು ಮೂಲತಃ ಕುರುಬರು ಎಂಬ ಅಭಿಪ್ರಾಯವಿದೆ. ಕುರುಬರು ಕದಂಬರೆಂಬ ಹೆಸರಿನಿಂದ ರಾಜ್ಯಭಾರ ಮಾಡಿದರೆಂದು, ಕುರುಬ ಶಬ್ದವು ಸಂಸ್ಕೃತದ ಸಂಸರ್ಗದಿಂದ ಕದಂಬ ಎಂದಾಗಿರಬಹುದೆಂದು ಲೂಯಿಸ್‌ರೈಸರು ಅಭಿಪ್ರಾಯಪಟ್ಟಿದ್ದಾರೆ.[೧೩] ಕರ್ನಾಟಕದ ಕುರುಬರಲ್ಲಿ ಮತ್ತು ಮಹಾರಾಷ್ಟ್ರದ ಧನಗಾರರಲ್ಲಿ ಕದಂ ಎಂಬ ಕುಲ ಅಥವಾ ಬೆಡಗಿದೆ. ಈ ಕದಂ ಬೆಡಗು ಕದಂಬ ಆಗಿರುವ ಸಾಧ್ಯತೆ ಇದೆ.

ದ್ರಾವಿಡ ಶಬ್ದ ಕುರುಂಬ ಎಂಬುದೇ ಸಂಸ್ಕೃತೀಕರಣಗೊಂಡು ಕದಂಬವಾಗಿದೆ ಎಂಬ ಅಭಿಪ್ರಾಯವಾಗಿದೆ. ಕದಂಬರು ತಮಿಳುನಾಡಿನಿಂದ ಕೊಂಕಣತೀರದವರೆಗೆ ವ್ಯಾಪಿಸಿದ್ದ ಕುರುಬರು ಎಂಬ ಪಂಗಡಕ್ಕೆ ಸೇರಿದವರೆಂದು ಹೇಳಲಾಗಿದೆ.[೧೪] ಇವರು ಕದಂಬ ವೃಕ್ಷದಿಂದ ಮದ್ಯವನ್ನು ತೆಗೆಯುವ ವೃತ್ತಿಯವರಾಗಿದ್ದರಲ್ಲದೆ, ಮುರುಗನ್ ದೇವತೆಯ ಆರಾಧಕನಾಗಿದ್ದರು. ಆದ್ದರಿಂದ ಮುರುಗನ್ ದೇವತೆಯ ವಾಸಸ್ಥಾನವಾದ ಕದಂಬ ವೃಕ್ಷ ಹಾಗೂ ಮುರುಗನ್ನನ ವಾಹನವಾದ ಮಯೂರವು ಇವರಿಗೆ ಪವಿತ್ರವಾಗಿದ್ದವು. ಕದಂಬ ರಾಜರು ಮಯೂರವರ್ಮನ್, ಮೃಗೇಶವರ್ಮನ್ ಎಂಬ ಹೆಸರುಗಳನ್ನು ಹೊಂದಿದ್ದರು. ಹೀಗಾಗಿ ಕದಂಬರು ಬ್ರಾಹ್ಮಣರಲ್ಲ, ದ್ರಾವಿಡ ಗುಂಪಿಗೆ ಸೇರಿದವರೆಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಹಾಗೆಯೇ ಬನವಾಸಿಯ ಕದಂಬರು ಬ್ರಾಹ್ಮಣ ಮಾದರಿಯ ಕುರುಬರಾಗಿದ್ದರೆಂದು ಶ್ರೀ ಟೇಲರ್ ರವರು ಅಭಿಪ್ರಾಯಪಟ್ಟಿದ್ದಾರೆ.[೧೫] ಈ ಹಿನ್ನೆಲೆಯಲ್ಲಿ ಕುರುಬರು ಕದಂಬ ವಂಶದವರೆಂದು ಹೇಳಬಹುದಾಗಿದೆ.

ಕದಂಬರು ಮೂಲತಃ ಶೈವರಾಗಿದ್ದು ಭೈರವನ ಆರಾಧಕರಾಗಿದ್ದರು. ಗೋವಾ ಕದಂಬರ ನಾಣ್ಯಗಳ ಮೇಲೆ ಭೈರವನ ಚಿತ್ರವಿದೆ. ಇನ್ನೊಂದು ಬದಿಯಲ್ಲಿ "ಸಪ್ತಕೋಟೇಶಲಬ್ಧವರವೀರ ಜಯಕೇಳಿ ದೇವ ಮೂಲವ ಹರಮಾರಿ" ಎಂಬ ಬರಹವಿದೆ.[೧೬] ಇದರಿಂದಾಗಿ ಇವರು ಸಪ್ತಕೋಟೇಶ್ವರ, ಮೈಲಾರಲಿಂಗ, ಏಳುಕೋಟಿಯ ಆರಾಧಕರೆಂದು ತಿಳಿಯುತ್ತದೆ.

ಮಯೂರವರ್ಮ ಕದಂಬ ವಂಶದ ಮೂಲ ಪುರುಷ. ನಂತರ ಕಂಗವರ್ಮ, ಭಗೀರಥವರ್ಮ, ರಘುವರ್ಮ, ಕಾಕುತ್ಸವರ್ಮ ಮೊದಲಾದವರು ಆಳ್ವಿಕೆ ನಡೆಸಿದರು.

### ೪.೧.೩ ಪಲ್ಲವರು

ಪಲ್ಲವರು ತಮಿಳುನಾಡಿನ ಪ್ರಪ್ರಥಮ ರಾಜರು. ಇವರು ನಾಗ ವಂಶಕ್ಕೆ ಸೇರಿದವರಾಗಿದ್ದು, ದಕ್ಷಿಣ ಭಾರತದಲ್ಲಿ ಈಗಿನ ಆರ್ಕಾಟ್, ಮದ್ರಾಸ್, ತಿರುಚಿರಪ್ಪಲಿ ಹಾಗೂ ತಂಜಾವೂರು ಜಿಲ್ಲೆಗಳಲ್ಲಿರುವ ಪ್ರದೇಶವನ್ನಾಳಿದ ಪ್ರಾಚೀನ ರಾಜವಂಶವದವರಾಗಿದ್ದರು. ಸುಮಾರು ೨ನೇ ಶತಮಾನದಿಂದ ೯ನೇ ಶತಮಾನದವರೆಗೆ ಪ್ರಬಲರಾಗಿ ಆಳ್ವಿಕೆ ನಡೆಸಿ ವಿಶಾಲ ಸಾಮ್ರಾಜ್ಯ ನಿರ್ಮಿಸಿದರು. ಕಂಚಿಯ ಸುತ್ತಮುತ್ತಲಿನ ಇಡೀ ತೊಂಡೈಮಂಡಲ ಪ್ರದೇಶವನ್ನು ಆಕ್ರಮಿಸಿಕೊಂಡು ರಾಜ್ಯಭಾರ ಮಾಡಿದ್ದರಿಂದ ಇವರನ್ನು ಕಂಚಿಯ ಪಲ್ಲವರೆಂದು ಕರೆಯಲಾಗಿದೆ.

ಪಲ್ಲವರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಪಲ್ಲವರು ಉತ್ತರದವರೂ ಅಲ್ಲ, ವಿದೇಶಿಯರೂ ಅಲ್ಲ ಅವರು ದಕ್ಷಿಣ ಭಾರತದ ಮೂಲ ನಿವಾಸಿಗಳು ಎಂಬ ಅಭಿಪ್ರಾಯವಿದೆ. ಪಲ್ಲವರು ದಕ್ಷಿಣದ ಕುರುಂಬ ಅಥವಾ ಪುಳಿಂದರು, ಅಶೋಕನ ಶಾಸನಗಳಲ್ಲಿ ಉಲ್ಲೇಖಿಸಿರುವ ಪುಳಿಂದರೇ ಪಲ್ಲದ ಅಥವಾ ಪಲ್ಲವರೆಂಬುದಾಗಿ ಆರ್.ಸತ್ಯನಾಥಯ್ಯನವರು ಅಭಿಪ್ರಾಯಪಟ್ಟಿದ್ದಾರೆ.[೧೭] ಪಲ್ಲವರು ಆರಂಭದಲ್ಲಿ ಶಾತಹನಿಹರ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಇಂದಿನ ಬಳ್ಳಾರಿ ಜಿಲ್ಲೆಯವರೆಂದು ಶಾತವಾಹನ ಸಂತತಿಯ ಪತನಾನಂತರ ಕಂಚಿ ಪ್ರದೇಶದತ್ತ ರಾಜ್ಯವನ್ನು ವಿಸ್ತರಿಸಿದರೆಂದು ಹಿರೇಹಡಗಲಿ ಶಾಸನದ ಆಧಾರದ ಮೇಲೆ ಎಸ್.ಶ್ರೀಕಂಠಶಾಸ್ತ್ರೀಯವರು ಅಭಿಪ್ರಾಯಪಟ್ಟಿದ್ದಾರೆ.[೧೮]

ಪಲ್ಲವರು ಅಶೋಕನ ಸಾಮ್ರಾಜ್ಯದಲ್ಲಿದ್ದ ತೊಂಡಮಂಡಲಮ್‌ನಲ್ಲಿ ನೆಲೆಸಿದ್ದರು. ಇವರು ತಮ್ಮನ್ನು ತೊಂಡಮಂಡಲಮ್‌ನ ಕುರುಂಬರೊಂದಿಗೆ ಸಮೀಕರಿಸಿಕೊಳ್ಳುತ್ತಾರೆ.[೧೯] ಕ್ರಿ.ಶ.೧೮೯೧ರ ಮದರಾಸು ಜನಗಣತಿ ಕುರುಂಬರು ಅಥವಾ ಪ್ರಾಚೀನ ಪಲ್ಲವರ ಆಧುನಿಕ ಪ್ರತಿನಿಧಿಗಳೆಂದು ತಿಳಿಸುತ್ತದೆ. ಅಲ್ಲದೆ ಪಲ್ಲವರ ನಾಣ್ಯಗಳ ಮೇಲೆ ಕುರುಂಬ ಎಂದು ಮುದ್ರಿಸಿದೆ.[೨೦] ಪಲ್ಲವರನ್ನು ತಮಿಳು ಕುರುಂಬರ್ ಹಾಗೂ ಕುರುನಿಲ ಮನ್ನೆಯರ್ ಎಂದು ಕರೆಯುತ್ತಿದ್ದರೆಂದು ಶ್ರೀ.ಎಸ್.ಕೃಷ್ಣಸ್ವಾಮಿ ಅಯ್ಯಂಗಾರರು ಅಭಿಪ್ರಾಯಪಟ್ಟಿದ್ದಾರೆ.[೨೧] ಹೀಗಾಗಿ ಪಲ್ಲವರು ಕುರುಬರ ಪ್ರತಿನಿಧಿಗಳೆಂದು ಹೇಳಬಹುದಾಗಿದೆ.

ಪಲ್ಲವ ವಂಶದ ಮೂಲ ಪುರುಷ ಪಯ್ಯಾದೇವ ಅಥವಾ ಬಾಪ್ಪದೇವ. ನಂತರ ಶಿವಸ್ಕಂದವರ್ಮ, ವಿಷ್ಣುಗೋಪ, ಸಿಂಹವರ್ಮ, ೧ನೇ ಮಹೇಂದ್ರವರ್ಮ, ನರಸಿಂಹವರ್ಮನ್, ೨ನೇ ಮಹೇಂದ್ರವರ್ಮ, ನಂದಿವರ್ಮನ್ ಮೊದಲಾದವರು ಆಳ್ವಿಕೆ ನಡೆಸಿದರು.

### ೪.೧.೪ ಯಲಬುರ್ಗಿಯ ಸಿಂದರು

ಮಧ್ಯಕಾಲದ ಕರ್ನಾಟಕದಲ್ಲಿ ಅನೇಕ ಸಾಮಂತ ಅರಸರು ಆಳಿದರು. ಅವರಲ್ಲಿ ಅತ್ಯಂತ ಪ್ರಬಲರಾದವರು ಯಲಬುರ್ಗಿ ಸಿಂದರು. ಚಾಲುಕ್ಯರು, ಕಲಚೂರಿಗಳು ಹಾಗೂ ಯಾದವ ಮನೆತನದವರಲ್ಲಿ ಉತ್ತಮ ಗೌರವ ಸ್ಥಾನ ಹೊಂದಿದ್ದರು. ಈ ಅರಸು ಮನೆತನಗಳ ಪರವಾಗಿ ಹೋರಾಡಿದರು. ಸಪ್ತ ಸಹೋದರರಿಂದ ಪ್ರಾರಂಭಗೊಂಡ ಈ ಮನೆತನ ಅನೇಕ ಅರಸರಿಂದ ಆಳಲ್ಪಟ್ಟಿದೆ.

ಯಲಬುರ್ಗಿ ಸಿಂದರ ಮನೆತನವು ಸಪ್ತ ಸಹೋದರರಿಂದ ಆರಂಭಗೊಂಡಿತೆಂಬುದಕ್ಕೆ ಶಾಸನಾಧಾರಗಳಿವೆ. ಬಾಗಡ ಸಿಂದ ಮನೆತನದ ಅರಸನಾದ ನಾಗಾದಿತ್ಯ ಈ ವಂಶದ ಸ್ಥಾಪಕನೆಂದು ಡಾ.ದಿನಕರ ದೇಸಾಯಿಯವರು ನಿರ್ಣಯಿಸಿದ್ದಾರೆ.[೨೨] ನಾಗಾದಿತ್ಯನಿಗೆ ಇಬ್ಬರು ಪತ್ನಿಯರಿದ್ದರು. ಎರಡನೆ ಪತ್ನಿಗೆ ಜನಿಸಿದ ಒಂದನೆ ಅಚುಗಿ, ನಾಕ, ಒಂದನೆ ಸಿಂಘಣ, ದಾಸ, ದಾಮ, ಒಂದನೇ ಚಾವುಂಡ ಮತ್ತು ಚಾವ ಎಂಬ ಸಪ್ತ ಸಹೋದರರು ಜನಿಸಿದರು.[೨೩] ಇವರು ತಮ್ಮ ಸ್ವಸಾಮರ್ಥ್ಯದಿಂದ ಯಲಬುರ್ಗಿ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳನ್ನು ಆಳತೊಡಗಿದರೆಂದು ದೇಸಾಯಿಯವರು ತಿಳಿಸುತ್ತಾರೆ. ಆದರೆ ನಾಗಾದಿತ್ಯ ಮತ್ತು ಆತನ ಎರಡನೆ ರಾಣಿಯ ಬಗ್ಗೆ ಆಧಾರಗಳು ಸ್ಪಷ್ಟವಾಗಿ ದೊರೆಯುವುದಿಲ್ಲ. ಹೀಗಾಗಿ ನಾಗಾದಿತ್ಯನೇ ಸಪ್ತ ಸಹೋದರ ತಂದೆ ಎಂಬ ವಾದಕ್ಕೆ ಆಧಾರಗಳ ಕೊರತೆಯಿದೆ.

ಶಾಸನಗಳು ಯಲಬುರ್ಗಿ ಸಿಂದರ ವಂಶಾವಳಿಯನ್ನು ನೀಡುತ್ತವೆ. ಅವುಗಳೆಲ್ಲ ಒಂದನೇ ಅಚುಗಿಯಿಂದಲೇ ಪ್ರಾರಂಭಗೊಳ್ಳುತ್ತವೆ. ಚಾಲುಕ್ಯ ನರೇಂದ್ರನ ಮುಂದೆ ಹಟ್ಟಿಗಾಳಗದಲ್ಲಿ ಅಚುಗಿ ತನ್ನ ಸಾಹಸವನ್ನು ಪ್ರದರ್ಶಿಸಿದನು. ಆದ್ದರಿಂದ ಈ ವಂಶದವರಿಗೆ ಹಟ್ಟಿಗಾರ ಕುಲದವರೆಂದು ಕರೆಯಲಾಯಿತು.[೨೪] ಹೀಗಾಗಿ ಒಂದನೇ ಅಚುಗಿಯೇ ಈ ವಂಶದ ಸ್ಥಾಪಕ.

ಯಲಬುರ್ಗಿ ವಂಶದವರನ್ನು ಹಟ್ಟಿಗಾರ ಕುಲದವರೆಂದು ಕರೆಯುವುದರಿಂದ ಇವರು ಕುರುಬರೆಂದು ಹೇಳಬಹುದಾಗಿದೆ. ಕುರುಬರನ್ನು ಹಟ್ಟಿಗಾರ–ಧನಗಾರರೆಂದು ಗುರುತಿಸುತ್ತಾರೆ. ಕ್ರಿ.ಶ. ೧೧೭೯ರ ಯಲಬುರ್ಗಿ ತಾಲೂಕಿನ ಕುಕ್ಕನೂರು ಶಾಸನ ಈ ವಂಶದ ರಾಜಗುರುಗಳು ಕಾಳಾಮುಖ ಅಕಾಡು–೭೦ನ್ನು ಆಳುತ್ತಿದ್ದನು. ನಿಡಗುಂದಿ ಶಾಸನ ಉಲ್ಲೇಖಿಸುತ್ತದೆ.[೨೫] ಕುರುಬರಲ್ಲಿ ಬಿಜ್ಜಲ ಎಂಬ ಬೆಡಗಿದೆ. ಇವರಲ್ಲಿ ಬಿಜ್ಜಲ ಎಂಬ ಅರಸ ಆಳ್ವಿಕೆ ನಡೆಸಿದ್ದಾನೆ. ಹೀಗಾಗಿ ಈ ವಂಶದವರು ಕುರುಬರೆಂದು ತಿಳಿದು ಬರುತ್ತದೆ.

ಒಂದನೇ ಅಚುಗಿ ಯಲಬುರ್ಗಿ ಸಿಂಧರ ಮೂಲ ಪುರುಷನಾಗಿದ್ದಾನೆ. ಇವರ ನಂತರ ಮಹಾಮಂಡೇಶ್ವನ ಬೊಮ್ಮ ವಿಕ್ರಮಾದಿತ್ಯನಿಗೆ ನಿಷ್ಠನಾಗಿದ್ದನು. ಅಧಿಕ ಪ್ರತಾಪನಿಧಿ, ಜಯಲಕ್ಷ್ಮೀ ರಮಣ, ಕೀರ್ತಿ ವಿಳಾಸ, ಸಿಂದವಾರ್ದಿವರ್ಧನ ಚಂದ್ರ ಮೊದಲಾದ ಬಿರುದುಗಳನ್ನು ಹೊಂದಿದ್ದನು. ಇವನ ನಂತರ ೨ನೇಸಿಂಗ ಅಧಿಕಾರಕ್ಕೆ ಬಂದನು. ಶಾಸನಗಳಲ್ಲಿ ಸಿಂಗ, ಸಿಂಹ, ಸಿಂಗರಸ, ಸಿಂಗದೇವ ಮೊದಲಾದ ಹೆಸರುಗಳಿಂದ ಕರೆಯಲ್ಪಟ್ಟಿವೆ.[೨೬]

ಒಂದನೇ ಅಚುಗಿ ಈ ಮನೆತನಕ್ಕೆ ಸುಭದ್ರವಾದ ಅಡಿಪಾಯ ಹಾಕಿದರೆ, ಎರಡನೇ ಅಚುಗಿ ಅದರ ಮೇಲೆ ಭವ್ಯವಾದ ಕಟ್ಟಡ ನಿರ್ಮಿಸಿದನು. ಎರಡನೇ ಅಚುಗಿಯನ್ನು ಶಾಸನಗಳಲ್ಲಿ ಆಚ, ಆಚಿ, ಆಚಮ, ಆಚುಗಿ, ಆಚರಸ ಮತ್ತು ಆಚರಾಜ ಎಂದು ಉಲ್ಲೇಖಿಸುತ್ತದೆ.[೨೭] ಆರನೇ ವಿಕ್ರಮಾದಿತ್ಯನ ಸಾಮ್ರಾಜ್ಯದ ರಕ್ಷಣೆಯ ಭಾರಹೊತ್ತು ಅನೇಕ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದನು. ಮಲೆಪರು, ಕೊಂಕಣರು, ಲಕ್ಷ್ಮಣ, ಮಾಳವ, ಗುರ್ಜರ, ಚೋಳ, ಚೇರ, ಕಳಿಂಗ, ವಂಗ ಮೊದಲಾದ ಪ್ರಾಂತ್ಯಗಳ ಅರಸರನ್ನು ಸೋಲಿಸಿದನಲ್ಲದೆ ಅನೇಕ ಕೋಟೆಗಳನ್ನು ವಶಪಡಿಸಿಕೊಂಡನು.

ಒಂದನೇ ಪೆರ್ಮಾಡಿಯ ನಂತರ ಎರಡನೇ ಚಾವುಂಡ ೧೧೪೪ ರಿಂದ ಆಳ್ವಿಕೆ ಪ್ರಾರಂಭಿಸಿದನು. ಚಾಲುಕ್ಯರ ಆಳ್ವಿಕೆಯನ್ನು ತಿರಸ್ಕರಿಸಿ ಸ್ವತಂತ್ರವಾಗಿ ಆಳ್ವಿಕೆ ಮಾಡಲು ಪ್ರಯತ್ನಿಸಿದನು. ಚಾಲುಕ್ಯ ಮೂರನೇ ತೈಲಪನ ಆಳ್ವಿಕೆಯನ್ನು ಕೊನೆಗೊಳಿಸಿ

ಕಳಚೂರಿ ಬಿಜ್ಜಳವನ್ನು ಆಳ್ವಿಕೆಗೆ ತರಲು ಪ್ರಯತ್ನಿಸಿದನು. ಕಲಚೂರಿ ಬಿಜ್ಜಳನ ತಂಗಿಯರಾದ ಸಿರಿಯದೇವಿ ಮತ್ತು ಲಕ್ಷ್ಮೀದೇವಿಯನ್ನು ವಿವಾಹವಾಗಿದ್ದನು. ಇವನ ಸಾಧನೆ ಬಗ್ಗೆ ಬೆಂಚಮಟ್ಟಿ ಶಾಸನ ಈ ರೀತಿ ಉಲ್ಲೇಖಿಸುತ್ತದೆ.[೨೮]

"ಸಮರೋದ್ಯದ್ಬಳ ಹೊಯ್ಸಳ ಕ್ಷಿತಿಪ ಸೇನಾನೀಕಮೊನ್ದಾಗಿವಿ<br>
ಕ್ರಮದಿಂತಾಗೆ ಪರಾಕ್ರಮ ಕ್ರಮಯುತಂ ಸಿಂದಾನ್ವಯಾಂಬೋಧಿಚಂ<br>
ದ್ರಾಮನೇರ್ವ್ವತ್ತಿತದೀಶನಂ ಮಲೆವರಂ ಕೊಂಡುಗ್ರಮತ್ತೇಭ ಸಂ<br>
ಘಮನಾದಂ ಪಿಡಿದಂ ಪ್ರತಾಪತಪನಂ ಚಾವುಂಡ ಭೂಪಾಲಕಂ ॥<br>
ನಿಜ ಚಾತುರ್ಬ್ಬಳಗರ್ಬ್ಬದಿ ಭುಜಬಳ ಪ್ರಕ್ಷೋಭದಿಂ ಪಾಂಡ್ಯ<br>
ನಾಜಿ ಜಯಾಕಾಂಕ್ಷೆಯಿನೆಯ್ದೆ ಎಂದು ಕಡು ಪಿಂಡಂ ತಾಗೆ ಚಾವುಂಡ ಭೂ<br>
ಭುಜನೇಕಾಂಗದೆಗೆಲ್ದ ಸೈನ್ಯಮನದಂ ಕಂಡುತ್ತುದಂ ಒಟ್ಟುನಿ<br>
ರ್ವ್ವಿಜಯಂಕಾಮನ್ಯಪಾಳ ನೋಡಿದನವಂ ಬೆಂಗೊಟ್ಟು ಕಾಳ್ವಟ್ಟೆಯಿಂ."

ಚಾವುಂಡರಾಯನ ಮರಣದನಂತರ ಮಗನಾದ ಬಿಜ್ಜಲ ಅಧಿಕಾರಕ್ಕೆ ಬಂದನು. ನಾಲ್ಕನೆಯ ಸೋಮೇಶ್ವರನ ಸಾಮಂತನಾಗಿದ್ದನೆಂದು ಯಲಬುರ್ಗಿ ತಾಲೂಕಿನ ಕಲ್ಲೂರ ಶಾಸನ ತಿಳಿಸುತ್ತದೆ.[೨೯] ಬಿಜ್ಜಲ ಮತ್ತು ವಿಕ್ರಮ ಸಹೋದರರು ಕೂಡಿ ಎರಂಬರವಿ ಎಂಬ ಪ್ರದೇಶವನ್ನು ಆಳುತ್ತಿದ್ದರು. ಕಿಸುಕಾಡು, ಬೇಗಡಿಗೆ,ಕೇಲವಾಡಿ, ನರೆಯಂಗಲ್-೧೨ ಹಾಗೂ ಕರಿವಾಡಿ-೩೦ನ್ನು ಆಳುತ್ತಿದ್ದಾಗ ಎರಂಬರಣೆಯ ತೆಲ್ಲಿಗೇಶ್ವರ ದೇವರಿಗೆ ದತ್ತಿಬಿಟ್ಟ ಬಗ್ಗೆ ಕ್ರಿ.ಶ.೧೧೮೭ರ ಬೆಣಚಮಟಿ ಶಾಸನ ಉಲ್ಲೇಖಿಸುತ್ತದೆ.[೩೦] ವೀರ ಬಿಜ್ಜಳನಿಗೆ ತ್ರಿಪುರಾದೇವಿ ಎಂಬ ರಾಣಿಯಿದ್ದಳು. ಇವನಿಗೆ ಉಭಯಕುಲಶುದ್ಧ, ಆಖಿಲಸ್ತುತಿಕೀರ್ತಿ, ನೀತಿಶರನಿಧಿ, ಅಭಿನವ ಚೇತೋಜಾತ, ನೂತನ ರಘುಸುತ, ಸಿಂಧಾನ್ವಯ ಲಕ್ಷ್ಮೀಧರ ಮೊದಲಾದ ಬಿರುದುಗಳಿದ್ದವು. ಇವನ ನಂತರ ವಿಕ್ರಮ ಆಳ್ವಿಕೆ ನಡೆಸಿದನು. ಸಿಂದಕುಲದ ಮಹಾಮಂಡಳೇಶ್ವನ ವಿಕ್ರಮಾದಿತ್ಯದೇವನು ಕ್ರಿ.ಶ.೧೨೨೦ರಲ್ಲಿ ಯಾದ ಸಿಂಘಣ ರಾಜ್ಯಪಾಲನಾಗಿದ್ದನೆಂದು ರೋಣ ತಾಲೂಕಿನ ಕಲಕಪ್ಪನ ಗುಡ್ಡದ ಶಾಸನ ಉಲ್ಲೇಖಿಸುತ್ತದೆ.[೩೧] ಕಲಚೂರಿ, ಚಾಲುಕ್ಯ ಮತ್ತು ಹೊಯ್ಸಳರ ನಡುವಿನ ಘರ್ಷಣೆಯಲ್ಲಿ ಈ ಯಲಬುರ್ಗಿ ಸಿಂದರು ಸ್ವತಂತ್ರರಾಗಲು ಪ್ರಯತ್ನಿಸಿದರು. ಆದರೆ ಯಶಸ್ಸು ಕಾಣದೆ ಕ್ರಿ.ಶ. ೧೨೨೦ ರ ವೇಳೆಗೆ ಸಿಂದವಂಶದ ಆಳ್ವಿಕೆಯು ಕೊನೆಗೊಂಡಿತೆಂದು ತಿಳಿದುಬರುತ್ತದೆ.

### ೪.೧.೩ ಹೊಯ್ಸಳರು

ಚಾಲುಕ್ಯರ ಪತನಾನಂತರ ಪ್ರಾಬಲ್ಯಕ್ಕೆ ಬಂದ ಮನೆತನಗಳಲ್ಲಿ ಹೊಯ್ಸಳರು ಪ್ರಮುಖರಾಗಿದ್ದಾರೆ. ಕ್ರಿ.ಶ.೧೧ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ಹೊಯ್ಸಳರು ಸುಮಾರು ಮೂರು ಶತಮಾನಗಳಿಗೂ ದೀರ್ಘಕಾಲ ಆಳ್ವಿಕೆ ನಡೆಸಿದರು. ಸಳ, ಬಲ್ಲಾಳ, ವಿಷ್ಣುವರ್ಧನ ಮೊದಲಾದವರು ಆಳ್ವಿಕೆ ನಡೆಸಿ ಕರ್ನಾಟಕದ ಕಲೆ ಮತ್ತು ವಾಸ್ತು ಶಿಲ್ಪದಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿದರು.

ಹೊಯ್ಸಳರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಈ ವಂಶದ ಮೂಲದ ಬಗ್ಗೆ ಶಾಸನಗಳು ಮಾಹಿತಿ ಒದಗಿಸುತ್ತವೆ. ಒಂದು ಮೂಲದ ಪ್ರಕಾರ ಶಶಕಪುರದ ಬಳಿ ಹೆಬ್ಬುಲಿಯೊಂದು ವಾಸವಾಗಿದ್ದು, ಜನರಿಗೆ ಕಿರುಕುಳ

ನೀಡುತ್ತಿತ್ತು. ಈ ಹುಲಿಯ ಭಯದಿಂದ ಪಾರಾಗಲು ಜನರು ಹುಲಿಯನ್ನು ಕೊಂದವನಿಗೆ ತಲಾ ವರ್ಷಪ್ರತಿ ಒಂದು ಹಣ ತೆರಿಗೆ ಕೊಡುವುದಾಗಿ ತಿಳಿಸಿದರು. ಸಳನು ಆ ಹುಲಿಯನ್ನು ಕೊಂದನು. ಜನರು ಕಾಣಿಕೆ ನೀಡಿದ್ದರಿಂದ ಸಾಕಷ್ಟು ನಿಧಿಯು ಸಂಗ್ರಹವಾಯಿತು. ಅದರಿಂದ ಒಂದು ಸೈನ್ಯವನ್ನು ಕಟ್ಟಿ ಸುತ್ತಮುತ್ತಲ ಪ್ರದೇಶಗಳ ಮೇಲೆ ಆಡಳಿತ ನಡೆಸಿದನು.[೩೨] ಅದೇ ಸಮಯದಲ್ಲಿ ಗಂಗರ ಅವನತಿ ಹಾಗೂ ಚಾಲುಕ್ಯ, ಚೋಳರ ಘರ್ಷಣೆಯ ಲಾಭ ಪಡೆದು ರಾಜ್ಯ ಸ್ಥಾಪಿಸಿದನೆಂದು ತಿಳಿಯುತ್ತದೆ. ತೊರವರ ಮಾರಿ, ಮಲೆ ಪರೋಳ್ಗಂಡ, ಮಲೆವರ ಮಾರಿ ಮೊದಲಾದ ಬಿರುದುಗಳು ಇವರು ಮಲೆನಾಡು ಪ್ರದೇಶದ ನಿವಾಸಿಗಳಾಗಿದ್ದರಲ್ಲದೆ ಕನ್ನಡಿಗರಾಗಿದ್ದರೆಂದು ತಿಳಿಸುತ್ತವೆ.[೩೩]

ಮಂಡ್ಯ ಜಿಲ್ಲೆಯ ಬಸರಾಳು ಬಳಿ ದೊರೆತ ದಾಖಲೆಯ ಪ್ರಕಾರ ಮಲೆನಾಡಿನ ಅಂಗಡಿ ಗ್ರಾಮದ ಬಳಿಯಿರುವ ಶಶಕಪುರ ಅಥವಾ ಸೊಸೆವೂರು ಹೊಯ್ಸಳರ ಮೂಲಸ್ಥಳ. ಗ್ರಾಮದಲ್ಲಿರುವ ಜೈನ ಮಂದಿರದಲ್ಲಿ ಸಳನೆಂಬ ಯುವಕನಿರುವಾಗ ಅಲ್ಲಿಗೆ ಒಂದು ಹುಲಿ ಬಂದು ಜೈನಮುನಿ ಸುದತ್ತನ ಮೇಲೆ ಎರಗಿತು. ಮುನಿ ಸಳನನ್ನು ನೋಡಿ 'ಪೊಯ್ಸಳ' ಎಂದು ಆಜ್ಞೆ ಮಾಡಿದಾಗ ತನ್ನಲ್ಲಿದ್ದ ಕಠಾರಿಯಿಂದ ಹುಲಿಯ ಮೇಲರಗಿ ಕೊಂದನಲ್ಲದೆ ಮುನಿಗಳ ಹಾಗೂ ವಾಸಂತಿಕಾದೇವಿಯ ಕೃಪಾ ಕಟಾಕ್ಷದಿಂದ ರಾಜ್ಯ ಸ್ಥಾಪಿಸಿದನೆಂದು ತಿಳಿಯುತ್ತದೆ.[೩೪] ಪೊಯ್ಸಳ ನಂತರದಲ್ಲಿ ಹೊಯ್ಸಳವಾಯಿತೆಂದು ಅಭಿಪ್ರಾಯಪಡಲಾಗಿದೆ.

ಹೊಯ್ಸಳರು ಕುರುಬ ಸಮುದಾಯಕ್ಕೆ ಸಂಬಂಧಿಸಿದವರೆಂದು ಅಭಿಪ್ರಾಯವಿದೆ. ಕುರುಬರು ಬೆಟ್ಟ–ಗುಡ್ಡದ ನಿವಾಸಿಗಳು. ಅದೇರೀತಿ ಹೊಯ್ಸಳರು ಹೊಂದಿರುವ ಬಿರುದುಗಳು ಮಲೆವರಮಾರಿ, ಮಲೆ ಪರೋಳ್ಗಂಡ ಮೊದಲಾದವು ಇವರು ಮಲೆನಾಡಿನ ನಿವಾಸಿಗಳೆಂದು ಸ್ಪಷ್ಟಪಡಿಸುತ್ತವೆ.

ತಮಿಳುನಾಡಿನ ಪ್ರಸಿದ್ಧ ಕುರುಬರ ವೀರಪಾಂಡ್ಯನ ಮಗ ಕೂನಪಾಂಡ್ಯನ ಪಟ್ಟದರಾಣಿ ಏಚಲಾದೇವಿಯು ಗರ್ಭವತಿಯಾದಾಗ ಅವಳನ್ನು ತವರಿಗೆ ಕಳಹಿಸಲಾಯಿತು. ಆಕೆ ಹೊಯ್ಸಳನಿಗೆ ಜನ್ಮ ನೀಡಿದಳು. ಇವನೇ ನಂತರದಲ್ಲಿ ದೋರಸಮುದ್ರದ ರಾಜ್ಯಭಾರ ಮಾಡಿದನಲ್ಲದೆ, ಜೈನ ವಿರೋಧಿಯಾಗಿದ್ದನೆಂದು ದೇವಚಂದ್ರನು ತನ್ನ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ.[೩೫]

ಹೊಯ್ಸಳರ ನಾಲ್ಕನೇ ಬಲ್ಲಾಳನಿಗೆ ಹಕ್ಕ–ಬುಕ್ಕರ ಸೋದರಿಯೊಂದಿಗೆ ವಿವಾಹ ಮಾಡಿ ಕೊಡಲಾಗಿತ್ತು. ಹೀಗಾಗಿ ಹೊಯ್ಸಳರಿಗೆ ಸಂಗಮರೊಂದಿಗೆ ರಕ್ತಸಂಬಂಧವಿತ್ತೆಂದು ತಿಳಿಯುತ್ತದೆ.[೩೬] ಕುರುಬರಲ್ಲಿ ಅಸಲು ಎಂಬ ಬೆಡಗಿದೆ. ಅಸಲು ಬೆಡಗು ಮುಂದೆ ಅಸಲರು, ಹೊಸಲರು, ಹೊಯ್ಸಲರು, ಹೊಯ್ಸಳರು ಎಂದು ರೂಪಾಂತರಗೊಂಡಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹೊಯ್ಸಳರು ತಮ್ಮನ್ನು ಯಾದವರು ಎಂದು ಕರೆದುಕೊಂಡಿರುವುದರಿಂದ ಕುರುಬರು ಎಂದು ಹೇಳಬಹುದಾಗಿದೆ.

ಹೊಯ್ಸಳ ಸಂತತಿಯ ಸ್ಥಾಪಕನಾದ ಹೊಯ್ಸಳನು ಕಾಲ್ಪನಿಕ ವ್ಯಕ್ತಿಯಾಗಿರುವಂತೆಯೇ ನೃಪಕಾಮ ಮತ್ತು ಸಳ ಬೇರೆ ವ್ಯಕ್ತಿಯಲ್ಲ ಎಂಬ ಅಭಿಪ್ರಾಯವಿದೆ. ನಂತರ ವಿನಯಾದಿತ್ಯ, ಎರೆಯಂಗ ೧ನೇ ಬಲ್ಲಾಳ, ವಿಷ್ಣುವರ್ಧನ, ೧ನೇ ನರಸಿಂಹ, ಸೋಮೇಶ್ವರ, ೩ನೇ ಬಲ್ಲಾಳ ಆಳ್ವಿಕೆ ನಡೆಸಿದರು.

## ೪.೨ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲ

### ೪.೨.೧ ವಿಜಯನಗರ ಸಾಮ್ರಾಜ್ಯ

ದಕ್ಷಿಣ ಭಾರತದ ಇತಿಹಾಸದಲ್ಲಿಯೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಒಂದು ಅದ್ವಿತೀಯ ಘಟನೆಯಾಗಿದೆ. ಉತ್ತರ ಭಾರತವೆಲ್ಲ ಸಂಪೂರ್ಣವಾಗಿ ಮುಸ್ಲಿಂರ ವಶದಲ್ಲಿತ್ತು. ದಕ್ಷಿಣ ಭಾರತವನ್ನು ವಶಪಡಿಸಿಕೊಳ್ಳಲು ಮುಂದಾದರು. ಮಹ್ಮದ್–ಬಿನ್– ತುಘಲಕ್‌ನ ದಾಳಿ ಅಧಿಕಗೊಂಡಿತು. ದಕ್ಷಿಣ ದೇಶವು ಮುಸ್ಲಿಂರ ವಶವಾಗುವಂತಹ ಸಂದಿಗ್ದ ಪರಿಸ್ಥಿತಿಯಲ್ಲಿ ಹಿಂದೂ ರಾಜ್ಯ, ಧರ್ಮವನ್ನು ರಕ್ಷಿಸಲು ಕ್ರಿ.ಶ.೧೩೩೬ರಲ್ಲಿ ಹಕ್ಕ–ಬುಕ್ಕರೆಂಬ ಸಹೋದರರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಈ ಸಾಮ್ರಾಜ್ಯವನ್ನು ನಾಲ್ಕು ವಂಶಗಳು ಆಳ್ವಿಕೆ ನಡೆಸಿದವು. ಈ ಅವಧಿಯಲ್ಲಿ ಧರ್ಮ, ಸಾಹಿತ್ಯ, ಸಂಗೀತ, ಕಲೆ ಮತ್ತು ವಾಸ್ತುಶಿಲ್ಪ ಉನ್ನತ ಸ್ಥಾನ ಪಡೆದವು.

ವಿಜಯನಗರ ಸಾಮ್ರಾಜ್ಯದ ಮೂಲದ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಒಂದು ಅಭಿಪ್ರಾಯದ ಪ್ರಕಾರ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರು ಓರಂಗಲ್ಲಿನ ಪ್ರತಾಪರುದ್ರದೇವನ ಬಳಿಯಲ್ಲಿದ್ದರು.[೩೭] ಓರಂಗಲ್ಲಿನ ಮೇಲೆ ಮುಸ್ಲಿಂರು ದಾಳಿಮಾಡಿದ್ದರಿಂದ ಸಹೋದರರು ಆನೆಗೊಂದಿಗೆ ಪಲಾಯನ ಮಾಡಿದರು. ಆನೆಗೊಂದಿಯ ಕಂಪಿಲರಾಯನ ಹತ್ತಿರ ಮಂತ್ರಿ ಮತ್ತು ಭಂಡಾರದ ಅಧಿಕಾರಿಗಳಾಗಿ ಸ್ಥಾನ ಪಡೆದುಕೊಂಡರು. ಬಹಾವುದ್ದೀನನಿಗೆ ಆಶ್ರಯ ನೀಡಿದ ಕಾರಣದಿಂದಾಗಿ ಮಹ್ಮದ್–ಬಿನ್–ತುಘಲಖನು ಆನೆಗೊಂದಿ ಹಾಗೂ ಕಂಪಿಲದುರ್ಗವನ್ನು ವಶಪಡಿಸಿಕೊಂಡನು. ಅಲ್ಲಿ ತನ್ನ ಪ್ರತಿನಿಧಿಯನ್ನಾಗಿ ಮಲ್ಲಿಕ್ ಮಹ್ಮದನನ್ನು ನೇಮಿಸಿ ದೆಹಲಿಗೆ ಮರಳಿದನು. ಮಲ್ಲಿಕ್ ಮಹ್ಮದ್‌ನಿಗೆ ಇಲ್ಲಿಯ ಜನರನ್ನು ನಿಯಂತ್ರಿಸುವುದು ಕಷ್ಟವಾದ್ದರಿಂದ ತನ್ನ ಪ್ರತಿನಿಧಿಗಳನ್ನಾಗಿ ಹರಿಹರ ಮತ್ತು ಬುಕ್ಕರನ್ನು ನೇಮಿಸಿದ್ದನು. ಹರಿಹರನನ್ನು ರಾಜನನ್ನಾಗಿ ಬುಕ್ಕನನ್ನು ಮಂತ್ರಿಯನ್ನಾಗಿ ನೇಮಿಸಿ ಮರಳಿದನು. ಕಾಲಾನಂತರ ಈ ಸಹೋದರರು ಶಕ್ತರಾಗಿ ಸಂಪೂರ್ಣ ಬೆಂಬಲ ಪಡೆದುಕೊಂಡು ಒಂದು ಸಾಮ್ರಾಜ್ಯ ನಿರ್ಮಿಸಿದರು. ಅದೇ ವಿಜಯನಗರ ಸಾಮ್ರಾಜ್ಯ ವಾರಂಗಲ್ಲಿನ ಕಾಕತೀಯ ಪ್ರತಾಪರುದ್ರನ ಆಸ್ಥಾನದಲ್ಲಿದ್ದರಿಂದ ಇವರು ತೆಲುಗು ಮೂಲದವರೆಂದು ನಂಬಲಾಗಿದೆ. ಆದರೆ ಅದಕ್ಕೆ ಹೆಚ್ಚಿನ ಆಧಾರಗಳಿಲ್ಲ.

ವಿಜಯನಗರ ಅರಸರು ಮೂಲತಃ ಕನ್ನಡಿಗರು ಎಂಬ ಅಭಿಪ್ರಾಯವಿದೆ. ಸಂಗಮನ ಮಕ್ಕಳಾದ ಹಕ್ಕ ಮತ್ತು ಬುಕ್ಕರು ಹೊಯ್ಸಳರ ಮೂರನೇ ಬಲ್ಲಾಳನ ಆಶ್ರಯದಲ್ಲಿದ್ದರು. ಆನೆಗೊಂದಿಯನ್ನು ಕೇಂದ್ರವಾಗಿ ಮಾಡಿಕೊಂಡು ಹೊಸ ಸಾಮ್ರಾಜ್ಯವನ್ನು ಸ್ಥಾಪಿಸಿದರು. ನಂತರ ವಿಜಯನಗರ (ಹಂಪಿ) ರಾಜಧಾನಿಯಾಯಿತು. ವಿಜಯನಗರ ಅರಸರ ಅನೇಕ ಬಿರುದುಗಳು ಅವರ ಕನ್ನಡ ಮೂಲಕ್ಕೆ ಸಾಕ್ಷಿಯಾಗಿವೆ. ಕೃಷ್ಣದೇವರಾಯನಿಗೆ "ಕನ್ನಡ ರಾಜ್ಯ ರಮಾರಮಣ" ಎಂಬ ಬಿರುದಿತ್ತು.[೩೮] ಇವರ ಹೆಚ್ಚಿನ ಸಂಖ್ಯೆಯ ಶಾಸನಗಳು ಕನ್ನಡದಲ್ಲಿ ದೊರೆತಿವೆ. ಶಾಸನಗಳು ವಿಜಯನಗರದ ಅರಸರನ್ನು ಕರ್ನಾಟಕದ ಅರಸರೆಂದು, ಸಾಮಂತರನ್ನು ಕರ್ನಾಟಕದ ಪ್ರಭುಗಳೆಂದು ಉಲ್ಲೇಖಿಸುತ್ತವೆ. ಒಟ್ಟಾರೆ ವಿಜಯನಗರದ ಅರಸರು ಮೂಲತಃ ಕನ್ನಡಿಗರೆಂಬುದು ಸ್ಪಷ್ಟ

ವಿಜಯನಗರ ಅರಸರು ಕುರುಬರೆಂಬ ಅಭಿಪ್ರಾಯವಿದೆ. ವಿಜಯನಗರ ಕಾಲದ ಪ್ರವಾಸಿಗಳಾದ ಇಬ್ನಬತೂತ, ನ್ಯೂನಿಜ

ಮೊದಲಾದವರ ಅಭಿಪ್ರಾಯದ ಪ್ರಕಾರ ಸಂಗಮ ವಂಶಸ್ಥರು ಕುರುಬುರು.[೩೯] ಹಕ್ಕ-ಬುಕ್ಕ ಸಹೋದರರು ಮೊದಲಿಗೆ ಓರಂಗಲ್ ಅರಸರ ಬಳಿ ಬಂಡಾರಿಗಳಾಗಿ ಕೆಲಸ ಮಾಡುತ್ತಿದ್ದರು. ಮಹ್ಮದ ತುಘಲಕ್‌ನ ದಾಳಿಗೆ ಓರಂಗಲ್ಲು ತುತ್ತಾದ್ದರಿಂದ ಸಹೋದರರು ಆನೆಗೊಂದಿ ಅರಸರ ಆಸ್ಥಾನದಲ್ಲಿ ಮಂತ್ರಿ ಹಾಗೂ ಭಂಡಾರಿಗಳಾಗಿ ಸೇವೆ ಸಲ್ಲಿಸತೊಡಗಿದರು. ಕ್ರಿ.ಶ.೧೩೩೪ರಲ್ಲಿ ಸುಲ್ತಾನ ಆನೆಗೊಂದಿಯನ್ನು ವಶಪಡಿಸಿಕೊಂಡನು. ಹಕ್ಕ-ಬುಕ್ಕರು ಸುಲ್ತಾನನ ವಶವಾದರು. ಕಾಲಾನಂತರ ಸ್ಥಳೀಯ ಜನರ ಅಸಹಕಾರದಿಂದಾಗಿ ಸರದಾರನಿಗೆ ಆಡಳಿತ ಮಾಡಲಾಗಲಿಲ್ಲ. ಹೀಗಾಗಿ ಸುಲ್ತಾನ ಹಕ್ಕ-ಬುಕ್ಕರಿಗೆ ಈ ಪ್ರಾಂತ್ಯದ ರಾಜ್ಯಭಾರವನ್ನು ಬಿಟ್ಟುಕೊಟ್ಟನು. ನಂತರ ಸಹೋದರರು ಸ್ವತಂತ್ರರಾಗಿ ಸಾಮ್ರಾಜ್ಯ ನಿರ್ಮಿಸಿದರೆಂದು ಸಿವಿಲ್ ತನ್ನ ಮರೆತ ಸಾಮ್ರಾಜ್ಯ ಕೃತಿಯಲ್ಲಿ ತಿಳಿಸಿದ್ದಾನೆ.[೪೦]

ವಿದ್ಯಾರಣ್ಯರ ಕಾಲಜ್ಞಾನದ ಪ್ರಕಾರ ಹೊಯ್ಸಳ ಸೇನಾಧಿಪತಿಯಾಗಿದ್ದ ಸಂಗಮನು ಮರಣ ಹೊಂದಿದನು. ಅವನ ಮಕ್ಕಳಾದ ಹಕ್ಕ-ಬುಕ್ಕರು ಅಲೆದಾಡುತ್ತ ಘಟ್ಟದ ಮೇಲಿನ ಕುರುಬರ ಬಳಿಯಲ್ಲಿ ಆಶ್ರಯ ಹೊಂದಿದರು. ಒಂದು ದಿನ ಬೇಟೆಯಾಡುತ್ತ ಬಿಸಿಲಿನ ಬೇಗೆ ನೀಗಿಸಿಕೊಳ್ಳಲು ಒಂದು ದೊಡ್ಡ ಆಲದ ಮರದ ಕೆಳಗೆ ಹಾಸುಗಲ್ಲಿನ ಮೇಲೆ ಮಲಗಿದ್ದರು. ಆಗ ಒಂದು ನಾಗರಹಾವು ಇವರ ತಲೆಯ ಮೇಲೆ ಹೆಡೆ ತೆಗೆದು ಆಡುತ್ತಿದ್ದನ್ನು ಶ್ರೀ ವಿದ್ಯಾರಣ್ಯರೆಂಬ ಯತಿಗಳು ಕಂಡು ಆಶ್ಚರ್ಯಗೊಂಡರಲ್ಲದೆ, ಈ ಸಹೋದರರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ಅವರಿಗೆ ೧೨೩ ರಾಜನೀತಿ ವಿದ್ಯೆಗಳನ್ನು ಭೋಧಿಸಿ ರಾಜ್ಯ ಸ್ಥಾಪನೆ ಮಾಡಲು ಸಹಕರಿಸಿದರು.[೪೧] ಹೀಗಾಗಿ ಕುರುಬರಾಗಿದ್ದ ಹಕ್ಕ-ಬುಕ್ಕರು ಹೊಸ ಸಾಮ್ರಾಜ್ಯವನ್ನು ಸ್ಥಾಪಿಸಿದರು.

ಸಂಗಮ ಎನ್ನುವುದು ಕುರುಬರಲ್ಲಿರುವ ಒಂದು ಬೆಡಗು ಬಳ್ಳಾರಿ, ಹಾಸನ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಅಧಿಕವಾಗಿ ಕಂಡುಬರುತ್ತದೆ.[೪೨] ಇದರಿಂದಾಗಿ ಸಂಗಮ ವಂಶಸ್ಥರು ಕುರುಬರು ಎಂಬ ಅಭಿಪ್ರಾಯವಿದೆ.

ಮೊದಲನೆ ದೇವರಾಜನ ಕಾಲದ ಲಕ್ಷ್ಮೀಧರಾ ಮಾತ್ಯನ ಶಾಸನದಲ್ಲಿ ಸಂಗಮ ವಂಶದ ವಂಶಾವಳಿಯನ್ನು ನೀಡಲಾಗಿದೆ. ಸೇನಾಪತಿ ಸಂಗಮನಿಂದ ಹಿಡಿದು ಪ್ರೌಡಬಾಹು ಪ್ರತಾಪನವರೆಗೆ ವರ್ಣಿಸಲ್ಪಟ್ಟಿದೆ. ಈ ಶಾಸನದ ೧೭ ರಿಂದ ೨೩ನೇ ಸಾಲುಗಳವರೆಗೆ ಈ ವಂಶಾವಳಿ ಹಾಗೂ ಗೋತ್ರವನ್ನು ಶಾಸನ ಕವಿಯಾದ ಶ್ರೀ ಮಧುರನು ಸುಂದರವಾಗಿ ವರ್ಣಿಸಿದ್ದಾನೆ. ಅದು ಈ ಕೆಳಗಿನಂತಿದೆ.[೪೩]

'ಯದುಧರೆಗರೆಸೆನಿಸಿದ ನಾದುದಾತನಿಂ ಯದುವಂಶಂ'॥

ಶ್ರೀ ಮತ್ಸೋಮಾಂನ್ವಯಕ್ಕುದ್ಭವಿಸಿ ಯದುವಂಶಾವನೀಪಾಲರೋಳ್ಳಿಸ್ಸೀವೀಯಾಲರೋಳ್ಸೀ ಮತ್ರೀ

ಸಂಗಮಕ್ಷ್ಮಾಪತಿ ದೊರೆವಡೆದಂ ತತ್ತನೂಜಂ ಸಮಸ್ತೋರ್ಖ್ವೀಮಾನ್ಯಂ

ರೂಢಿವೆತ್ತಂ ಹರಿಹರನಧಟಂ ತಂನರೇದ್ರಾನುಜಂ

ಸುತ್ರಾಮೋದ್ದಾಮಪ್ರತಾಪಂ ತಳೆದ ನಖಿಳಬೂಚಕ್ರಮಂ ಬುಕ್ಕರಾಯಂ॥

ಆತಂಗೆ ಜನಿಸಿದಂ ವಿಖ್ಯಾತಂ ನಳ

ಸಹುಷನುಭಗೀರಥಧರೊರಗೇ ಮಾತೋ ಸರಿಮಿಗಿ ಲೆನಲ್ದಮ್ಮಾ ತತರೂ

ಪ್ರತಾಪ ಹರಿಹರ ಭೂಪಂ॥

ದಾನಮಮರ್ದ್ದನಂವರ ಮೀನಾಗದೆ ಪಂದಿಯಾಗದಸ್ತ್ರೀರೂಪಂ ತಾನಾ

ಪ್ರತಾಪ ಹರಿಹರನೇನುದ್ಧರಿಸಿದನೊ ವೇದಮಂ ಮೇದನಿಯಂ॥

ಆ ಭೂಮಿಪಾಲ ಪುಣ್ಯಾಂಕುರಮದು ಪುರುಷಾಕಾರದಿಂ

ಪುಟ್ಟಿದಂತಾಶಾಭಾಗ ಪ್ರಸ್ಫುರತ್ಪಾವನಯ ಶನಶನಿಪ್ರೌಢಬಾಹುಪ್ರತಾಪಂ

ಸೌಭಾಗ್ಯ ಶ್ರೀನಿವಾಸಂ ಜನಿಯಿಸಿ ಸಕಲಕ್ಷತ್ರ ಚೂಢಾಧಿರೂಡಾ

ಗ್ಲಾಭಾರಂ ಸಾರ್ವಭೌಮೋಂನತಿಯೊಳೆಸಗಿದಂ ದೇವರಾಜಾವನೀಂದ್ರಂ॥

ಈ ಶಾಸನದಲ್ಲಿ ಯದುವಂಶಾವನೀ ಪಾಲರೊಳ್ನಿಸೀಮ ಶ್ರೀ ಸಂಗಮಕ್ಷ್ಮಾಪತಿ ಎಂದು ಉಲ್ಲೇಖಿಸಿರುವುದರಿಂದ ಸಂಗಮ ವಂಶಜರು ಕುರುಬರು ಎಂದು ತಿಳಿಯುತ್ತದೆ.

ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿಯ ಕೃತಿಯಲ್ಲಿ "ಅತ್ತಲುತ್ತರ ದೇಶದೋಳ ತುಂಗಭದ್ರಾ ತೀರದೋಳ್ ವಿದ್ಯಾನಗರಿಯನಾಳ್ದ ಹರಿಹರ ಬುಕ್ಕರ್ಮೊದಲಾದ ಕುರುಂಬರಾಯರ ಅನಂತರದೊಳ್ ಅರಸುಗೆಯ್ದು ತುಳುವ ಕುಳಾಧೀಶ್ವರ ನರಸವೀರ ನರಸಿಂಗ ಕೃಷ್ಣಾಚ್ಯುತರೆಂಬ ರಾಯರ್ಗೈವರ ತರುವಾಯಂ" ಎಂದು ಹೇಳಲಾಗಿದೆ.[೪೪] ಅದೇ ರೀತಿ ಕೆಳದಿನೃಪ ವಿಜಯದಲ್ಲಿ ಹಕ್ಕಬುಕ್ಕರು ಕುರುಬರೊಡನೆ ಮದುವೆಯಾಗಿದ್ದರು ಎಂದು ಬರೆಯಲಾಗಿದೆ.[೪೫] ಈ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹಕ್ಕ-ಬುಕ್ಕರು ಕುರುಬರು ಎಂಬುದು ಸ್ಪಷ್ಟಪಡುತ್ತದೆ.

### ೪.೨.೨ ಸಂಗಮವಂಶ

ಹಕ್ಕ-ಬುಕ್ಕ ಎಂಬ ಸಹೋದರರು ಸಂಗಮನ ಮಕ್ಕಳಾಗಿದ್ದರಿಂದ ಈ ವಂಶಕ್ಕೆ ಸಂಗಮವಂಶ ಎಂದು ಕರೆಯಲಾಗಿದೆ. ಹೊಯ್ಸಳರ ಆಡಳಿತದಲ್ಲಿ ಅಧಿಕಾರಿಗಳಾಗಿದ್ದ ಸಂಗಮನ ಮಕ್ಕಳು ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆರಂಭದಲ್ಲಿ ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಈ ವಂಶದ ಮೊದಲನೆ ಅರಸ ಹರಿಹರ ಅಥವಾ ಹಕ್ಕರಾಯ ಕ್ರಿ.ಶ.೧೩೩೬ ರಿಂದ ೧೩೫೬ರವರೆಗೆ ಆಳ್ವಿಕೆ ನಡೆಸಿದನು.[೪೬] ಮೂರನೇ ಬಲ್ಲಾಳನ ನಂತರ ತನ್ನ ಸಾಮ್ರಾಜ್ಯವನ್ನು ಒಂದು ಸುಭದ್ರವಾದ ತಳಹದಿ ಮೇಲೆ ನಿಲ್ಲಿಸಿದನು. ಆಕ್ರಮಣ ಮಾಡಿದ್ದ ಮುಬಾರಕ್‌ಖಾನ ಹಾಗೂ ಬಹಮನ್ ಷಾ ಸೋತು ಶರಣಾದರು. ಸಹೋದರರ ಸಹಾಯದಿಂದ ಅನೇಕ ದಂಗೆಗಳನ್ನು ಅಡಗಿಸಿದನು. ಕೊಪ್ಪಳದ ಕ್ರಿ.ಶ.೧೩೪೬ರ ಶಾಸನ ಹರಿಹರನ ಬಗ್ಗೆ ಮಾಹಿತಿ ನೀಡುತ್ತದೆ. ಹರಿಹರನ ನಂತರ ಸಹೋದರನಾದ ಬುಕ್ಕರಾಯ ಕ್ರಿ.ಶ. ೧೩೫೬ ರಿಂದ ೧೩೭೭ರವರೆಗೆ ಆಳಿದನು. ಗುಲಬರ್ಗಾದ ಮಹ್ಮದ ಷಾ ಮತ್ತು ಅವನ ಮಗ ಮುಜಾಹಿದ್‌ನೊಡನೆ ಹೋರಾಡಿದ್ದನು. ಮಧುರೆ ಸುಲ್ತಾನನನ್ನು ಬುಕ್ಕನ ಮಗ ಕುಮಾರ ಕಂಪಣ ಸೋಲಿಸಿದ್ದನು. ಮಗನನ್ನು ತಮಿಳು ದೇಶದ ರಾಜ್ಯಪಾಲನನ್ನಾಗಿ ನೇಮಿಸಿದ್ದನು. ತುರುಷ್ಕರು, ಕೊಂಕಣರು, ಸಂಕಪಾರ್ಯರು, ಆಂಧ್ರರು, ಗೂರ್ಜರು, ಕಳಿಂಗ ಹಾಗೂ ಕಾಂಬೋರಿಗೆ ಅರಿಯಭಯಂಕರನಾಗಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ. ಬುಕ್ಕನಟ್ಟಿ ಎಂಬ ಗ್ರಾಮ ಯಲಬುರ್ಗಾ ತಾಲೂಕಿನಲ್ಲಿದೆ. ಇದು ಬುಕ್ಕರಾಯನ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯುತ್ತದೆ.

ಬುಕ್ಕನ ಮರಣದ ನಂತರ  ಮಗನಾದ ಎರಡನೇ ಹರಿಹರ ಅಧಿಕಾರಕ್ಕೆ ಬಂದು ಕ್ರಿ.ಶ.೧೩೭೭ ರಿಂದ ೧೩೯೭ರವರೆಗೆ ಆಳ್ವಿಕೆ ನಡೆಸಿದನು. ಗೋವಾದಿಂದ ಮುಸ್ಲಿಂರನ್ನು ಹೊಡೆದೋಡಿಸಿದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ. 'ಮಹಾರಾಜಾಧಿರಾಜ' ಎಂಬ ಬಿರುದು ಹೊಂದಿದ್ದನು. ನಂತರ ಇಮ್ಮಡಿ ಬುಕ್ಕ, ದೇವರಾಯ, ವಿಜಯರಾಯ ಆಳ್ವಿಕೆ ನಡೆಸಿದರು. ಆದರೆ ಇವರ ಆಂತರಿಕ ಕಲಹಗಳಿಂದಾಗಿ ಸಾಮ್ರಾಜ್ಯ ಅವನತಿಯ ಹಾದಿ ಹಿಡಿದಿತ್ತು. ಆಗ ಇಮ್ಮಡಿ ದೇವರಾಯ ಅಧಿಕಾರಕ್ಕೆ ಬಂದು ಸಾಮ್ರಾಜ್ಯದ ಅಭಿವೃದ್ಧಿಗೆ ಶ್ರಮಿಸಿದನು.

ವಿಜಯರಾಯನ ಮಗನಾದ ಇಮ್ಮಡಿದೇವರಾಯ ಕ್ರಿ.ಶ.೧೪೧೯ ರಿಂದ ೧೪೪೬ ರವರೆಗೆ ಆಳ್ವಿಕೆ ನಡೆಸಿದನು. ಬಹುಮನಿ ಸುಲ್ತಾನರೊಡನೆ ಮೂರು ಬಾರಿ ಯುದ್ಧ ಮಾಡಿದ್ದನು. ಮೂರನೇ ಬಾರಿಗೆ ಸುಲ್ತಾನನೊಂದಿಗೆ ಒಪ್ಪಂದ ಮಾಡಿಕೊಂಡನು. ಅಲ್ಲಾವುದ್ದೀನ ಮುದ್ಗಲ್ ಕೋಟೆಯನ್ನು ದೇವರಾಯನಿಗೆ ಬಿಟ್ಟುಕೊಟ್ಟನು. ಇವನ ಸಾಮ್ರಾಜ್ಯವು ಸಿಲೋನದಿಂದ ಹಿಡಿದು ಗುಲಬರ್ಗಾದವರೆಗೂ, ಓರಿಸ್ಸಾದ ಬಂಗಾಲದಿಂದ ಮಲಬಾರನವರೆಗೂ ವಿಸ್ತರಿಸಲ್ಪಟ್ಟಿತ್ತು.[೪೭] ಸ್ವತಃ ವಿದ್ವಾಂಸನಾಗಿದ್ದ ದೇವರಾಯ ವಚನ ಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣನಾದನು. ಇವನಿಗೆ ಪ್ರೌಢದೇವರಾಯ, ಪ್ರತಾಪದೇವ, ಅಭಿನವ ವೀರದೇವರಾಯ, ಗಜಬೇಟೆಕಾರ ಎಂಬ ಬಿರುದುಗಳಿದ್ದವು.

ಪ್ರೌಢದೇವರಾಯನ ನಂತರ ಸಾಮ್ರಾಜ್ಯದಲ್ಲಿ ಆಂತರಿಕ ಕಲಹ ಉಂಟಾಗಿ ಆಳ್ವಿಕೆ ಕುಸಿಯತೊಡಗಿತು. ಮಲ್ಲಿಕಾರ್ಜುನ, ರಾಜಶೇಖರ, ೨ನೇ ವಿರೂಪಾಕ್ಷ ಆಳ್ವಿಕೆ ನಡೆಸಿದರು. ಆದರೆ ಸಾಮ್ರಾಜ್ಯ ಅವನತಿಯ ಹಾದಿ ಹಿಡಿಯಿತು. ಹೀಗಾಗಿ ಸಾಳ್ವ ನರಸಿಂಹ ಅರಸರನ್ನು ಪದಚ್ಯುತಿಗೊಳಿಸಿ ತಾನೇರಾಜ್ಯವಹಿಸಿಕೊಂಡು ಸಾಳ್ವವಂಶ ಪ್ರಾರಂಭಿಸಿದನು. ನಂತರ ತುಳುವಂಶ ಅರವೀಡುವಂಶ ಆಳ್ವಿಕೆ ನೆಡೆಸಿದವು. ೧೫೬೫ರ ತಾಳಿಕೋಟಿ ಕದನದಲ್ಲಿ ವಿಜಯನಗರ ಸಾಮ್ರಾಜ್ಯ ಅವನತಿಯಾಯಿತು.

### ೪.೨.೩ ಮೈಸೂರಿನ ಒಡೆಯರು

ದಕ್ಷಿಣ ಭಾರತದ ಇತಿಹಾಸದಲ್ಲಿ ಮೈಸೂರು ಒಡೆಯರು ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದ್ದಾರೆ. ತಾಳಿಕೋಟೆಯ ಕದನದ ನಂತರ ವಿಜಯನಗರ ಸಾಮ್ರಾಜ್ಯ ಅವನತಿಯಾಯಿತು. ಆಗ ಅನೇಕ ಸಾಮಂತ ಅರಸರು ಸ್ವತಂತ್ರ ರಾಜ್ಯಗಳನ್ನು ಸೃಷ್ಟಿಸಿಕೊಂಡರು. ಹೀಗೆ ಅಸ್ತಿತ್ವಕ್ಕೆ ಬಂದ ಸಂಸ್ಥಾನಗಳಲ್ಲಿ ಮೈಸೂರು ಒಡೆಯರ ಸಂಸ್ಥಾನವು ಒಂದಾಗಿದೆ. ಸುಮಾರು ಕ್ರಿ.ಶ.೧೩೯೯ ರಿಂದ ೧೭೬೧ ರವರೆಗೆ ಆಳ್ವಿಕೆ ನಡೆಸಿದರು. ವಿಜಯನಗರ ಸಾಮ್ರಾಜ್ಯದ ನಂತರ ಕರ್ನಾಟಕದ ಅರಸೊತ್ತಿಗೆಯನ್ನು ಪ್ರಭಾವಶಾಲಿಯಾಗಿ ಮುಂದುವರೆಸಿತೆಂದು ತಿಳಿಯುತ್ತದೆ.

ಒಡೆಯರ ಮೂಲದ ಬಗ್ಗೆ ಅನೇಕ ಅಭಿಪ್ರಾಯಗಳನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಒಡೆಯರ ಮೂಲವನ್ನು ಪುರಾಣಗಳಲ್ಲಿ ಬರುವ ದ್ವಾರಕೆಯ ಯದುವಂಶ (ಶ್ರೀ ಕೃಷ್ಣನವಂಶ) ಎಂದು ಗುರುತಿಸುವ ಸಂಪ್ರದಾಯವಿದೆ.[೪೮] ಒಡೆಯರ್ ಮನೆತನದ  ಮೂಲ ಪುರುಷನಾದ ಯದುರಾಯ ತನ್ನ ಸೋದರ ಕೃಷ್ಣರಾಯನೊಂದಿಗೆ ಒಂದು ರಾಜ್ಯ ಸ್ಥಾಪಿಸಿದನೆಂದು ಹೇಳಲಾಗಿದೆ.

ಒಡೆಯರ್ ವಂಶದ ಮೂಲ ಪುರುಷರಿಗೆ ಚಂದ್ರವಂಶಕ್ಕೆ ಸೇರಿದ ಕೆಲವು ದಕ್ಷಿಣ ಭಾರತೀಯ ರಾಜಮನೆತನಗಳೊಂದಿಗೆ ಸಂಬಂಧವಿತ್ತು. ಹೊಯ್ಸಳ ರಾಜಮನೆತನ ನಾಶವಾದ ಮೇಲೆ ಓಡಿ ಹೋಗಿದ್ದ ರಾಜಪುರುಷರು ಇವರೇ ಎಂದೂ, ಅವರ ರಾಜಧಾನಿ ದ್ವಾರಾವತಿ ಅಥವಾ ದ್ವಾರಸಮುದ್ರವಾಗಿದ್ದಿತೆಂದು ಎಸ್.ಕೆ.ಅಯ್ಯಂಗಾರರು ಅಭಿಪ್ರಾಯಪಡುತ್ತಾರೆ.[೪೯]

ಒಡೆಯರ್ ಮೂಲದ ಬಗ್ಗೆ ಒಂದು ಕಥೆ ಪ್ರಚಲಿತದಲ್ಲಿದೆ. ಅದರ ಪ್ರಕಾರ ಕ್ರಿ.ಶ. ೧೩೯೯ರಲ್ಲಿ ಉತ್ತರ ಭಾರತದ ಕಡೆಯಿಂದ ಯದುವಂಶದ ಯದುರಾಯ, ಕೃಷ್ಣರಾಯ ಎಂಬ ಸಹೋದರರು ದಕ್ಷಿಣ ಭಾಗಕ್ಕೆ ವಲಸೆ ಬಂದರು. ಕಾವೇರಿಯನ್ನು ದಾಟಿ ಮೈಸೂರು ಭಾಗಕ್ಕೆ ಬಂದರು. ಆಗ ಮೈಸೂರು ಭಾಗದಲ್ಲಿ ಆಳ್ವಿಕೆ ನಡೆಸಿದ್ದ ಪಾಳೆಯಗಾರ ಚಾಮರಾಜ ಮೃತನಾದನು. ಇವನ ಪತ್ನಿ ಮತ್ತು ಮಗಳನ್ನು ಮಾರನಾಯಕ ಹಿಂಸಿಸತೊಡಗಿದನು. ಮಾರನಾಯಕನ ವಿರುದ್ಧ ಹೋರಾಡಿ ಅವನನ್ನು ಕೊಲೆ ಮಾಡಿದರು. ಈ ಸಹಾಯಾರ್ಥಕವಾಗಿ ಚಾಮರಾಜನ ಮಗಳನ್ನು ಯದುರಾಯ ವಿವಾಹವಾದನು. ಹೀಗಾಗಿ ಈ ಯದುವಂಶಕ್ಕೆ ಮೂಲ ಪುರುಷನಾದನು. ರಾಜ್ಯ ಸ್ಥಾಪಿಸಿದ ಮೇಲೆ ಒಡೆಯರು ಎಂಬ ಅಂಕಿತವನ್ನು ಸೇರಿಸಿಕೊಂಡನು. ಅಂದಿನಿಂದ ಈ ವಂಶಸ್ಥರು ಒಡೆಯರು ಎಂದು ಕರೆಯಲ್ಪಟ್ಟರು.

ಮೈಸೂರಿನ ಒಡೆಯರು ಕುರಬರು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕುರುಬರಲ್ಲಿ ಅರಸು ಎಂಬ ಬೆಡಗು ಅಥವಾ ಕುಲವಿದೆ.[೫೦] ಅಲ್ಲದೆ ರೇವಣಸಿದ್ಧನ ಅನುಯಾಯಿಗಳಿಗೆ ಒಡೆಯರು ಎಂದು ಕರೆಯಲಾಗಿದೆ. ಇಂದಿಗೂ ಕುರುಬರ ಕುಲಗುರುಗಳಾಗಿರುವರು ಒಡೆಯರು. ಬಳ್ಳಾರಿ ಜಿಲ್ಲೆಯ ಹಿರೇಮೈಲಾರದ ಮೈಲಾರಲಿಂಗ ದೇವಾಲಯದ ಅಧಿಪತಿಗಳಾಗಿರುವವರು ಅರಸು ಕುಲಕ್ಕೆ ಸೇರಿದ ಒಡೆಯರ್‌ರಾಗಿದ್ದಾರೆ. ಹೀಗಾಗಿ ಸಂಗಮ ಕುಲಕ್ಕೆ ಸೇರಿದವರು ಸಂಗಮದವರೆಂದು ಗುರುತಿಲಸ್ಪಟ್ಟಂತೆ ಅರಸು ಕುಲಕ್ಕೆ ಸೇರಿದ ಒಡೆಯರು ಮೈಸೂರಿನ ಅರಸರಾಗಿ ಆಳ್ವಿಕೆ ನಡೆಸಿದರೆಂದು ಅಭಿಪ್ರಾಯಪಟ್ಟಿದ್ದಾರೆ.

ಮೈಸೂರು ಒಡೆಯರ ಸಾಮ್ರಾಜ್ಯದ ಮೂಲ ಪುರುಷ ಯದುರಾಯ, ಯದುರಾಯ ತನ್ನ ಸೋದರ ಕೃಷ್ಣರಾಯನೊಂದಿಗೆ ಕೂಡಿಕೊಂಡು ಒಡೆಯರ್ ಸಾಮ್ರಾಜ್ಯವನ್ನು ನಿರ್ಮಿಸಿದನು. ಸುಮಾರು ಕ್ರಿ.ಶ.೧೩೯೯ ರಿಂದ ೧೪೨೩ರವರೆಗೆ ಆಳ್ವಿಕೆ ನಡೆಸಿದನು. ಸೋದರ ಕೃಷ್ಣರಾಯನನ್ನು ಕಾರಗಳ್ಳಿ ಪ್ರಾಂತ್ಯದ ಅಧಿಪತಿಯನ್ನಾಗಿ ನೇಮಿಸಿದನು. ಯದುರಾಯನಿಗೆ ದೇವಾಜಮ್ಮಣಿ ಎಂಬ ಪತ್ನಿಯಿದ್ದಳು. ಇವಳಿಗೆ ಹಿರಿಯ ಬೆಟ್ಟದ ಚಾಮರಾಜ ಒಡೆಯರ ಹಾಗೂ ಚಾಮರಾಜ ಒಡೆಯರ್ ಎಂಬ ಮಕ್ಕಳು ಜನಿಸಿದರು. ಯದುರಾಯನ ಆಡಳಿತದ ಬಗ್ಗೆ ಹೆಚ್ಚಿನ ಆಧಾರಗಳಿಲ್ಲ.

ಯದುರಾಯನ ನಂತರ ಮಗನಾದ ಹಿರಿಯ ಬೆಟ್ಟದ ಚಾಮರಾಜ ಒಡೆಯರು ಅಧಿಕಾರಕ್ಕೆ ಬಂದರು. ನಂತರ, ತಮ್ಮ ರಾಜ ಒಡೆಯರು, ೨ನೇ ಚಾಮರಾಜ ಒಡೆಯರು, ಮೂರನೇ ಹಿರಿಯ ಬೆಟ್ಟದ ಚಾಮರಾಜ ಒಡೆಯರು, ಎರಡನೇ ತಿಮ್ಮರಾಜ ಒಡೆಯರು, ನಾಲ್ಕನೇ ಚೋಳ ಚಾಮರಾಜ ಒಡೆಯರ್, ದೇವರಾಜ ಒಡೆಯರ್, ನಾಲ್ಕನೆ ಚೋಳ ಚಾಮರಾಜ ಒಡೆಯರ್ ಆಳ್ವಿಕೆ ನಡೆಸಿದರು. ಈ ಅರಸರೆಲ್ಲರೂ ವಿಜಯನಗರ ಸಾಮ್ರಾಜ್ಯದ ಅಧಿಕಾರಿಗಳಾಗಿದ್ದರು. ರಾಜ ಪ್ರತಿನಿಧಿಗಳಾಗಿದ್ದ ಅರಸರು ಕ್ರಮೇಣ ವಿಜಯನಗರ ಸಾಮ್ರಾಜ್ಯ ಶಕ್ತಿ ಗುಂದುತ್ತಿರುವುದನ್ನು ಕಂಡು ತಮ್ಮ ಸ್ಥಾನವನ್ನು ಭದ್ರಗೊಳಿಸಿಕೊಳ್ಳತೊಡಗಿದರು. ಸುಮಾರು ೧೪೨೩ರಿಂದ ೧೫೨೮ರವರೆಗೆ ಆಳಿದ ಒಡೆಯರು ರಾಜಪ್ರತಿನಿಧಿಗಳಾಗಿ ವಿಜಯನಗರಕ್ಕೆ ಸೇವೆಸಲ್ಲಿಸಿದರು.

ನಾಲ್ಕನೇ ಬೋಳ ಚಾಮರಾಜ ಒಡೆಯರ ಮಗನಾದ ರಾಜ ಒಡೆಯರ್ ಕ್ರಿ.ಶ.೧೫೭೮ ರಿಂದ ೧೬೧೭ ರವರೆಗೆ ಆಳ್ವಿಕೆ ನಡೆಸಿದನು. ಇಲ್ಲಿಯವರೆಗಿದ್ದ ಮೈಸೂರು ಸಾಮ್ರಾಜ್ಯ ೩೩ ಹಳ್ಳಿ ಹಾಗೂ ೩೦೦ ಜನ ಸೈನಿಕರನ್ನು ಒಳಗೊಂಡಿತ್ತು.[೫೦] ಅದರ ವ್ಯಾಪ್ತಿಯನ್ನು ಹೆಚ್ಚಿಸಿದನು. ವಿಜಯನಗರದ ಪ್ರತಿನಿಧಿಯಾಗಿದ್ದ ಶ್ರೀರಂಗರಾಯ ರಾಜ ಒಡೆಯರನ್ನು ಶ್ರೀರಂಗಪಟ್ಟಣಕ್ಕೆ ಬರಮಾಡಿಕೊಂಡು ತನ್ನ ಸಿಂಹಾಸನ ನೀಡಿ ಮರಣ ಹೊಂದಿದನು. ಹೀಗಾಗಿ ೧೬೧೦ ರಲ್ಲಿ ರಾಜಧಾನಿಯನ್ನು ಮೈಸೂರಿನ ಶ್ರೀರಂಗಪಟ್ಟಣಕ್ಕೆ ಬದಲಾಯಿಸಿದನು. ಅಕ್ಕಿಹೆಬ್ಬಾಳು, ಸೋಸಲೆ, ಎಳಂದೂರು ಮೊದಲಾದ ಪ್ರದೇಶಗಳ ಪಾಳೆಯಗಾರರನ್ನು ಸೋಲಿಸಿದನು. ಇವನ ನಂತರ ನರಸರಾಜ ಒಡೆಯರ್ ಅಧಿಕಾರಕ್ಕೆ ಬಂದರು. ಕ್ರಿ.ಶ.೧೬೧೭ ರಿಂದ ೧೬೩೭ರವರೆಗೆ ಆಳ್ವಿಕೆ ನಡೆಸಿ ತಲಕಾಡು, ಕೆರಗೋಡು, ಮಳವಳ್ಳಿ, ಚನ್ನಪಟ್ಟಣ, ಬೆಳ್ಳೂರು, ನಾಗಮಂಗಲ, ಚನ್ನರಾಯಪಟ್ಟಣ ಮೊದಲಾದ ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ಶ್ರೀರಾಮಾಯಣಕ್ಕೆ ಚಾಮಲೋಕ್ತಿ ವಿಲಾಸ ಎಂಬ ಹೆಸರಿನಲ್ಲಿ ಕನ್ನಡದ ಟೀಕಾಗ್ರಂಥ ರಚಿಸಿದ್ದು ಇವನ ಕಾಲದಲ್ಲಿಯೆ ಎಂಬುದು ವಿಶೇಷ.

ಕಂಠೀರವ ನರಸರಾಜ ಒಡೆಯರ್ ಕ್ರಿ.ಶ. ೧೬೩೮ ರಿಂದ ೧೬೫೯ ರವರೆಗೆ ಆಳ್ವಿಕೆ ನಡೆಸಿದನು. ನಂತರ ಚಿಕ್ಕದೇವರಾಜ ಒಡೆಯರ್ ಕ್ರಿ.ಶ.೧೬೭೩ ರಿಂದ ೧೭೦೪ ರವರೆಗೆ ಆಳಿದನು. ಮಾಗಡಿ, ಮುದ್ದಗಿರಿ, ಕೊರಟಗೆರೆ, ಚಿಕ್ಕದೇವರಾಯನದುರ್ಗ, ಕಾವೇರಿ ಪಟ್ಟಣ, ಕೂಡ್ಲಿಗೆರೆ ಮೊದಲಾದ ಅನೇಕ ಪ್ರದೇಶಗಳನ್ನು ರಾಜ್ಯಕ್ಕೆ ಸೇರಿಸಿಕೊಂಡನು. ಮೊಗಲರ ಸುಲ್ತಾನ ಔರಂಗಜೇಬ ಚಿಕ್ಕದೇವರಾಜರ ಒಡೆತನವನ್ನು ಮಾನ್ಯ ಮಾಡಿದ್ದನು. ಆಡಳಿತದಲ್ಲಿ ಅಠಾರ ಕಛೇರಿಯನ್ನು ಸ್ಥಾಪಿಸಿದನಲ್ಲದೆ ಸಾಹಿತ್ಯ ಕಲೆಗೆ ಪ್ರೋತ್ಸಾಹ ನೀಡಿದ್ದನು.[೫೨] ಚಿಕ್ಕದೇವರಾಜ ಬಿನ್ನಪ, ಗೀತಗೋಪಾಲ, ಶೇಷಧರ್ಮ ಮೊದಲಾದ ಕೃತಿಗಳನ್ನು ರಚಿಸಿದನು. ಅಪ್ರತಿಮ ವೀರ, ವೀರನರಪತಿ, ನವಕೋಟಿ ನಾರಾಯಣ ಎಂಬ ಬಿರುದುಗಳಿದ್ದವು. ಇವರ ಉತ್ತರಾಧಿಕಾರಿಗಳು ದುರ್ಬಲರಾಗಿದ್ದರಿಂದ ಅಧಿಕಾರ ದಳವಾಯಿಗಳ ಕೈಸೇರಿತು. ೨ನೇ ಕಂಠೀರವ, ಕೃಷ್ಣರಾಜ ಒಡೆಯರ್, ಆರನೇ ಚಾಮರಾಜ, ೨ನೇ ಕೃಷ್ಣರಾಜ ಒಡೆಯರ ಮೊದಲಾದವರು ನಾಮಮಾತ್ರ ಆಳ್ವಿಕೆ ನಡೆಸಿದರು.

**೪.೨.೪ ಹಂಡೆ ಪಾಳೆಯಗಾರರು**

ವಿಜಯನಗರೋತ್ತರ ಕಾಲದ ಪಾಳೆಯಗಾರರಲ್ಲಿ ಹಂಡೆಕುರುಬ ಪಾಳೆಯಗಾರರು ಪ್ರಮುಖರಾಗಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ಗ್ರಾಮದ ಗೌಡಿಕೆ ಮಾಡಿಕೊಂಡಿದ್ದರು. ನಂತರದಲ್ಲಿ ಪ್ರಾಂತ್ಯದ ಪಾಳೆಯಗಾರರಾಗಿ ಆಳ್ವಿಕೆ ನಡೆಸಿದರು. ಅನಂತಪುರ, ಬಳ್ಳಾರಿ ಮೊದಲಾದ ಕಡೆ ಪಾಳೆಯಗಾರರಾಗಿ ಆಳಿದರು. ಬಾಲದ ಹನುಮಪ್ಪನಾಯಕನಿಂದ ಸೃಷ್ಟಿಗೊಂಡ ಈ ಮನೆತನ ಸುಮಾರು ಕ್ರಿ.ಶ.೧೫೬೭ ರಿಂದ ೧೮೮೯ರ ವರೆಗೆ ಸುದೀರ್ಘ ಆಳ್ವಿಕೆ ನಡೆಸಿತು. ಈ ವಂಶದಲ್ಲಿ ಪ್ರಮುಖರಾಗಿ ಅಂಕುಶರಾಯ, ದೇವಪ್ಪನಾಯಕ, ರಾಮಪ್ಪ ನಾಯಕ ಮೊದಲಾದವರು ಆಳ್ವಿಕೆ ನಡೆಸಿದರು. ಬಂಕಾಪುರ, ಅನಂತಪುರ ಹಾಗೂ ಬಳ್ಳಾರಿ ಪಾಳೆಯಗಾರರೆಂದು ಆಳ್ವಿಕೆ ನಡೆಸಿ ಚರಿತ್ರೆಯಲ್ಲಿ ತಮ್ಮದೇ ಆದ ಸ್ಥಾನ ಪಡೆದಿದ್ದಾರೆ.

ಹಂಡೆ ಕುರುಬರ ಮೂಲವನ್ನು ತಿಳಿಯಲು ಬಳ್ಳಾರಿ ಪ್ರದೇಶದ ಕೈಫಿಯುತ್ತು. ಪ್ರಮುಖ ಆಧಾರವಾಗಿದೆ. ಇದರ ಪ್ರಕಾರ ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಮುತ್ತಗಿ (ಮುತ್ತಲಗಿರಿ) ಎಂಬ ಗ್ರಾಮವಿದೆ. ಮುತ್ತಗಿ ಸ್ಥಳನಾಮದ ಪ್ರಕಾರ

ಮೂವತ್ತು ಹಳ್ಳಿಗೆ ಮುತ್ತಗಿಯ ಕೇಂದ್ರ ಸ್ಥಳವಾಗಿತ್ತೆಂದು ತಿಳಿಯುತ್ತದೆ. ಮುತ್ತಗಿ ವಡವಡಗಿ, ನರಸಲಗಿ, ಬೋವೂರ, ಸೋಲವಾಡಗಿ, ಹಂಚನಾಳ, ಹೆಬ್ಬಾಳ, ಗೋಳಸಂಗಿ ಮೊದಲಾದ ಹಳ್ಳಿಗಳು ಒಬ್ಬ ಗೌಡನ ಆಡಳಿತಕ್ಕೊಳಪಟ್ಟಿದ್ದವು.[೫೩] ಈ ಪ್ರಾಂತ್ಯವು ಬಿಜಾಪುರ ಆದಿಲ್ ಷಾಹಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ಈ ಮುತ್ತಗಿಯ ವತನದಾರರಾಗಿ ಹಂಡೆ ಕುರುಬರ ವಂಶಸ್ಥರಾದ ಲಕುಮಿನಾಯಕನ ವಂಶದವರು ಆಳುತ್ತಿದ್ದರು. ಪ್ರತಿ ವರ್ಷಕ್ಕೊಮ್ಮೆ ಕಪ್ಪು ಕಾಣಿಕೆಗಳನ್ನು ಸುಲ್ತಾನರು ತೆಗೆದುಕೊಳ್ಳುತ್ತಿದ್ದರು.

ವಿಜಯನಗರದ ಕೃಷ್ಣದೇವರಾಯನ ಪ್ರಭುತ್ವದಲ್ಲಿ ಆಶ್ರಯ ಪಡೆದಿದ್ದ ಪಾಳೆಯಗಾರ ತಿಮ್ಮಪ್ಪ ನಾಯಕ ಹಾಗೂ ಅವನ ಸಹೋದರ ರಂಗಪ್ಪ ನಾಯಕ ಪ್ರಭುಗಳಿಗೆ ವರ್ಷಕ್ಕೆ ೧೦೦೦ ರೂಪಾಯಿಗಳ ಕಪ್ಪ ಕಾಣಿಗೆ ನೀಡುತ್ತಿದ್ದರು. ಕೃಷ್ಣದೇವರಾಯನ ನಂತರ ಅಚ್ಯುತದೇವರಾಯನ ಸಿಂಹಾಸನವೇರಿದನು. ಅಚ್ಯುತದೇವರಾಯನ ಕಾಲದಲ್ಲಿ ಮುತ್ತಿಗೆಯ ಆಡಳಿತ ಸಂಪೂರ್ಣವಾಗಿ ಇವರಲ್ಲಿತ್ತು. ಇವನ ನಂತರ ಮಗನಾದ ವೆಂಕಟಾದ್ರಿ ಅಧಿಕಾರಕ್ಕೆ ಬಂದನು. ಆದರೆ ಅಧಿಕಾರವನ್ನು ಅಳಿಯ ರಾಮರಾಯ ವಹಿಸಿಕೊಂಡಿದ್ದನು. ರಾಮರಾಯ ಈ ಸಮಯದಲ್ಲಿ ಅಂತರ್ ರಾಜ್ಯಗಳ ರಾಜಕೀಯದಲ್ಲಿ ಹಸ್ತಕ್ಷೇಪ ನಡೆಸಿ ಬಹಮನಿಯರ ಪ್ರದೇಶಗಳನ್ನು ವಶಪಡಿಸಿಕೊಂಡನು. ಆದರೆ ಅಲ್ಪಕಾಲದಲ್ಲಿ ಬಹಮನಿ ಆದಿಲ್‌ಷಾಹಿಗಳು ರಾಮರಾಯನ ಕುತಂತ್ರವನ್ನು ಅರಿತು, ವಿಜಯನಗರದ ಮೇಲೆ ದಂಡೆತ್ತಿ ಬಂದರು.

ವಿಜಯನಗರದ ಕೋಶಾಧಿಪತಿಯಾದ ಬೊಕ್ಕಸಂ ತಿಮ್ಮರಾಯನ ದಂಗೆಯನ್ನು ಅಡಗಿಸಲು ಬಿಜಾಪುರ ಪ್ರಾಂತ್ಯದಲ್ಲಿದ್ದ ಹಂಡೆ ಹನುಮಪ್ಪನಾಯಕನ ಸಹಾಯ ಪಡೆದನು. ದಂಗೆಯನ್ನು ಅಡಗಿಸುವಲ್ಲಿ ತೋರಿದ ಧೈರ್ಯ, ಸಾಹಸವನ್ನು ಮೆಚ್ಚಿದ ರಾಮರಾಯ ಹಂಡೆ ಹನುಮಪ್ಪನಾಯಕನಿಗೆ ನಂದ್ಯಾಲ ಬುಕ್ಕರಾಯ ಸಮುದ್ರ, ಧರ್ಮಾವರ, ಕಣಿಕಲ್ಲು, ಬಳ್ಳಾರಿ, ಕುರುಗೋಡುಗಳನ್ನು ಉಂಬಳಿಯಾಗಿ ನೀಡಿದನು.[೫೪] ಹೀಗಾಗಿ ಹಂಡೆ ಹನುಮಪ್ಪನಾಯಕನ ವಿಜಯನಗರದ ಮಾಂಡಲಿಕನಾದನು.

ಕ್ರಿ.ಶ. ೧೫೬೫ರ ತಾಳಿಕೋಟೆ ಕದನದಲ್ಲಿ ವಿಜಯನಗರ ಸಾಮ್ರಾಜ್ಯ ಪತನಗೊಂಡಿತು. ನಂತರ ಬಿಜಾಪುರ ಸುಲ್ತಾನರು ಆಳ್ವಿಕೆ ನಡೆಸತೊಡಗಿದರು. ಹಂಡೆ ಕುರುಬರು ಸುಲ್ತಾನರಿಗೆ ಪ್ರತಿವರ್ಷ ೫೦೦೦ ರೂಗಳ ಕಪ್ಪವಲ್ಲದೆ, ಯುದ್ಧ ಸಮಯದಲ್ಲಿ ೩೦೦ ಸಿಪಾಯಿಗಳನ್ನು ಒದಗಿಸಬೇಕಾಗಿತ್ತು. ವಿಜಯನಗರ ಪ್ರದೇಶ ಅರಾಜಕತೆಯಿಂದ ಕೂಡಿದ್ದರಿಂದ ಅದನ್ನು ನಿಯಂತ್ರಿಸಲು ಬಾಲದ ಹನುಮಪ್ಪ ನಾಯಕನನ್ನು ಕಳುಹಿಸಲು ತೀರ್ಮಾನಿಸಿದರು. ಇವನಿಗೆ ಪೌಜದಾರಿ ಮೊಕರೂರು ಮಾಡಿಕೊಟ್ಟರಲ್ಲದೆ, ವಜೀರಪ್ಪ ಎಂಬ ಬಿರುದು ನೀಡಿದನು.[೫೫] ಹೀಗೆ ಸುಲ್ತಾನರಿಂದ ಅಧಿಕಾರ ಪಡೆದು ಬಂಕಾಪುರ ಹಾಗೂ ಬಳ್ಳಾರಿಯನ್ನು ಪ್ರಮುಖ ಕೇಂದ್ರವನ್ನಾಗಿಸಿಕೊಂಡು ಆಳ್ವಿಕೆ ನಡೆಸಿದನು. ಬಳ್ಳಾರಿಯಲ್ಲಿ ಎರಡು ಕೋಟೆಗಳನ್ನು ಕಟ್ಟಿಸಿದನಲ್ಲದೆ, ಗುಡ್ಡದ ತುದಿಯಲ್ಲಿ ಒಂದು ಸುಂದರ ಅರಮನೆ ನಿರ್ಮಿಸಿದನು. ತೆಕ್ಕಲುಕೋಟೆ, ಕಣಿಕಲ್ಲು, ಧರ್ಮಾವರ, ಅನಂತಪುರ, ನಂದ್ಯಾಲ, ಶಿರವಾಳ, ಶಿರಗುಪ್ಪ, ಶಿನ್ನೂರು, ಕುರುಗೋಡು ಮೊದಲಾದ ಗ್ರಾಮಗಳು ಇವನ ಆಡಳಿತಕ್ಕೊಳಪಟ್ಟಿದ್ದವು. ಇವನಿಗೆ ಅಂಕುಶರಾಯ, ದೇವಪ್ಪನಾಯಕ, ಲಿಂಗರಾಮಪ್ಪನಾಯಕ, ಹಿರಿಯ ಮುದುಕಪ್ಪನಾಯಕ, ಚಿಕ್ಕಮಲ್ಲಪ್ಪನಾಯಕ ಎಂಬ ೫ಜನ ಗಂಡು ಮಕ್ಕಳಿದ್ದರು. ಇವನ ನಂತರ ಮಕ್ಕಳು ಆಳ್ವಿಕೆ ನಡೆಸಿದರು. ಆದರೆ ತಮ್ಮಲ್ಲೇ ಪ್ರದೇಶಗಳನ್ನು ಹಂಚಿಕೊಂಡರು.

ಅನಂತಪುರ ಪ್ರದೇಶವನ್ನು ಚಿಕ್ಕಮಲ್ಲಪ್ಪ ನಾಯಕನ ಸಂತತಿಯವರು, ಬಳ್ಳಾರಿ ಪ್ರದೇಶವನ್ನು ಅಂಕುಶರಾಯನ ಸಂತತಿಯವರು ಆಳಿದರು.

### ೪.೨.೫ ಬಳ್ಳಾರಿಯ ಹಂಡೆ ಪಾಳೆಯಗಾರರು

ಬಳ್ಳಾರಿ ಪ್ರದೇಶದಲ್ಲಿ ಚಿಕ್ಕಮಲ್ಲಪ್ಪನಾಯಕನ ವಂಶಸ್ಥರು ಆಳ್ವಿಕೆ ನಡೆಸಿದರು. ಚಿಕ್ಕಮಲ್ಲಪ್ಪನಾಯಕನ ಮಗನಾದ ಚಿಕ್ಕನಾಯಕ ಸಾಹೇಬ ಆಳ್ವಿಕೆ ನಡೆಸಿದನು. ಬಳ್ಳಾರಿ ತೆಕ್ಕಲಕೋಟೆ, ಕಣೆಕಲ್ಲು, ಸಿಂದನೂರು, ಸಿರಗುಪ್ಪ ಮೊದಲಾದ ಪ್ರದೇಶಗಳು ಇವನ ಆಳ್ವಿಕೆಗೆ ಒಳಪಟ್ಟಿದ್ದವು. ಇವನ ನಂತರ ಮಗನಾದ ದ್ಯಾವಪ್ಪ ನಾಯಕ ಅಧಿಕಾರಕ್ಕೆ ಬಂದನು. ಆನೆಗೊಂದಿ ಅರಸರ ಸಹಾಯದಿಂದ ಬಳ್ಳಾರಿಯನ್ನು ವಶಪಡಿಸಿಕೊಂಡು ಕ್ರಿ.ಸ.೧೭೧೫ರಿಂದ ೧೭೩೦ ರವರೆಗೆ ಆಳ್ವಿಕೆ ನಡೆಸಿದನು.[೫೭] ಹೈದರಬಾದಿನ ನಿಜಾಮನ ವಶದಲ್ಲಿದ್ದ ಕುರುಗೋಡನ್ನು ವಶಪಡಿಸಿಕೊಂಡನು. ಎಮ್ಮಿಗನೂರು, ಹಾವಿನಹಾಳ, ಶಿರಿಗೇರಿ ಮೊದಲಾದ ಗ್ರಾಮಗಳಲ್ಲಿ ಕೋಟೆ ನಿರ್ಮಿಸಿದನು.

ದ್ಯಾಮಪ್ಪ ನಾಯಕನ ಮಗನಾದ ಹನುಮಪ್ಪ ನಾಯಕ ಕ್ರಿ.ಶ.೧೭೩೧ ರಿಂದ ೧೭೪೧ರವರೆಗೆ ಕುರುಗೋಡು ಸೀಮೆಯನ್ನು ಆಳಿದನು. ನಂತರ ಹಿರೇರಾಮಪ್ಪನಾಯಕ ಕ್ರಿ.ಶ,೧೭೪೧ ರಿಂದ ೧೭೪೯ರವರೆಗೆ ಆಳ್ವಿಕೆ ನಡೆಸಿದನು. ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಇವನ ಆಳ್ವಿಕೆಯಲ್ಲಿದ್ದವು. ತೊಲಮಿಡಿ, ಸಂಗನಕಲ್ಲು, ಬಾಗನೂರು ಗ್ರಾಮಗಳನ್ನು ತನ್ನ ಹಿರಿಯರಿಗೆ ಒಳ್ಳೆಯದಾಗಲೆಂದು ಕೊಟ್ಟೂರು ಮಠಕ್ಕೆ ದಾನ ಮಾಡಿದನು.

ಹಿರೇರಾಮಪ್ಪನಾಯಕನಿಗೆ ಪುತ್ರ ಸಂತಾನವಿಲ್ಲದ್ದರಿಂದ ಅವನ ೨ನೇ ಹೆಂಡತಿ  ನೀಲಮ್ಮ ಆಡಳಿತ ವಹಿಸಿಕೊಂಡಳು. ಕ್ರಿ.ಶ.೧೭೫೩ರಲ್ಲಿ ದೊಡ್ಡತಲೆ ರಾಮಪ್ಪ ನಾಯಕನನ್ನು ದತ್ತು ತೆಗೆದುಕೊಂಡು ಪಟ್ಟಕ್ಕೇರಿಸಿದಳು. ಅಪ್ರಾಪ್ತನಾಗಿದ್ದರಿಂದ ತಾನೇ ಅಧಿಕಾರ ಚಲಾಯಿಸಿದಳು. ಕ್ರಿ.ಶ.೧೭೫೩ ರಿಂದ ೧೭೫೭ರವರೆಗೆ ಬಳ್ಳಾರಿ, ಕುರುಗೊಡು, ತೆಕ್ಕಲಕೋಟೆ ಪ್ರದೇಶದಲ್ಲಿ ಆಳ್ವಿಕೆ ನಡೆಸಿದಳು. ಬಳ್ಳಾರಿಯ ಮಹಾಂತಸ್ವಾಮಿಗೆ ಪುಳೇನೂರು ಗ್ರಾಮವನ್ನು ದಾಸೋಹ ನಡೆಸಲು ಬಿಟ್ಟುಕೊಟ್ಟಳು. ಕುರುಗೋಡು ನೀಲಮ್ಮ ಎಂಬ ದೇವಾಲಯ ನಿರ್ಮಿಸಿದಳು.[೫೮] ಜನರು ಇವಳ ಆಡಳಿತಕ್ಕೆ ಬೇಸತ್ತು ಕೊಲೆ ಮಾಡಿದರು.

ನೀಲಮ್ಮನ ನಂತರ ಅಧಿಕಾರ ವಹಿಸಿಕೊಂಡ ದೊಡ್ಡ ತಲೆರಾಮಪ್ಪನಾಯ್ಕ ಬಳ್ಳಾರಿ ಕೋಟೆಯ ಉತ್ತರ ಭಾಗದಲ್ಲಿದ್ದ ಹೊಂಡಗಳಿಗೆ ಕಟ್ಟಡ ನಿರ್ಮಿಸಿದನು. ಆನೆಗೊಂದಿ ಅರಸ ತಿಮ್ಮರಾಯನಿಗೆ ಸೋತು ತೆಕ್ಕಲುಕೋಟೆಯ ಕೆಲವು ಸೀಮೆಗಳನ್ನು ಬಿಟ್ಟುಕೊಟ್ಟನು. ಇದರಿಂದಾಗಿ ಹಂಡೆ ಪಾಳೆಗಾರರು ಕೊಪ್ಪಳ ಭಾಗದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ಆಳ್ವಿಕೆ ನಡೆಸಿದ್ದರೆಂದು ಹೇಳಬಹುದಾಗಿದೆ. ಅನಂತಪುರದಲ್ಲಿದ್ದ ರಾಮಪ್ಪನಾಯಕನನ್ನು ಮೋಸದಿಂದ ಕೊಲೆ ಮಾಡಿಸಿದನು. ತನ್ನ ಆಪ್ತರನ್ನು ಅನಂತಪುರದಲ್ಲಿ ನೇಮಿಸಿದನು. ಇವನ ನಂತರ ಹನುಮಪ್ಪ ನಾಯಕ ಪಟ್ಟವೇರಿದನು. ಕೇವಲ ಐದು ವರ್ಷ ಆಳ್ವಿಕೆ ನಡೆಸಿದನು. ನಂತರ ಸಿಂಹಾಸನಕ್ಕೆ ಅಧಿಪತಿಯನ್ನಾಗಿಸಲು ಸಿದ್ದಮ್ಮ ಮತ್ತು ಹನುಮಪ್ಪನಾಯಕನ ಹೆಂಡತಿ ಪದ್ದಮ್ಮಳ ನಡುವೆ ಕಲಹ ಉಂಟಾಯಿತು. ಆದರೆ ಕೊನೆಗೆ ಜನರು ದೊಡ್ಡಪ್ಪ ನಾಯಕನನ್ನು ಅಧಿಕಾರಕ್ಕೆ ತಂದರು. ದೊಡ್ಡಪ್ಪ ನಾಯಕ ಹೈದರಾಲಿಯನ್ನು ಸೋಲಿಸಲು ಪ್ರಯತ್ನಿಸಿ ವಿಫಲನಾಗಿ ಕುರುಗೋಡಿಗೆ ಪಲಾಯನ ಮಾಡಿದನು. ಬಳ್ಳಾರಿ ಹೈದರನ ವಶವಾಯಿತು.

ಹಂಡೆ ಪಾಳೆಯಗಾರರ ವಂಶದ ಕೊನೆಯವನಾದ ರಾಮಪ್ಪನಾಯಕ ಕುರುಗೋಡಿನಲ್ಲಿ ಸಾಮಾನ್ಯರಂತೆ ಜೀವನ ನಡೆಸುತ್ತಿದ್ದನು. ಬ್ರಿಟಿಷರ ಕಾಲದಲ್ಲಿ ತಿಂಗಳಿಗಿಷ್ಟು ಹೊನ್ನನ್ನು ಸ್ವೀಕರಿಸಿ ಜೀವನ ನಡೆಸತೊಡಗಿದ್ದರು. ಒಟ್ವಾರೆ ಬಾಲದ ಹನುಮಪ್ಪ ನಾಯಕನಿಂದ ಏಳ್ಗೆಗೆ ಬಂದ ಈ ವಂಶ ಕ್ರಿ.ಶ.೧೫೬೭ ರಿಂದ ೧೮೮೯ರವರೆಗೆ ಆಳ್ವಿಕೆ ನಡೆಸಿತು. ಈ ಹಿನ್ನೆಲೆಯಲ್ಲಿ ಕುರುಬರಾಗಿದ್ದ ಹಂಡೆ ಪಾಳೆಯಗಾರರು ಕರ್ನಾಟಕ ಚರಿತ್ರೆಗೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದಾರೆಂದು ತಿಳಿಯುತ್ತದೆ.

### ೪.೩ ಆಡಳಿತ ವಿಭಾಗದಲ್ಲಿ ಕುರುಬರು

#### ೪.೩.೧ ರಾಜ

ಪ್ರತಿಯೊಂದು ಚಕ್ರಾಧಿಪತ್ಯಕ್ಕೆ ಆಧಾರಸ್ತಂಭಗಳು ಎರಡು, ಒಂದು ರಾಜಧರ್ಮ, ಮತ್ತೊಂದು ರಾಜನ ವ್ಯಕ್ತಿತ್ವ ಆಡಳಿತದಲ್ಲಿ ರಾಜನು ಪರಮೋನ್ನತನಾಗಿದ್ದನು. ಅವನು ಪರಮಾಧಿಕಾರವನ್ನು ಹೊಂದಿದವನಾಗಿದ್ದರೂ, ಒಬ್ಬ ಜ್ಞಾನಿಯೂ ಅನುಗ್ರಹಶೀಲನು, ಸಾಮಾಜಿಕ ಜೀವನದ ಕಟ್ಟುಕಟ್ಟಳೆಗಳಿಂದ ಹದಗೊಂಡವನೂ ಆದ ನಿರಂಕುಶಾಧಿಕಾರಿಯಾಗಿದ್ದನು.[೫೯] ರಾಜನು ನಿರ್ವಹಿಸಬೇಕಾದ ಅನೇಕ ಕರ್ತವ್ಯಗಳಲ್ಲಿ ಪ್ರಮುಖವಾದವು ಧರ್ಮಾನುಸರಣೆ, ಪ್ರಜೆಗಳನ್ನು, ಅವರ ಧರ್ಮಗಳನ್ನು ರಕ್ಷಿಸುವುದು, ಜನರ ಆರ್ಥಿಕ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಪ್ರಮುಖವಾಗಿದ್ದವು. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಅರಸರೆಲ್ಲ ಈ ಕರ್ತವ್ಯಗಳನ್ನು ಪಾಲಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆಂದು ಹೇಳಬಹುದಾಗಿದೆ.

ವಿಜಯನಗರದ ಅರಸರು ಪ್ರಜೆಗಳನ್ನು, ಸಮಾಜ ವ್ಯವಸ್ಥೆಯನ್ನು ನೆರೆಯ ರಾಜ್ಯಗಳ ಆಕ್ರಮಣಗಳಿಂದ ರಕ್ಷಿಸಲು ಉತ್ತಮವಾದ ಎಲ್ಲಾ ಕ್ರಮಗಳನ್ನು ಕೈಗೊಂಡಿದ್ದರು. ಪ್ರಜೆಗಳಿಗಾದ ಅನ್ಯಾಯವನ್ನು ಪರಿಹರಿಸುತ್ತಿದ್ದರಲ್ಲದೆ, ತಮ್ಮ ರಾಜ್ಯದ ಎಲ್ಲೆಗಳನ್ನು ವಿಸ್ತರಿಸಲು ಪ್ರಯತ್ನಿಸಿದರು. ಅನೇಕ ಯಜ್ಞ-ಯಾಗಾದಿಗಳನ್ನು ಆಚರಿಸುತ್ತಿದ್ದರು. ಹೊಸ ದೇವಾಲಯಗಳ ನಿರ್ಮಿಸಿ, ಹಳೆಯ ದೇವಾಲಯಗಳ ಜೀರ್ಣೋದ್ಧಾರ ಮಾಡಿದರು. ಅನೇಕ ಭೂಮಿಯನ್ನು, ಗ್ರಾಮಗಳನ್ನು ದಾನ ಮಾಡಿದರು.

ವಿಜಯನಗರದ ಅರಸರು ಪಂಪಾಕ್ಷೇತ್ರವನ್ನು ಧರ್ಮದ ಪ್ರತೀಕವಾಗಿ ಪರಿಗಣಿಸಿದರಲ್ಲದೆ, ವಿರೂಪಾಕ್ಷ (ಬಿರುಪಾಕ್ಷ)ನನ್ನು ಹಂಪೆಯರಸನನ್ನಾಗಿ ಸ್ತುತಿಸಿದ್ದಾರೆ.[೬೦] ಸಂಗಮರ ಅರಸರ ಕಾಲದಿಂದ ಅಳಿಯ ರಾಮರಾಯನ ಕಾಲದವರೆಗೂ ವಿವಿಧ ಧರ್ಮ, ಪಂಥಗಳು ಒಟ್ಟಿಗೆ ಸಹಬಾಳ್ವೆ ನಡೆಸುವ ವಾತಾವರಣವನ್ನು ಅರಸರು ನೀಡಿದ್ದರು. ಹಂಪಿ, ಚಿದಂಬರಂ, ಕಾಳಹಸ್ತಿ, ತಿರುಮಲ, ಕಂಚಿ, ಶ್ರೀಶೈಲಂ, ಶ್ರೀರಂಗಂ ತಿರುವಣ್ಣಾಮಲೈ ಮೊದಲಾದ ಧಾರ್ಮಿಕ ಕ್ಷೇತ್ರಗಳಿಗೆ ದಾನ ದತ್ತಿಗಳನ್ನು ನೀಡಿದ್ದರು.[೬೧] ೨ನೇ ದೇವರಾಯನು ಹಿಂದೂ ಮುಸ್ಲಿಮರು ಸಹಬಾಳ್ವೆ ನಡೆಸಲು ಅನುಕೂಲ ಮಾಡಿಕೊಟ್ಟಿದ್ದನು.

ಮೈಸೂರಿನ ರಾಜ ಒಡೆಯರು ಲಕ್ಷ್ಮೀಕಾಂತ ಸ್ವಾಮಿಗಾಗಿ ಸಂಕ್ರಾಂತಿ ಮಂಟಪವನ್ನು ಸ್ಥಾಪಿಸಿದರು. ಚಾಮರಾಜ ಒಡೆಯರ್ ಬ್ರಾಹ್ಮಣರಿಗಾಗಿ ಚಾಮರಾಜ ಸಮುದ್ರವೆಂಬ ಒಂದು ಅಗ್ರಹಾರವನ್ನು ಸ್ಥಾಪಿಸಿದರು. ದೇವರಾಜ ಒಡೆಯರು ನಂಜನಗೂಡಿನ ಬಳಿ ವಿರಕ್ತಮಠವನ್ನು ನಿರ್ಮಿಸಿದರು.[೬೨] ಶೈವ, ವೈಷ್ಣವ, ಜೈನ, ವೀರಶೈವ, ಇಸ್ಲಾಂ ಮೊದಲಾದ ಧರ್ಮಗಳು ರಾಜರಿಂದ ಪೋಷಣೆಯನ್ನು ಪಡೆದಿದ್ದವು. ಸರ್ವ ಧರ್ಮ ಸಹಿಷ್ಣುತೆ ರಾಜನ ರಾಜ್ಯಾಡಳಿತದ ಪ್ರಮುಖ ಲಕ್ಷಣವಾಗಿತ್ತು.

ಪ್ರಜೆಗಳ ಆರ್ಥಿಕ, ಔದ್ಯಮಿಕ ಹಾಗೂ ವಾಣಿಜ್ಯ ಚಟುವಟಿಕೆಗಳಲ್ಲಿ ನೆರವು ಹಾಗೂ ಪ್ರೋತ್ಸಾಹಗಳನ್ನು ನೀಡುವುದಲ್ಲದೆ, ಪ್ರಜೆಗಳ ಯೋಗಕ್ಷೇಮವು ತಮ್ಮ ಆದ್ಯ ಕರ್ತವ್ಯವೆಂದು ನಿರೂಪಿಸಿದ್ದರು. ಆಂತರಿಕ ಮತ್ತು ವಿದೇಶಿ ವ್ಯಾಪಾರಗಳಿಗೆ ಪ್ರೋತ್ಸಾಹ ನೀಡಿದ್ದರು. ಅನೇಕ ಮಾರುಕಟ್ಟೆಗಳನ್ನು ನಿರ್ಮಿಸಿಕೊಟ್ಟಿದ್ದ ೨ನೇ ಬುಕ್ಕರಾಯ ತುಂಗಭದ್ರ ನದಿಗೆ ಅಡ್ಡವಾಗಿ ಆಣೆಕಟ್ಟು ನಿರ್ಮಿಸಿದ್ದನು. ಇದಕ್ಕಾಗಿ ರಾಜನು ತನ್ನ ತಂದೆಯಿಂದ ಬಂದಿದ್ದ ಸಮಸ್ತ ಐಶ್ವರ್ಯವನ್ನು ವೆಚ್ಚಮಾಡಿದನೆಂದು ನ್ಯೂನಿಜ್ ತಿಳಿಸಿದ್ದಾನೆ.[೬೩]

ಮೈಸೂರಿನ ಒಡೆಯರು ತೋಡಿಸಿದ ಬಂಗಾರದ ದೊಡ್ಡನಾಲೆ, ದೇವರಾಜ ಒಡೆಯರ ದೇವರಾಜ ನಾಲೆ, ಚಿಕ್ಕದೇವರಾಜ ಸಾಗರನಾಲೆ ಮೊದಲಾದವು ಅಂದಿನ ರಾಜರು ಜನರಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಿಕೊಟ್ಟ ಬಗ್ಗೆ ತಿಳಿಸುತ್ತವೆ.[೬೪]

ರಾಜನಾದವನು ಜನರ ಯೋಗಕ್ಷೇಮವನ್ನು ಪ್ರತ್ಯಕ್ಷವಾಗಿ ವಿಚಾರಿಸಲು ತನ್ನ ರಾಜ್ಯದಲ್ಲಿ ಆಗಾಗ ಸಂಚಾರ ಕೈಗೊಳ್ಳಬೇಕೆಂದು ನೀತಿಗ್ರಂಥಗಳು ತಿಳಿಸುತ್ತವೆ. ಪ್ರಜೆಗಳು ರಾಜನಿಂದ ಬಯಸುತ್ತಿದ್ದುದ್ದನ್ನು ನಯಸೇನನು ತನ್ನ ಕೃತಿಯಲ್ಲಿ ಈ ರೀತಿ ಹೇಳಿದ್ದಾನೆ.[೬೫]

"ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಗಳಂ ಕಾದು ತ
ಸ್ಕರರಂ ಬಂಧಿಸಿ ಕಷ್ಟರಂ ಕಿಡಿಸಿ ದಂಡಂಗೊಂಡು ಮಿಂಡರ್ಕಳಂ
ಭರದಿಂ ಬಗ್ಗಿಸಿ ಶಿಷ್ಟರಿಷ್ಟಪದಮಂ ಸಂತೋಷದಿಂ ಕೊಟ್ಟು ಧೂ
ರ್ತರ ಬೇರಂ ನೆರಕಿಳ್ತು ಪಾಲಿಸುವುದುರ್ವೀ ಚಕ್ರಮಂ ಕ್ಷತ್ರಿಯರ್"

ಚಕ್ರವರ್ತಿಗಳು ಧರಿಸುವ ಬಿರುದುಗಳು ಅವರ ಚಾರಿತ್ರ್ಯ ಮತ್ತು ಆದರ್ಶಗಳನ್ನು ಪ್ರತಿಬಿಂಬಿಸುತ್ತವೆ. ಅರಸರು ಸರ್ವಧರ್ಮಗಳ ಪಾಲಕರಾಗಿದ್ದರು. ಎಲ್ಲ ಧರ್ಮಗಳ ದೇವಾಲಯ, ಬಸದಿಗಳನ್ನು ನಿರ್ಮಿಸಿ ರಾಜ್ಯದಾದ್ಯಂತ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು ಇವರ ಪ್ರಮುಖ ಕಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಅರಸನನ್ನು ಪ್ರಜೆಗಳು ದೇವರ ಪ್ರತಿನಿಧಿ ಎಂದು ಭಾವಿಸಿದ್ದರು.

### ೪.೩.೨ ರಾಣಿಯರು

ಅನೇಕ ರಾಜವಂಶಗಳು ಉತ್ತಮವಾದ ಸಾಮ್ರಾಜ್ಯವನ್ನು ನಿರ್ಮಿಸಿಕೊಳ್ಳುವಲ್ಲಿ ರಾಜರಷ್ಟೇ ಅಲ್ಲದೆ ರಾಣಿಯರ ಪಾತ್ರವು ಹಿರಿದಾದುದಾಗಿದೆ. ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಜೀವನಗಳಲ್ಲಿ ಮಾತ್ರವಲ್ಲ, ರಾಜಕೀಯ ಜೀವನದಲ್ಲೂ ಪ್ರಧಾನ ಪಾತ್ರವನ್ನು ರಾಣಿಯರು ವಹಿಸಿದ್ದಾರೆ. ಅನೇಕ ರಾಜರು ತಮ್ಮ ರಾಣಿಯರನ್ನು ಯುದ್ಧಭೂಮಿಗೆ ಕರೆದುಕೊಂಡು ಹೋಗುತ್ತಿದ್ದರು. ಕೆಲವರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನು ಆಳ್ವಿಕೆ ಮಾಡಲು ನೇಮಿಸುತ್ತಿದ್ದರು. ಕೆಲವು ರಾಣಿಯರು ತಮ್ಮ ಮಕ್ಕಳ ರಾಜ ಪ್ರತಿನಿಧಿಗಳಾಗಿ ಆಳ್ವಿಕೆ ನಡೆಸಿರುವುದು ಕಂಡು ಬರುತ್ತದೆ.

ಕುರುಬರು ಅನೇಕ ರಾಜಮನೆತನಗಳನ್ನು ಆಳಿದ್ದಾರೆ. ಈ ಆಳ್ವಿಕೆಯಲ್ಲಿ ರಾಜರಿಗೆ ಅನೇಕ ರಾಣಿಯರು ಸಹಾಯಕರಾಗಿದ್ದರು. ವಿಜಯನಗರ ಪೂರ್ವ ಕಾಲದಲ್ಲಿದ್ದ ರಾಜವಂಶಗಳ ಆಡಳಿತದಲ್ಲಿ ಭಾಗವಹಿಸಿದ್ದರು. ಕದಂಬರ (ಗೋವಾ) ವಂಶದಲ್ಲಿದ್ದ

ಎರಡನೆ ಜಯಕೇಶಿಯ ಪತ್ನಿಯಾದ ಮೈಳಲಾದೇವಿ ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಳು. ಅನೇಕ ದೇವಾಲಯಗಳನ್ನು ನಿರ್ಮಿಸಿದಳು. ನಂತರ ಕಲ್ಯಾಣದ ಚಾಲುಕ್ಯರ ಆಳ್ವಿಕೆಯಲ್ಲಿ ೬ನೇ ವಿಕ್ರಮಾದಿತ್ಯನ ಮಗಳಾದ ಮೈಳಲಾದೇವಿ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ್ದಳು. ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ಸ್ಥಾಪಕನಾದ ಒಂದನೇ ಬುಕ್ಕನ ಮಗ ೨ನೇ ಕಂಪಣ್ಣನ ಹೆಂಡತಿ ಗಂಗಾದೇವಿ ಆಡಳಿತದಲ್ಲಿ ಭಾಗವಹಿಸುತ್ತಿದ್ದಳು. ಅಲ್ಲದೆ ಪತಿಯ ಶೌರ್ಯ ಸಾಹಸಗಳನ್ನು ತನ್ನ ಮದುರಾವಿಜಯಂ ಅಥವಾ ವೀರಕಂಪಣರಾಯಚರಿತಂ ಎಂಬ ಕೃತಿಯಲ್ಲಿ ಚಿತ್ರಿಸಿದ್ದಾಳೆ. ಅನೇಕ ರಾಣಿಯರು ದಾನ-ದತ್ತಿಗಳನ್ನು ನೀಡಿದರೆಂದು ತಿಳಿದುಬರುತ್ತದೆ.

ಮೈಸೂರು ಒಡೆಯರ ವಂಶದಲ್ಲಿ ೨ನೇ ಕಂಠೀರವನ ನಂತರ ಅಧಿಕಾರಕ್ಕೆ ಬಂದ ಕೃಷ್ಣರಾಜ ಒಡೆಯರ್ ಸಂತಾನವಿಲ್ಲದೆ ಮರಣಹೊಂದಿದನು. ಹೀಗಾಗಿ ವಿಧವೆ ರಾಣಿ ದೇವಾಜಮ್ಮಣಿಯು ಚಾಮರಾಜನೆಂಬುವನನ್ನು ದತ್ತು ಸ್ವೀಕಾರ ಮಾಡಿ ರಾಜ ಪ್ರತಿನಿಧಿಯಾಗಿ ಆಳ್ವಿಕೆ ನಡೆಸಿದಳು. ಹಂಡೆ ಪಾಳೆಯಗಾರರಲ್ಲಿ ರಾಣಿ ನೀಲಮ್ಮಳು ಉತ್ತಮವಾದ ಅಧಿಕಾರ ನಡೆಸಿದ್ದಳು. ಇವರಲ್ಲದೆ ಅಸಂಖ್ಯಾತ ರಾಣಿಯರು ಪರೋಕ್ಷವಾಗಿ ರಾಜರಿಗೆ ಆಡಳಿತದಲ್ಲಿ ಸಹಾಯ ಸಲ್ಲಿಸುತ್ತಿದ್ದರು. ಹೀಗಾಗಿ ಪ್ರಭಾವಶಾಲಿಗಳಾಗಿದ್ದ ರಾಣಿಯರಿಂದ ರಾಜರು ರಾಜನೀತಿಯ ವಿಷಯವಾಗಿ ಸಲಹೆಗಳನ್ನು ಪಡೆಯುತ್ತಿದ್ದರೆಂದು ಹೇಳಬಹುದು.

### ೪.೩.೩ ಮಂತ್ರಿಗಳು

ಅರಸರು ಆಡಳಿತವನ್ನು ಸುಗಮವಾಗಿ ನಡೆಸುತ್ತಿದ್ದದ್ದು ಬೃಹತ್ತಾದ ಸೈನಿಕ ಬಲದಿಂದಲ್ಲ, ನಾಗರಿಕ ಅಧಿಕಾರಿ (ಮಂತ್ರಿ)ಗಳ ಬೆಂಬಲದಿಂದ. ಇದರಿಂದಾಗಿ ರಾಜನು ಮಂತ್ರಿಗಳನ್ನು ನೇಮಿಸಿಕೊಳ್ಳುತ್ತಿದ್ದನು. ಮಂತ್ರಿಗಳನ್ನು ಆರಿಸಿಕೊಳ್ಳುವಾಗ ವ್ಯಕ್ತಿಗಳು ಉತ್ತಮ ವಂಶ ಸಂಭೂತರು, ವಿವೇಕಿಗಳು, ಧೀರರೂ, ಪ್ರಾಮಾಣಿಕರೂ ಆಗಿರುವರೆಂದು ದೃಢಪಡಿಸಿಕೊಂಡು ನೇಮಿಸಿಕೊಳ್ಳಬೇಕೆಂದು ಅರ್ಥಶಾಸ್ತ್ರ ಉಲ್ಲೇಖಿಸುತ್ತದೆ.[೬೬] ಪ್ರಾಚೀನ ಕಾಲದಲ್ಲಿ ಮಂತ್ರಿ ಪದವಿ ವಂಶಪಾರಂಪರ್ಯವಾಗಿತ್ತು. ಆದರೆ ಕಾಲಾನಂತರ ಅರ್ಹತೆಯನ್ನಾಧರಿಸಿ ನೇಮಿಸಿಕೊಳ್ಳತೊಡಗಿದರು. ಮಂತ್ರಿಗಳನ್ನು ನೇಮಿಸಿಕೊಂಡ ಮೇಲೆ ಅವರನ್ನು ರಹಸ್ಯವಾಗಿ ಅನೇಕ ಪ್ರಲೋಭನಗಳಿಗೆ ಒಳಮಾಡಿ ಪರೀಕ್ಷಿಸುತ್ತಿದ್ದನು. ಇಂತಹ ಪರೀಕ್ಷೆಯಲ್ಲಿ ಗೆದ್ದವರು 'ಚತುರುಪದಾವಿಶುದ್ಧರ್' ಎಂದು ಕರೆಯಿಸಿಕೊಳ್ಳುತ್ತಿದ್ದರು.[೬೭]

ಮಂತ್ರಿ ಮಂಡಲದ ಮಂತ್ರಿಗಳನ್ನು ಮಹಾಪ್ರಧಾನಿ, ಮಹಾಮಾತ್ಯ, ದಂಡನಾಥ, ಮಹಾದಂಡನಾಥ, ಸಂದಿವಿಗ್ರಹಿ ಮೊದಲಾದ ಹೆಸರುಗಳಿಂದ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಮಹಾಪ್ರಧಾನ ಅಥವಾ ಮಹಾಮಾತ್ಯ ಮಂತ್ರಿಮಂಡಲದ ಮುಖ್ಯಸ್ಥನಾಗಿದ್ದನು. ಮಹಾಪ್ರಧಾನರು, ದಂಡನಾಯಕರು ಅಂತಃ ಪುರಾಧ್ಯಕ್ಷರೂ ಆಗಿದ್ದರೆಂದು ತಿಳಿದು ಬರುತ್ತದೆ. ಇವರಿಗೆ ರಾಜ್ಯದ ಬೇರೆ ಬೇರೆ ಭಾಗಗಳ ಆಳ್ವಿಕೆಯ ಹೊಣೆಯನ್ನು ರಾಜನು ಹಂಚಿಕೊಡುತ್ತಿದ್ದನು. ವಿಜಯನಗರದ ಸಂಗಮ ವಂಶದ ಆಳ್ವಿಕೆಯಲ್ಲಿ ವಿಟ್ಟಣ್ಣ ಒಡೆಯರ್, ದೀಪಣ್ಣ ಒಡೆಯರ್, ಬೈಚಣ್ಣ ಒಡೆಯರ್, ಉನ್ನತಾಧಿಕಾರದ ಸ್ಥಾನಮಾನಗಳನ್ನು ಹೊಂದಿದ್ದರು. ಅಲ್ಲದೆ ವೀರ ಹರಿಹರರಾಯನ ಆಡಳಿತಾವಧಿಯಲ್ಲಿ ಮಾದಪ್ಪ ಒಡೆಯರ್, ದಂಡನಾಥ ಒಡೆಯರ್, ಮುದ್ದಪ್ಪ ದಂಡನಾಥ ಒಡೆಯರ್ ಮೊದಲಾದವರು. ಮಂತ್ರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು.

ಮಹಾಪ್ರಧಾನಮಂತ್ರಿ ಮಂತ್ರಿಮಂಡಲದ ಮೇಲ್ವಿಚಾರಣೆಯ ಜೊತೆಗೆ ರಾಜ್ಯದ ಒಂದು ವಿಭಾಗದ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಸಾಮಂತ ಅರಸರೆಲ್ಲರೂ ಮಹಾಪ್ರಧಾನಿಗೆ ಗೌರವವನ್ನು ಸೂಚಿಸುತ್ತಿದ್ದರು. ರಾಜಧಾನಿಯಲ್ಲಿ ಅರಸನಿಲ್ಲದಾಗ ಅಥವಾ ಅಶಕ್ತನಾದಾಗ ಆಡಳಿತವನ್ನು ಸಂಪೂರ್ಣವಾಗಿ ಮಹಾಪ್ರಧಾನಿಯೇ ನೋಡಿಕೊಳ್ಳುತ್ತಿದ್ದನು. ಅರಸ ಯುದ್ಧ ಮಾಡಲು ಮಹಾ ಪ್ರಧಾನಿಯ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿಕೊಡುವ ಸಾಧ್ಯತೆಯಿತ್ತು. ದೇವರಾಯನು ಮಲ್ಲಪ್ಪ ಒಡೆಯನ ನೇತೃತ್ವದಲ್ಲಿ ಒಂದು ಪ್ರಬಲವಾದ ಸೈನ್ಯವನ್ನು ಕಪಿಲೇಂದ್ರ ಗಜಪತಿಯ ವಿರುದ್ಧ ಹೋರಾಡಲು ಕಳುಹಿಸಿಕೊಟ್ಟನು.[೧೮] ಒಟ್ಟಾರೆ ಮಹಾಪ್ರಧಾನಿ ರಾಜನ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಎಂಬುದು ಸ್ಪಷ್ಟ.

ಮಹಾಪ್ರಧಾನಿಗೆ ಅನೇಕ ಮಂತ್ರಿಗಳು ಕಾರ್ಯನಿರ್ವಹಿಸುತ್ತಿದ್ದರು. ದಂಡನಾಯಕ, ಸಂಧಿವಿಗ್ರಹ ಮೊದಲಾದ ಮಂತ್ರಿಗಳಿದ್ದರು. ದಳಪತಿ ಅಥವಾ ದಂಡನಾಯಕ ಸೈನ್ಯದ ಮುಖ್ಯಸ್ಥನಾಗಿದ್ದನು. ಇವನನ್ನು ಸೇನಾಧಿಪತಿ ಎಂದೂ ಕರೆಯುತ್ತಿದ್ದರು. ಕೆಲವು ದಂಡನಾಯಕರನ್ನು ಶಾಸನವು ಮಹಾಸಾಮಂತಾಧಿಪತಿಗಳೆಂದು ಉಲ್ಲೇಖಿಸಿದೆ. ಸಾಮ್ರಾಜ್ಯದ ಸಂಪೂರ್ಣ ಸೈನ್ಯದ ವ್ಯವಸ್ಥೆ ಇವನ ಕೈಯಲ್ಲಿರುತ್ತದೆ. ಇವನಿಗೆ ಸಹಾಯಕರಾಗಿ ಸುಬೇದಾರ್, ಜಮಾದಾರ್ ಮೊದಲಾದ ಅಧಿಕಾರಿಗಳಿರುತ್ತಾರೆ. ವಿಜಯನಗರ ಕಾಲದ ರಾಮರಾಯ ಸರ್ವಾಧಿಕಾರಿಯಂತೆ ಆಡಳಿತ ನಡೆಸುತ್ತಿದ್ದನು. ಆಗ ಕೋಶಾಧಿಕಾರಿಯಾಗಿದ್ದ ಬೊಕ್ಕಸಂತ ರಾಮರಾಯನನ್ನು ಬಂಧಿಸಲು ಪ್ರಯತ್ನಿಸಿದನು. ಆ ಸಂದರ್ಭದಲ್ಲಿ ರಾಮರಾಯ ಹಂಡೆ ಪಾಳೆಯಗಾರ ಹನುಮಪ್ಪನಾಯಕನ ಸಹಾಯ ಕೋರಿದನು. ಹನುಮಪ್ಪನಾಯಕನ ಸಕಾಲಿಕ ನೆರವಿನಿಂದ ಅಳಿಯ ರಾಮರಾಯ ಬೊಕ್ಕಸಂತ ತಿಮ್ಮಯ್ಯನ ಬಂಡಾಯವನ್ನೂ ದಮನಗೊಳಿಸಿದನು. ನಂತರ ಹನುಮಪ್ಪನಾಯಕನ ಸಹಾಯದಿಂದ ರಾಮರಾಯ ಅನೇಕ ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ವಿಜಯನಗರ ಒಡೆಯರ ಹಾಗೂ ಮೊದಲಾದ ಸಾಮ್ರಾಜ್ಯದ ದಂಡನಾಯಕರ ಉತ್ತಮ ಹೋರಾಟದಿಂದಾಗಿ ಸಾಮ್ರಾಜ್ಯಗಳು ಪ್ರಗತಿ ಹೊಂದಲು ಸಾಧ್ಯವಾಯಿತೆಂದು ತಿಳಿಯುತ್ತದೆ.

ಮಂತ್ರಿ ಮಂಡಲದಲ್ಲಿದ್ದ ಮತ್ತೊಬ್ಬ ಪ್ರಮುಖ ವ್ಯಕ್ತಿ ಸಂಧಿವಿಗ್ರಹಿ. ರಾಜ್ಯದ ವಿದೇಶಾಂಗ ವ್ಯವಹಾರವನ್ನು ನೋಡಿಕೊಳ್ಳುವುದು ಇವನ ಕಾರ್ಯವಾಗಿತ್ತು. ಇವನನ್ನು 'ಮಹಾಸಂಧಿ ವಿಗ್ರಾಹಕ' ಎಂದು ಕರೆಯುತ್ತಿದ್ದರು.[೯] ಅಕ್ಕಪಕ್ಕದ ನಾಡುಗಳ ಅರಸರೊಂದಿಗೆ ವ್ಯವಹಾರ ನಡೆಸುವುದು ಸಂಧಿವಿಗ್ರಹಿಯ ಕರ್ತವ್ಯವಾಗಿತ್ತು. ಸಂಧಿ ಮತ್ತು ಸಮರಗಳನ್ನು ಇವನೇ ನಿಶ್ಚಯ ಮಾಡುತ್ತಿದ್ದನು. ಪರರಾಷ್ಟ್ರಗಳೊಡನೆ ವ್ಯವಹರಿಸಬೇಕಾದ್ದರಿಂದ ಹಲವಾರು ಭಾಷೆ, ಲಿಪಿಗಳನ್ನು ಬಲ್ಲವನಾಗಿರುತ್ತಿದ್ದ. ಇದರೊಂದಿಗೆ ಶಾಸನಗಳ ಮತ್ತು ದಾನಪತ್ರಗಳ ಪಾಠವನ್ನು ಸಿದ್ಧಪಡಿಸುವುದು, ದಾನಪತ್ರಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು. ಪರರಾಷ್ಟ್ರಗಳಿಂದ ಆಗಮಿಸಿದ ದೂತರನ್ನು ಸ್ವಾಗತಿಸಿ ಅರಸನ ಒಳಗೆ ಕರೆದೊಯ್ಯುವುದು ಪ್ರಮುಖ ಕಾರ್ಯಗಳಾಗಿದ್ದವು.[೨೦] ಒಬ್ಬೊಬ್ಬ ರಾಜನ ಬಳಿ ಅನೇಕ ಸಂಧಿವಿಗ್ರಹಿಗಳು ಕಾರ್ಯನಿರ್ವಹಿಸುತ್ತಿದ್ದರೆಂದು ತಿಳಿಯುತ್ತದೆ. ಈ ಸಂಬಂಧ ಉತ್ತಮವಾಗಿರಲು ಅವರು ನೇಮಿಸಿದ್ದ ಅನೇಕ ಸಂಧಿವಿಗ್ರಹಿಗಳು ಕಾರಣವಾಗಿದ್ದಾರೆ. ಮೈಸೂರು ಒಡೆಯರ ಚಿಕ್ಕದೇವರಾಜ ಅರಸರು ಔರಂಗಜೇಬನೊಂದಿಗೆ ಉನ್ನತ ರಾಯಭಾರ ಸಂಬಂಧ ಹೊಂದಿ, ಆಡಳಿತದ ಸುಧಾರಣೆ ಮಾಡಿದರು. ಈ ಸಂಧಿವಿಗ್ರಹಿಗಳ ಬಗ್ಗೆ ಶಾಸನಗಳಲ್ಲಿ ಹೆಚ್ಚಿನ ಉಲ್ಲೇಖಗಳಿಲ್ಲ. ಆದರೂ ಸಂಧಿವಿಗ್ರಹ ಮಂತ್ರಿಗಳು ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಪ್ರಮುಖ ಕಾರಣೀಕರ್ತರೆಂಬುದು ಸ್ಪಷ್ಟ.

ಮಂತ್ರಿಮಂಡಲದಲ್ಲಿ ನ್ಯಾಯಮಂತ್ರಿ, ಯುದ್ಧಮಂತ್ರಿ, ಹಣಕಾಸಿನ ಮಂತ್ರಿ, ಧರ್ಮ ಮತ್ತು ನೀತಿಗಳ ರಕ್ಷಣೆಯ ಮಂತ್ರಿ, ಎಂಬ ಅನೇಕ ಮಂತ್ರಿಗಳಿದ್ದರು. ಇವರೆಲ್ಲರೂ ತಮ್ಮ ಆಡಳಿತದ ವಿಭಾಗಗಳನ್ನು ಉತ್ತಮವಾಗಿ ನಿರ್ವಹಿಸಿಕೊಂಡು ಹೋಗುವಂತೆ ಮಾಡಲು ಮಹಾಪ್ರಧಾನಿ ಮೇಲಾಧಿಕಾರಿಯಾಗಿದ್ದನು. ಹೀಗಾಗಿ ಸಾಮ್ರಾಜ್ಯದ ಪ್ರಗತಿಯಾಗುವುದು ಸೈನಿಕ ಬಲದಿಂದಲ್ಲ ಆಡಳಿತ ಬಲದಿಂದಲೇ ಎಂದು ತಿಳಿಯುತ್ತದೆ.

### ೪.೩.೪ ಮಹಾದಂಡನಾಯಕ (ದಳವಾಯಿ)

ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಚಕ್ರವರ್ತಿಯ ನಂತರದ ಸ್ಥಾನ ದಂಡನಾಯಕ (ದಳವಾಯಿ)ದಾಗಿದೆ. ದಂಡನಾಯಕನಿಗೆ ದಣ್ಣಾನಾಯಕ, ದಳವಾಯಿ, ದಳನಾಯಕ, ಸೇನಾಧಿಪತಿ, ಸರ್ವಸೈನ್ಯಾಧಿಕಾರಿ ಎಂಬ ಹೆಸರುಗಳಿಂದ ಕರೆಯಲಾಗಿದೆ. ರಾಜ್ಯಾಡಳಿತದ ಮುಖಂಡರಲ್ಲೊಬ್ಬನಾಗಿದ್ದು ಮಹಾಪ್ರಧಾನಿ, ಮಂತ್ರಿಮಂಡಲದ ಸದಸ್ಯ ಹಾಗೂ ಸೈನ್ಯ ವ್ಯವಸ್ಥೆಯ ಮುಖಂಡನಾಗಿ ಕಾರ್ಯನಿರ್ವಹಿಸುತ್ತಿದ್ದನು. ಸಾಮ್ರಾಜ್ಯದ ರಕ್ಷಣೆ, ಪಾಲನೆ ಮತ್ತು ಯೋಗಕ್ಷೇಮ ಎಂಬ ಮೂರು ಮುಖ್ಯ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗಿತ್ತು.

ಸೈನ್ಯದ ಕಾರ್ಯಾಚರಣೆಗಾಗಿ ಪ್ರಪ್ರಥಮ ಬಾರಿಗೆ ದಳವಾಯಿ ಪದ್ಧತಿಯನ್ನು ಜಾರಿಗೆ ತಂದವರು ಮೊದಲನೆ ರಾಜ ಒಡೆಯರ್.[೭೧] ನಂತರ ಐದನೇ ಚಾಮರಾಜ ಒಡೆಯರ್ ಮತ್ತು ೨ನೇ ರಾಜ ಒಡೆಯರ್‌ರವರ ಕಾಲದಲ್ಲಿ ಅರಸೊತ್ತಿಗೆಯ ಮೇಲೆ ದಳವಾಯಿಗಳ ಪ್ರಾಬಲ್ಯ ಅಧಿಕಗೊಳ್ಳತೊಡಗಿತ್ತು. ಈ ದಂಡನಾಯಕ ಎಂಬ ಹುದ್ದೆಯು ಕೇವಲ ಸೈನಿಕ ಇಲಾಖೆಗೆ ಸೀಮಿತವಾಗಿರದೆ, ಸುಂಕದ ದಂಡನಾಯಕರು, ವಿದ್ಯಾ ಇಲಾಖೆಯ ದಂಡನಾಯಕರು ಹಾಗೂ ವಿದೇಶಾಂಗ ದಂಡನಾಯಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದರು. ಸಪ್ತಾಂಗಗಳಲ್ಲಿ ಕೋಶದ ಜವಾಬ್ದಾರಿಯನ್ನು ದಳವಾಯಿಗಳು ಹೊರುತ್ತಿದ್ದರು. ಬೊಕ್ಕಸ ಬರಿದಾದಾಗ ಅದನ್ನು ಭರ್ತಿ ಮಾಡಲು ಅನೇಕ ಮಾರ್ಗಗಳನ್ನು ಅನುಸರಿಸುತ್ತಿದ್ದರು. ಸಣ್ಣ-ಪುಟ್ಟ ರಾಜಮನೆತನಗಳ ಮೇಲೆ ದಾಳಿ ಮಾಡಿ ಕಪ್ಪ ವಸೂಲಿ ಮಾಡುತ್ತಿದ್ದರು. ತಮಗೆ ಅತ್ಯಂತ ನಂಬಿಕಸ್ಥ, ನಿಷ್ಠ, ಆಪ್ತ ಎಂದು ಕಂಡು ಬರುವ ವ್ಯಕ್ತಿಯನ್ನು ಪ್ರಧಾನಿಯಾಗಿ ನೇಮಿಸುವ ಸಾಧ್ಯತೆಯಿತ್ತು. ತಮ್ಮ ಕೆಳಗಿನ ಅಧಿಕಾರಿಗಳಿಗೆ ಜಹಗೀರ ರೂಪದಲ್ಲಿ ಹಂಚುತ್ತಿದ್ದರು. ದಳವಾಯಿಗಳ ಸ್ಥಾನ ವಂಶಪಾರಂಪರ್ಯವಾಗಿತ್ತೆಂದು ತಿಳಿಯುತ್ತದೆ.

ವಿಜಯನಗರ ಅರಸ ಬುಕ್ಕರಾಯನ ಕಾಲದಲ್ಲಿ ಮುದ್ದಪ್ಪ ದಣ್ಣಾನಾಯಕ ಹಾಗೂ ಕೃಷ್ಣದೇವರಾಯನ ಅವಧಿಯಲ್ಲಿ ತಿಮ್ಮಣ್ಣ ನಾಯಕ ಪ್ರಮುಖ ದಂಡನಾಯಕರಾಗಿದ್ದರು. ಅದೇ ರೀತಿ ಮೈಸೂರು ಒಡೆಯರ ಕಾಲದಲ್ಲಿ ರಾಜ ಒಡೆಯರ ಸೋದರಳಿಯನಾದ ಕರಿಕಾಲ ಮಲ್ಲರಾಜಯ್ಯನು ಪ್ರಧಾನ ದಳವಾಯಿಯಾಗಿದ್ದನೆಂದು ತಿಳಿಯುತ್ತದೆ. ಮೈಸೂರು ರಾಜ್ಯದ ವಿಸ್ತರಣೆಯಲ್ಲಿ ಅನೇಕ ದಳವಾಯಿಗಳು ತಮ್ಮ ಪ್ರಾಣವನ್ನೇ ತ್ಯಾಗ ಮಾಡಿರುವುದು ಕಂಡುಬರುತ್ತದೆ. ಹೀಗಾಗಿ ಅರಸ ರಾಜ್ಯದ ಕರ್ತನಾದರೆ ದಳವಾಯಿ ಆಡಳಿತ ಮುಖ್ಯಸ್ಥನಾಗಿದ್ದನೆಂದು ಹೇಳಬಹುದಾಗಿದೆ. ಯಲಬುರ್ಗಾ ತಾಲೂಕಿನ ಮುಧೋಳ ಗ್ರಾಮದಲ್ಲಿ ಕುರುಬ ವೀರ ಕೋಯಿ ನಿಂಗಪ್ಪ ಎಂದು ಗುರುತಿಸಲ್ಪಡುವ ವಿಜಯನಗರ ಕಾಲದ ಒಂದು ವೀರಗಲ್ಲಿದೆ. ಈ ವೀರಗಲ್ಲಿನಲ್ಲಿ ವೀರನೊಬ್ಬನು ಖಡ್ಗವನ್ನು ಹಿಡಿದು ನಿಂತಿದ್ದಾನೆ. ಇವನು ವಿಜಯನಗರ ಕಾಲದ ದಂಡನಾಯಕ ಅಥವಾ ವೀರ ಸೈನಿಕನಾಗಿರುವ ಸಾಧ್ಯತೆಯಿದೆ. ಇವನ ಬಗ್ಗೆ ಹೆಚ್ಚಿನ ಆಧಾರಗಳು ದೊರೆಯುವುದಿಲ್ಲ.

ಮಧ್ಯಕಾಲದಲ್ಲಿ ಪ್ರಬಲ ಸ್ಥಾನ ಹೊಂದಿದ್ದ ದಳವಾಯಿಗಳು ಕಾಲಾನಂತರ ಕ್ಷೀಣಿಸತೊಡಗಿದರು. ಆಧುನಿಕ ಕಾಲದಲ್ಲಿ ದಳವಾಯಿಗಳ ಪ್ರಭಾವ ಕಡಿಮೆಗೊಂಡಿತೆಂದು ಹೇಳಬಹುದಾಗಿದೆ. ಆದರೆ ಇಂದಿಗೂ ದಳಪತಿಗಳೆಂಬ ಮನೆತನದವರು ಅನೇಕ ಸಂಖ್ಯೆಯಲ್ಲಿದ್ದಾರೆ. ದಳಪತಿಗಳಾಗಿ ಗ್ರಾಮದ ಆಗು-ಹೋಗುಗಳನ್ನು ನೋಡಿಕೊಳ್ಳುವ ಕಾರ್ಯ ಮಾಡುತ್ತಿದ್ದಾರೆ. ಗ್ರಾಮದಲ್ಲಿ ಯಾವುದೇ ಕಲಹಗಳಾದರೂ ಪ್ರಥಮವಾಗಿ ಇವರು ವಿಚಾರಣೆ ನಡೆಸುತ್ತಾರೆ. ಪೋಲೀಸರು ಇವರ ಬಳಿಯಿರುವ ರಿಜಿಸ್ಟಾರ್‌ನಲ್ಲಿ ಸಹಿ ಮಾಡಿ ಹೋಗುತ್ತಾರೆ. ಗ್ರಾಮದ ಸಂಪೂರ್ಣ ಜವಾಬ್ದಾರಿ ಇವರಿಗೆ ನೀಡಲಾಗಿರುತ್ತದೆ. ಈ ಸ್ಥಾನ ಸರ್ಕಾರದ ವತಿಯಿಂದ ನೀಡಿರುವುದು ಕಂಡು ಬರುತ್ತದೆ. ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ದಳಪತಿಗಳ ಮನೆತನದವರಲ್ಲಿ ಕುರುಬರೇ ಅಧಿಕವಾಗಿದ್ದಾರೆ. ಕೊಪ್ಪಳ ತಾಲೂಕಿನ ಚಿಕ್ಕಬಗನಾಳ ಗ್ರಾಮದ ದಳಪತಿ ನಿಂಗಪ್ಪ ಗುಳದಳ್ಳಿ, ಬಿಳೇಬಾವಿಯ ದಳಪತಿ ಸಣ್ಣ ಹನುಮಂತಪ್ಪ ಕನಕಪ್ಪ ದಾಡೇಸುರ, ಕುದುರಿಮೋತಿಯ ದಳಪತಿ ಹನುಮನಗೌಡ ಕರೇಗೌಡ, ಉಪ್ಪಲದಿನ್ನಿಯ ಶಿವನಗೌಡ ಹನುಮನಗೌಡ, ಚೌಡಾಪುರದ ಹನುಮನಗೌಡ ನೀಲನಗೌಡ, ದನಕನದೊಡ್ಡಿ ಹನುಮಪ್ಪ ಗಿಡ್ಡಪ್ಪ ಕತ್ತಿ, ಬಿಸರಹಳ್ಳಿಯ ಸಿದ್ಧನಗೌಡ ಪೋಲಿಸ ಪಾಟೀಲರ ನಂತರ ಅವರ ಮೊಮ್ಮಗ ನರೇಂದ್ರಗೌಡ ಪಾಟೀಲ್ ದಳಪತಿಯಾಗಿ ನಂತರ ನಾಗನಗೌಡ ಪೋಲಿಸ್ ಪಾಟೀಲ್ ಮೊದಲಾದವರು ದಳಪತಿಗಳಾಗಿ ಕಾರ್ಯನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಅಂದಿನ ದಳವಾಯಿಗಳೇ ಇಂದಿನ ದಳಪತಿಗಳೆಂದು ಹೇಳಬಹುದಾಗಿದೆ.

**೪.೩.೫ ಗುರಿಕಾರ**

ಆಡಳಿತದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಅಧಿಕ ಗಮನ ನೀಡುತ್ತಿದ್ದರಿಂದ ಅನೇಕ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಅವರಲ್ಲಿ ಶಿರಸ್ತೇದಾರ, ಗುಮಾಸ್ತ, ಹೋಬಳಿದಾರ, ಓಲೇಕಾರ, ತಳವಾರ, ಗುರಿಕಾರ ಮೊದಲಾದವರಿದ್ದರು. ಗುರಿಕಾರ ಎಂಬುದು ಆಡಳಿತದ ಕೆಳಹಂತದ ಸ್ಥಾನವನ್ನು ಹೊಂದಿತ್ತು.[೨] ಒಳನಾಡಿನ ಮಹತ್ವವಾದ ಸ್ಥಳಗಳಲ್ಲಿ ಅಥವಾ ಗಡಿಭಾಗಗಳಲ್ಲಿಯ ಆಡಳಿತವು ಗುರಿಕಾರರ ಕೈಯಲ್ಲಿರುತ್ತಿತ್ತು. ಕೆಲವರು ಸಾಮಂತ ಅಂತಸ್ತನ್ನು ಹೊಂದಿದ್ದರಲ್ಲದೆ, ಕಪ್ಪಕಾಣಿಕೆಯನ್ನು ಸಲ್ಲಿಸುತ್ತಿದ್ದರು.

ಬಿಲ್ವಿದ್ದೆ, ಕಲ್ಲು ಎಸೆತ, ಮದ್ದುಗುಂಡು ಎಸೆಯುವುದು, ಗುಂಡು ಹಾರಿಸುವ ಮೊದಲಾದ ಕಾರ್ಯಗಳಲ್ಲಿ ಉತ್ತಮವಾಗಿ ಗುರಿಯಿಡಬಲ್ಲವರಾಗಿದ್ದರಿಂದ ಗುರಿಕಾರರೆಂದು ಕರೆದಿರುವ ಸಾಧ್ಯತೆಯಿದೆ. ಇವರಿಗೆ ರಕ್ಷಣಾ ಕಾರ್ಯಗಳನ್ನು ವಹಿಸುತ್ತಿದ್ದರೆಂದು ಹೇಳಬಹುದಾಗಿದೆ.

ವಿಜಯನಗರ ಕಾಲದಲ್ಲಿ ಅನೇಕ ಗುರಿಕಾರ ಮನೆತನಗಳಿದ್ದವು. ಯುದ್ಧಕಾಲದಲ್ಲಿ ಅಥವಾ ಶಾಂತಿ ಸಮಯದಲ್ಲಿ ಒಂದೇ ರೀತಿಯ ಕಾರ್ಯಮಾಡುತ್ತಿದ್ದರು. ಕಂದಾಚಾರದ ಸೇವೆಯ ಜೊತೆಗೆ ಪ್ರತಿಯೊಂದು ಘಟಕದಲ್ಲೂ ಗುರಿಕಾರರು ಗಸ್ತು ಹೊಡೆಯುವುದು, ಸ್ಥಳೀಯ ಖಜಾನೆಯನ್ನು ರಕ್ಷಿಸುವುದು, ಯುದ್ಧಕಾಲದಲ್ಲಿ ಮದ್ದು ಗುಂಡುಗಳನ್ನು ಪೂರೈಸುವುದು ಮೊದಲಾದ ಕಾರ್ಯಗಳನ್ನು ಮಾಡುತ್ತಿದ್ದರು.[೨೩] ಆಯಾ ಪ್ರದೇಶಗಳ ಆಡಳಿತವನ್ನು ನೋಡಿಕೊಂಡು ಕೇಂದ್ರ ಸರ್ಕಾರಕ್ಕೆ ಕಂದಾಯದ ಪಾಲನ್ನು ಸಲ್ಲಿಸುತ್ತಿದ್ದರು. ಮೈಸೂರು ಒಡೆಯರ ಕಾಲದಲ್ಲಿ ಬೇಲೂರು ಗುರಿಕಾರ, ಕಿಕ್ಕೇರಿ ಗುರಿಕಾರ, ಹಾರನಹಳ್ಳಿ ಗುರಿಕಾರ, ಉಂಡೇಕಲ್ಲ ಗುರಿಕಾರ, ಹೊನ್ನವಳ್ಳಿಯ ಗುರಿಕಾರ ಮೊದಲಾದ ಮನೆತನಗಳಿದ್ದವೆಂದು ತಿಳಿಯುತ್ತದೆ. ಇದರಿಂದ ಅಂದು ಗುರಿಕಾರರು ಪ್ರಮುಖ ಸ್ಥಾನ ಪಡೆದಿದ್ದರೆಂದು ತಿಳಿಯುತ್ತದೆ.

ಮೈಸೂರು ಒಡೆಯರ ಕಾಲದಲ್ಲಿ ಮೂರನೇ ಕೃಷ್ಣರಾಜ ಒಡೆಯರ ಪಟ್ಟಾಭಿಷೇಕದ ಸಂದರ್ಭದಲ್ಲಿ ಗುರಿಕಾರಿ ಪುಟ್ಟಯ್ಯನ ಶಾಸನದಲ್ಲಿ ಈ ರೀತಿ ಉಲ್ಲೇಖವಿದೆ.[೨೪]

೧. ಶ್ರೀಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು॥

೨. ॥೧೭೨೦ನೇ ಸಿದ್ಧಾರ್ಥಿನಾಮ ಸಂವತ್ಸರದ ಜೇಷ್ಠ ಬಹುಳ ೧೩ಯಲ್ಲು ಕರ್ನಾಟಕ ಜನಾಪದಾದಿಷ್ಠಾನ ಭೂತಮಹೇ ॥

೩. ॥ಶೂರ ರತ್ನ ಸಿಂಹಾಸನಾರೂಢ ಶ್ರೀ ಕೃಷ್ಣರಾಜ ಸಾರ್ವಭೌಮರಿಗೆ ಪಟ್ಟಾಭಿಷೇಕ ಮಹೋತ್ಸವ ಬೆಳೆದ ಯೀ ಸ್ಥಳದಲ್ಲಿ ಶಖಾಬ್ದ ॥

೪. ॥೧೭೬೧ನೇ ವಿಕಾರಿ ಸಂವತ್ಸರದ ನಿಜಜ್ಯೇಷ್ಠ ಬಹುಳ ೭ ಭುದವಾರದಲ್ಲಿ ಗುರಿಕಾರ ಕಬೂತ ರಖಾ ॥

೫. ನೆ ಪುಟ್ಟೈಯನ ಮಂಟಪ ಸೇವಾರ್ತ॥

ಇದರಿಂದ ಗುರಿಕಾರರು ಶಾಸನಗಳನ್ನು ಕಂಡರಿಸುತ್ತಿದ್ದರೆಂದು ತಿಳಿಯುತ್ತದೆ. ಗುರಿಕಾರರನ್ನು ನೇಮಿಸಲು ಬುದ್ಧಿಶಕ್ತಿ, ಪ್ರಾಮಾಣಿಕತೆ ಮತ್ತು ದಕ್ಷತೆಗಳನ್ನು ಆಧಾರವಾಗಿಟ್ಟುಕೊಳ್ಳುತ್ತಿದ್ದರು. ಇವರ ವೇತನವನ್ನು ಹಣ ಹಾಗೂ ವಸ್ತುವಿನ ರೂಪದಲ್ಲಿ ಕೊಡುವ ಸಂಭವವಿತ್ತು.

ಕರ್ನಾಟಕದಾದ್ಯಂತ ಅನೇಕ ಗುರಿಕಾರರ ಮನೆತನಗಳಿವೆ. ಕುರುಬರು ಹಾಗೂ ಬೇಡರಲ್ಲಿ ಗುರಿಕಾರ ಮನೆತನಗಳನ್ನು ಕಾಣಬಹುದಾಗಿದೆ. ಕೊಪ್ಪಳ ಜಿಲ್ಲೆಯ ಕೊಪ್ಪಳ, ಸಂಗನಹಾಳ, ರಾಜೂರು, ಕಬ್ಬರಗಿ, ಕುಷ್ಟಗಿ, ಗಂಗಾವತಿ ಮೊದಲಾದೆಡೆ ಗುರಿಕಾರ ಮನೆತನಗಳು ಕಂಡುಬರುತ್ತವೆ. ಕುಷ್ಟಗಿ ತಾಲೂಕಿನ ಕಬ್ಬರಗಿ ಗ್ರಾಮದ ತೋರಕಪ್ಪ ಗುರಿಕಾರರವರು ತಮ್ಮ ತಾತ ಲಾಟಿ ತಿರುಗಿಸುವುದು ಹಾಗೂ ಗುರಿಯಿಟ್ಟು ಹೊಡೆಯುವುದರಲ್ಲಿ ಪ್ರವೀಣನಾಗಿದ್ದನು. ಅದರಿಂದಾಗಿ ನಿಜಾಮ ಸರ್ಕಾರ ಸೈನ್ಯದಲ್ಲಿ ಸೇರಿಸಿಕೊಂಡಿತ್ತೆಂದು ತಿಳಿಸುತ್ತಾರೆ. ಇದರಿಂದ ಗುರಿಕಾರರು ಶೂರರು, ಹೋರಾಟಗಾರರಾಗಿದ್ದರೆಂದು ಹೇಳಬಹುದಾಗಿದೆ. ಆದರೆ ಇಂದು ಯಾವುದೇ ರೀತಿಯ ಉನ್ನತಸ್ಥಾನ ಹೊಂದದೆ ಪಶುಪಾಲನೆ, ಕೃಷಿ ಮತ್ತಿತರ ವೃತ್ತಿಗಳನ್ನು ಅವಲಂಬಿಸಿರುವುದು ಕಂಡುಬರುತ್ತದೆ.

**೪.೩.೬ ಓಲೇಕಾರ**

ಮಧ್ಯಕಾಲದ ಅರಸರು ಪ್ರಾಂತೀಯ ಆಡಳಿತಕ್ಕೆ ಅಧಿಕ ಪ್ರಾಮುಖ್ಯತೆ ನೀಡಿದ್ದರು. ಪ್ರಾಂತ್ಯದ ಆಡಳಿತದಲ್ಲಿ ಸುವ್ಯವಸ್ಥೆಯನ್ನು ಕಾಪಾಡಲು ಕೆಲವು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ಅವರಲ್ಲಿ ಓಲೇಕಾರರೂ ಒಬ್ಬರಾಗಿದ್ದರು. ಓಲೇಕಾರರು ಅಂದರೆ ಪತ್ರಗಳನ್ನು ಒಯ್ಯುವವರಾಗಿದ್ದರು. ಅಂದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕೊಂಡೊಯ್ಯುತ್ತಿದ್ದರು. ಈ ಕಾರ್ಯವಲ್ಲದೆ ಸಾರ್ವಜನಿಕ ಸೇವೆಗಳನ್ನು ಮಾಡುತ್ತಿದ್ದರು.

ಸಾರ್ವಜನಿಕ ಸೇವೆಗಾಗಿ ಸದಾ ತಮ್ಮ ಬಳಿ ಮದ್ದುಗುಂಡುಗಳನ್ನು ಹೊಂದಿರುತ್ತಿದ್ದರು. ಅಪರಾಧಗಳ ಸಂಖ್ಯೆ

ಕಡಿಮೆಯಾಗುವಂತೆ ಮಾಡಲು ಜನವಸತಿಗಳಲ್ಲಿ ಗಸ್ತು ತಿರುಗುತ್ತಿದ್ದರು. ಅಪರಾಧಗಳಿಗೆ ಸಂಬಂಧಿಸಿದ ಬೇಹುಗಳನ್ನು ಸಂಗ್ರಹಿಸಿ ಅತಿ ಶೀಘ್ರವಾಗಿ ರವಾನಿಸುವ ವ್ಯವಸ್ಥೆ ಮಾಡುತ್ತಿದ್ದರು. ಪ್ರಜೆಗಳ ನಡವಳಿಕೆಗಳನ್ನು, ಒಳನಾಡು, ಹೆದ್ದಾರಿಗಳಲ್ಲಿ ನಡೆಯುವ ಎಲ್ಲಾ ಘಟನೆಗಳನ್ನು ಓಲೇಕಾರರು ಸರಕಾರಕ್ಕೆ ವರದಿ ಮಾಡುತ್ತಿದ್ದರು.[೭೫] ಇವರ ವೇತನವನ್ನು ಅರ್ಧ ನಗದು ರೂಪದಲ್ಲಿಯೇ ಹಾಗೂ ಉಳಿದ ಅರ್ಧ ಭಾಗವನ್ನು ವಸ್ತು ರೂಪದಲ್ಲಿ ನೀಡುತ್ತಿದ್ದರು. ಅದರಲ್ಲೂ ಕಂದಾಚಾರದ ಓಲೆಕಾರನಿಗೆ ವೇತನ ಅರ್ಧವರಹದಿಂದ ಒಂದು ವರಹ ನಗದು ಮತ್ತು ಸಮ ಪ್ರಮಾಣದಲ್ಲಿ ವಸ್ತು ನೀಡುತ್ತಿದ್ದರು.[೭೬]

ಮಧ್ಯಕಾಲದಲ್ಲಿದ್ದ ಈ ಹುದ್ದೆಯು ಆಧುನಿಕ ಕಾಲದಲ್ಲೂ ಮುಂದುವರೆಯಲ್ಪಟ್ಟಿತ್ತು. ಸ್ವಾತಂತ್ರ್ಯನಂತರ ಅಂಚೆ ವ್ಯವಸ್ಥೆ ಬಂದ ಮೇಲೆ ತಳವಾರಿಕೆ ನಿಂತಿತೆಂದು ಹೇಳಬಹುದು. ಇಂದಿಗೂ ಓಲೆಕಾರ ಮನೆತನದವರು ಕುರುಬ ಜನಾಂಗದಲ್ಲಿ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

**೪.೩.೭ ಗೌಡ (ಗಾವುಂಡ)**

ರಾಜ್ಯದ ವಿಸ್ತಾರತೆಯನ್ನನುಸರಿಸಿ ಆಡಳಿತದ ಅನುಕೂಲತೆಗಾಗಿ ಅರಸರು ಮಂಡಲ, ನಾಡು, ಊರು, ಎಂದು ವಿಭಾಗಿಸಿದರು. ಇವುಗಳಿಗೆ ಅಧಿಕಾರಿಗಳನ್ನು ರಾಜನು ನೇಮಿಸಿದನು. ಮಂಡಲ, ನಾಡು, ಊರುಗಳಲ್ಲಿ ತೆರಿಗೆ ಸಂಗ್ರಹ ಮೊದಲಾದ ಕಾರ್ಯಗಳಿಗೆ ಅಧಿಕಾರಿಗಳಿದ್ದರು. ಅದರಲ್ಲೂ ಗ್ರಾಮದಲ್ಲಿ ಕಂದಾಯವನ್ನು ಸಂಗ್ರಹಿಸಲು ಗ್ರಾಮಿಣಿ ಅಥವಾ ಗೌಡ ಎಂಬ ಅಧಿಕಾರಿಯಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ. ಕೇಂದ್ರಾಡಳಿತ ಹಾಗೂ ಊರಿನ ಜನರಿಗೆ ಗಾವುಂಡರು ಮಧ್ಯವರ್ತಿಗಳಂತಿದ್ದರು. ಹೀಗಾಗಿ ಗಾವುಂಡರನ್ನು ರಾಜ್ಯದ ಅಧಿಕಾರಿಗಳೆಂದು ಭಾವಿಸುವುದಕ್ಕಿಂತ ಜನರ ಪ್ರತಿನಿಧಿಗಳೆಂದು ಭಾವಿಸುವುದೇ ಹೆಚ್ಚು ಸಮಂಜಸವಾಗಬಹುದು.

ಗೌಡ ಈ ಪದದ ನಿಷ್ಪತ್ತಿಯ ಬಗ್ಗೆ ಅನೇಕ ಅಭಿಪ್ರಾಯಗಳಿವೆ. ಸಂಸ್ಕೃತ (ಗ್ರಾಮ +ಮುಖಂಡ) ಗಾಮುಂಡ ಅಥವಾ ಗ್ರಾಮಕೂಟದಿಂದ ಪ್ರಾಕೃತದ ಗಾಮವಾಡ, ಗ್ರಾಮಉಡದಿಂದ ಕನ್ನಡದ ಗಾಮುಂಡ, ಗಾವುಂಡ, ಗವುಂಡ, ಗೊಂಡ, ಗೌಂಡದಿಂದ ಗೌಡ ಪದ ನಿಷ್ಪತ್ತಿಗೊಂಡಿರುವ ಸಾದ್ಯತೆಯಿದೆ.[೭೭] ಗ್ರಾಮುಂಡ, ಗ್ರಾಮಕೂಟ ಎಂದರೆ ಗ್ರಾಮದ ಮುಖ್ಯಸ್ಥ ಎಂಬರ್ಥವಿದೆ.

ಕನ್ನಡ ನಾಡಿನ ಶಾಸನ, ಸಾಹಿತ್ಯಗಳಲ್ಲಿ ಗ್ರಾಮಪತಿ, ಗ್ರಾಮಸ್ವಾಮಿ, ಗ್ರಾಮಿಕ, ಗ್ರಾಮಾಧಿಪ ಮೊದಲಾದ ಪದಗಳನ್ನು ಕಾಣಬಹುದಾಗಿದೆ. ಗ್ರಾಮಿಕ, ಗಾಮಿ ಎಂಬ ಪದಗಳು ಗೌಡ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ. ಕೆಲವು ಶಾಸನಗಳಲ್ಲಿ ಗಾಮುಂಡ, ಗಾವುಂಡ, ಗೌಂಡ, ಊರೊಡೆಯ. ಒಡೆಯ, ಪ್ರಭು ಎಂಬ ಪದಗಳನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ.[೭೮] ಈ ಹಿನ್ನೆಲೆಯಲ್ಲಿ ಗ್ರಾಮದ ಮುಖಂಡನನ್ನು ಗಾವುಂಡನೆಂದು ಕರೆಯಲಾಯಿತು. ನಂತರ ಗಾವುಂಡ ಗೌಡನಾಗಿ ಪರಿವರ್ತಿತಗೊಂಡು ಕರೆಯಲ್ಪಟ್ಟನೆಂದು ಹೇಳಬಹುದಾಗಿದೆ.

ಪ್ರತಿಯೊಂದು ಹಳ್ಳಿಯೂ ಒಬ್ಬೊಬ್ಬ ಗ್ರಾಮ ಮುಖಂಡನ ಆಡಳಿತಕ್ಕೊಳಪಟ್ಟಿರುತ್ತಿತ್ತು. ಇವನನ್ನು ಗ್ರಾಮಕೂಟ, ಗಾವುಂಡ

ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ಇದು ವಂಶಪಾರಂಪರ್ಯವಾದ ಅಧಿಕಾರವಾಗಿತ್ತು. ಇವನು ಒಂದೆಡೆ ಸರ್ಕಾರದ ಅಧಿಕಾರಿಯಾಗಿದ್ದರೆ, ಇನ್ನೊಂದೆಡೆ ಜನರ ಪ್ರತಿನಿಧಿಯಾಗಿರುತ್ತಿದ್ದನು. ಅಲ್ಲದೆ ಹಳ್ಳಿಯ ಸಂಪೂರ್ಣ ರಕ್ಷಣೆಯ ಜವಾಬ್ದಾರಿ ಇವನದಾಗಿತ್ತು. ಗೌಡನಿಗೆ ಆಡಳಿತದಲ್ಲಿ ಅನೇಕ ಅಧಿಕಾರಿಗಳು ಸಹಾಯಕರಾಗಿದ್ದರು. ಮಧ್ಯಕಾಲದಲ್ಲಿ ಗೌಡರಿಗೆ ಶ್ರೀಕರಣಿ ಅಥವಾ ಕುಲಕರ್ಣಿ, ಕಳವಳ್ಳ, ಸುಂಕಾಧಿಕಾರಿ, ತಳವಾರ, ಮಹಾಜನರು, ಶ್ರೇಣಿಗಳು, ಎಂಟು ಹಿಟ್ಟುಗಳು, ಅರವತ್ತೊಕ್ಕಲು ಮೊದಲಾದವರು ಸಹಾಯ ಸಲ್ಲಿಸುತ್ತಿದ್ದರು.

ಕರ್ನಾಟಕದ ಗೌಡರ ವೈಶಿಷ್ಟ್ಯವೆಂದರೆ ಗೌಡಿಕೆಯ ಅಧಿಕಾರದ ಜೊತೆಗೆ ಕೃಷಿಯನ್ನು ಮನೆತನದ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಉತ್ತರ ಕರ್ನಾಟಕದ ಗೌಡರು ಮೇಲಾಧಿಕಾರಿಗಳೊಡನೆ ಪತ್ರವ್ಯವಹಾರ ಮಾಡಬೇಕಾಗಿ ಬಂದಾಗ ಪತ್ರಗಳಿಗೆ ತಮ್ಮ ಅಂಕಿತದ ಜೊತೆಗೆ ನೇಗಿಲ ಗುರುತನ್ನು ಹಾಕುತ್ತಿದ್ದರು. ಇದರಿಂದ ಗೌಡರು ಉಂಬಳಿಯಾಗಿ ಪಡೆದ ಜಮೀನಿನಲ್ಲಿ ಕೃಷಿ ಕೆಲಸವನ್ನು ಕೈಗೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಇವರು ಅಖಿಲ ಗುಣಾಗ್ರಣಿಗಳು, ಧರ್ಮಪ್ರತಿ ಪಾಳನಾಪರರು, ಶೂರರು, ವೀರರೆಂದು ಶಾಸನಗಳು ಉಲ್ಲೇಖಿಸಿವೆ. ಹಳ್ಳಿಗಳಲ್ಲಿ ಉದ್ಭವಿಸುವ ವಾದವಿವಾದಗಳ ತೀರ್ಮಾನ, ಶಾಂತಿಪಾಲನೆ, ವಿದ್ಯಾಭ್ಯಾಸ, ಆರೋಗ್ಯ, ನೈರ್ಮಲ್ಯ, ರಕ್ಷಣೆ ಇತ್ಯಾದಿಗಳು ಇವರ ಜವಾಬ್ದಾರಿಗಳಾಗಿದ್ದವು.[೬] ಇವರ ನೇತೃತ್ವದಲ್ಲಿ ಹಳ್ಳಿಗರ ಜೀವನ ನೆಮ್ಮದಿಯಿಂದ ಕೂಡಿತ್ತು. ವಿಜಯನಗರ ಕಾಲದಲ್ಲಿ ಇದು ಇನ್ನೂ ಬೆಳೆದು ಸುಭದ್ರವಾದ ತಳಹದಿಯ ಮೇಲೆ ನಿಂತಿತು.

ಮರಾಠರ ಕಾಲದಿಂದ ಬ್ರಿಟಿಷರ ಆಡಳಿತದ ಕೊನೆಯವರೆಗೆ ಗೌಡನ ಅಂತಸ್ತು ಹಿಂದಿನಂತೆಯೇ ಮುಂದುವರಿದುಕೊಂಡು ಬಂದಿತು. ಗ್ರಾಮದಲ್ಲಿ ಕಳ್ಳಕಾಕರ ಹಾವಳಿ ಉಂಟಾದಾಗ ಅದನ್ನು ನಿಯಂತ್ರಿಸುವುದು, ಅರಕ್ಷಣೆಯ ಸಹಾಯ ದೊರಕಿಸುವುದು, ಗ್ರಾಮನ್ಯಾಯದಾನ ವ್ಯವಸ್ಥೆಯಲ್ಲಿ ಆಯಾ–ಜಾತಿ ಪಂಗಡಗಳ ಹಿರಿಯರು ನಿರ್ವಹಿಸುತ್ತಿದ್ದ ಕಾರ್ಯ ಕಲಾಪಗಳಿಗೆ ಗೌಡ ಮಾರ್ಗದರ್ಶನ ಮಾಡುತ್ತಿದ್ದನು. ಕೆಲವೊಮ್ಮೆ ಬಗೆಹರಿಯದ ಸಮಸ್ಯೆಗಳು ಗೌಡನ ಸಮ್ಮುಖದಲ್ಲಿ ಬಗೆಹರಿಯುತ್ತಿದ್ದವು. ಗ್ರಾಮದ ಕಾಗದ–ಪತ್ರಗಳ ಹೊಣೆ ಗೌಡನದಾಗಿತ್ತು. ಊರಿನ ಹೊಲ–ಮನೆ ಮೊದಲಾದ ಸ್ವತ್ತುಗಳಿಗೆ ಸಂಬಂಧಿಸಿದ ಕಾಗದ ಪತ್ರಗಳು ಇವನ ವಶದಲ್ಲಿರುತ್ತಿದ್ದವು. ಸ್ವತ್ತುಗಳ ವಾರಸುದಾರಿಕೆ, ತಕರಾರು ಮೊದಲಾದವು ಗೌಡನಿಂದಲೇ ತೀರ್ಮಾನಗೊಳ್ಳುತ್ತಿದ್ದವು. ಮೇಲಾಧಿಕಾರಿಗಳಿಂದ ಬರುವ ಆಜ್ಞೆಗಳು, ಕಾಯ್ದೆ, ಕಾನೂನುಗಳು ಕೋರ್ಟುಗಳಿಂದ ಹೊರಡುವ ಆದೇಶಗಳು ಮೊದಲಾದವು ಜಾರಿಯಾಗುವುದು ಗೌಡನಿಂದಲೇ, ಅಲ್ಲದೆ ಈ ಆದೇಶಗಳನ್ನು ಡಂಗುರ ಸಾರಿಸಿ ಊರಿನಲ್ಲಿ ಜಾರಿಗೊಳಿಸುತ್ತಿದ್ದನು.

ರಾಜ್ಯ ಅಥವಾ ಸರಕಾರದ ಪ್ರತಿನಿಧಿಯೆಂದು ಗೌಡನನ್ನು ತಿಳಿದಿದ್ದರಿಂದ ಇವನಿಗೆ ಊರ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿ ರಾಜಪ್ರತಿನಿಧಿಯಾಗಿ ಸಲ್ಲುವ ಗೌರವಗಳೆಲ್ಲ ದೊರೆಯುತ್ತಿದ್ದವು. ಹೀಗಾಗಿ ಉತ್ಸವಗಳು, ಪಲ್ಲಕ್ಕಿ, ತೇರು ಮೊದಲಾದವುಗಳನ್ನು ಗೌಡನ ಮೂಲಕ ನೆರವೇರುತ್ತಿದ್ದವು. ಈ ಹಿನ್ನೆಲೆಯಲ್ಲಿ ಒಂದು ಊರಿನ ದೊರೆಯೇ ಆಗಿದ್ದನೆಂದು ಹೇಳಬಹುದಾಗಿದೆ. ಇಂಥ ಗೌಡನನ್ನು ನೇಮಿಸಿಕೊಳ್ಳುವಾಗ ಜಾತಿ ಆಧಾರವಾಗಿರಲಿಲ್ಲ. ಪ್ರತಿಯೊಂದು ಜಾತಿಯಲ್ಲಿಯೂ ಗೌಡರಿದ್ದರು. ಅದರಲ್ಲೂ ಕುರುಬರಲ್ಲಿ ಗೌಡರ ಮನೆತನಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇಂದಿಗೂ ಕುರುಬರು ಅಧಿಕ ಪ್ರಮಾಣದಲ್ಲಿ ನೆಲೆಸಿದ್ದಲ್ಲದೆ ಗ್ರಾಮದಲ್ಲಿ ಪ್ರಭಾವವುಳ್ಳ ವ್ಯಕ್ತಿಗಳ ಮನೆತನದ ಹೆಸರು ಗೌಡ ಎಂದಿರುವುದು ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ

ಕುರುಬರ ಮುದ್ದುಗಾವುಂಡ, ಕುರುಬರ ದಾಸಗಾವುಂಡ, ಬೀರಯ್ಯಗಾವುಂಡ ಎಂಬ ಹೆಸರುಗಳು ಉಲ್ಲೇಖಗೊಂಡಿವೆ. ಇದರಿಂದಾಗಿ ಕುರುಬರು ಗೌಡರಾಗಿ ಆಳ್ವಿಕೆ ನಡೆಸಿದ್ದರೆಂದು ತಿಳಿಯುತ್ತದೆ. ಅದರಲ್ಲೂ ಹಂಡೆ ಪಾಳೆಯಗಾರರು ಮೂಲತಃ ಗೌಡಿಕೆ ಮನೆತನದಿಂದ ಬಂದವರಾಗಿದ್ದಾರೆ. ಕಾಲಾನಂತರ ಬ್ರಿಟಿಷರ ಆಡಳಿತ ನೀತಿಯಿಂದಾಗಿ ಕೆಲವರು ಪಾಳೆಯ ಪಟ್ಟುಗಳನ್ನು ಕಳೆದುಕೊಂಡು ಗೌಡ, ಪಾಟೀಲ, ದಳಪತಿಗಳಾಗಿ ಕಾರ್ಯನಿರ್ವಹಿಸತೊಡಗಿದರು. ಹೀಗಾಗಿ ಒಂದು ಗ್ರಾಮದಲ್ಲಿ ಪ್ರಬಲರಾಗಿದ್ದ ಜಾತಿಯವರು ಗೌಡರಾಗಿ ನೇಮಕಗೊಂಡರು. ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಗಳ್ಲಲಿ ಕುರುಬರು ನೆಲೆಸಿದ್ದಾರೆ. ಅದರಲ್ಲೂ ಕೆಲವು ಹಳ್ಳಿಗಳಲ್ಲಿ ಸಂಪೂರ್ಣವಾಗಿ ಕುರುಬರೇ ನೆಲೆಸಿರುವುದು ಕಂಡುಬರುತ್ತದೆ. ಇಂಥ ಗ್ರಾಮಗಳ ಗೌಡರು ಕುರುಬರೇ ಆಗಿರುವುದು ಕಂಡುಬರುತ್ತದೆ. ಇವರಲ್ಲಿ ಪೋಲಿಸ್‌ಗೌಡರು ಹಾಗೂ ಮಾಲಿಗೌಡರು ಎಂಬ ಎರಡು ಪ್ರಕಾರಗಳಿವೆ.

ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ಕುರುಬರಲ್ಲಿ ಅಧಿಕವಾಗಿ ಗೌಡ ಮನೆತನಗಳೇ ಕಂಡುಬರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಬಿಸರಳ್ಳಿಯ ಸಿದ್ದನಗೌಡ ಮುರಲಿಗೌಡ ಪೋಲಿಸ ಪಾಟೀಲ, ಹಿರೇಗೌಡ ಮಾಲಿಪಾಟೀಲ್, ದಳಪತಿ ನಾಗನಗೌಡಪೋಲಿಸ ಪಾಟಿಲ, ಹೂವಿನಾಳ ಮರೇಗೌಡ, ಬಿಳೇಬಾವಿಯ ಕನಕನಗೌಡ, ದಮ್ಮೂರಿನ ಶಂಕರಗೌಡ, ವಡ್ಡರಹಟ್ಟಿಯ ಶಿವನಗೌಡ, ಕುದುರೆಮೋತಿಯ ಹನುಮಗೌಡ, ವಜ್ರಬಂಡಿಯ ಕೃಷ್ಣಗೌಡ, ಬಹಾದ್ದೂರಬಂಡಿಯ ಬಸನಗೌಡ, ಇಂದರಗಿಯ ರಾಮಚಂದ್ರಗೌಡ ಮೊದಲಾದ ಗೌಡ ಮನೆತನಗಳು ಇಂದಿಗೂ ಅಸ್ತಿತ್ವದಲ್ಲಿವೆ. ಈ ಮನೆತನದವರು ಬ್ರಿಟಿಷರ, ನಿಜಾಮರ ಕಾಲದಲ್ಲಿ ಪ್ರಮುಖ ಸ್ಥಾನ ಹೊಂದಿದ್ದರು. ಆಡಳಿತವನ್ನು ಅನುವಂಶೀಯವಾಗಿ ಹೊಂದಿದ್ದರು. ಗುತ್ತಿಗೆ ಆಧಾರದ ಮೇಲೆ ಕಂದಾಯ ವಸೂಲಿ ಮಾಡಿ ಸರ್ಕಾರಕ್ಕೆ ಸಲ್ಲಿಸುತ್ತಿದ್ದರಲ್ಲದೆ, ಸಂಪೂರ್ಣ ಹಳ್ಳಿಯ ಜವಾಬ್ದಾರಿ ಇವರದ್ದಾಗಿತ್ತು.

ಭಾರತ ಸ್ವಾತಂತ್ರ್ಯಗೊಂಡ ನಂತರ ಪ್ರಜಾಪ್ರಭುತ್ವ ನಿರ್ಮಾಣಗೊಂಡಿತು. ೧೯೭೯ರಲ್ಲಿ ಕರ್ನಾಟಕದಲ್ಲಿ ಗೌಡಕಿ ಆಡಳಿತವನ್ನು ನಿರ್ಮೂಲ ಮಾಡಿದರು. ಬದಲಿಗೆ ಗ್ರಾಮ ಪಂಚಾಯಿತಿ ಜಾರಿಗೆ ತಂದರು. ನಂತರ ಉಳುವವನೇ ಒಡೆಯ ಎಂಬ ಕಾನೂನು ಜಾರಿಗೆ ಬಂದಾಗ ಗೌಡರ ಜಮೀನುಗಳು ರೈತರ ಪಾಲಾದವು. ಹೀಗಾಗಿ ಅಧಿಕಾರ ಮತ್ತು ಜಮೀನುಗಳೆರಡನ್ನೂ ಕಳೆದುಕೊಂಡು ಗೌಡರು ಸರಕಾರದಿಂದ ತ್ರೈಮಾಸಿಕ ಸಂಬಳ ಪಡೆಯತೊಡಗಿದರು. ಮಾಸಿಕ ೧೨ ರೂ.ರಂತೆ ಮೂರು ತಿಂಗಳಿಗೊಮ್ಮೆ ೩೬ ರೂ ಪಡೆಯುತ್ತಿದ್ದರು. ರಾಮಕೃಷ್ಣ ಹೆಗಡೆಯವರ ಕಾಲದಲ್ಲಿ ೧೦೦ ರೂಪಾಯಿ ಹಾಗೂ ವೀರಪ್ಪ ಮೋಯ್ಲಿಯವರ ಕಾಲದಲ್ಲಿ ೫೦೦ ರೂ. ಸಂಬಳ ಪಡೆಯತೊಡಗಿದರು. ಆದರೆ ಇಂದು ಯಾವುದೇ ರೀತಿಯ ವಿಶೇಷ ಅಧಿಕಾರಗಳಿಲ್ಲದೆ ಕೇವಲ ಗೌಡ ಮನೆತನ ಎಂಬ ಹೆಸರಿನಿಂದ ನೆಲೆಸಿರುವುದು ಕಂಡುಬರುತ್ತದೆ.

**೪.೪ ಸ್ವಾತಂತ್ರ್ಯ ಹೋರಾಟಗಾರರು**

ಕ್ರಿ.ಶ. ೧೬೦೦ರಲ್ಲಿ ಆರಂಭವಾದ ಈಸ್ಟ್ ಇಂಡಿಯಾ ಕಂಪನಿ ಭಾರತದಲ್ಲಿ ವ್ಯಾಪಾರವನ್ನು ಮಾಡುವ ಉದ್ದೇಶದಿಂದ ಭಾರತಕ್ಕೆ ಆಗಮಿಸಿತು. ದೇಶಿಯ ಅರಸರ ಅನ್ಯೆಕ್ಯತೆ, ಅಂತಃಕಲಹಗಳಿಂದ ಕಂಪನಿಯು ವ್ಯಾಪಾರದ ಜೊತೆಗೆ ರಾಜಕೀಯದಲ್ಲಿ ಪ್ರವೇಶಿಸಿತು. ಕ್ರಿ.ಶ. ೧೭೫೭ ರಿಂದ ೧೮೫೮ರ ವರೆಗಿನ ಒಂದು ಶತಮಾನದಲ್ಲಿ ಆಂಗ್ಲರು ಅನೇಕ ಸಂಸ್ಥಾನಗಳನ್ನು ವಶಪಡಿಸಿಕೊಂಡರು. ಆಂಗ್ಲರ ಆಡಳಿತದಿಂದ ಭಾರತೀಯರು ತೀವ್ರವಾಗಿ ಅಸಂತೃಪ್ತಿ ಹೊಂದಿದ್ದರು. ಅನೇಕ ಸಂಸ್ಥಾನಿಕರು

ಬ್ರಿಟಿಷರ ವಿರುದ್ಧ ಬಂಡೆದ್ದರು. ಕ್ರಿ.ಶ. ೧೮೫೭ರ ಮಹಾಕ್ರಾಂತಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಗುರುತಿಸಲ್ಪಟ್ಟರೂ, ಅದಕ್ಕಿಂತ ಪೂರ್ವದಲ್ಲಿಯೇ ಅನೇಕ ಮಹನೀಯರು ಬ್ರಿಟಿಷರ ವಿರುದ್ಧ ಹೋರಾಡಿ ಹುತಾತ್ಮರಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯ ಮಹಾ ಸಂಗ್ರಾಮದಲ್ಲಿ ಅಸಂಖ್ಯಾತ ಕುರುಬರು ಭಾಗವಹಿಸಿದ್ದರು. ಆದರೆ ಅವರ ಬಗ್ಗೆ ಹೆಚ್ಚಿನ ದಾಖಲೆಗಳು ದೊರೆಯುವುದಿಲ್ಲ. ಆದರೂ ಕೆಲವು ಹೋರಾಟಗಾರರನ್ನು ಗುರುತಿಸಬಹುದಾಗಿದೆ.

### ೪.೪.೧ ಸಂಗೊಳ್ಳಿ ರಾಯಣ್ಣ

ಬೆಳಗಾವಿ ಜಿಲ್ಲೆಯ ಸಂಪಗಾವಿ ತಾಲೂಕಿನ ಸಂಗೊಳ್ಳಿ ಎಂಬ ಹಳ್ಳಿಯಲ್ಲಿ ರಾಯಣ್ಣನ ಜನನವಾಯಿತು. ತಂದೆ ಭರಮಪ್ಪ, ತಾಯಿ ಕೆಂಚವ್ವ, ಅಜ್ಜ ರಾಗಪ್ಪನಾಗಿದ್ದನು. ರಾಯಣ್ಣ ಮುತ್ತಜ್ಜ ರೋಗಿಗಳಿಗೆ ಆಯುರ್ವೇದ ವನಸ್ಪತ್ತಿಗಳನ್ನು ನೀಡಿ ರೋಗಗಳನ್ನು ಗುಣಪಡಿಸುತ್ತಿದ್ದನು. ಇದರಿಂದಾಗಿ ಜನರು ಇವರಿಗೆ ರೋಗಣ್ಣನವರ್ ಎಂಬ ಹೆಸರು ನೀಡಿದರು ಎಂಬ ಪ್ರತೀತಿಯಿದೆ.[೬೦] ಹೀಗಾಗಿ ಇಂದಿಗೂ ರೋಗಣ್ಣನವರ ಮನೆತನ ಸಂಗೊಳ್ಳಿಯಲ್ಲಿರುವುದು ಕಂಡುಬರುತ್ತದೆ.

ರಾಯಣ್ಣನಿಗೆ ವಿವಾಹವಾಗಿಲ್ಲವೆಂದು ಕೆಲವರು ಅಭಿಪ್ರಾಯಪಟ್ಟರೆ, ಕೆಲವರು ಮಲ್ಲವ್ವನೊಂದಿಗೆ ವಿವಾಹವಾಗಿತ್ತಲ್ಲದೆ, ಹನುಮಂತನೆಂಬ ಪುತ್ರನಿದ್ದ ಎಂದೂ ತಿಳಿಸುತ್ತಾರೆ. ಕ್ರಿ.ಸ.೧೮೨೪ರ ಪ್ರಥಮ ಹೋರಾಟದಲ್ಲಿ ರಾಯಣ್ಣ ಚೆನ್ನಮ್ಮಳ ವೀರ ಯೋಧನಾಗಿ ಹೋರಾಡಿದನು. ಆದರೆ ಕಿತ್ತೂರಿನ ಸಂಸ್ಥಾನ ಪತನವಾಗಿದ್ದರಿಂದ ಚೆನ್ನಮ್ಮ, ವೀರಮ್ಮ, ಜಾನಕಿಬಾಯಿ ಬಂದಿತರಾದರು. ಅವರೊಂದಿಗೆ ರಾಯಣ್ಣನೂ ಬಂಧಿತನಾಗಿದ್ದನು. ಸಮಯ ಪ್ರಜ್ಞೆ ಹಾಗೂ ಕುಟಿಲ ನೀತಿಯನ್ನು ಅನುಸರಿಸಿಕೊಂಡಿದ್ದ ಬ್ರಿಟಿಷರು ರಾಯಣ್ಣನನ್ನು ಕ್ಷಮಿಸಿ ಬಿಡುಗಡೆ ಮಾಡಿದರು.

ಬ್ರಿಟಿಷರ ಗುಲಾಮರಾಗಿದ್ದ ಕುಲಕರ್ಣಿಗಳು ಜನರಿಗೆ ಕಿರುಕುಳ ನೀಡತೊಡಗಿದರು. ಇದನ್ನು ಸಹಿಸದ ರಾಯಣ್ಣ ಸ್ವಾತಂತ್ರ್ಯಪ್ರಿಯ ಜನರನ್ನು ಒಗ್ಗೂಡಿಸಿಕೊಂಡು ಬ್ರಿಟಿಷರ ವಿರುದ್ಧ ಸಮರ ಸಾರಿದನು. ಕಿತ್ತೂರು ನಾಡಿನ ವೀರರಾದ ಬಿಚಗತ್ತಿ ಚನ್ನಬಸಪ್ಪ, ಬೆಳವಡಿ ವಡ್ಡರ ಎಲ್ಲಣ್ಣ, ದೇವನಕೊಪ್ಪದ ಬಾಳಾನಾಯಕ, ಯಕ್ಕುಂಡಿಯ ಜೇಡಿನಮನಿ ಫಕೀರಪ್ಪ, ಬಳಕುಂದದ ಕಾಳಿಭೀಮ, ರಣಹಲಗೆಯ ಹನುಮಂತ ಮೊದಲಾದವರು ಇವನ ಜೊತೆಗೂಡಿದ್ದರು.[೬೧]

ಬ್ರಿಟಿಷರ ದಿನನಿತ್ಯದ ಕಾರ್ಯಗಳಲ್ಲಿ ಅಡ್ಡಿ, ಆತಂಕಗಳನ್ನು ಉಂಟು ಮಾಡುತ್ತಿದ್ದರು. ಕಿತ್ತೂರು ಸಂಸ್ಥಾನವನ್ನು ಮನಃ ಪುತ್ರ ಶಿವಲಿಂಗಪ್ಪನ ಅಧಿಪತ್ಯದಲ್ಲಿ ಸ್ಥಾಪಿಸುವುದೇ ಇವನ ಪ್ರಮುಖ ಧ್ಯೇಯವಾಗಿತ್ತು. ಶಿವಾಜಿಯಂತೆ ಗೆರಿಲ್ಲಾ ಯುದ್ಧ ತಂತ್ರವನ್ನು ಪ್ರಯೋಗಿಸಿ ಸರ್ಕಾರಿ ಕಛೇರಿಗಳ ಲೂಟಿ, ಕಾಗದ ಪತ್ರಗಳ ಸುಡುವುದು ಮೊದಲಾದ ಕಾರ್ಯಗಳನ್ನು ಮೊಡತೊಡಗಿದನು.

ಸಂಪಗಾವಿಯ ಮೇಲೆ ಜನವರಿ ೧೨-೧೮೩೦ರಲ್ಲಿ ಮುತ್ತಿಗೆ ಹಾಕಿದನು. ಚಿಕ್ಕನಾಯಕನ ಕೂಪಕ್ಕೆ ಮುತ್ತಿಗೆ ಹಾಕಿ ಕಚೇರಿಯ ಕಾಗದ ಪತ್ರಗಳನ್ನು ಸುಟ್ಟು ಹಾಕಿದನು. ಸಂಪಗಾವಿಯ ಹತ್ತಿರದ ಹೊಂಡದ ಬಳಿ ರಾಯಣ್ಣನ ಕೆಲವು ಜನರಿಗೂ ಹಾಗೂ ಕೃಷ್ಣರಾಯನ ನಡುವೆ ಯುದ್ಧ ನಡೆಯಿತು. ರಾಯಣ್ಣನ ಕಡೆ ೮ ಜನ ಕೊಲ್ಲಲ್ಪಟ್ಟು ೨೫ ಜನ ಗಾಯಗೊಂಡರು.

ನಂತರದಲ್ಲಿ ಕೃಷ್ಣರಾಯ ರಾಯಣ್ಣನನ್ನು ಹಿಡಿಯಲು ಖುದಾನಪುರ ಮತ್ತು ನೇಗಿನಹಾಳ ಗೌಡರನ್ನು ಜೊತೆಗೂಡಿಸಿಕೊಂಡು ಸಂಚು ಹೂಡಿದನು. ರಾಯಣ್ಣ ಸ್ನಾನದ ನಂತರ ಊಟಕ್ಕೆ ಮುಂದಾದಾಗ ನೇಗಿನಹಾಳ ಗೌಡ ಲಕ್ಕಪ್ಪನು ರಾಯಣ್ಣನಿಗೆ ಕಾವಲುಗಾರನಾಗಿರುವನೆಂದು ಖಡ್ಗವನ್ನು ತನ್ನಲಿರಿಸಿಕೊಂಡನು. ರಾಯಣ್ಣ ಊಟಕ್ಕೆ ಕುಳಿತಾಗ ಗೌಡರ ಸೈನಿಕರು ಹಠಾತ್ತನೆ ಆಕ್ರಮಣ ಮಾಡಿ ರಾಯಣ್ಣನನ್ನು ಬಂಧಿಸಿ ಧಾರವಾಡಕ್ಕೆ ಕೊಂಡೊಯ್ದರು. ೧೮೩೦ರ ಏಪ್ರಿಲ್ ೮ ರಂದು ರಾಯಣ್ಣನ ಜೊತೆಗೆ ೬ ಜನರಿಗೆ ಮರಣದಂಡನೆ ನೀಡಿದರು.

ರಾಯಣ್ಣ ಮರಣ ಪೂರ್ವದಲ್ಲಿ ತಿಳಿಸಿದ್ದ ಸ್ಥಳವಾದ ನಂದಗಡದಲ್ಲಿ ಸಮಾಧಿ ಮಾಡಿದರು. ಇಂದು ರಾಯಣ್ಣನ ಸಮಾಧಿಯ ಸ್ಥಳದಲ್ಲಿ ವಿಶಾಲವಾದ ಆಲದ ಮರ ಬೆಳೆದಿದೆ. ರಾಯಣ್ಣ ಸಮಾಧಿ ಸ್ಥಳ ಜನರಿಗೆ ಬೇಡಿದ ವರ ಕೊಡುವ ದೇವಾಲಯವಾಗಿರುವುದು ಕಂಡುಬರುತ್ತದೆ. ಈ ಹಿನ್ನಲೆಯಲ್ಲಿ ಸಂಗೊಳ್ಳಿ ರಾಯಣ್ಣ ಮಹಾವೀರನಾಗಿ, ಪವಾಡ ಪುರುಷನಾಗಿ ಜನಮನದಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಪ್ರಮುಖ ಭಾಗಗಳಲ್ಲಿ ಸಂಗೊಳ್ಳಿ ರಾಯಣ್ಣನ ವೃತ್ತ, ಸಂಗೊಳ್ಳಿ ರಾಯಣ್ಣ ವಿದ್ಯಾ ಸಂಸ್ಥೆಗಳು ಹಾಗೂ ಸಂಘಗಳು ನಿರ್ಮಾಣಗೊಂಡಿರುವುದು ಸಂಗೊಳ್ಳಿ ರಾಯಣ್ಣನ ಪ್ರಭಾವ, ಕೀರ್ತಿಗೆ ಸಾಕ್ಷಿಯಾಗಿದೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ವೀರ ಮರಣವನ್ನಪ್ಪಿದ ಅಸಂಖ್ಯಾತ ಹೋರಾಟಗಾರರಲ್ಲಿ ಕುರುಬರ ಸಂಖ್ಯೆ ಕಡಿಮೆಯಿಲ್ಲ. ಆದರೆ ಅವರ ಬಗ್ಗೆ ಮಾಹಿತಿ ದೊರಕದಿರುವುದರಿಂದ ಕೆಲವೇ ಕೆಲವು ಹೋರಾಟಗಾರರನ್ನು ಹೆಸರಿಸಬಹುದಾಗಿದೆ. ಕೊಪ್ಪಳ ಭಾಗದಲ್ಲೂ ಅನೇಕ ಸ್ವಾತಂತ್ರ್ಯ ಹೋರಾಟಗಾರರಿದ್ದಾರೆ. ಅವರಲ್ಲಿ ಕೆಲವು ಹೋರಾಟಗಾರರು ಮಾತ್ರ ತಮ್ಮನ್ನು ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಹೀಗಾಗಿ ಕೆಲವು ಪ್ರಮುಖ ಹೋರಾಟಗಾರರನ್ನು ಮಾತ್ರ ಹೆಸರಿಲಾಗಿದೆ.

### ೪.೪.೨ ಶಿವಪ್ಪ ಕಂಬಳಿ

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಚಿಕ್ಕೇನಕೊಪ್ಪದ ಶಿವಪ್ಪ ಕಂಬಳಿಯವರು ರಜಾಕರ ವಿರುದ್ಧ ಹಾಗೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಹೋರಾಟಗಾರರಲ್ಲಿ ಪ್ರಮುಖರಾಗಿದ್ದಾರೆ. ೧೯೪೭ರ ಆಗಸ್ಟ ೧೫ ರಂದು ಗದಗಿನಲ್ಲಿ ಸ್ವಾತಂತ್ರ್ಯೋತ್ಸವದ ಆಚರಣೆ ನೋಡಿದ ಕಂಬಳಿಯವರು ನಮ್ಮ ಭಾಗಕ್ಕೂ ಸ್ವಾತಂತ್ರ್ಯ ದೊರಕಿಸಬೇಕೆಂದು ಹೋರಾಟದಲ್ಲಿ ದುಮುಕಿದರು. ಚಿಕ್ಕೇನಕೊಪ್ಪ ಗ್ರಾಮದ ಹಿರಿಯರಾದ ಶ್ರೀ ಸಂಗಪ್ಪ ಮುಟಗಿ, ಶ್ರೀ ಶಿವಸಂಗಪ್ಪ ಗುಳಗಣ್ಣನವರ, ಶ್ರೀಲಿಂಗಪ್ಪ ಬಡಗೇರ, ಶ್ರೀ ಮಲ್ಲಪ್ಪ ಕವಳಕೇರಿ, ಶ್ರೀ ಅಡಿವೆಪ್ಪ ವಕ್ಕಳದ, ಶ್ರಿ ಹುಚ್ಚಪ್ಪ ಗದಗ, ಶ್ರೀ ಚನ್ನಪ್ಪ ಹಕಾರಿ ಮೊದಲಾದವರು ಪ್ರೇರಣೆ ನೀಡಿ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವಂತೆ ಹುರಿದುಂಬಿಸಿದರು.

ಭಾರತ ಸ್ವಾತಂತ್ರ್ಯಗೊಂಡಿದ್ದರೂ ಹೈದರಬಾದ ನಿಜಾಮ ಹೈದರಾಬಾದ್ ಕರ್ನಾಟಕವನ್ನು ತನ್ನ ಕಪಿಮುಷ್ಟಿಯಲ್ಲಿಟ್ಟುಕೊಂಡಿದ್ದನು. ನಿಜಾಮನಿಂದ ಸ್ವಾತಂತ್ರ್ಯಗೊಳ್ಳಲು ಹೋರಾಡುತ್ತಿದ್ದವರ ಹೋರಾಟದಲ್ಲಿ ಪ್ರಮುಖ ಅಂಶಗಳು ಈ ರೀತಿಯಾಗಿದ್ದವು.[೨೨]

೧. ನಿಜಾಮ ಸರ್ಕಾರದ ಎಲ್ಲಾ ರೀತಿಯ ಆಡಳಿತ ಕಾಯ್ದೆಗಳನ್ನು ಮುರಿಯವುದು

೨. ಸರಕಾರದ ಕಾಗದ ಪತ್ರಗಳನ್ನು ಸುಡುವುದು.

೩. ಹಪ್ತೆ ವಸೂಲಿಯನ್ನು ನಿಲ್ಲಿಸುವುದು.

೪. ಹಿಂದೂಗಳು ನೈಜಾಮ ಸರಕಾರದಲ್ಲಿ ಅಧಿಕಾರಿಗಳಾಗಿದ್ದವರನ್ನು ರಾಜಿನಾಮೆ ಕೊಡುವಂತೆ ಮಾಡುವುದು.

೫. ಪಠಾಣರು, ರಜಾಕರು, ನೈಜಾಮ ಪೋಲಿಸರು ಕೊಡುವ ಕಿರುಕು, ಅತ್ಯಾಚಾರದ ವಿರುದ್ಧ ಹೋರಾಡುವುದು.

ಹೋರಾಟಗಾರರು ನಿಕ್ಕರ್ ಮತ್ತು ಹಾಪಶರ್ಟ ಹಾಗೂ ತಲೆಗೆ ಕರಿಬಟ್ಟೆಯನ್ನು ಕಟ್ಟಿರುತ್ತಿದ್ದರಲ್ಲದೆ, ಲಾಠಿಯನ್ನು ಹಿಡಿದಿರುತ್ತಿದ್ದರು. ಶಿವಪ್ಪ ಕಂಬಳಿ ಹಾಗೂ ಸಂಗಡಿಗರು ಕುಕನೂರು ಪೊಲೀಸ್ ಠಾಣೆ ಹಿಂದುಗಡೆ ಹೋಗಿ ಅಲ್ಲಿದ್ದ ಮುಸಲ್ಮಾರನ್ನು ಹೊರಬರದಂತೆ ಬಾಗಿಲು ಹಾಕಿದರು. ಒಳಗೆ ಸುಮಾರು ೧೫ ಜನ ಪೋಲಿಸರು ಮಲಗಿದ್ದರು. ಓಲೆಕಾರನ ಬಾಯಿ ಮುಚ್ಚಿ ಬಾಗಿಲನ್ನು ಒದ್ದು ತೆರೆದರು. ಅಲ್ಲಿದ್ದ ಪೊಲೀಸರಿಗೆ ಹೊಡೆದು ಅಂಜಿ ೩೦ ರೈಫಲ್‌ಗಳು, ೨೫ ಬಂದೂಕುಗಳು, ೩ ಪಿಸ್ತೂಲ್‌ಗಳು, ಸಾವಿರಾರು ಕಾಡತೊಸುಗಳು, ವಸ್ತ್ರ ಹಾಗೂ ಟೋಪಿಗಳನ್ನು ತೆಗೆದುಕೊಂಡು ಚಿಕ್ಕೇನಕೊಪ್ಪದೆಡೆಗೆ ಹೊರಟರು.[೨] ಆದರೆ ಪೋಲಿಸರು ಊರಲ್ಲಿದ್ದರಿಂದ ಎತ್ತಿನ ಬಂಡಿಗಳ ಮೂಲಕ ನರೇಗಲ್ ತಲುಪಿದರು. ನಂತರ ಮುಂಡರಗಿ ಶಿಬಿರ ಸೇರಿಕೊಂಡರು.

ಗ್ರಾಮಸ್ಥರು ಹಪ್ತೆ ನಿರಾಕರಣೆ, ಲೇವಿ ನಿರಾಕರಣೆ, ಸೆರೆ ಸೇಂದಿ ಅಂಗಡಿಗಳನ್ನು ಬಂದ್ ಮಾಡಿ ಎಲ್ಲ ಕಾಯ್ದೆಗಳನ್ನು ಉಲ್ಲಂಘಿಸಿದ್ದರಿಂದ ರಜಾಕರರು ಗ್ರಾಮಕ್ಕೆ ಬಂದು ಮನೆಗಳನ್ನು ಲೂಟಿ ಮಾಡಿದರು. ಹೋರಾಟಗಾರರ ಮೇಲೆ ಸಿಕ್ಕಲ್ಲಿ ಜೈಲಿಗೆ ಹಾಕಬೇಕೆಂದು ವಾರೆಂಟ ಜಾರಿಗೆ ಮಾಡಿತು. ರಜಾಕರರ ಲೂಟಿ, ಅತ್ಯಾಚಾರದ ಬಗ್ಗೆ ತಿಳಿದ ಶಿವಪ್ಪ ಕಂಬಳಿ ಹಾಗೂ ಸಂಗಡಿಗರು ರೈಫಲ್‌ನೊಂದಿಗೆ ಧಾವಿಸಿದರು. ಬೆಳಗಟ್ಟಿ ಗ್ರಾಮದಲ್ಲಿ ಗುಂಡಿನ ಚಕಮಕಿ ನಡೆಯಿತು. ಈರಪ್ಪ ಕರಮುಡಿ ಥ್ರಿನಾಟ್ ರೈಫಲ್‌ನಿಂದ ಪಠಾಣನನ್ನು ಕೊಂದು ಹಾಕಿದನು. ಉಳಿದ ಪಠಾಣರು ಪಲಾಯನ ಮಾಡಿದರು. ಗ್ರಾಮದಲ್ಲಿ ರಾಷ್ಟ್ರದ ಧ್ವಜವನ್ನು ಹಾರಿಸಿ ಜನರಿಗೆ ಧೈರ್ಯ ತುಂಬಿ ಹೊರಟು ಹೋದರು. ನಂತರದಲ್ಲಿ ಗೊಂಡಬಾಳದಲ್ಲಿ ಇಬ್ಬರು ಪಠಾಣರು ಇವರ ಕೈಗೆ ಸಿಕ್ಕು ಮರಣಹೊಂದಿರು. ದಿ.೧೭-೯-೪೮ ರಂದು ಮುಖ್ಯಮಂತ್ರಿ ಲಾಯಕ್‌ಅಲಿ ಶರಣಾದ್ದರಿಂದ ಹೈದ್ರಾಬಾದ ಕರ್ನಾಟಕ ಸ್ವಾತಂತ್ರ್ಯಗೊಂಡಿತು. ಹೀಗೆ ಶಿವಪ್ಪ ಕಂಬಳಿಯವರು ಈ ಭಾಗದ ಹೋರಾಟದಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರೆಂದು ತಿಳಿಯುತ್ತದೆ.

### ೪.೪.೩ ಮಾಕಣ್ಣ ಕಂಬಳಿ

ಗಂಗಾವತಿ ತಾಲೂಕಿನ ನವಲಿ ಗ್ರಾಮದ ಮಾಕಣ್ಣ ಕಂಬಳಿಯವರು ಪ್ರಮುಖ ಹೋರಾಟಗಾರರಾಗಿದ್ದರು. ನವಲಿ ಗ್ರಾಮದ ಜನರು ನಿಜಾಮ ಸರ್ಕಾರಕ್ಕೆ ಲೇವಿ ಕೊಡುವುದಿಲ್ಲ ಎಂದು ಬಂಡೆದ್ದರು. ಈ ಬಂಡಾಯದ ಮುಖಂಡತ್ವವನ್ನು ವಿರುಪಾಕ್ಷಗೌಡ ಚಳ್ಳೂರ, ರಾಘವೇಂದ್ರರಾವ, ಪಂಚಾಕ್ಷರಯ್ಯ ಮೊದಲಾದವರು ವಹಿಸಿದ್ದರು. ಕ್ರಿ.ಶ.೧೯೪೮ರ ಜುಲೈನಲ್ಲಿ ನಿಜಾಮ ಪೊಲೀಸರು ನವಲಿ ಗ್ರಾಮಕ್ಕೆ ಬಂದು ಲೇವಿ ಕೊಡಲು ಒತ್ತಾಯಿಸಿದರು. ರೈತರು ಅದನ್ನು ವಿರೋಧಿಸಿ ಮೆರವಣಿಗೆ ತೆಗೆದಾಗ ಪೋಲಿಸರು

ಗೋಲಿಬಾರ್ ಮಾಡಿದರು. ಈ ಗೋಲಿಬಾರ್‌ನಲ್ಲಿ ರೈತ ಮುಖಂಡ ಮಾಕಣ್ಣ ಕಂಬಳಿ ಗುಂಡು ಬಡಿದು ಮೃತಪಟ್ಟನು.[೮೪] ಅನೇಕರು ಈ ಗೋಲಿಬಾರ್‌ನಲ್ಲಿ ಮರಣ ಹೊಂದಿರು. ಮಾಕಣ್ಣ ಕಂಬಳಿ ಮೃತಪಟ್ಟ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿರುವುದಲ್ಲದೆ, ಪ್ರತಿವರ್ಷ ಧ್ವಜಾರೋಹಣ ಮಾಡುತ್ತಾರೆ.

**೪.೪.೪ ನಾಗಪ್ಪ ಅಬ್ಬಿಗೇರಿ**

ಕುಷ್ಟಗಿ ತಾಲೂಕಿನ ಅಬ್ಬಿಗೇರಿ ಗ್ರಾಮದ ಹೋರಾಟಗಾರರಲ್ಲಿ ಅಬ್ಬಿಗೇರಿಯವರು ಪ್ರಮುಖರಾಗಿದ್ದಾರೆ. ೧೯೩೭ರ ಮಾರ್ಚ್ ತಿಂಗಳಲ್ಲಿ ರೋಣ ತಾಲೂಕಿನ ಜಕ್ಕಲಿ, ಅಬ್ಬಿಗೇರಿ ಗ್ರಾಮಗಳಿಗೆ ಗಾಂಧೀಜಿಯವರು ಭೇಟಿ ನೀಡಿದ್ದರು. ಗಾಂಧೀಜಿಯವರು ಕೈಗೊಂಡ ಚಟುವಟಿಕೆಗಳನ್ನು ಕಂಡು ಪ್ರೇರಣೆಗೊಂಡ ಅಬ್ಬಿಗೇರಿಯವರು ಶಿಕ್ಷಣಕ್ಕೆ ತಿಲಾಂಜಲಿ ನೀಡಿದರು. ೧೯೪೨ರಲ್ಲಿ ಶ್ರೀ ಕಂಬಳಿ ಮಹಾದೇವಪ್ಪ ಹಾಗೂ ಶ್ರೀ ನಿಂಗಪ್ಪ ಹೊಂಬಾಳಿಯವರ ಸಂಗಡ ಸ್ವಾತಂತ್ರ್ಯ ಸಂಗ್ರಾಮದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ತಮ್ಮ ಹೋರಾಟವನ್ನು ಅಬ್ಬಿಗೇರಿ, ಜಕ್ಕಲಿಗಳಿಗೆ ಸೀಮಿತಿಗೊಳಿಸದೆ ಕೊಪ್ಪಳಕ್ಕೆ ಬಂದು ಹೋರಾಟ ಮುಂದುವರೆಸಿದರು.

ಕೊಪ್ಪಳದಲ್ಲಿಯ ಉಸ್ಮಾನಿಯ ಹೈಸ್ಕೂಲನ್ನು ಬ್ರಿಟಿಷರ ಕಟ್ಟಡವೆಂದು ತಪ್ಪುಭಾವಿಸಿ ಕಟ್ಟಡಕ್ಕೆ ಬೆಂಕಿಯಿಟ್ಟರು. ನಂತರ ಕೊಪ್ಪಳದಿಂದ ಬೆಳಗಾವಿಗೆ ಹೋಗಿ ಹೋರಾಟ ಮಾಡಿದರು. ೧೯೪೮ರಲ್ಲಿ ಹೈದರಾಬಾದಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದರು. ಅಲ್ಲಿ ರಂಗನಾಥ ದಿವಾಕರ್ ಮತ್ತು ಜೆ.ಪಿ ಅವರ ಸಂಪರ್ಕ ಬೆಳೆಯಿತು. ಜೆ.ಪಿ.ಯವರೊಂದಿಗೆ ಬಂಧನಕ್ಕೊಳಗಾದರು.[೮೫] ನಂತರ ಹೈದರಾಬಾದ ಸಂಸ್ಥಾನ ಸ್ವಾತಂತ್ರ್ಯಗೊಳ್ಳದ್ದರಿಂದ ಆ ಹೋರಾಟದಲ್ಲೂ ಪಾಲ್ಗೊಂಡರು. ಹೀಗೇ ಸ್ವಾತಂತ್ರ್ಯ ಸಂಗ್ರಾಮ ಹಾಗೂ ರಜಾಕರ ವಿರುದ್ಧ ಹೋರಾಡಿದ ಕೀರ್ತಿ ಇವರದಾಗಿದೆ.

**೪.೪.೫ ಮಲ್ಲಪ್ಪ ಗಟ್ಟಿ**

ಕುಷ್ಟಗಿ ತಾಲ್ಲೂಕಿನ ತುಗ್ಗಲದೋಣಿಯ ಮಲ್ಲಪ್ಪ ಗಟ್ಟಿಯವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದಾರೆ. ಭೀಕರ ಬರಗಾಲವಿದ್ದರಿಂದ ಬ್ರಿಟೀಷರಿಗೆ ಸಲ್ಲಿಸಬೇಕಾಗಿದ್ದ ಹಪ್ತೆಯನ್ನು ಕಟ್ಟಲು ಜನರಿಗೆ ಸಾಧ್ಯವಾಗಲಿಲ್ಲ. ಹಾಗಾಗಿ ಮಲ್ಲಪ್ಪನವರು ತಮ್ಮ ಸುತ್ತಮುತ್ತಲಿನ ೩೮ ಹಳ್ಳಿಗಳ ಹಪ್ತೆಯನ್ನು ಸತತ ಮೂರು ವರ್ಷ ಕಟ್ಟಿದರು. ಜನರಿಗೆ ಜೋಳವನ್ನು ಹಂಚಿ ಆಹಾರದ ಸಮಸ್ಯೆಯನ್ನು ನೀಗಿಸಲು ಪ್ರಯತ್ನಿಸಿದರು. ಅಂದಿನಿಂದ ಇವರಿಗೆ ಗಟ್ಟಿಯವರು ಎಂದು ಕರೆಯಲಾಯಿತು. ತುಗ್ಗಲದೋಣಿಯಲ್ಲಿ ಮಾರುತೇಶ್ವರ, ಅಚನೂರು ಮಲ್ಲಯ್ಯ, ಉಗ್ರಾಣ, ಅಡುಗೆ ಕೋಣೆಗಳನ್ನು ನಿರ್ಮಿಸಿದರು. ೧೯೭೮ ರಲ್ಲಿ ಮರಣ ಹೊಂದಿದರು.

ಹೈದ್ರಾಬಾದ್ ಕರ್ನಾಟಕ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಅನೇಕ ಮಹನೀಯರು ರಜಾಕರ ವಿರುದ್ಧ ಹೋರಾಡಿದ್ದಾರೆ. ಅವರಲ್ಲಿ ಪ್ರಮುಖವಾಗಿ ಕುಷ್ಟಗಿ ತಾಲೂಕಿನ ಚಳಗೇರಿ ಗ್ರಾಮದ ಸೋಮಪ್ಪ, ಫಕೀರಪ್ಪ ಕುರುಬರ, ಬಾದಿಮನಾಳ ಗ್ರಾಮದ ಹನುಮಪ್ಪ ಪರಮಟ್ಟಿ, ಸಾಬಣ್ಣ ಫಕೀರಪ್ಪ ಹಸಿಬಿಸಿ, ಮಾಸಪ್ಪ ಸಣ್ಣಪ್ಪಸಾಲಿ, ಮುದುಕಪ್ಪ ಮಡಿಯಪ್ಪ ಗಟ್ಟಿ, ಹನುಮಪ್ಪ ಪರಸಾಪುರ, ಚಿನ್ನಪ್ಪ ಯಮನಪ್ಪ ಗಟ್ಟಿ, ನಾಗಪ್ಪ ಬಸಪ್ಪ ಪರಸಾಪುರ, ಕಲ್ಲಪ್ಪ ಪರಸಾಪುರ, ಲಕ್ಷಮ್ಮ

ಪರಸಾಪುರ, ಲಕ್ಷ್ಮಮ್ಮ ಡೊಳ್ಳಿನ, ಕಬ್ಬರಗಿ ಗ್ರಾಮದ ಬಸಪ್ಪ ರಾಟಿ, ಯಮನಪ್ಪ ಗುರಿಕಾರ, ಶಿವಪ್ಪ ವಜ್ಜಲ, ಹುಲ್ಲಪ್ಪ ರಾಟಿ, ದ್ಯಾಮಣ್ಣ ಹೊಸಮನಿ, ಹನುಮಪ್ಪ ವಜ್ಜಲ, ಚಂದ್ರಪ್ಪ ಕುರಿ, ಮೊದಲಾದ ಅಸಂಖ್ಯಾತ ಹೋರಾಟಗಾರರು ಸ್ವಾತಂತ್ರ್ಯಕ್ಕಾಗಿ ಹೋರಾಡಿರುವುದು ಕಂಡುಬರುತ್ತದೆ.

### ೪.೫ ಪ್ರಸ್ತುತ ರಾಜಕೀಯದಲ್ಲಿ ಕುರುಬರ ಸ್ಥಾನ

ಶ್ರೀನೀಲಗಿರಿ ಸಂಜೀವಯ್ಯ, ಶ್ರೀಟಿ.ಮರಿಯಪ್ಪ, ಶ್ರೀಎನ್.ಬಿ.ದಳವಾಯಿ, ಡಾ.ಆರ್.ನಾಗನಗೌಡ, ಶ್ರೀಮತಿ ಲಕ್ಷ್ಮೀದೇವಿ ರಾಮಣ್ಣ ಕೋಳೂರು ಮಲ್ಲಪ್ಪ, ಎಚ್.ವಿಶ್ವನಾಥ, ಎಚ್.ಎಂ.ರೇವಣ್ಣ, ವಿ.ಎಲ್.ಪಾಟೀಲ, ಚನ್ನಯ್ಯ ಒಡೆಯರ್, ಡಿ.ಕೆ.ನಾಯ್ಕರ್, ವೈರಾಮಚಂದ್ರ, ಬಿ.ಬಿ.ಚಿಮ್ಮನಕಟ್ಟಿ, ಎನ್.ಬಸವಯ್ಯ, ಈ.ಟಿ.ಶಂಭುನಾಥ, ಹುಲ್ಲಪ್ಪ ಯಮುನಪ್ಪ ಮೇಟಿ, ಬಸವರಾಜ ನೀಲಪ್ಪ ಶಿವಣ್ಣನವರ, ಆರ್.ಕೃಷ್ಣಪ್ಪ, ಟಿ.ನಾಗಪ್ಪ, ಟಿ.ಆರ್.ಪರಮೇಶ್ವರಯ್ಯ, ಎನ್.ರಾಚಯ್ಯ, ಆರ್.ರಾಚೇಗೌಡ, ಎಂ.ಬಸವರಾಜು, ಟಿ.ಕೆ.ಕಂಬಳಿ ಕುಬೇರಪ್ಪ ಹನುಮಂತಪ್ಪ ಕುರುಡಗಿ, ಎಚ್.ಬಿ.ಕಾಡಸಿದ್ದಪ್ಪ, ಜಿ.ಟಿ.ರಂಗಪ್ಪ, ಎಂ.ರಾಮಪ್ಪ, ಮಾಣಿಕರಾವ್ ಪುಲೇಕರ್, ಕೆ.ಎಂ.ತಿಮ್ಮಯ್ಯ, ಕೆ.ಆರ್.ಹೊನ್ನಪ್ಪ, ಎನ್.ಕೆ.ಹುಚ್ಚಪ್ಪ, ಕೆ.ಎಂ.ಕೃಷ್ಣಮೂರ್ತಿ, ಕೆ.ಮಲ್ಲಪ್ಪ, ಕೆ.ವೆಂಕಟರಾಮಯ್ಯ, ಎಂ.ಎ.ರುದ್ರಪ್ಪ, ಡಾ.ವೈ.ನಾಗಪ್ಪ, ಜಿ.ಜಿ.ಗೋವಿಂದಪ್ಪ, ಬ.ಲಕ್ಕಪ್ಪ, ಕೆ.ಎಸ್.ಈಶ್ವರಪ್ಪ, ಚನ್ನಬಸಪ್ಪ ಶಿವಳ್ಳಿ ರಮೇಶ ಲಕ್ಷ್ಮಣ ಕುಡಚಿ, ಕೆ.ಭೀಮಣ್ಣ, ಜಿ.ಕೆ.ಸುಬಯ್ಯ, ಜಿ.ಶಂಕರಗೌಡ, ಎ.ದೊಡ್ಡೇಗೌಡ, ಶ್ರೀ ಬಗರೇಗೌಡ, ಎನ್.ಎನ್.ಕಲ್ಲಣ್ಣ, ರಾಜಶೇಖರ ಕೊಲ್ಲೂರು, ಎಸ್.ಎ.ಜಿದ್ದಿ, ವಾರದ ಶಿವಣ್ಣ, ಎಸ್.ಎಂ.ಮರಿಯಪ್ಪ, ವೈ.ಎನ್.ಗೌಡ್ರು, ಸಿದ್ಧರಾಮಯ್ಯ ಮೊದಲಾದವರು ಕರ್ನಾಟಕದ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದವರಾಗಿದ್ದರೆ. ಇವರುಗಳಲ್ಲಿ ಸಿದ್ಧರಾಮಯ್ಯನವರು ೧೯೯೧ರಲ್ಲಿ ರಾಯಚೂರು ಜಿಲ್ಲೆ ಕೊಪ್ಪಳ ಲೋಕಸಭಾ ಕ್ಷೇತ್ರದಿಂದ ಜನತಾದಳ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಅದೇ ರೀತಿ ಕೊಪ್ಪಳ ಜಿಲ್ಲೆಯಾದ್ಯಂತ ಅನೇಕ ನಾಯಕರು ರಾಜಕೀಯ ರಂಗದಲ್ಲಿ ವಿವಿಧ ಸ್ಥಾನಗಳನ್ನು ಪಡೆದಿದ್ದಾರೆ. ಆದರೆ ಇವರ ಸಂಖ್ಯೆ ಜನಾಂಗದ ಜನಸಂಖ್ಯೆ ಗನುಗುಣವಾಗಿಲ್ಲದಿರುವುದು ಕಂಡುಬರುತ್ತದೆ.

#### ೪.೫.೧ ಹನುಮಗೌಡ ಪಾಟೀಲ

ಶ್ರೀಯುತ ಹನುಮಗೌಡ ಪಾಟೀಲರು ಕೊರಡಕೇರಾ ಗ್ರಾಮದಲ್ಲಿ ಶೇಖರಗೌಡ ಪಾಟೀಲ ಮತ್ತು ಕಳಕಮ್ಮ ದಂಪತಿಗಳ ಮಗನಾಗಿ ಜನಿಸಿದರು. ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ತಂದೆಯ ಆಶ್ರಯದಲ್ಲಿಯೇ ಬೆಳೆದರು. ಪ್ರಾಥಮಿಕ ಶಿಕ್ಷಣವನ್ನು ಕೊರಡಕೇರಾ ಮತ್ತು ತಳುವಗೇರಿಯಲ್ಲಿ ಮುಗಿಸಿದರು. ಪ್ರೌಢ ಶಿಕ್ಷಣವನ್ನು ಕುಷ್ಟಗಿಯಲ್ಲಿ, ಪದವಿ ಶಿಕ್ಷಣವನ್ನು ಗುಲ್ಬರ್ಗಾದಲ್ಲಿ ಪಡೆದರು. ನಂತರ ಊರಿಗೆ ಮರಳಿ ಬಂದು ಪ್ರೌಢಶಾಲೆಯಲ್ಲಿ ಗುಮಾಸ್ತರಾಗಿ ಎರಡು ವರ್ಷ ಸೇವೆಸಲ್ಲಿಸಿದರು. ಗುಮಾಸ್ತರಾಗಿದ್ದಾಗ ಬಿಳಿ ಅಂಗಿ ಹಾಗೂ ದೋತಿ ಧರಿಸುತ್ತಿದ್ದುದನ್ನು ವಿರೋಧಿಸಿ ಪ್ಯಾಂಟ್, ಶರ್ಟ ಧರಿಸಬೇಕೆಂದು ಮುಖ್ಯಗುರುಗಳು ಆಜ್ಞಾಪಿಸಿದರು. ಅದರಿಂದಗಿ ಪಾಟೀಲರು ಕೆಲಸಕ್ಕೆ ರಾಜೀನಾಮೆ ನೀಡಿದರು. ನಂತರದಲ್ಲಿ ಶಾಲಾ ಶಿಕ್ಷಕರಾಗಿ ನೇಮಕಗೊಂಡರೂ ಕೆಲವೇ ದಿನಗಳಲ್ಲಿ ಶಿಕ್ಷಕ ವೃತ್ತಿಗೆ ರಾಜೀನಾಮೆ ನೀಡಿದರು.

ಪಾಟೀಲರು ಶ್ರೀ ಮಾರುತೇಶ್ವರ ಯುವಕ ಮಂಡಳಿ ಎಂಬ ಸಂಘದ ಅಧ್ಯಕ್ಷರಾಗಿ ಗ್ರಾಮದ ಯುವಕರನ್ನು ಒಗ್ಗೂಡಿಸುವ

ಕಾರ್ಯ ಮಾಡಿದರು. ನಾಟಕ ಕ್ಷೇತ್ರದಲ್ಲಿ ಅಪಾರ ಆಸಕ್ತಿಯಿದ್ದರಿಂದ ಸ್ವತಃ ತಾವೇ ನಾಟಕಗಳನ್ನು ನಿರ್ವಹಿಸಿ, ನಿರ್ದೇಶಿಸುತ್ತಿದ್ದರು. ನಂತರದಲ್ಲಿರಾಜಕೀಯ ಮುಖಂಡರುಗಳಾದ ಪುಂಡಲೀಕಪ್ಪ ಮತ್ತು ಕಾಂತರಾವ್ ದೇಸಾಯಿವರ ಅನುಯಾಯಿಯಾಗಿ ರಾಜಕೀಯ ಪ್ರವೇಶ ಮಾಡಿದರು. ಕೆಲವೇ ದಿನಗಳಲ್ಲಿ ಎ.ಪಿ.ಎಂ.ಸಿ. ಉಪಾಧ್ಯಕ್ಷರಾದರು. ೧೯೭೮ರಲ್ಲಿ ತಾಲೂಕಾ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಜಿಲ್ಲಾ ಕಾಂಗ್ರೆ ಅಧ್ಯಕ್ಷರು ಮತ್ತು ಸಂಸದರಾದ ಸನ್ಮಾನ್ಯ ಶ್ರೀ ಹೆಚ್.ಜಿ.ರಾಮುಲುರವರ ಕೃಪಾಕಟಾಕ್ಷದಿಂದ ೧೯೮೩ರಲ್ಲಿ ಕುಷ್ಟಗಿ ವಿಧಾನಸಭಾ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಶ್ರೀರಾಮುಲುರವರು ಪಾಟೀಲರಿಗೆ ಹಟ್ಟಿ ಚಿನ್ನದ ಗಣಿಯ ಅಧ್ಯಕ್ಷ ಸ್ಥಾನವನ್ನು ನೀಡಿದ್ದರು.[೮೬] ೧೯೯೪ರಲ್ಲಿ ಸ್ಪರ್ಧಿಸಿ ಪರಾಜಯಗೊಂಡ ಮೇಲೆ ಸಂಘಟನೆ ಕಡೆಗೆ ಒಲವು ತೋರಿದರು. ಇಂದು ಕೊರಡಕೇರ ಗ್ರಾಮದಲ್ಲಿ ಪಾಟೀಲರ ಪ್ರತಿಮೆಯನ್ನು ಸ್ಥಾಪಿಸಲಾಗಿದೆ. ಹೀಗಾಗಿ ಕೊಪ್ಪಳ ಜಿಲ್ಲೆಯ ರಾಜಕೀಯ ನಾಯಕರಿಗೆ ಪಾಟೀಲರು ಆದರ್ಶ ಪ್ರಾಯರಾಗಿದ್ದಾರೆ.

**೪.೫.೨ ನಾಗಪ್ಪ ಭೀಮಪ್ಪ ಸಾಲೋಣಿ**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಕಾರಟಗಿಯಲ್ಲಿ ೧೯೫೮ರಲ್ಲಿ ಭೀಮಪ್ಪ ಸಾಲೋಣಿಯವರ ಮಗನಾಗಿ ಜನಿಸಿದರು. ಎಸ್.ಎಸ್.ಎಲ್.ಸಿ. ಯವರೆಗೆ ವಿದ್ಯಾಭ್ಯಾಸ ಮಾಡಿದರು. ವೃತ್ತಿಯಲ್ಲಿ ಕೃಷಿಕರು ಹಾಗೂ ವ್ಯಾಪರಾಸ್ಥರಾಗಿದ್ದರು. ಒಳಾಂಗಣ ಕ್ರೀಡೆಗಳಲ್ಲಿ ಆಸಕ್ತಿ ಹೊಂದಿದ್ದ ನಾಗಪ್ಪನವರು ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದರು. ೧೯೯೪ರ ಮಹಾಚುನಾವಣೆಯಲ್ಲಿ ಜನತಾದಳ ಅಭ್ಯರ್ಥಿಯಾಗಿ ಕನಕಗಿರಿ ವಿಧಾನಸಭಾ ಕ್ಷೇತ್ರದಿಂದ ವಿಜಯ ಸಾಧಿಸಿದ್ದರು. ಇವರು ಶ್ರೀ ಜೆ.ಹೆಚ್.ಪಟೇಲರ ಮಂತ್ರಿಮಂಡಲದಲ್ಲಿ ಸಚಿವರಾಗಿ ಕಾರ್ಯನಿರ್ವಹಿಸಿದ್ದರು.[೮೭] ಗಂಗಾವತಿ ತಾಲ್ಲೂಕಿನ ಕನಕಗಿರಿಯಲ್ಲಿ ಕನಕ ವಿದ್ಯಾಪೀಠ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು. ಪ್ರತಿವರ್ಷ ಬಡ ಮಕ್ಕಳಿಗೆ ಉಚಿತ ಪುಸ್ತಕ ವಿತರಣೆ, ಉಚಿತ ಊಟದ ವ್ಯವಸ್ಥೆಯನ್ನು ಮಾಡಿ ಶಿಕ್ಷಣದ ಸುಧಾರಣೆಗೆ ಪ್ರಯತ್ನಿಸುತ್ತಿದ್ದಾರೆ. ಇತ್ತೀಚೆಗೆ ಬಿಜೆಪಿ ಪಕ್ಷದ ಅಭ್ಯರ್ಥಿಯಾಗಿ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಸೋಲು ಅನುಭವಿಸಿದರು. ಆದರೂ ಸಾರ್ವಜನಿಕ ಕಾರ್ಯಗಳನ್ನು ಉತ್ತಮವಾಗಿ ಮಾಡುತ್ತಿರುವುದನ್ನು ಕಂಡುಬರುತ್ತದೆ.

**೪.೫.೩ ಶ್ರೀ ಕೆ.ವಿರೂಪಾಕ್ಷಪ್ಪ**

ರಾಯಚೂರು ಜಿಲ್ಲೆಯ ಸಿಂಧನೂರಿನಲ್ಲಿ ೧೯೪೭ರಲ್ಲಿ ಜನಿಸಿದರು, ಕೇವಲ ಎಸ್.ಎಸ್.ಎಲ್.ಸಿ.ಯವರೆಗೆ ಅಭ್ಯಾಸ ಮಾಡಿದರು. ವೃತ್ತಿಯಲ್ಲಿ ಕೃಷಿಕರಾದ ವಿರುಪಾಕ್ಷಪ್ಪನವರು ಸಮಾಜ ಸೇವೆಯನ್ನು ಉಪವೃತ್ತಿಯನ್ನಾಗಿ ಕೈಗೊಂಡಿದ್ದರು. ಶಿಕ್ಷಣದ ಅಭಿವೃದ್ಧಿಗಾಗಿ ಸಿಂಧನೂರಿನಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಕನಕದಾಸ ಮಠವನ್ನು ಸ್ಥಾಪಿಸಿದ್ದಾರೆ. ೧೯೯೪ರಲ್ಲಿ ನಡೆದ ಹತ್ತನೇ ವಿಧಾನಸಭಾ ಚುನಾವಣೆಯಲ್ಲಿ ಸಿಂಧನೂರು ವಿಧಾನಸಭಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ಧರು.[೮೮] ಇವರು ಕರ್ನಾಟಕ ಪ್ರದೇಶ ಕುರುಬರ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ರಾಯಚೂರು ಜಿಲ್ಲೆಯಾದ್ಯಂತ ಕುರುಬರನ್ನು ಸಂಘಟಿಸುವಲ್ಲಿ ಸಾಕಷ್ಟು ಶ್ರಮಿಸಿ ಯಶಸ್ವಿಯಾಗಿದ್ದಾರೆ. ಇಂದು ಕೊಪ್ಪಳ ಲೋಕಸಭಾ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

### ೪.೫.೪ ಶ್ರೀ ಎಂ. ಗಂಗಣ್ಣ ಭೀಮಪ್ಪ

ರಾಯಚೂರಿನಲ್ಲಿ ದಿ.೫-೫-೧೯೫೧ರಲ್ಲಿ ಒಂದು ಕೃಷಿಕರ ಕುಟುಂಬದಲ್ಲಿ ಜನಿಸಿದರು. ಬಿ.ಎಸ್ಸಿ ಹಾಗೂ ಎಲ್.ಎಲ್.ಬಿ. ಪದವಿ ಪಡೆದರು. ವಕೀಲ ವೃತ್ತಿಯ ಜೊತೆಗೆ ಕೃಷಿಯನ್ನು ಅವಲಂಬಿಸಿದರು. ಲಿಂಗಸೂಗುರು ತಾಲೂಕು ಕುರುಬರ ಕ್ಷೇಮಾಭಿವೃದ್ಧಿ ಸಮಿತಿ ಅಧ್ಯಕ್ಷರು, ಹುಸೇನ್ ಆಲಂದರ್ಗಾ ಸಮಿತಿ ಸದಸ್ಯರು, ಗುಡಗುಂಟಿ ಶ್ರೀ ಅಮರೇಶ್ವರ ಟ್ರಸ್ಟಿನ ಸದಸ್ಯರು, ಸ್ಥಳೀಯ ಯುವಕರ ಸಂಘದ ಸ್ಥಾಪಕ ಅಧ್ಯಕ್ಷರು, ನವಲಗುಂದ ಆಸ್ಪತ್ರೆ ಸಂದರ್ಶಕ ಸಮಿತಿ ಸದಸ್ಯರು, ತಾಲೂಕು ಭೂ ನ್ಯಾಯ ಮಂಡಳಿ ಸದಸ್ಯರಾಗಿ ಸೇವೆ ಸಲ್ಲಿಸಿರುವ ಗಂಗಗಣ್ಣನವರು ಸರಳಜೀವಿಗಳಾಗಿದ್ದರು.[೮೯]

ಗಂಗಣ್ಣವನರು ತಾಲೂಕಿನ ಹರಿಜನ, ಗಿರಿಜನ, ಹಿಂದುಳಿದ ಮತ್ತು ಶೋಷಿತ ಜನಾಂಗದವರ, ಅಲ್ಪ ಸಂಖ್ಯಾತರ ಕಲ್ಯಾಣದ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದ್ದರು. ತಾಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಕುರುಬರನ್ನು ಸಂಘಟಿಸುವಲ್ಲಿ ಪ್ರಯತ್ನಿಸಿದರು. ಇವರು ೧೯೭೮ರ ಫೆಬ್ರುವರಿ ತಿಂಗಳಲ್ಲಿ ನಡೆದ ಆರನೇ ವಿಧಾನಸಭಾ ಚುನಾವಣೆಯಲ್ಲಿ ಕುಷ್ಟಗಿ ವಿಧಾನಸಭಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ನಂತರ ಅನೇಕ ಸಾರ್ವಜನಿಕ ಕಾರ್ಯಗಳನ್ನು ಮಾಡುವತ್ತ ಒಲವು ತೋರಿದರೆಂದು ತಿಳಿಯುತ್ತದೆ.

### ೪.೫.೫ ಕರಿಯಣ್ಣ ಸಂಗಟಿ

ಕೊಪ್ಪಳದಲ್ಲಿ ದಿ.೦೧-೦೬-೧೯೬೫ರಲ್ಲಿ ಹೇಮಚಂದ್ರಪ್ಪನವರ ಮಗನಾಗಿ ಒಂದು ಕೃಷಿಕ ಕುಟುಂಬದಲ್ಲಿ ಜನಿಸಿದರು. ಕೃಷಿ ಮೂಲ ವೃತ್ತಿಯಾಗಿದ್ದರಿಂದ ಪಿ.ಯು.ಸಿಯವರೆಗೆ ಮಾತ್ರ ವಿದ್ಯಾಭ್ಯಾಸ ಕೈಗೊಳ್ಳಲು ಸಾಧ್ಯವಾಯಿತು. ನಂತರ ರಾಜಕೀಯದಲ್ಲಿ ಭಾಗವಹಿಸಿ ಸ್ವಸಾಮರ್ಥ್ಯದ ಮೇರೆಗೆ ಅನೇಕ ಸ್ಥಾನಗಳನ್ನು ಪಡೆದುಕೊಂಡರು. ಜಿಲ್ಲಾ ಪಂಚಾಯತ ಸದಸ್ಯರಾಗಿ ಎರಡು ಅವಧಿಗೆ ಕಾರ್ಯನಿರ್ವಹಿಸಿದರು. ನಂತರ ಜಿಲ್ಲಾ ಪಂಚಾಯತ ಕೊಪ್ಪಳದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಜಿಲ್ಲಾ ಸೇವಾದಳದ ಸಂಘಟಕರಾಗಿ, ರಾಯಚೂರು ಜಿಲ್ಲೆ ಯುವ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿ, ಕಾಳಿದಾಸ ವಿದ್ಯಾಸಂಸ್ಥೆಯ ಅದ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ನಂತರ ಎಂ.ಎಲ್.ಸಿಯಾಗಿ ಚುನಾಯಿತರಾಗಿದ್ದರು. ಅನೇಕ ಸಮಾಜಹಿತ ಕಾರ್ಯಗಳನ್ನು ಕೈಗೊಂಡರು. ಇಂದು ಕೊಪ್ಪಳ ಜಿಲ್ಲೆಯ ಯುವ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲದೆ ರಾಜೀವಗಾಂಧಿ ರೂರಲ್ ಎಜ್ಯುಕೇಷನಲ್ ಲ್ಯಾಂಡ್ ಕಲ್ಚರಲ್ ಟ್ರಸ್ಟ್ ಕೊಪ್ಪಳದ ಸ್ಥಾಪಕ ಅಧ್ಯಕ್ಷರಾಗಿದ್ದಾರೆ. ಕೊಪ್ಪಳದಲ್ಲಿ ಬಿ.ಎಡ್ ಮತ್ತು ಡಿ.ಎಡ್ ವಿದ್ಯಾಲಯಗಳನ್ನು ಸ್ಥಾಪಿಸಿ ಶಿಕ್ಷಣದ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಪ್ರತಿವರ್ಷ ಬಡವರ ಸಾಮೂಹಿಕ ವಿವಾಹ, ರಕ್ತದಾನ ಶಿಬಿರ, ಔಷದಿ ವಿತರಣೆ ಮೊದಲಾದ ಕಾರ್ಯಗಳನ್ನು ಕೈಗೊಂಡು ಸಮಾಜ ಸೇವೆಸಲ್ಲಿಸುತ್ತಿದ್ದಾರೆ.

### ೪.೫.೬ ಬಸವರಾಜ .ಕೆ ಹಿಟ್ನಾಳ

ಕ್ರಿ.ಶ ೧೯೫೧ರಲ್ಲಿ ಕೊಪ್ಪಳ ತಾಲೂಕಿನ ಹಿಟ್ನಾಳ ಗ್ರಾಮದ ಭೀಮಪ್ಪ ಕೊಯಿಪ್ಪನವರ ಮತ್ತು ಸಾವಿತ್ರಮ್ಮ ಎಂಬ ದಂಪತಿಗಳಿಗೆ

ಜನಿಸಿದರು.ಕೃಷಿ ಮೂಲ ವೃತ್ತಿಯಾಗಿದ್ದರಿಂದ ಹತ್ತನೇ ತರಗತಿವರೆಗೆ ಮಾತ್ರ ವಿದ್ಯಾಭ್ಯಾಸ ಕಲಿಯಲು ಸಾಧ್ಯವಾಯಿತು. ಎಸ್.ಸಿ.ಎಸ್ ಸೊಸೈಟಿಯ ಉಪಾಧ್ಯಕ್ಷ, ಅಧ್ಯಕ್ಷ ಸ್ಥಾನ ಪಡೆದರು. ನಂತರ ೧೯೭೫ರಲ್ಲಿ ಎ.ಪಿ.ಎಂ.ಸಿ ಸದಸ್ಯರಾದರು. ೧೯೭೮ ರಲ್ಲಿ ಗ್ರಾ.ಪಂ. ಸದಸ್ಯರು, ೧೯೮೬ ರಿಂದ ೯೧ರ ವರೆಗೆ ಮಂ.ಪಂ. ಅಧ್ಯಕ್ಷರು, ೧೯೮೩-೮೫ರಲ್ಲಿ ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ೧೯೮೫-೯೦ರವರೆಗೆ ೫ ವರ್ಷಕುರುಬ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಕೊಪ್ಪಳದ ಕಾಳಿದಾಸ ಸಂಸ್ಥೆಯ ಕಾರ್ಯದರ್ಶಿ ಹಾಗೂ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು. ೧೯೯೪ ರಲ್ಲಿ ಕಾಂಗ್ರೆಸ್ಸಿನಿಂದ ಎಂ.ಎಲ್.ಎ ಚುನಾವಣೆಗೆ ಸ್ಪರ್ಧಿಸಿ ಸೋತರು. ೧೯೯೯ ರಲ್ಲಿ ಜನತಾದಳದಿಂದ ಸ್ಪರ್ಧಿಸಿ ಸೋತರು. ೨೦೦೪ರಲ್ಲಿ ಕಾಂಗ್ರೆಸ ಕಡೆಯಿಂದ ಸ್ಪರ್ಧಿಸಿ ೬೦೦೦ ಮತದಿಂದ ಗೆದ್ದರು. ಇಂದು ಕೊಪ್ಪಳದ ಎಂ.ಎಲ್.ಎ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

### ೪.೫.೭ ದೊಡ್ಡನಗೌಡ ಪಾಟೀಲ

ಕುಷ್ಟಗಿ ತಾಲ್ಲೂಕಿನ ಕೊರಡಕೇರಾ ಗ್ರಾಮದಲ್ಲಿ ಕ್ರಿ.ಶ. ೫-೧೨-೧೯೭೩ ರಲ್ಲಿ ಜನಿಸಿದರು. ಇವರ ತಂದೆ ಹನುಮಗೌಡ ಪಾಟೀಲ, ತಾಯಿ ಹನುಮವ್ವ ಆಗಿದ್ದಾರೆ. ಪ್ರಾಥಮಿಕ ಶಿಕ್ಷಣ ಕೊರಡಕೇರಿ, ಪ್ರೌಢ ಶಿಕ್ಷಣವನ್ನು ಕುಷ್ಟಗಿಯಲ್ಲಿ ಪಡೆದರು. ಗದಗಿನ ಕೆ.ವಿ.ಎಸ್.ಆರ್. ವಿದ್ಯಾಲಯದಲ್ಲಿ ಬಿ.ಎ. ಪದವಿ ಪಡೆದರು. ಎನ್.ಎಸ್.ಯು.ಐ. ಯ ಪ್ರಧಾನ ಕಾರ್ಯದರ್ಶಿಯಾಗಿ ರಾಜಕೀಯ ಪ್ರವೇಶ ಮಾಡಿದರು. ೧೯೯೩ ರಲ್ಲಿ ರಾಯಚೂರು ಜಿಲ್ಲಾ ಕಾಂಗ್ರೆಸ್ ಹಾಗೂ ೧೯೯೮ ರಲ್ಲಿ ಕೊಪ್ಪಳ ಜಿಲ್ಲಾ ಯುವ ಕಾಂಗ್ರೆಸ್ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ೧೯೯೩ ರಲ್ಲಿ ಕೊರಡಕೇರಾ ಸರಕಾರಿ ಪ್ರೌಢಶಾಲೆಯ ನಿರ್ಮಾಣಕ್ಕೆ ೨.೫ ಎಕರೆ ಭೂಮಿ ದಾನ ನೀಡಿದರು. ೨೦೦೦ ದಲ್ಲಿ ಕೊರಡಕೇರಾ ಕ್ಷೇತ್ರದಿಂದ ಜಿಲ್ಲಾ ಪಂಚಾಯತಗೆ ಸ್ಪರ್ಧಿಸಿ ಜಿಲ್ಲೆಯಲ್ಲಿಯೇ ಅತ್ಯಧಿಕ ಬಹುಮತದಿಂದ ಸದಸ್ಯರಾಗಿ ಆಯ್ಕೆಗೊಂಡರು. ೨೦೦೩ ರಲ್ಲಿ ಕೊಪ್ಪಳ ಜಿಲ್ಲಾ ಕುರುಬ ಸಂಘದ ಜಿಲ್ಲಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ೨೦೦೪ ಮೇ ೧೩ ರಂದು ಬಿ.ಜೆ.ಪಿ. ಪಕ್ಷದಿಂದ ಸ್ಪರ್ಧಿಸಿ ೧೦,೫೦೦ ಮತಗಳ ಬಹುಮತದಿಂದ ಜಯಶಾಲಿಗಳಾಗಿ ಶಾಸಕರಾದರು. ೨೦೦೫ ರಲ್ಲಿ ಅಖಿಲ ಭಾರತ ಕನ್ನಡ ಸಂಸ್ಕೃತಿ ಸಮ್ಮೇಳನ ನವದೆಹಲಿ, ಕರ್ನಾಟಕ ಸಂಘ ಸಮಾಜಕ್ಕೆ ಸಲ್ಲಿಸಿದ ಅನುಪಮ ಸೇವೆಗಾಗಿ ದೊಡ್ಡನಗೌಡ ಪಾಟೀಲ ಅವರಿಗೆ "ಹೃದಯವಂತರು" ಪ್ರಶಸ್ತಿ ನೀಡಿ ಗೌರವಿಸಿದೆ. ೨೦೦೬ ರಲ್ಲಿ ಕುಷ್ಟಗಿ ತಾಲ್ಲೂಕಿನ ಹಳ್ಳಿಯ ಬಡ ಜನರಿಗೆ ಸುಮಾರು ೩೮೧ ಉಚಿತ ಸಾಮೂಹಿಕ ವಿವಾಹ ಮಾಡಿಸಿದರು. ಈ ವಿವಾಹದಲ್ಲಿ ಸರ್ವಧರ್ಮಿಯರಿಗೂ ಅವಕಾಶ ನೀಡಿದ್ದು ವಿಶೇಷ. ೨೦೦೬ ರಲ್ಲಿ ಹಕ್ಕಬುಕ್ಕ ವಿದ್ಯಾರಣ್ಯ ಸಂಸ್ಥೆಯ ವತಿಯಿಂದ ಸಂಗೊಳ್ಳಿ ರಾಯಣ್ಣ ಪ್ರೌಢಶಾಲೆ ಯನ್ನು ಕುಷ್ಟಗಿಯಲ್ಲಿ ಸ್ಥಾಪಿಸಿದರು. ಕುಷ್ಟಗಿ ಕನಕಭವನದ ನಿರ್ಮಾಣಕ್ಕಾಗಿ ೩ ಎಕರೆ ಭೂಮಿ ದಾನ ನೀಡಿದ್ದಾರೆ. ೨೬-೦೨-೨೦೦೭ ರಲ್ಲಿ ಕುರಿ ಮತ್ತು ಉಣ್ಣೆ ನಿಗಮದ ರಾಜ್ಯದ ಅಧ್ಯಕ್ಷರಾಗಿ ನೇಮಕಗೊಂಡಿದ್ದಾರೆ.

### ೪.೫.೮ ಹನುಮಂತಪ್ಪ ಅಂಗಡಿ

ಕೊಪ್ಪಳ ತಾಲ್ಲೂಕಿನ ಓಜನಹಳ್ಳಿ ಎಂಬ ಗ್ರಾಮದಲ್ಲಿ ದಿ. ೨೩-೦೮-೧೯೪೭ ರಲ್ಲಿ ಸಿದ್ರಾಮಪ್ಪ, ಹನುಮವ್ವ ಎಂಬ ದಂಪತಿಗಳಿಗೆ ಜನಿಸಿದರು. ಭಾಗ್ಯನಗರದ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಹಾಗೂ ಕೊಪ್ಪಳದಲ್ಲಿ ಪ್ರೌಢಶಿಕ್ಷಣ

ಮುಗಿಸಿದರು. ಕಲಿಯುವ ಮನಸ್ಸಿದ್ದರೂ ಆರ್ಥಿಕ ಪರಿಸ್ಥಿತಿಯ ಅನಾನುಕೂಲದಿಂದಾಗಿ ಉನ್ನತ ಶಿಕ್ಷಣ ಪಡೆಯಲಾಗಲಿಲ್ಲ. ೧೬ ನೇ ವಯಸ್ಸಿನಲ್ಲಿ ವಿವಾಹವಾದರು. ಧರ್ಮಸ್ಥಳದ ಪೂಜ್ಯ ವೀರೇಂದ್ರ ಹೆಗ್ಗಡೆಯವರ ಆಶೀರ್ವಾದದ ಮೇರೆಗೆ ವ್ಯಾಪಾರ ಮಾಡಲಾರಂಭಿಸಿದರು. ವ್ಯಾಪಾರ ಉತ್ತಮವಾಗಿ ನಡೆದದ್ದರಿಂದ ರೈತರ ಸಹಕಾರದೊಂದಿಗೆ ೧೯೮೫ ರಲ್ಲಿ ಮಂಜುನಾಥ ಟ್ರೇಡರ್ಸ್ ಎಂಬ ಗೊಬ್ಬರದ ಅಂಗಡಿಯನ್ನು ಪ್ರಾರಂಭಿಸಿದರು. ಕೊಪ್ಪಳ ತಾಲ್ಲೂಕು ವಿಶ್ವ ಹಿಂದೂ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಶಿರಸಪ್ಪಯ್ಯನ ಮಠದ ಹತ್ತಿರವಿದ್ದ ಗಾಂಧಿ ಅನಾಥಾಶ್ರಮಕ್ಕೆ ೫ ಕೋಣೆಗಳ ಕಟ್ಟಡ ನಿರ್ಮಿಸಿದರು. ೧೯೮೮ ರಲ್ಲಿ ಕೊಪ್ಪಳದಲ್ಲಿಯೇ ಪ್ರಥಮ ಬಾರಿಗೆ ಕನಕದಾಸರ ೫೦೦ ನೇ ಜಯಂತಿಯನ್ನು ಆಚರಿಸಿದರು. ಹೊಸ ಬಸ್ ನಿಲ್ದಾಣದ ವೃತ್ತಕ್ಕೆ ಕನಕದಾಸ ವೃತ್ತವೆಂದು ನಾಮಕರಣ ಮಾಡಿದರು. ೧೯೮೯ ರಿಂದ ೯೦ ರವರೆಗೆ ಕೊಪ್ಪಳ ಕಾಳಿದಾಸ ಪ್ರೌಢಶಾಲೆ ಹಾಗೂ ಬೋರ್ಡಿಂಗ್‌ಗೆ ಅಧ್ಯಕ್ಷರಾಗಿದ್ದರು. ೧೯೯೪ ರಲ್ಲಿ ಜನತಾದಳ ಪಕ್ಷದಿಂದ ಎಂ.ಎಲ್.ಎ. ಚುನಾವಣೆಗೆ ಸ್ಪರ್ಧಿಸಿ ಸೋತರು. ೧೯೯೭ ರಿಂದ ಕಾಳಿದಾಸ ಸಂಸ್ಥೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸುಮಾರು ೧೫ ವರ್ಷಗಳ ವರೆಗೆ ಜಿಲ್ಲಾ ಜನತಾದಳದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಈಗ ಕಾಂಗ್ರೆಸ್ ಪಕ್ಷದಲ್ಲಿದ್ದು ಸೇವೆ ಸಲ್ಲಿಸುತ್ತಿದ್ದಾರೆ.

**೪.೫.೯ ಜಿಲ್ಲಾ ಪಂಚಾಯತ**

**೧. ಕಸ್ತೂರಿಬಾಯಿ ವಜ್ಜಲ**

ಕಸ್ತೂರಿಬಾಯಿ ವಜ್ಜಲರವರು ನರಸಾಪುರದಲ್ಲಿ ಜನಿಸಿದರು. ಷಣ್ಮುಖಪ್ಪ ವಜ್ಜಲರವರನ್ನು ವಿವಾಹವಾದ ನಂತರ ಕಬ್ಬರಗಿಯಲ್ಲಿ ನೆಲೆಸಿದರು. ಷಣ್ಮುಖಪ್ಪ ವಜ್ಜಲರವರು ಕಾಂಗ್ರೆಸ ಕಾರ್ಯಕರ್ತರು ಹಾಗೂ ಹನುಮನಗೌಡ ಪಾಟೀಲರ ಶಿಷ್ಯರಾಗಿದ್ದರು. ನಂತರ ಬ್ಲಾಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕ್ರಿ.ಶ ೨೦೦೩ ರಲ್ಲಿ ಜಿಲ್ಲಾ ಪಂಚಾಯತ ಅಧ್ಯಕ್ಷಸ್ಥಾನ ಮಹಿಳೆಯರಿಗೆ ಮೀಸಲಾಗಿ ದ್ದರಿಂದ ಕಸ್ತೂರುಬಾಯಿ ವಜ್ಜಲರವರನ್ನು ಆಯ್ಕೆ ಮಾಡಲಾಯಿತು. ಹೀಗಾಗಿ ಕಸ್ತೂರಿಬಾಯಿ ವಜ್ಜಲರವರು ೨೦೦೨ ರಿಂದ ೨೦೦೫ ರವರೆಗೆ ಜಿಲ್ಲಾ ಪಂಚಾಯತ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಈ ಅವಧಿಯಲ್ಲಿ ಅನೇಕ ಸಾರ್ವಜನಿಕ ಕಾರ್ಯಗಳನ್ನು ಮಾಡಿದರೆಂದು ತಿಳಿದುಬರುತ್ತದೆ.

ರಾಮಣ್ಣ, ಕರಿಬಸಪ್ಪ ನಡಗುಂದಿ, ಶಾಂತಮ್ಮ, ಕುರುಡಗಿ ಹನುಂತಪ್ಪ ಕುರಿ, ರಾಘವೇಂದ್ರ ಹಿಟ್ನಾಳ ಮೊದಲಾದವರು ಜಿಲ್ಲಾ ಪಂಚಾಯತ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**೪.೫.೧೦ ತಾಲೂಕ ಪಂಚಾಯತ**

**೧. ಫಕೀರಪ್ಪ ಬಿಳೇಬಾವಿ**

ಕೊಪ್ಪಳ ತಾಲೂಕಿನ ಬಿಳೇಬಾವಿಯಲ್ಲಿ ಸಣ್ಣಹನುಮಪ್ಪ ಮತ್ತು ಫಕೀರಮ್ಮನವರ ಮಗನಾಗಿ ೧೯೫೪ರಲ್ಲಿ ಜನಿಸಿದರು. ೫ನೇ ತರಗತಿಯವರೆಗೆ ವಿದ್ಯಾಭ್ಯಾಸ ಪಡೆದರು. ೧೯೭೬ ರಕ್ಕಿಂತ ಪೂರ್ವದಲ್ಲಿ ಜನತಾದಳ ಪಕ್ಷದ ಕಾರ್ಯಕರ್ತರಾಗಿದ್ದರು. ಇಂದರಗಿಯ ಎ.ಎಸ್.ಎಸ್.ಸೊಸೈಟಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ೧೯೯೪ ರಲ್ಲಿ ಕೊಪ್ಪಳ ಕುರುಬ ಸಂಘದ

ಖಜಾಂಚಿಯಾಗಿದ್ದರು. ೧೯೯೭ರಲ್ಲಿ ಕೊಪ್ಪಳ ತಾಲೂಕ ಪಂಚಾಯತನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕಾಂಗ್ರೆಸನ ಬೆಂಬಲದಿಂದ ೨೦೦೬ರಲ್ಲಿ ಬೂದಗುಂಪಾ ಪಂಚಾಯತಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈಗ ಬಿ.ಜೆ.ಪಿ. ಪಕ್ಷದ ಕಾರ್ಯಕರ್ತರಾಗಿದ್ದಾರೆ.

**೨. ಬಸವರಾಜ ಬಾವಿಕಟ್ಟಿ**

ಕೊಪ್ಪಳದ ಬೂದಗುಂಪಾದಲ್ಲಿ ನರೆಯಪ್ಪ ಬಾವಿಕಟ್ಟಿ ಮತ್ತು ಶಿವಮ್ಮ ದಂಪತಿಗಳಿಗೆ ೧೯೬೭ರಲ್ಲಿ ಜನಿಸಿದರು. ೧೦ನೇ ತರಗತಿಯವರೆಗೆ ಶಿಕ್ಷಣ ಪಡೆದುಕೊಂಡರು. ಮೊದಲಿಗೆ ಜಿಲ್ಲಾ ಹಾಲು ಒಕ್ಕೂಟದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ನಂತರ ೧೯೯೪ ರಿಂದ ೯೭ ರವರೆಗೆ ಗ್ರಾ.ಪಂ ಬೂದಗುಂಪಾದ ಅಧ್ಯಕ್ಷರಾಗಿದ್ದರು. ೧೯೯೦ ರಲ್ಲಿ ಜಿಲ್ಲಾ ಕಾಂಗ್ರೆಸ ಕಾರ್ಯದರ್ಶಿಯಾಗಿ ೨೦೦೫ರಲ್ಲಿ ಜಿಲ್ಲಾ ಸಲಹಾ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದರು. ಜನವರಿ೨೨, ೨೦೦೬ರಂದು ತಾಲೂಕ ಪಂಚಾಯತಿ ಅಧ್ಯಕ್ಷರಾಗಿ ಚುನಾಯಿತರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಕುಷ್ಟಗಿ ತಾಲೂಕ ಪಂಚಾಯತ ಅಧ್ಯಕ್ಷರಾಗಿ ಪರಸಪ್ಪ ನಂದಿಹಾಳ, ಕಬ್ಬರಗಿ ಸತ್ಯಪ್ಪ ರಾಜೂರು ಜಾಗಿರಗುಡ್ಡರವರು ಕಾರ್ಯನಿರ್ವಹಿಸಿದ್ದರು. ಸದಸ್ಯರಾಗಿ ಭೀಮಪ್ಪ ವಜ್ಜಲ, ಕಬ್ಬರಗಿ ಸಿದ್ದಪ್ಪ ಹಾವಿನ ಕಾಟಾಪುರ, ಲಿಂಗಯ್ಯ ಗುರುವಿನ, ಸುಧಾ ಧರ್ಮಣ್ಣ ಗಡಾದ ಯರಗೇರ, ಹನುಮವ್ವ ಶರಣಪ್ಪ ರಾಜೂರು ಕುಂಬಳಾವತಿ, ಶಶಿಕಲಾ ಬಸವರಾಜ ಕುಂಟೋಜಿ ಬೆನಕನಹಾಳ ಮೊದಲಾದವರು ಸೇವೆಸಲ್ಲಿಸುತ್ತಿದ್ದಾರೆ. ಕೊಪ್ಪಳ ತಾ.ಪಂ. ಸದಸ್ಯರಾಗಿ ಹನುಮಂತ ಅರಸಿಕೆರೆ, ಒನಬಳ್ಳಾರಿ ರಮೇಶ ಕೊಯಪ್ಪನವರ ಹಿಟ್ನಾಳ, ಸಿಂಗಪ್ಪ ಯತ್ನಟ್ಟಿ, ದೇವಮ್ಮ ಕತ್ತಿ, ಲಕ್ಷ್ಮಿ ಮಂಜುನಾಥರವರು ಕಾರ್ಯನಿರ್ವಹಿಸುತ್ತಿದ್ದಾರೆ.

**೪.೩.೧೧ ಗ್ರಾಮ ಪಂಚಾಯತಿ**

ಯಲಬುರ್ಗಾ ತಾಲೂಕ ಬನ್ನಾಳದಲ್ಲಿ ಶಂಬಣ್ಣ ಮ್ಯಾಗೇರಿ, ಶ್ರೀಮತಿ ಬಸವ್ವ ಶರಣಪ್ಪ, ಶ್ರೀಮತಿ ಅಕ್ಕವ್ವ ಷಣ್ಮುಖಪ್ಪ ಕಂಬಳಿ, ಕೊರಡಕೇರಿಯ ಮುಂಡನಗೌಡ ಪಾಟೀಲ, ಭೀಮನಗೌಡ ಪಾಟೀಲ ಕುರುಡಗಿ, ಕಳಕಪ್ಪ ಬೆಟಗೇರಿ, ರೇವಣಗಡ್ಡೆದ, ಕಳಕಪ್ಪ ಕುರಿ, ವೀರಪ್ಪಸಾಲಬಾವಿ, ಅಂದಪ್ಪ ಬಿಂಡೂರು, ಶಾಂತಪ್ಪ ನಡೆಗುಂದಿ, ಹುಲಿಹೈದರನ ಯಮನವ್ವ, ಹೂವಿನಾಳ ಹನುಂತಪ್ಪ ಬಾಳಪ್ಪ, ಈರಮ್ಮ ಶಿವಪ್ಪ ಇಂದಿರಮ್ಮನವರ, ದಮ್ಮೂರು ಸಕ್ರಗೌಡ್ರು, ಬಸನಗೌಡ, ಶಂಕರಗೌಡ, ಮರೆವ್ವಮರಗಪ್ಪನವರು, ಇಂದರಗಿ ರಾಮಚಂದ್ರಗೌಡ, ಸಂಕನೂರು ಈರಮ್ಮ, ವಣಿಗೇರಿಯ ಮರಿಯಪ್ಪ ಕೊಡಗಲಿ, ಯಡಿಯಾಪುರದ ವೀರನಗೌಡ ಹಿರೇಗೌಡ, ಈಶಪ್ಪ ಹಂಚಿನಾಳ, ಗುಂಡಪ್ಪ ತಳಕಲ್, ಮುದುಕಮ್ಮ ಕುರುಭಟ್ಟರು, ಆಕ್ಕಾಳಕಿ ಅಯ್ಯಪ್ಪ ಮಂಚಿಗೇರಿ.ಕಬ್ಬರಗಿಯ ಸಣ್ಣಪ್ಪ ಕುರಿ, ಸಂಕ್ರವ್ವ ವಜ್ಜಲ, ಕಳಕಪ್ಪ, ಹನುಮಸಾಗರದ ಬಾಳಪ್ಪ, ಹನುಮಪ್ಪ ಬಂಗಿ, ಪರಸಪ್ಪ ಕಂಬಳಿ, ಬಾದಿಮನಾಳ ರಾಮಣ್ಣ ಓಲೆಕಾರ. ಕುರುಡಗಿ ನಿಗವ್ವ ಗಡ್ಡದ, ರಾಮಣ್ಣ ದಿಬ್ಬದಮನಿ, ಹಿರೇಸಿಂದೋಗಿ, ತಿಗರಿ ಬಸವ ಕಾಟಾಪುರ, ಹಿರೇಮನ್ನಾಪುರ ಬಸಪ್ಪ, ಬಸವಾಪಟ್ಟಣದ ಹನುಮೇಶ ವಿಠಲಾಪುರ, ಸಂಕನೂರು ವಾಯುಪುತ್ರಪ್ಪ ಭೀಮಪ್ಪಹಟ್ಟಿ, ಕುದುರೆಮೋತಿ ನಿಂಗಮ್ಮ ಪಾಮಪ್ಪ ಹನುಮಟ್ಟಿ, ನಾಗಪ್ಪ ಹೊಸಮನಿ, ರೇಣುಕಮ್ಮ ರೇವಣಪ್ಪ ಮ್ಯಾಗೇರಿ, ಹನುಮಸಾಗರದ ಸಕ್ರಪ್ಪ, ಬಸಪ್ಪ ಕಿಲ್ಲೇದ, ಮುದೋಳದ ಶರಣಪ್ಪ ಹಿರೇಹಾಳ. ಬಹದ್ದೂರಬಂಡಿಯ ರಾಮಣ್ಣ ಕರಿಗಾರ, ಶಾಂತಮ್ಮ ರಾಮಣ್ಣ ಗವಿಸಿದ್ದಪ್ಪ ಗ್ಯಾನಪ್ಪ, ಗಂಗಮ್ಮ ಗ್ಯಾನಪ್ಪನವರು, ಕಾರಟಗಿಯ ಕೆ.ಪರಸಪ್ಪ, ಪಕೀರಪ್ಪ ಸುಗ್ಗಿ, ಲಿಂಗಪ್ಪ ಗಿಣಿವಾರ್, ಶೇಖರಪ್ಪ

ದೇವಿಕ್ಯಾಂಪ್, ಸಿದ್ದಾಪುರ ಸಿದ್ದಪ್ಪ ಮೊದಲಾದವರು ಕೊಪ್ಪಳ ಜಿಲ್ಲೆಯ ಗ್ರಾಮ ಪಂಚಾಯತಿಗಳಲ್ಲಿ ಅಧ್ಯಕ್ಷರು ಹಾಗೂ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ಟಿಪ್ಪಣಿಗಳು**


೧. ಶಂಬಾಕೃತಿ, ಸಂಪುಟ–೧, ಸಂ: ಮಲ್ಲೇಪುರಂ ಜಿ.ವೆಂಕಟೇಶ, ಪ್ರ:ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೧೯೯೯, ಪು–೨೭೩

೨. ಅದೇ, ಪು–೨೭೩

೩. ಕುರುಬರ ಚರಿತ್ರೆ, ಲೇ: ವಿ.ಆರ್.ಹನುಮಂತಯ್ಯ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು ೧೯೯೯, ಪು–೧೨

೪. ಅದೇ, ಪು–೩೬

೫. ಬ್ಯಾಕವರ್ಡ ಕ್ಲಾಸ್ ಅಂಡ್ ಕ್ಯಾಸ್ಟ್ ಮೂವಮೆಂಟ್ ಇನ್ ಕರ್ನಾಟಕ ವಿಥ್ ಸ್ಪೆಷಲ್ ರೆಫರೆನ್ಸ್ ಟು ಕುರುಬಾಸ್, ಪಿಎಚ್‌ಡಿ ಪ್ರಬಂಧ (ಅಪ್ರಕಟಿತ), ಸಂ.ಶೋ: ಬಸವರಾಜಪ್ಪ ಪ್ರ:ಆಂಥ್ರೋಪಾಲಜಿ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ –೧೯೮೩, ಪು–೨೩೩

೬. ದಕ್ಷಿಣ ಭಾರತದ ಇತಿಹಾಸ, ಲೇ: ಪ್ರೊ. ಬಿ.ಷೇಕ್‌ಅಲಿ, ಪ್ರ: ಚೇತನ್ ಬುಕ್‌ಹೌಸ್, ಮೈಸೂರು, ೨೦೦೧, ಪು–೪೧

೭. ಸಾಮ್ರಾಜ್ಯ ಏಕತಾಯುಗ ಭಾಗ – ಒಂದು, ಪ್ರ.ಸಂ: ಆರ್.ಸಿ.ಮುಜುಂದಾರ್, ಪ್ರ:ಭಾರತೀಯ ವಿದ್ಯಾಭವನ ಬೆಂಗಳೂರು –೧೯೯೮, ಪು–೨೭೧

೮. ಅದೇ ಪು–೨೭೧

೯. ಕರ್ನಾಟಕ ಚರಿತ್ರೆ, ಸಂಪುಟ–೧ ಪ್ರ.ಸಂ: ಪ್ರೊ.ಬಿ.ಷೇಕ್‌ಅಲಿ , ಪ್ರ: ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ–೧೯೯೭, ಪು–೩೦೨

೧೦. ದಕ್ಷಿಣ ಭಾರತದ ಇತಿಹಾಸ, ಲೇ: ಪ್ರೊ. ಬಿ.ಷೇಕ್‌ಅಲಿ, ಪ್ರ: ಚೇತನ್ ಬುಕ್‌ಹೌಸ್, ಮೈಸೂರು, ೨೦೦೧, ಪು–೪೧

೧೧. ಅದೇ, ಪು–೪೨

೧೨. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಲೇ: ಡಾ.ಎಚ್.ತಿಪ್ಪೇರುದ್ರಸ್ವಾಮಿ, ಪ್ರ: ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು–೧೯೯೪, ಪು–೮೨

೧೩. ದಕ್ಷಿಣ ಭಾರತದ ಇತಿಹಾಸ, ಲೇ: ಪ್ರೊ. ಬಿ.ಷೇಕ್‌ಅಲಿ, ಪ್ರ: ಚೇತನ್ ಬುಕ್‌ಹೌಸ್, ಮೈಸೂರು – ೨೦೦೧, ಪು–೫೭

೧೪. ಅದೇ, ಪು–೫೭

೧೫. ಅದೇ, ಪು-೫೭

೧೬. ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ ಆಫ್ ಬಾಂಬೆ, ಸಂ:೨ ಲೇ: ಆರ್.ಇ.ಎಂಥೋವೆನ್, ಪ್ರ:ಏಷಿಯನ್ ಎಜುಕೇಷನ್ ಸರ್ವಿಸಸ್, ನ್ಯೂ ಡೆಲ್ಲಿ - ೧೯೯೦, ಪು-೩೧೭

೧೭. ದಕ್ಷಿಣ ಭಾರತದ ಇತಿಹಾಸ, ಲೇ: ಪ್ರೊ. ಬಿ.ಷೇಕ್‌ಅಲಿ. ಪ್ರ: ಚೇತನ್ ಬುಕ್‌ಹೌಸ್, ಮೈಸೂರು, ೨೦೦೧, ಪು-೧೧೫

೧೮. ಸಾಮ್ರಾಜ್ಯ ಏಕತಾಯುಗ ಸಂ:೩ ಭಾಗ-೧, ಪ್ರ.ಸಂ: ಆರ್.ಸಿ.ಮಜುಂದಾರ್, ಪ್ರ: ಭಾರತೀಯ, ವಿದ್ಯಾಭವನ, ಬೆಂಗಳೂರು-೧೯೯೮, ಪು-೨೬೨

೧೯. ಏನ್ಷಿಯೆಂಟ್ ಇಂಡಿಯಾ, ಲೇ:ವಿ.ಡಿ.ಮಹಾಜನ್, ಪ್ರ: ಎಸ್.ಚಾಂದ ಅಂಡ ಕಂಪನಿ ಲಿ., ನ್ಯೂಡೆಲ್ಲಿ-೧೯೯೧, ಪು-೭೦೫

೨೦. ಪಾವನ, ಸಂ: ಎಂ.ಜೈಕುಮಾರ್, ಲೇ:ಎಚ್.ಜೆ.ಲಕ್ಕಪಗೌಡ, ಪ್ರ: ಕಾಗಿನೆಲೆ ಪ್ರಸಾರಾಂಗ ಕಾಗಿನಲೆ ಮಹಾಸಂಸ್ಥಾನ ಕನಕಗುರುಪೀಠ ಬೆಂಗಳೂರು - ೧೯೯೨, ಪು-೨೦

೨೧. ಕುರುಬರ ಚರಿತ್ರೆ, ಲೇ: ಊ.ಆರ್.ಹನುಮಂತಯ್ಯ, ಪ್ರ:ಪ್ರತಿಭಾ ಪ್ರಕಾಶನ, ಮೈಸೂರು, ೧೯೯೯, ಪು-೬೪

೨೨. ಕುರುಗೋಡು ಸಿಂದರು ಒಂದು ಅಧ್ಯಯನ,ಲೇ: ಡಾ.ಚನ್ನಬಸವಯ್ಯ ಹಿರೇಮಠ ಪ್ರ: ಸಂಗಣ್ಣನವರು ಅಗಡಿ ಸಂಸ್ಕತಿ ಪ್ರತಿಷ್ಠಾನ ಕೊಪ್ಪಳ-೧೯೯೫, ಪು-೩೨

೨೩. ಅದೇ, ಪು-೩೩

೨೪. ಕರ್ನಾಟಕ ಪರಂಪರೆ, ಸಂಪಾ: ಶ್ರೀ.ಕೆ.ಸಂಪಗಿರಿರಾವ್ ಪ್ರ: ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು, ೧೯೭೦, ಪು-೩೬೮

೨೫. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ: ಡಾ.ಚನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರು ಅಗಡಿ ಸಂಸ್ಕತಿ ಪ್ರತಿಷ್ಠಾನ, ಕೊಪ್ಪಳ-೧೯೯೫, ಪು-೩೫

೨೬. ಅದೇ, ಪು-೩೫

೨೭. ಅದೇ, ಪು-೩೭

೨೮. ಕರ್ನಾಟಕ ಪರಂಪರೆ, ಸಂ: ಶ್ರೀ.ಕೆ.ಸಂಪಗಿರಿರಾವ್, ಪ್ರ: ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು, ೧೯೭೦, ಪು-೩೬೮

೨೯. ಅದೇ, ಪು-೩೬೮

೩೦. ಅದೇ, ಪು-೩೯

೩೧. ಅದೇ, ಪು-೩೬೮

೩೨. ದಕ್ಷಿಣ ಭಾರತದ ಇತಿಹಾಸ, ಲೇ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೭೦, ಪು-೩೬೮

೩೩. ಅದೇ, ಪು-೨೫೨

೩೪. ಕುರುಬರ ಹೆಜ್ಜೆಗಳು : ಒಂದು ಅಧ್ಯಯನ, ಲೇ: ಚಂದ್ರಕಾಂತ ಬಿಜ್ಜರಗಿ, ಪ್ರ: ಶೈಲಚಂದ್ರ ಪ್ರಕಾಶನ, ವಿಜಾಪುರ - ೨೦೦೬, ಪು-೩೪೯

೩೫. ಅದೇ, ಪು-೩೫೧

೩೬. ಅದೇ, ಪು-೧೫೨

೩೭. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಲೇ: ಡಾ.ಹೆಚ್.ತಿಪ್ಪೇರುದ್ರಸ್ವಾಮಿ, ಪ್ರ: ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು, ೨೦೦೧, ಪು-೧೩೫

೩೮. ಕರ್ನಾಟಕ ಚರಿತ್ರೆ, ಸಂ:೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು-೧೬

೩೯. ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಲೇ: ವಸುಂದರಾ ಫಿಲಿಯೋಜಾ, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು- ೧೯೯೯, ಪು-೩

೪೦. ಅದೇ, ಪು-೩

೪೧. ಹಾಲತೊರೆ, ಲೇ: ಶಿವಪ್ಪ ನ. ನೀರಲಗಿ, ಸಂ: ಕರಿಯಪ್ಪ, ಪ್ರ:ನಗರ ಕುರುಬರ ಸಂಘ, ದಾವಣಗೆರೆ-೨೦೦೦, ಪು- ೧೩೨

೪೨. ಅದೇ, ಪು-೧೩೩

೪೩. ಅದೇ, ಪು-೧೩೩

೪೪. ಕುರುಬರ ಚರಿತ್ರೆ, ಲೇ: ಹ.ಹನುಮಂತಯ್ಯ, ಸಂ:ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು ೧೯೯೯, ಪು- ೭೭

೪೫. ಕರ್ನಾಟಕ ಚರಿತ್ರೆ, ಸಂ.೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು- ೨೪೮

೪೬. ಅದೇ, ಪು-೨೧

೪೭. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಲೇ: ಡಾ.ಹೆಚ್.ತಿಪ್ಪೇರುದ್ರಸ್ವಾಮಿ, ಪ್ರ: ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು- ೨೦೦೧, ಪು-೧೪೦

೪೮. ಕರ್ನಾಟಕ ಚರಿತ್ರೆ, ಸಂ: ೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭, ಪು-೨೬೪

೮೮. ಅದೇ, ಪು-೨೬೫

೪೯. ಕುರುಬರ ಚರಿತ್ರೆ, ಲೇ: ವಿ.ಹನುಮಂತಯ್ಯ, ಸಂ: ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೯, ಪು-೧೬೨

೫೦. ಕರ್ನಾಟಕ ಸಂಸ್ಕತಿ ಸಮೀಕ್ಷೆ, ಲೇ: ಡಾ.ಹೆಚ್.ತಿಪ್ಪೇರುದ್ರಸ್ವಾಮಿ, ಪ್ರ: ಡಿ.ಎ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು-೨೦೦೧, ಪು-೧೬೨

೫೧. ಅದೇ, ಪು-೧೮೫

೫೨. ಹಂಡೆ ಕುರುಬರು : ಒಂದು ಅಧ್ಯಯನ ಪಿಎಚ್‌ಡಿ ಪ್ರಬಂಧ (ಅಪ್ರಕಟಿತ), ಸಂ ಶೋ: ವೈ.ಕೆ.ಗುಂಡಕರ್ಜಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨ ಪು-೧೮೫

೫೩. ಅದೇ, ಪು-೧೮೫

೫೪. ಕರ್ನಾಟಕ ಕೈಫಿಯತ್ತು, ಸಂ:ಡಾ.ಎಂ.ಎಂ.ಕಲ್ಬುರ್ಗಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ- ಪು-೫೨೫

೫೫. ಅದೇ, ಪು-೪೫೦

೫೬. ಅದೇ, ಪು-೪೫೦

೫೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ (ಬಳ್ಳಾರಿ ಜಿಲ್ಲೆ), ಸಂ:ಡಾ.ದೇವರಕೊಂಡಾರೆಡ್ಡಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೧೪೪

೫೮. ಕರ್ನಾಟಕ ಚರಿತ್ರೆ, ಸಂ:೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭, ಪು-೨೯೪

೫೯. ಅದೇ, ಪು-೩೫೪

೬೦. ಅದೇ, ಪು-೩೫೫

೬೧. ಅದೇ, ಪು-೨೯೫

೬೨. ಅದೇ, ಪು-೧೬೧

೬೩. ಅದೇ, ಪು-೨೯೬

೬೪. ಕುರುಗೋಡು ಸಿಂದರು, ಲೇ:ಡಾ.ಚನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರು ಅಗಡಿ, ಸಂಸ್ಕತಿ ಪ್ರತಿಷ್ಠಾನ, ಕೊಪ್ಪಳ-೧೯೯೫, ಪು-೧೩೭

೬೫. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು- ೧೯೯೯, ಪು-೩೬೪

೬೬. ಅದೇ, ಪು-೩೬೬

೬೭. ಕರ್ನಾಟಕ ಚರಿತ್ರೆ, ಸಂ:೩ ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ – ೧೯೯೭, ಪು-೩೧

೬೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು – ೧೯೯೯, ಪು-೩೬೯

೬೯. ಅದೇ, ಪು-೧೨೧

೭೦. ಕಳಲೆ ಮನೆತನದ ವೀರಶೈವ ದಳವಾಯಿಗಳು, ಸಂ.ಕೆ.ಎಸ್.ಶಿವಣ್ಣ, ಪ್ರ: ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು – ೧೯೯೪, ಪು-೧೨೧

೭೧. ಅದೇ, ಪು-೧೨೧

೭೨. ಕರ್ನಾಟಕ ಚರಿತ್ರೆ, ಸಂ:೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭, ಪು-೩೦೬

೭೩. ಕಳಲೆ ಮನೆತನದ ವೀರಶೈವ ದಳವಾಯಿಗಳು, ಸಂ.ಕೆ.ಎಸ್.ಶಿವಣ್ಣ, ಪ್ರ: ಜಗದ್ಗುರು, ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು-೧೯೯೪, ಪು-೧೨೧

೭೪. ಎಪಿಗ್ರಾಫಿಯ ಕರ್ನಾಟಕ, ಸಂ:೫, ಸಂ:ಹಾ.ಮಾ.ನಾಯಕ, ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು-೧೭೭೬, ಪು-೧೯೪

೭೫. ಕರ್ನಾಟಕ ಚರಿತ್ರೆ, ಸಂ:೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ – ೧೯೯೭, ಪು-೩೦೯

೭೬. ಅದೇ, ಪು-೩೦೨

೭೭. ನೇಗಿನಹಾಳ ಪ್ರಬಂಧಗಳು, ಲೇ:ಡಾ.ಎಂ.ಬಿ.ನೇಗಿನಹಾಳ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ – ೧೯೯೯, ಪು-೯೯

೭೮. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಲೇ:ಡಾ.ಎಚ್.ತಿಪ್ಪೇರುದ್ರಸ್ವಾಮಿ, ಪ್ರ: ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು – ೨೦೦೧, ಪು-೧೮೧

೭೯. ಅದೇ, ಪು-೧೮೧

೮೦. ಸಂಗೊಳ್ಳಿರಾಯಣ್ಣ, ಸಂ: ಡಾ.ಸೂರ್ಯನಾಥ ಕಾಮತ್, ಲೇ: ಸವಿಮಠದ, ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫, ಪು-೭೮

೮೧. ಅದೇ, ಪು-೮೦

೮೨. ವಿಮೋಚನೆ, ಸಂ:ಹೆಚ್.ಎಸ್.ಪಾಟೀಲ್, ಪ್ರ: ಜಿಲ್ಲಾದಲಿತ ಕೊಪ್ಪಳ-೧೯೯೯, ಪು-೨೯೭

೮೩. ಅದೇ, ಪು-೨೯೯

೮೪. ಅದೇ, ಪು-೨೫೬

೮೫. ಅದೇ, ಪು-೩೦೩

೮೬. ಮುಂಡನಗೌಡ ಪಾಟೀಲ ಕೊರಡಕೇರಾರವರು ಹೇಳಿದ ಪ್ರಕಾರ

೮೭. ಮೇಷ ವಿಜಯ, ಲೇ: ಎಂ.ಕರಿಯಪ್ಪ, ಪ್ರ:ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು-೨೦೦೧,

೮೮. ಕವಲುದಾರಿಯಲ್ಲಿ ಕರ್ನಾಟಕದ ಕುರುಬ ಜನಾಂಗ, ಲೇ: ಪ್ರೋ.ಒಡೆಯರ್, ಡಿ. ಹೆಗ್ಗಡೆ, ಪ್ರ : ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು - ೨೦೦೩, ಪುಟ-೧೧೪

೮೯. ಅದೇ, ಪು-೧೧೦

# ಅಧ್ಯಾಯ ೫

# ಸಾಮಾಜಿಕ ಜೀವನ

೫.೧ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

೫.೨ ಸಂಸ್ಕಾರಗಳು ಮತ್ತು ಸಂಪ್ರದಾಯಗಳು

## ೩.೧. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧವೇರ್ಪಡುವ ಪ್ರಕ್ರಿಯೆಯೇ ಸಾಮಾಜಿಕ ವ್ಯವಸ್ಥೆಯಾಗಿದೆ. ಪ್ರತಿಯೊಂದು ಸಮುದಾಯವು ಸಂಪ್ರದಾಯಗಳು, ಲೋಕ–ರೂಢಿಗಳು, ವಿಧಿ–ನಿಷೇಧಗಳು ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುತ್ತವೆ. ಈ ವ್ಯವಸ್ಥೆಯಲ್ಲಿ ಅನೇಕ ಉಪವ್ಯವಸ್ಥೆಗಳಿದ್ದು, ಅವು ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಅದೇ ರೀತಿ ಕುರುಬರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಲೋಕರೂಢಿ, ಸಂಪ್ರದಾಯಗಳಿವೆ. ಆಧುನಿಕತೆಯ ಪ್ರಭಾವದಿಂದ ಹಾಗೂ ಇಂದಿನ ಬದುಕಿನಲ್ಲಾದ ಹಲವಾರು ಸ್ಥಿತ್ಯಂತರಗಳಿಂದಾಗಿ ತಮ್ಮ ಮೂಲ ಸ್ವರೂಪವನ್ನು ಬಹುಮಟ್ಟಿಗೆ ಕಳೆದುಕೊಂಡಿವೆ. ಪ್ರಸ್ತುತ ಅಧ್ಯಯನದಲ್ಲಿ ಕುರುಬರ ಜಾತಿ ವ್ಯವಸ್ಥೆ, ಕುಲಗೋತ್ರ, ಆಹಾರ, ವಸತಿ, ಉಡುಗೆ–ತೊಡುಗೆ, ಕುಟುಂಬ ಪದ್ಧತಿ, ನ್ಯಾಯ ವ್ಯವಸ್ಥೆ, ವಿಧಿ–ನಿಷೇಧ ಮೊದಲಾದವುಗಳ ಕುರಿತು ಅಧ್ಯಯನವನ್ನು ಕೈಗೆತ್ತಿಗೊಳ್ಳಲಾಗಿದೆ.

### ೩.೧.೧ ಜಾತಿ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ವರ್ಣ ಪದ್ಧತಿ ರೂಪುಗೊಳ್ಳುವುದಕ್ಕೆ ಮೊದಲು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣಮಾಡಲಾಗಿತ್ತು. ಈ ವೃತ್ತಿಗಳು ವಂಶಪಾರಂಪರ್ಯವಾಗಿದ್ದವೆಂಬುದಕ್ಕೆ ಯಾವುದೇ ಆಧಾರಗಳಿಲ್ಲ. ವರ್ಣ ಎಂಬ ಶಬ್ದ ಜಾತಿಸೂಚಕವಾಗಿರಲಿಲ್ಲ. ಆದರೆ ಅದು ವಲಸೆ ಬಂದ ಆರ್ಯರ ಮತ್ತು ಇಲ್ಲಿಯ ಮೂಲನಿವಾಸಿಗಳ ನಡುವಿನ ವ್ಯತ್ಯಾಸವನ್ನು ಸೂಚಿಸುವ ಪದವಾಗಿತ್ತು. ಈ ವರ್ಣ ವ್ಯವಸ್ಥೆಯನ್ನು ಸೃಷ್ಟಿಸಿದವರು ಆರ್ಯರು ಎನ್ನುವ ವಾದವಿದೆ. ವೇದಪೂರ್ವ ಕಾಲದಲ್ಲಿ ಪಶುಪಾಲಕರು ಹಾಗೂ ಕೃಷಿಕರು ಭಾರತದಲ್ಲಿ ಮೊದಲ ವರ್ಗಕ್ಕೆ ಸೇರಿದ್ದರು. ಆದರೆ ವರ್ಣಾಶ್ರಮ ಧರ್ಮ ರೂಢಿಗೆ ಬಂದ ಮೇಲೆ ನಾಲ್ಕನೆಯ ಸ್ಥಾನಕ್ಕೆ ದೂಡಲ್ಪಟ್ಟರು. ಋಗ್ವೇದದ ಅನೇಕ ಮಂತ್ರಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ವಿಭಾಗಿಸಿರುವುದು ಕಂಡುಬರುತ್ತದೆ.[೨] ಹೀಗೆ ಕರ್ಮಾನುಗುಣವಾಗಿ ನಿರ್ಮಿತವಾದುವೆಂದು ಕಂಡುಬಂದರೂ, ನಂತರ ಕಾಲದಲ್ಲಿ ಜನ್ಮದ ಆಧಾರದ ಮೇಲೆ ಪರಿಗಣಿಸಲ್ಪಟ್ಟವು. ವರ್ಣ ವ್ಯವಸ್ಥೆಯಿಂದ ಕೂಡಿದ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಉಚ್ಚ ಸ್ಥಾನವಿದ್ದರೆ, ಗೌಡ, ಒಕ್ಕಲಿಗ, ಶೆಟ್ಟಿ, ತಂಬುಲಿಗ, ಬೇಡ, ಗಾಣಿಗ, ಅರಸ, ಕಂಚಿಗೊರವ, ಕಂಚಗಾರ, ಕಮ್ಮಾರ, ಕುಂಬಾರ, ಬಡಿಗ, ಕುರುಬ ಮೊದಲಾದವು ಅವರ ವೃತ್ತಿಗೌರವಕ್ಕನುಸರಿಸಿ ವಿವಿಧ ಸ್ಥಾನಗಳನ್ನು ಪಡೆದವು.[೩] ಹೀಗೆ ವರ್ಣ ವ್ಯವಸ್ಥೆಯಲ್ಲಿ ಅನೇಕ ಉಪಜಾತಿಗಳು ಹುಟ್ಟಿಕೊಂಡು ಪ್ರಬಲವಾದ ಜಾತಿ ವ್ಯವಸ್ಥೆಗೆ ಕಾರಣವಾದವು.

ಕುರುಬರನ್ನು ಪ್ರಥಮ ಶೂದ್ರರೆಂದು ಕರೆಯಲಾಗಿದೆ. ಇದರಿಂದ ಕುರುಬರು ವರ್ಣ ವ್ಯವಸ್ಥೆಯ ನಾಲ್ಕನೆಯ ವರ್ಗಕ್ಕೆ ಸಂಬಂಧಪಟ್ಟವರಾಗಿದ್ದರೆಂದು ತಿಳಿಯುತ್ತದೆ. ಕುರುಬರಲ್ಲಿ ಹಾಲುಮತದವರೆಂಬ ಒಂದೇ ಜಾತಿಯಿತ್ತು. ಕಾಲಾನಂತರ

ಪ್ರತಿಯೊಂದು ಜಾತಿಯಲ್ಲೂ ಧರ್ಮ, ಭಾಷೆ, ಪ್ರದೇಶ ಹಾಗೂ ಬಳಕೆಗಳನ್ನು ಆಧರಿಸಿ ಹಲವು ಉಪ ಜಾತಿಗಳಾದವು. ಪ್ರತಿಯೊಂದು ಉಪ ಜಾತಿಗಳು ತಮ್ಮದೇ ಆದ ವಿಧಿ ವಿಧಾನ, ಸಂಪ್ರದಾಯಗಳನ್ನು ಹೊಂದಿದ್ದವು. ಒಂದೇ ಪಂಗಡದೊಳಗೆ ಅನೇಕ ಕುಲ ಗೋತ್ರ ಹಾಗೂ ಬೆಡಗುಗಳನ್ನು ಸೃಷ್ಟಿಸಿಕೊಂಡವು. ಅವುಗಳೊಂದಿಗೆ ಕೊಡು ಕೊಳ್ಳುವಿಕೆ, ವಿವಾಹ ಸಂಬಂಧಗಳನ್ನು ನಡೆಸತೊಡಗಿದವು. ಹೀಗಾಗಿ ಪ್ರತಿಯೊಂದು ಉಪ ಜಾತಿಗಳು ತಾವು ಇನ್ನೊಂದು ಜಾತಿಗಿಂತ ಶ್ರೇಷ್ಠರೆಂದು ಭಾವಿಸಲಾರಂಭಿಸಿದವು. ಇಂದಿಗೂ ಹಾಲು ಮತದಲ್ಲಿರುವ ಹತ್ತಿ ಕಂಕಣ ಮತ್ತು ಉಣ್ಣೆ ಕಂಕಣದವರಲ್ಲಿ ಶ್ರೇಷ್ಠ, ಕನಿಷ್ಟ ಎಂಬ ಭಾವನೆ ಇದೆ.

"ಬ್ರಾಹ್ಮಣರಿಗಲ್ಲದೇ, ಗೊರವುಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ" ಎಂಬ ಉಲ್ಲೇಖ ಒಂದು ಶಾಸನದಲ್ಲಿದೆ.[೪] ಇದರಿಂದ ಬ್ರಾಹ್ಮಣರು ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದು, ಗೊರವರು (ಕುರುಬರು) ಕೆಳವರ್ಗ ಅಥವಾ ಶೂದ್ರರಾಗಿದ್ದರೆಂದು ತಿಳಿಯುತ್ತದೆ. ಕಾಲಾನಂತರ ಜಾತಿ ವ್ಯವಸ್ಥೆ ತನ್ನ ಕಠಿಣತೆಯನ್ನು ಉಳಿಸಿಕೊಳ್ಳಲಿಲ್ಲ. ಹೀಗಾಗಿ ಕೆಲವು ಜಾತಿಗಳು ಸಾಮಾಜಿಕ ಸ್ಥಾನಮಾನದಲ್ಲಿ ಮೇಲಕ್ಕೇರಲು ಪ್ರಯತ್ನಿಸಿದವು. ಅವುಗಳಲ್ಲಿ ಕುರುಬ ಸಮುದಾಯವೂ ಒಂದಾಗಿತ್ತು.

ಕುರುಬರು ಅನೇಕ ರಾಜ್ಯಗಳನ್ನು ನಿರ್ಮಿಸಿ ಕ್ಷತ್ರಿಯ ಸ್ಥಾನಮಾನ ಪಡೆದರು. ಅವರ ಜೀವನ ರೀತಿ ಸಂಪೂರ್ಣವಾಗಿ ಬದಲಾಯಿತು. ಮಧ್ಯಯುಗದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹಕ್ಕ–ಬುಕ್ಕರು ಹಾಗೂ ಹಂಡೆ ಪಾಳೆಯಗಾರರು ಜಾತಿವ್ಯವಸ್ಥೆಯಲ್ಲಿ ಉತ್ತಮ ಸ್ಥಾನ ಪಡೆದರು. ವಿಜಯನಗರ ಅರಸರ ಕಾಲದಲ್ಲಿ ಜಾತಿ ವ್ಯವಸ್ಥೆ ಸಡಿಲಗೊಂಡಿತು. ಕೆಲವೊಂದು ಶಾಸನಗಳು ಕುರುಬರು ಅನೇಕ ದೇವಾಲಯಗಳನ್ನು ನಿರ್ಮಿಸಿದರಲ್ಲದೆ, ದಾನ ದತ್ತಿಗಳನ್ನು ಬಿಟ್ಟ ಬಗ್ಗೆ ಉಲ್ಲೇಖಿಸುತ್ತವೆ. ಹೀಗಾಗಿ ಮದ್ಯ ಯುಗದಲ್ಲಿ ಕ್ಷತ್ರಿಯರಾಗಿದ್ದವರು ಉತ್ತಮ ಸ್ಥಾನ ಹೊಂದಿದ್ದರೆ, ಕುರಿಸಾಕಾಣಿಕೆ, ಕೃಷಿಯನ್ನು ಅವಲಂಬಿಸಿದವರು ಕೆಳವರ್ಗವಾಗಿ ಜೀವನ ನಡೆಸಿದರು. ಕುರುಬರಿಗೆ ಪ್ರತ್ಯೇಕ ಕೇರಿಗಳಿದ್ದವೆಂದು ಕುರುಬಗೇರಿ, ಕುರುಬರ ಬೀದಿ, ಕುರುಬರ ನಾಡು ಎಂಬ ಹೆಸರುಗಳು ಶಾಸನಗಳಲ್ಲಿ ದೊರೆಯುವುದರಿಂದ ತಿಳಿಯುತ್ತದೆ. ಇಂದಿಗೂ ಪ್ರತಿಯೊಂದು ಗ್ರಾಮದಲ್ಲಿ ಕುರುಬರ ಓಣಿ, ಕುರುಬರ ಬೀದಿಗಳಿರುವುದು ಕಂಡುಬರುತ್ತದೆ. ಕುರುಬರು ಉತ್ತಮವಾದ ಸಂಪ್ರದಾಯ ಹಾಗೂ ಸಂಸ್ಕಾರಗಳನ್ನು ಹೊಂದಿದ್ದಾರಲ್ಲದೆ, ಉತ್ತಮ ಜೀವನ ರೀತಿಯನ್ನು ಅಳವಡಿಸಿಕೊಂಡು ಬಂದಿದ್ದಾರೆ. ಕಾಲಕಾಲಕ್ಕೆ ಅನೇಕ ಉದ್ಯೋಗಗಳನ್ನು ನಿರ್ವಹಿಸಿದರು. ಇಂದಿನ ಜಾತಿವ್ಯವಸ್ಥೆಯಲ್ಲಿ ಬ್ರಾಹ್ಮಣ, ಲಿಂಗಾಯತ ನಂತರ ಕುರುಬರಿಗೆ ಗೌರವಯುತ ಸ್ಥಾನನೀಡಿರುವುದು ಕಂಡುಬರುತ್ತದೆ.

**೫.೧.೨ ಕುಲಗೋತ್ರಗಳು**

ಪ್ರಾಚೀನ ಕಾಲದಲ್ಲಿ ಮಾನವ ಗುಂಪುಗಳು ವಿವಿಧ ಭೌಗೋಳಿಕ ಪ್ರದೇಶಗಳಿಗೆ ವಲಸೆಹೋಗಿ ಅನೇಕ ವೃತ್ತಿಗಳನ್ನು ಕೈಗೊಂಡವು. ತಮ್ಮ ಗುಂಪುಗಳನ್ನು ಒಂದೊಂದು ಮರ, ಪಕ್ಷಿ, ಬಂಡೆ, ಪಶು ಮೊದಲಾದ ಸಂಕೇತಗಳ ಮೂಲಕ ಗುರುತಿಸಿಕೊಳ್ಳತೊಡಗಿದವು. ನಂತರ ಅವು ಕುಲಸಂಕೇತಗಳಾಗಿ ರೂಪುಗೊಂಡವು. ಅವುಗಳು ಕೇವಲ ಗುರುತಿನ ಕುರುಹುಗಳಾಗಿರದೆ ಅವರ ಪಾಲಿಗೆ ಆರಾಧಿಸುವ ಪವಿತ್ರ ವಸ್ತುಗಳಾದವು. ಇದು ಜನಪದ ದೃಷ್ಟಿಯಿಂದ ತುಂಬವಿಶಿಷ್ಟ ಪ್ರಕ್ರಿಯೆಯಾಗಿದ್ದು, ಇದನ್ನೇ ಕುಲ ಸಂಕೇತಾರಾಧನೆ ಎಂದು ಗುರುತಿಸಲಾಗಿದೆ.

ಕುಲ, ಗೋತ್ರ, ಬರಿ, ಬಳಿ ಮೊದಲಾದ ಪದಗಳು ವಂಶದ ಅರ್ಥವನ್ನು ಸೂಚಿಸುವ ಪದಗಳಾಗಿವೆ. ಬ್ರಾಹ್ಮಣರು ಗೋತ್ರ ಎಂದು, ಬ್ರಾಹ್ಮಣೇತರರು ವಂಶ, ಕುಲ, ಬಳಿ ಎಂದು ಕರೆಯುತ್ತಾರೆ.[೫] ಕುರುಬರಲ್ಲಿ ಅನೇಕ ಕುಲ ಗೋತ್ರಗಳಿವೆ. ಆರ್ಯ ಪೂರ್ವ ಕಾಲದಲ್ಲಿ ದ್ರಾವಿಡರಾಗಿದ್ದ ಕುರುಬರು ಪ್ರಕೃತಿಯ ಆರಾಧಕರಾಗಿದ್ದರು. ಇದರಿಂದಾಗಿ ಪ್ರಾಣಿ, ಪಕ್ಷಿಗಳು, ಗಿಡಮರ, ಎಲೆಬಳ್ಳಿ, ದವಸಧಾನ್ಯ, ಮೊದಲಾದ ಮೂಲಗಳಿಂದ ಮೂಡಿ ಬಂದ ಬೆಡಗುಗಳಿದ್ದವು.[೬] ನಂತರ ಆರ್ಯರ ಆಕ್ರಮಣವಾದ ಮೇಲೆ ದ್ರಾವಿಡರಿಂದ ಆರ್ಯರಾಗಿ ಪರಿವರ್ತನೆಗೊಂಡ ಕುರುಬರು ಆರ್ಯ ಮೂಲದಿಂದ ಬಂದ ಅನೇಕ ಗೋತ್ರಗಳನ್ನು ಹೊಂದಿದರು ಹೀಗಾಗಿ ಇಂದಿಗೂ ಕರುಬರಲ್ಲಿ ಎರಡು ರೀತಿಯ ಕುಲ-ಗೋತ್ರಗಳಿವೆ.

ಗೋತ್ರವೆಂದರೆ ಒಬ್ಬ ಪ್ರಾಚೀನ ಪುರುಷನಿಂದ ಆರಂಭಗೊಂಡು ಮುಂದುವರೆಯುತ್ತ ಬಂದ ಆತನ ವಂಶವಾಹಿನಿಯೆಂದು ಹೇಳಬಹುದು. ಪುರಾಣದಲ್ಲಿ ಕೌರಭ ಋಷಿಯ ತಪಸ್ಸಿನ ಫಲವಾಗಿ ಕುರುಬ ಸಮುದಾಯ ಸೃಷ್ಟಿಯಾಯಿತು ಎಂದು ತಿಳಿಯುತ್ತದೆ.[೭] ಈ ಕೌರಭನಿಂದ ಕೌಂಡಿಲ್ಯ, ಪೃಥುಕ, ಶೃಣಿ, ಮಹಾಬಲ, ಗಣಕ, ವಿಭ್ರಾಜಿತ, ಕುಶಲ, ಪ್ರಭಾವ, ಕರುಣ, ಪ್ರಬಲ ಹಾಗೂ ವಿಭಾಗ ಎಂಬ ಪುರುಷರು ಜನಿಸಿದರು.[೮] ಇವರ ಹೆಸರಿನಿಂದ ಕುರುಬರ ಗೋತ್ರಗಳು ಗುರುತಿಸಲ್ಪಟ್ಟವು. ಅವು ಮುಂದೆ ಕೌಂಡಿಲ್ಯಗೋತ್ರ, ಪೃಥುಕಗೋತ್ರ, ಶೃಣಿಗೋತ್ರ, ಮಹಾಬಲಗೋತ್ರ, ಗಣಕಗೋತ್ರ, ವಿಭಾಜಿತಗೋತ್ರ, ಕುಶಲಗೋತ್ರ, ಪ್ರಭಾವಗೋತ್ರ, ಕರುಣಗೋತ್ರ, ಪ್ರಬಲಗೋತ್ರ ಹಾಗೂ ವಿಭಾಗಗೋತ್ರಗಳೆಂದು ಕರೆಯಲ್ಪಟ್ಟವು. ಈ ಗೋತ್ರಗಳು ಋಷಿಮುನಿಗಳಿಂದ ಗುರುತಿಸಲ್ಪಡುವದರಿಂದ ಆರ್ಯ ಮೂಲದ ಗೋತ್ರಗಳಾಗಿರುವದು ಕಂಡುಬರುತ್ತದೆ.

ಕುರುಬರ ಮೂಲಗುರುವಾದ ರೇವಣಸಿದ್ಧೇಶ್ವರ ಈ ಕುಲದವರನ್ನು ನಾಲ್ಕು ಸೇರು ಭತ್ತದ ಧಾನ್ಯದಷ್ಟು ಗೋತ್ರಗಳನ್ನಾಗಿ ವಿಂಗಡಿಸಿದನು. ಅವುಗಳಿಗೆ ಪ್ರಾಣಿ ಸಸ್ಯಗಳ ಹಾಗೂ ಕೆಲವೊಂದು ಕ್ಷುಲ್ಲಕ ವಸ್ತುಗಳ ಹೆಸರುಗಳನ್ನು ನೀಡಿದನು.[೯] ಅವು ಮುಂದೆ ಮಾನವ ವಂಶಗಳನ್ನು ಗುರುತಿಸಲು ಸಹಾಯಕವಾದವು ಎಂದು ಹಾಲುಮತ ಪುರಾಣದಲ್ಲಿ ಉಲ್ಲೇಖವಿದೆ. ಆದರೆ ಇನ್ನೊಂದು ಅಭಿಪ್ರಾಯದ ಪ್ರಕಾರ ಮಾನವ ಸಮುದಾಯಗಳಲ್ಲಿ ಒಂದೇ ರಕ್ತ ಸಂಬಂಧಿಗಳಲ್ಲಿ ಹಲವು ತಲೆಮಾರುಗಳ ಕಾಲ ವಿವಾಹ ಸಂಬಂಧಗಳು ಏರ್ಪಡುತ್ತಿದ್ದವು. ಇದು ಸಮುದಾಯದ ದೈಹಿಕ ಹಾಗೂ ಮಾನಸಿಕ ಕ್ಷೀಣತೆ ಮೊದಲಾದ ತೊಂದರೆಗಳಿಗೆ ಕಾರಣವಾದ ಮೇಲೆ ಭವಿಷ್ಯದ ದೃಷ್ಟಿಯಿಂದ ಈ ಸಂಬಂಧ ಸೂಕ್ತವಲ್ಲ ಎಂಬ ನಿರ್ಧಾರಕ್ಕೆ ಬಂದರು. ಆದ್ದರಿಂದ ಸಪಿಂಡ, ಸೋದರ ಪಿಂಡಗಳ ವಿವಾಹ ಪ್ರಕ್ರಿಯೆಯನ್ನು ತಡೆಯುವ ಉದ್ದೇಶದಿಂದ ಬೆಡಗುಗಳನ್ನು ವಿಂಗಡಿಸಿದರು.[೧೦] ಕೆಲವು ಬೆಡಗುಗಳನ್ನು ಸೋದರ ಬೆಡಗುಗಳ ಹಾಗೂ ಅಡ್ಡದಾಯಾದಿ ಬೆಡಗುಗಳು ಎಂದು ವಿಂಗಡಿಸಿ ಅವುಗಳ ನಡುವೆ ಪರಸ್ಪರ ವಿವಾಹ ಸಂಬಂಧವನ್ನು ನಿಷೇಧಿಸಿದರು. ಹೀಗಾಗಿ ಇಂದಿಗೂ ಒಂದೇ ಬೆಡಗಿನವರು ವಿವಾಹವಾಗುವುದಿಲ್ಲ, ಬೇರೆ ಬೇರೆ ಬೇಡಗುಗಳಾದರೆ ಮಾತ್ರ ಸಂಬಂಧ ಬೆಳೆಸಬಹುದಾಗಿದೆ.

ಕುರುಬರಲ್ಲಿ ಅಸಂಖ್ಯಾತ ಬೆಡಗುಗಳಿವೆ, ಪ್ರಾಣಿ-ಪಕ್ಷಿಗಳು, ಗಿಡ-ಮರ, ಎಲೆ-ಬಳ್ಳಿ, ದವಸದಾನ್ಯ, ರಾಜಮನೆತನ ಮೊದಲಾದವುಗಳಿಗೆ ಸಂಬಂಧಿಸಿದ ಬೆಡಗುಗಳಿವೆ, ಕುರುಬರಲ್ಲಿರುವ ಬೆಡಗುಗಳು ಎಷ್ಟೆಂದು ಸ್ಪಷ್ಟವಾಗಿ ಹೇಳುವುದು ಕಷ್ಟಸಾಧ್ಯ. ಆದರೂ ಕೆಲವು ವಿದ್ವಾಂಸರು ಅನೇಕ ಬೇಡಗುಗಳನ್ನು ಗುರುತಿಸಿದ್ದಾರೆ. ಗ್ರಾಮೀಣ ಜನರ ಭಾಷೆ ಮತ್ತು ಉಚ್ಚಾರಣೆ ಸಮಸ್ಯೆಯಿಂದ ಒಂದು ಬೆಡಗಿನಿಂದಲೇ ಅನೇಕ ಉಪಬೆಡಗುಗಳಾಗಿರುವ ಸಾಧ್ಯತೆಯಿದೆ, ಉದಾ:-ಸಕಲೆ ಎಂಬ ಬೆಡಗಿನಿಂದ

ಸಕ್ರಲ, ಸಟ್ಟಿಲು, ಸಡ್ಡೆಲು ಎಂಬ ಉಪಬೆಡಗುಗಳಾಗಿವೆ. ಹೀಗಾಗಿ ಕುರುಬರಲ್ಲಿ ಸುಮಾರು ೪೫೦ ಬೆಡಗುಗಳಿವೆ ಎಂಬ ಅಭಿಪ್ರಾಯವಿದೆ.

ಕುರುಬರಲ್ಲಿರುವ ಪ್ರತಿ ಕುಲ ಅಥವಾ ಪ್ರತಿ ಬೆಡಗು ತನ್ನದೇ ಆದ ಸಾಮಾಜಿಕ ನೆಲೆ, ಸ್ಥಾನಮಾನ ಹಾಗೂ ಇಡಿ ಜಾತಿಯನ್ನೇ ನಿರ್ವಹಿಸುವ ಗುಣಹೊಂದಿದೆ. ಈ ಹಿನ್ನೆಲೆಯಲ್ಲಿ ಕುರುಬರ ಬೆಡಗುಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

### ೫.೧.೨ ರಾಜ ಮನೆತನಕ್ಕೆ ಸಂಬಂಧಿಸಿದ ಬೆಡಗುಗಳು

#### ೧. ಕದಂ

ಬೆಳಗಾಂ, ನಿಪ್ಪಾಣಿ ಪ್ರದೇಶದ ಕುರುಬರಲ್ಲಿ ಕದಂ ಎಂಬ ಬೆಡಗಿದೆ. ಈ ಕದಂ ಎಂಬ ಬೆಡಗು ಕದಂಬ ಎಂಬ ಬೆಡಗಾಗಿ ಪರಿವರ್ತನೆಗೊಂಡಿದೆ ಎಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ. ಹೀಗಾಗಿ ಕದಂ ಎಂಬ ಶಬ್ದ ಕದಂಬ ಆಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[೧೧]

#### ೨. ಅಸಲು

ಕರ್ನಾಟಕದ ಕುರುಬರಲ್ಲಿ, ಮಹಾರಾಷ್ಟ್ರದ ಧನಗಾರರಲ್ಲಿ ಅಸಲು ಧನಗಾರರು ಅಥವಾ ಕುರುಬರು ಎಂಬ ಬೆಡಗಿದೆ. ಅಸಲು ಎಂಬ ಬೆಡಗಿನವರನ್ನು ಅಸಲರು ಎಂದು ಕರೆಯಲಾರಂಭಿಸಿದರು. ನಂತರದ ಕಾಲದಲ್ಲಿ ಅಸಲರು > ಹೊಸಲರು > ಹೋಸಲರು > ಹೋಯ್ಸಳರು > ಹೊಯ್ಸಳರು ಎಂಬ ರೂಪಾಂತರವಾಗಿದೆ ಎಂಬ ಅಭಿಪ್ರಾಯವಿದೆ.[೧೨]

#### ೩. ಬಿಜ್ಜಳ

ಕುರುಬರಲ್ಲಿ ಬಿಜ್ಜಳ ಎಂಬ ಬೆಡಗಿದೆ. ಇದು ಕಲ್ಯಾಣದ ಕಲಚೂರಿಗಳ ಅರಸರಾದ ಬಿಜ್ಜಳರ ವಂಶವನ್ನು ಸೂಚಿಸುತ್ತದೆ.[೧೩]

#### ೪. ಸಂಗಮ

ವಿಜಯನಗರ ಸಾಮ್ರಾಜ್ಯದ ಪ್ರಮುಖ ವಂಶ, ಇದರ ಸ್ಥಾಪಕರು ಸಂಗಮನ ಮಕ್ಕಳಾದ ಹಕ್ಕ ಮತ್ತು ಬುಕ್ಕ ಸಹೋದರರು. ಇವರು ಕುರುಬರು ಎಂಬುದಕ್ಕೆ ಅನೇಕ ಆಧಾರಗಳಿವೆ.[೧೪] ಕುರುಬರ ಸಂಗಮ ಬೆಡಗು ಸಂಗಮ ವಂಶದವರು ಕುರುಬರು ಎಂದು ಸೂಚಿಸುತ್ತದೆ.

#### ೫. ಅರಸು

ಕುರುಬರಲ್ಲಿ ಅರಸು ಎಂಬ ಬೆಡಗಿದೆ. ಒಡೆಯರನ್ನು ಅರಸು ಕುಲವರೆಂದು ಕರೆಯಲಾಗಿದೆ. ಕುರುಬರ ಕುಲಗುರುಗಳನ್ನು ಒಡೆಯರು ಎಂದು ಕರೆಯಲಾಗಿದೆ. ಇದು ಮೈಸೂರಿನ ಒಡೆಯರು ಈ ಕುಲಕ್ಕೆ ಸಂಭಂದಪಟ್ಟವರೆಂದು ಸೂಚಿಸುತ್ತದೆ.[೧೫]

**೬. ಹಂಡೆ ವಜೀರ್**

ಈ ಬೆಡಗು ಹಂಡೆ ಕುರುಬರಲ್ಲಿದೆ. ಹಂಡೆ ಕುರುಬರು ಪಾಳೆಯಗಾರರಾಗಿ ಬಳ್ಳಾರಿ ಮತ್ತು ಅನಂತಪುರವನ್ನು ಆಳಿದರು ಎಂಬುವದಕ್ಕೆ ಆಧಾರಗಳಿವೆ.

**೭. ಸಾಮಂತ ಕುಲ**

ಕುರುಬರ ಸಾಮಂತ ಕುಲ ಪುರೋಹಿತ ವರ್ಗಕ್ಕೆ ಸಂಬಂಧಪಟ್ಟಿದೆ.[೧೬] ಈ ವರ್ಗದ ಮುಖ್ಯಸ್ಥರು ಜಾತಿಯ ಪಂಚಾಯತಿ ಸೇರಿದಾಗ ನ್ಯಾಯ ತೀರ್ಮಾನಿಸುವ, ಶಿಕ್ಷೆವಿಧಿಸುವ ಕಾರ್ಯ ನಿರ್ವಹಿಸುತ್ತಾರೆ. ಮಧ್ಯಯುಗದ ಕುರುಬರಲ್ಲಿ ಅನೇಕರು ಸಾಮಂತರಾಗಿ ಅಧಿಕಾರ ನಡೆಸಿದ್ದರು.

**೮. ಝೇಂಡಾ ಕುಲ**

ಈ ಕುಲದವರು ರಾಜರ ಕಾಲದಲ್ಲಿ ಮಹಾರಾಜರ ಮುಂದೆ ಝೇಂಡಾ ಹಿಡಿಯುವ ವೃತ್ತಿನಿರತರಾಗಿದ್ದರು. ಇವರು ಶಿವಾಜಿಯ ಕಾಲದಲ್ಲಿ ಕಂಡುಬರುತ್ತಾರೆ.[೧೭]

**೯. ಗೌಡ ಕುಲ**

ಗೌಡರನ್ನು ಗಾವುಂಡರೆಂದು ಕರೆಯಲಾಗುತ್ತಿತ್ತು. ಕುರುಬರು ಹಿಂದಿನ ಕಾಲದಿಂದಲೂ ಗೌಡರಾಗಿ ಒಂದು ಗ್ರಾಮದ ಅಧಿಕಾರವನ್ನು ನಿರ್ವಹಿಸಿದ್ದಾರೆ. ಬೀರಯ್ಯಗಾವುಂಡ, ರೇವಯ್ಯಗಾವುಂಡ ಎಂಬ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ.[೧೮]

**೧೦. ರಾಜ ಕುಲ**

ಕುರುಬರಲ್ಲಿ ರಾಜಕುಲವಿದೆ. ಇದು ಕುರುಬರು ರಾಜರಾಗಿ ಅನೇಕ ರಾಜವಂಶಗಳನ್ನು ನಿರ್ಮಿಸಿ ಆಳ್ವಿಕೆ ನಡೆಸಿದರೆಂದು ಸ್ಪಷ್ಟಪಡಿಸುತ್ತದೆ.

**೧೧. ದೇವರಿಗೆ ಸಂಬಂಧಿಸಿದ ಬೆಡಗುಗಳು**

ಕುರುಬರಲ್ಲಿ ಕೆಲವು ಬೆಡಗುಗಳು ಅವರ ದೇವರ ಹೆಸರುಗಳನ್ನು ಸೂಚಿಸುತ್ತವೆ. ಅವುಗಳಲ್ಲಿ ಬೀರ, ಅಮೋಘ, ಸಿದ್ಧನ, ಕನಕಯ್ಯ, ಬಸವ, ಯಮ, ಲಿಂಗ, ಶಿವ, ಸೂರ್ಯ ಹಾಗೂ ದೇವಕುಲ ಎಂಬ ಬೆಡಗುಗಳಿವೆ.[೧೯]

**೧೨. ಪ್ರಾಣಿ ಮೂಲಕ್ಕೆ ಸಂಬಂಧಿಸಿದ ಬೆಡಗುಗಳು**

ಕೆಲವು ಬೆಡಗುಗಳು ಪ್ರಾಣಿಗಳ ಹೆಸರುಗಳನ್ನು ಸೂಚಿಸುತ್ತವೆ. ಅವುಗಳಲ್ಲಿ ಕುರಿ, ಜಲಕಪ್ಪೆ, ತಗರಿನ, ನಾಯಿ, ಬಿಳಿಕುರಿ, ಮೊಲ, ಹೋರಿ, ಎಮ್ಮೆ, ಚೇಳು, ನವಿಲು, ನಾಗ, ಮಂಗ, ಹಾವಿನ, ಹೆಬ್ಬುಲಿ,ಆನೆ, ಮೊದಲಾದಬೆಡಗುಗಳಿವೆ.[೨೦]

### ೧೩. ಸಸ್ಯ ಮೂಲಕ್ಕೆ ಸಂಬಂಧಿಸಿದ ಬೆಡಗುಗಳು

ಕೆಲವು ಬೆಡಗುಗಳು ಸಸ್ಯಗಳ ಹೆಸರುಗಳನ್ನು ಸೂಚಿಸುತ್ತವೆ. ಅವುಗಳಲ್ಲಿ ಬೇವಿನ, ಮಲ್ಲಿಗೆ, ಮಂದಾರ, ಮಾವಿನ, ಮೆಣಸಿನ, ಸಂಪಿಗೆ, ಸೇವಂತಿಗೆ, ಮೊದಲಾದ ಬೆಡಗುಗಳಿವೆ.[೨೦]

### ೧೪. ಆಹಾರ ಸಂಬಂಧಿ ಬೆಡಗುಗಳು

ಕೆಲವು ಬೆಡಗುಗಳು ಕುರುಬರ ಆಹಾರ ಪದ್ಧತಿಯನ್ನು ಸೂಚಿಸುತ್ತವೆ. ಅವುಗಳಲ್ಲಿ ಮಜ್ಜಿಗೆ, ಸಣ್ಣಕ್ಕಿ, ಹಾಲು, ಸೊಪ್ಪಿನ, ಹುಗ್ಗಿ, ಹುಣಸೆ, ಹುರುಳಿ, ಉಪ್ಪಿನ, ಬಳ್ಳೊಳ್ಳಿ, ಮಾವಿನ, ಮೆಣಸಿನ, ಬಾಳೆ, ಮೊದಲಾದ ಬೆಡಗುಗಳಿವೆ.[೨೧]

ಈ ಬೆಡಗುಗಳಲ್ಲದೆ ಇನ್ನೂ ಅನೇಕ ಬೆಡಗುಗಳಿವೆ. ಈ ಕುಲಗಳು ಅಥವಾ ಬೆಡಗುಗಳು ವ್ಯಕ್ತಿ ಪರಸ್ಪರವಾಗಿ ಕಾರ್ಯ ಮಾಡುವುದನ್ನು ಆಧರಿಸಿವೆ. ಇವುಗಳು ಕುರುಬರ ವೈವಾಹಿಕ ಸಂಬಂಧ ಸ್ಥಾಪನೆಗೆ ನೆರವಾಗುವವಲ್ಲದೆ, ಅವರ ಧರ್ಮಾಚರಣೆಯ ಜೀವನವನ್ನು ನಿಯಂತ್ರಿಸುತ್ತವೆ.[೨೨] ಒಟ್ಟಾರೆ ಬೆಡಗುಗಳು ಕುರುಬರ ಸಾಮಾಜಿಕ ಜೀವನದಲ್ಲಿ ಪ್ರಮುಖ ಸ್ಥಾನ ಪಡೆದಿರುವುದು ಸ್ಪಷ್ಟ.

### ೫.೧.೪ ಕುಟುಂಬ ಪದ್ಧತಿ

ಕುಟುಂಬವು ಸಮಾಜದ ಒಂದು ಅವಿಭಾಜ್ಯ ಅಂಗ, ಮಾನವನ ಜೀವನ ಸುಗಮವಾಗಿ ನಡೆಯಲು ಕುಟುಂಬವು ಅನಿವಾರ್ಯ ಮತ್ತು ಅವಶ್ಯಕ . ಒಂದು ಕುಟುಂಬವು ಸಾಮಾಜಿಕವಾಗಿ, ಧಾರ್ಮಿಕವಾಗಿ ಬಹಳ ಪ್ರಮುಖ ಪಾತ್ರ ವಹಿಸುತ್ತದೆ. ಮಾನವನಿಗೆ ಸಮಾಜದಲ್ಲಿ ಗೌರವ ಹಾಗು ಹುಟ್ಟಿದ ಮಗುವಿಗೆ ಸಂಸ್ಕಾರ ದೊರೆಯುವುದು ಕುಟುಂಬದಿಂದಲೇ ಸಾಧ್ಯ. ಹೀಗಾಗಿ ನಾಗರಿಕತೆಗೆ ಸಮಾಜ ತಳಹದಿಯಾದರೆ ಸಮಾಜಕ್ಕೆ ಕುಟುಂಬವೇ ಮೂಲವಾಗಿದೆ. ಒಟ್ಟಾರೆ ಕುಟುಂಬ ಅಸ್ತಿತ್ವವಿಲ್ಲದ ಸಮಾಜವನ್ನು ಊಹಿಸುವುದು ಕಷ್ಟ.

ಕುರುಬರ ಕುಟುಂಬ ಪದ್ಧತಿ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಕುರುಬರದು ಮೂಲತ: ಪಿತೃ ಪ್ರಧಾನವಾದ ಅವಿಭಕ್ತ ಕುಟುಂಬ ಪದ್ಧತಿ. ಆದರೆ ಪ್ರಾಚೀನಕಾಲದಲ್ಲಿ ಮಾತೃಪ್ರಧಾನವಾದ ಕುಟುಂಬ ವ್ಯವಸ್ಥೆಯಿತ್ತೆಂದು ತಿಳಿಯುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಆರ್ಯರ ಆಕ್ರಮಣಕ್ಕಿಂತ ಪೂರ್ವದಲ್ಲಿ ದ್ರಾವಿಡರಲ್ಲಿತ್ತು. ಕುಟುಂಬದ ವ್ಯವಸ್ಥೆಯಲ್ಲಿ ಅಧಿಕಾರವು ತಾಯಿಯ ಕೈಯಲ್ಲಿರುತ್ತದೆ. ಕುಟುಂಬದ ಎಲ್ಲಾ ಸದಸ್ಯರ ಮೇಲೆ ತಾಯಿಯ ನಿಯಂತ್ರಣವಿರುತ್ತದೆ. ಹೀಗಾಗಿ ಈ ಕುಟುಂಬದಲ್ಲಿ ತಂದೆಗಿಂತ ತಾಯಿ ಪ್ರಧಾನಳಾಗಿರುತ್ತಾಳೆ. ಹಿರಿಯ ಸದಸ್ಯಳಾದ ತಾಯಿಗೆ ಮೊದಲ ಗೌರವ ಸಲ್ಲುತ್ತದೆ. ಮದುವೆ, ಸೀಮಂತ, ಮೊದಲಾದ ಶುಭಕಾರ್ಯಗಳಲ್ಲಿ ಕುಟುಂಬದ ಹಿರಿಯ ತಾಯಿಯು ಪ್ರಮುಖ ಗೌರವ ಪಡೆಯುತ್ತಾಳೆ. ಇವಳು ವಿಧವೆ ಅಥವಾ ಮುತ್ತೈದೆ, ಎಂಬುದು ಮುಖ್ಯವಾಗುವುದಿಲ್ಲ.[೨೩] ಅವಳು ಕುಟುಂಬದ ಹಿರಿಯ ತಾಯಿ ಎಂಬುದು ಮಾತ್ರ ಇಲ್ಲಿ ಪ್ರಧಾನವಾಗಿರುತ್ತದೆ.

ಮಾತೃಪ್ರಧಾನ ಕುಟುಂಬಗಳಲ್ಲಿ ಮಾತೃ ಗೃಹನಿವಾಸದ ಪದ್ಧತಿ ಆಚರಣೆಯಲ್ಲಿರುತ್ತದೆ. ವಿವಾಹದನಂತರ ದಂಪತಿಗಳು

ಹೆಣ್ಣಿನ ತಾಯಿಯ ಮನೆಯಲ್ಲಿಯೇ ವಾಸಿಸುತ್ತಾರೆ. ಇವರಿಗೆ ಜನಿಸುವಂತ ಮಕ್ಕಳು ತಾಯಿಯ ಕುಟುಂಬಕ್ಕೆ ಸೇರುವುದರಿಂದ ಅವರ ಲಾಲನೆ–ಪಾಲನೆ ತವರಿನಲ್ಲಿಯೇ ನಡೆಯುತ್ತದೆ. ಈ ಕುಟುಂಬದ ಸದಸ್ಯರುಗಳ ಸ್ಥಾನ ಮತ್ತು ಹೆಸರು ಸ್ತ್ರೀಯರ ಕಡೆಯಿಂದಲೇ ನಿರ್ಧಾರವಾಗುತ್ತದೆ. ಹೀಗಾಗಿ ಆಸ್ತಿ, ಅಧಿಕಾರಿಗಳ ಉತ್ತರಾಧಿಕಾರ ತಾಯಿಯಿಂದ ಮಗಳಿಗೆ ವರ್ಗವಾಗುತ್ತದೆ.

ಮನುಷ್ಯನ ಬದುಕಿನ ಆಗುಹೋಗುಗಳಿಗೆ ಸ್ತ್ರೀ ಪ್ರೇರಕ ಶಕ್ತಿಯೆಂದು ನಂಬಿದರಲ್ಲದೆ, ಹೆಣ್ಣನ್ನು ಶಕ್ತಿಯ ಮೂಲ, ಆದಿಶಕ್ತಿ, ಜಗನ್ಮಾತೆ ಎಂದು ಭಾವಿಸಿದರು. ಯಲ್ಲಮ್ಮ, ಹುಲಿಗೆಮ್ಮ, ಗಾಳೆಮ್ಮ, ದುರ್ಗಮ್ಮ, ಮೊದಲಾದ ಮಾತೃದೇವತೆಗಳನ್ನು ಆರಾಧಿಸತೊಡಗಿದರು. ಈ ಗ್ರಾಮದೇವತೆಗಳ ಹೆಸರಿನ ಮುಂದೆ ಅವ್ವ ಅಥವಾ ಅಮ್ಮ ಎಂದಿರುತ್ತದೆ. ಈಪದಗಳು ಮಾತೃತ್ವವನ್ನೇ ಪ್ರಧಾನವಾಗಿ ಸೂಚಿಸುತ್ತವೆ.[೨೫] ಇಂದಿಗೂ ಕುರುಬರು ಅನೇಕ ಸ್ತ್ರೀ ದೇವತೆಗಳನ್ನು ಆರಾಧಿಸುತ್ತಾರೆ. ಇದರಿಂದಾಗಿ ಮಾತೃ ಪ್ರಧಾನ ವ್ಯವಸ್ಥೆ ರೂಢಿಯಲ್ಲಿದೆ ಎಂದು ಹೇಳಬಹುದು.

ಇಂದಿನ ಆಧುನಿಕ ಮಧ್ಯಯುಗದಲ್ಲಿ ಶ್ರೀಮಂತ ಗಣ್ಯವರ್ಗಕ್ಕೆ ಸೇರಿದ ಮಹಿಳೆಯರು ತಮ್ಮ ಗೃಹ ಕೃತ್ಯಕ್ಕಷ್ಟೇ ಸೀಮಿತರಾಗದೆ ಕುಟುಂಬದ ಇತರ ಸದಸ್ಯರೊಂದಿಗೆ ಸಂಸ್ಕಾರಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳಲ್ಲೂ ಪಾಲುಗೊಳ್ಳುತ್ತಿದ್ದರು.[೨೬] ಕ್ರಿ.ಶ. ೧೭೬೫ ರಿಂದ ೧೭೯೫ ರವರೆಗೂ ಅಹಲ್ಯಾಬಾಯಿಯು ಮರಾಠ ಧನಗಾರರ ಹೋಳ್ಕರ್ ಮನೆತನವನ್ನು ಆಳಿದಳು . ಸುಮಾರು ೨೦ ವರ್ಷಗಳಕಾಲ ಅತ್ಯುತ್ತಮವಾಗಿ ಆಳ್ವಿಕೆ ನಡೆಸಿದಳು. ಅಹಲ್ಯಾಬಾಯಿಯು ತನ್ನ ಮಗಳಾದ ಮುಕ್ತಾಬಾಯಿಯ ಮದುವೆ ಮಾಡಿ ಅಳಿಯನನ್ನು ಮನೆಯಲ್ಲಿಟ್ಟುಕೊಂಡಿದ್ದಳು.[೨೭] ಇದು ಮಾತೃಪ್ರಧಾನ ವ್ಯವಸ್ಥೆಗೆ ಪ್ರಮುಖ ಸಾಕ್ಷಿಯಾಗಿದೆ. ಅನೇಕ ರಾಣಿಯರು, ಸ್ತ್ರೀಯರು ಹಲವಾರು ದೇವಾಲಯಗಳನ್ನು ಕಟ್ಟಿಸುತ್ತಿದ್ದರಲ್ಲದೆ, ದಾನದತ್ತಿಗಳನ್ನು ಬಿಡುತ್ತಿದ್ದರು ಎಂದು ಶಾಸನಗಳಿಂದ ತಿಳಿಯುತ್ತದೆ. ಇದೂ ಕೂಡ ಮಾತೃಪ್ರಧಾನ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ.

ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಮಾತೃಪ್ರಧಾನ ವ್ಯವಸ್ಥೆ ಆರ್ಯರ ಆಕ್ರಮಣವಾದಮೇಲೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿತು. ಪಿತೃಪ್ರಧಾನ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು .ಈವ್ಯವಸ್ಥೆಯಲ್ಲಿ ಅಧಿಕಾರವೆಲ್ಲವೂ ತಂದೆಯ ಮೂಲಕ ನೆರವೇರುತ್ತವೆ. ಕುರುಬರಲ್ಲಿ ಮೂಲತ: ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿತ್ತೆಂದು ತಿಳಿಯುತ್ತದೆ. ಕುಟುಂಬಲ್ಲಿ ಈತನ ತೀರ್ಮಾನವೇ ಅಂತಿಮ. ವಂಶಪರಂಪರೆಯನ್ನು ತಂದೆಯಿಂದ ಮಗನಿಗೆ ವರ್ಗಾಯಿಸಲಾಗುತ್ತದೆ. ಸದಸ್ಯರುಗಳ ಸ್ಥಾನ ಮತ್ತು ಹೆಸರು ತಂದೆಯಿಂದಲೇ ನಿರ್ಧಾರವಾಗುತ್ತದೆ. ತಂದೆಯ ನಂತರ ಹಿರಿಯ ಮಗ ಕುಟುಂಬದ ಪ್ರಮುಖನಾಗುತ್ತಾನೆ ಅವನ ಹೆಂಡತಿ ಒಡತಿಯಾಗುತ್ತಾಳೆ. ಕುಟುಂಬದ ಹೊರಗಿನ ಕೆಲಸಗಳನ್ನು ಹಿರಿಯ ಮಗ ನೋಡಿಕೊಂಡರೆ, ಕುಟುಂಬದ ಆಂತರಿಕ ಕೆಲಸಗಳನ್ನು ಹಿರಿಯ ಸೊಸೆ ನೋಡಿಕೊಳ್ಳುತ್ತಾಳೆ. ಕುಟುಂಬದ ಉಳಿದ ಸದಸ್ಯರೆಲ್ಲರೂ ಇವರಿಗೆ ವಿಧೇಯರಾಗಿರುತ್ತಾರೆ. ಜನನ, ಮರಣ, ಮದುವೆ ಋತುಮತಿ, ಮೊದಲಾದ ಕಾರ್ಯಗಳಲ್ಲಿ ಕುಟುಂಬದ ಯಜಮಾನನದೇ ಪ್ರಮುಖ ಕಾರ್ಯವಾಗಿರುತ್ತದೆ.

ಪ್ರಾಚೀನ ಕಾಲದಿಂದಲೂ ಕುರುಬರಿಗೆ ಕುರಿಸಾಕಾಣಿಕೆ ಮತ್ತು ಕಂಬಳಿನೇಯ್ಗೆ ಪ್ರಮುಖ ವೃತ್ತಿಯಾಗಿವೆ. ಕುರಿಗಳನ್ನು ಮೇಯಿಸುವುದು, ಮೇವು ಸಂಗ್ರಹಿಸುವುದು, ಉಣ್ಣೆ ಕತ್ತರಿಸುವುದು, ಉಣ್ಣೆ ಹಿಂಜಿ ನೂಲು ತೆಗೆಯುವುದು, ಕಂಬಳಿನೆಯುವುದು

ಹಾಗೂ ಕೃಷಿ ಕೆಲಸಗಳಿಗೆ ಅಧಿಕ ಜನರ ಅವಶ್ಯಕತೆಯಿತ್ತು. ಹೀಗಾಗಿ ಕುರುಬರಲ್ಲಿ ಅವಿಭಕ್ತ ಕುಟುಂಬಗಳು ಅಧಿಕವಾಗಿದ್ದವು. ಅದರಲ್ಲೂ ಪಿತೃಪ್ರಧಾನ ಕುಟುಂಬವಿತ್ತು. ಒಂದು ಕುಟುಂಬದಲ್ಲಿ ಯಜಮಾನನ ತಂದೆ , ತಾಯಿ, ಅಜ್ಜ, ಅಜ್ಜಿ, ಮಕ್ಕಳು, ಸೊಸೆಯರು, ಮೊಮ್ಮಕ್ಕಳು, ಸೋದರರು, ಸಹೋದರಿಯರು, ಹತ್ತಿರದ ಸಂಬಂಧಿಗಳು ಹಾಗೂ ಬೀಗರು ಎಂದು ವಿಂಗಡಿಸಿದ್ದರು.[೨೮] ಕುಲ ಮತ್ತು ವಂಶದವರೆಲ್ಲ ರಕ್ತ ಸಂಬಂಧಿ (ದಾಯಾದಿ)ಗಳಾದರೆ, ಮದುವೆ ಮುಖಾಂತರ ಸಂಬಂಧ ಬೆಳೆಸಿದವರು ಬೀಗರೆಂದು ಕರೆಯಲ್ಪಟ್ಟರು. ಎಲ್ಲರಿಗೂ ಸಮಾನ ರೀತಿಯಲ್ಲಿ ಆಸ್ತಿಯ ಹಕ್ಕಿರುತ್ತದೆ. ಆದರೆ ಇವರು ಆಸ್ತಿಯಲ್ಲಿ ಭಾಗ ಕೇಳಲು ಅನುಮತಿ ಇರುವದಿಲ್ಲ. ಹೀಗಾಗಿ ಕುಟುಂಬದಲ್ಲಿ ಪರಸ್ಪರ ಒಗ್ಗಟ್ಟು, ರಕ್ಷಣೆ, ಐಕ್ಯತೆ, ನಮ್ಮವರು ಎಂಬ ಭಾವನೆಗಳು ಪ್ರಧಾನವಾಗಿರುತ್ತವೆ.

ವಿಜಯನಗರ ಕಾಲದಲ್ಲಿದ್ದ ದಾಸ ಶ್ರೇಷ್ಠರಾದ ಕನಕದಾಸರ ಕೆಲವು ಭಕ್ತಿಗೀತೆಗಳಲ್ಲಿ ಜನರಿಗೆ ಮಗಳಿಗಿಂತ ಮಗನ ಬಗ್ಗೆ ವಿಶೇಷವಾದ ಒಲವಿತ್ತು ಎಂದು ತಿಳಿಯುತ್ತದೆ.[೨೯] ಇದರಿಂದಾಗಿ ಅಂದು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಿದ್ದುದಲ್ಲದೆ, ಅವಿಭಕ್ತ ಕುಟುಂಬದಲ್ಲಿ ಪುರುಷ ಸಂತಾನಕ್ಕೆ ಪ್ರಾಮುಖ್ಯತೆ ನೀಡುತ್ತಿದ್ದರೆಂದು ಸ್ಪಷ್ಟಪಡುತ್ತದೆ. ಪುರುಷ ಪ್ರಧಾನ ಕುಟುಂಬದಲ್ಲಿ ಸ್ತ್ರೀಯರು ಕೆಲವು ಪ್ರಮುಖ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಕುಟುಂಬವು ವಿವಾಹ ಮಾಡುವುದು, ಮಕ್ಕಳನ್ನು ಪಡೆಯುವುದು, ಮಕ್ಕಳನ್ನು ವಿದ್ಯಾಂತರನ್ನಾಗಿ ಮಾಡಿ ವಿಶಾಲ ಸಾಮ್ರಾಜ್ಯಕ್ಕೆ ಪರಿಚಯಿಸುವುದು ಮೊದಲಾದ ಉನ್ನತ ಕಾರ್ಯಗಳನ್ನು ನಿರ್ವಹಿಸುತ್ತದೆ. ಆದರೆ ಅವಿಭಕ್ತ ಕುಟುಂಬದಲ್ಲಿ ಸಹೋದರರು ಕಾಲಾನಂತರ ದಾಯಾದಿಗಳಾಗಿ ಆಸ್ತಿಯನ್ನು ಹಂಚಿಕೊಳ್ಳುವಲ್ಲಿ ಜಗಳಾಡುತ್ತಿದ್ದರೆಂದು ಶಾಸನಗಳಲ್ಲಿ ಉಲ್ಲೇಖವಿದೆ. ಕೊಪ್ಪಳ ಜಿಲ್ಲೆಯ ಚಿಕ್ಕಬಾಗೇವಾಡಿ ಶಾಸನದಲ್ಲಿ ದಾಯಾದಿಗಳು ಆಸ್ತಿಯನ್ನು ವಿಭಾಗಿಸಿಕೊಂಡಿದ್ದರ ಬಗ್ಗೆ ಉಲ್ಲೇಖವಿದೆ.[೩೦] ಇದರಿಂದ ಅವಿಭಕ್ತ ಕುಟುಂಬಗಳು ಆಂತರಿಕ ಕಲಹಗಳಿಂದ ಒಡೆದು ವಿಭಕ್ತ ಕುಟುಂಬಗಳಾದವೆಂದು ತಿಳಿಯುತ್ತದೆ.

ಆಧುನಿಕತೆಯ ಪ್ರಭಾವದಿಂದಾಗಿ ಕುರುಬರ ಅವಿಭಕ್ತ ಕುಟುಂಬಗಳು ಸಣ್ಣ-ಪುಟ್ಟ ಕುಟುಂಬಗಳಾಗಿ ಒಡೆದುಹೋದವು. ಕೈಗಾರಿಕೀಕರಣ ಹಾಗೂ ನಗರೀಕರಣದ ಪ್ರಭಾವದಿಂದ ಅವಿಭಕ್ತ ಕುಟುಂಬಗಳು ನಶಿಸಿಹೋದವು. ಈ ವಿಭಕ್ತ ಕುಟುಂಬಗಳಲ್ಲಿ ತಂದೆ ತಾಯಿ ಮಕ್ಕಳು ಮಾತ್ರ ನೆಲೆಸಿರುತ್ತಾರೆ. ಆದರೂ ವಿಶೇಷ ಸಂದರ್ಭಗಳಲ್ಲಿ ವಿಭಕ್ತ ಕುಟುಂಬದವರೆಲ್ಲ ಒಂದೆಡೆ ಸೇರುವುದು ಕಂಡುಬರುತ್ತದೆ. ವಿವಾಹ ಜನನ, ಮರಣ ಮೊದಲಾದ ಸಂದರ್ಭಗಳಲ್ಲಿ ಎಲ್ಲರೂ ಕೂಡುವ ಅವಕಾಶವಿರುತ್ತದೆ. ಇಂದಿಗೂ ಕೆಲವು ಗ್ರಾಮಗಳಲ್ಲಿ ಅವಿಭಕ್ತ ಕುಟುಂಬಗಳನ್ನು ಕಾಣಬಹುದಾಗಿದೆ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತನೆಗೊಂಡರೂ ಅವುಗಳ ನಡುವೆ ಸಾಮರಸ್ಯವಿರುವದು ಕಂಡುಬರುತ್ತದೆ.

### ೫.೧.೬ ಆಹಾರ-ಪಾನೀಯಗಳು

ಆದಿಕಾಲದಲ್ಲಿ ಕುರುಬರು ಬೆಟ್ಟ, ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾಗ ಮಾಂಸಹಾರಿಗಳಾಗಿದ್ದರು. ನಂತರ ಕೃಷಿಯನ್ನು ಅವಲಂಬಿಸಿದ ಮೇಲೆ ಸಸ್ಯಹಾರಿಗಳಾದರು. ಹೀಗಾಗಿ ಕುರುಬರಿಗೆ ಸಸ್ಯಹಾರ ಮತ್ತು ಮಾಂಸಹಾರಗಳೆರಡು ಪ್ರಮುಖ ಆಹಾರಗಳಾಗಿವೆ. ಇವರ ಅಹಾರ ಪದ್ಧತಿಯು ಸಾಂಪ್ರದಾಯಿಕವಾಗಿತ್ತಲ್ಲದೆ, ಸ್ಥಳೀಯ ಗುಣವನ್ನು ಹೊಂದಿತ್ತು. ಹನ್ನೆರಡನೆಯ

ಶತಮಾನದಲ್ಲಿ ವೀರಶೈವ ಮತದ ಪ್ರಭಾವಕ್ಕೊಳಗಾದ ಕುರುಬರು ಅಧಿಕ ಪ್ರಮಾಣದಲ್ಲಿ ಸಸ್ಯಹಾರಿಗಳಾಗಿ ಪರಿವರ್ತನೆಗೊಂಡರು.[೩೧] ಆದರೆ ಕೆಲವರು ಮಾಂಸಹಾರವನ್ನು ಕೇವಲ ವಿಶೇಷ ಸಂದದರ್ಭಗಳಿಗೆ ಸೀಮಿತಗೊಳಿಸಿದರು.

ಕೆಲವು ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಮಧ್ಯಕಾಲದಲ್ಲಿದ್ದ ಆಹಾರ ಪದ್ಧತಿಯ ಬಗ್ಗೆ ಮಾಹಿತಿ ನೀಡುತ್ತವೆ. ವಿಜಯನಗರ ಕಾಲದಲ್ಲಿ ರಾಜರಾಗಿ, ನಾಡಗೌಡರಾಗಿ ರಾಜ್ಯಭಾರ ಮಾಡಿದ ಕುರುಬರ ಆಹಾರ ಪದ್ಧತಿ ಮೇಲ್ಮಟ್ಟದಲ್ಲಿತ್ತು. ಅವರು ಅನ್ನದಲ್ಲಿ ಚಿತ್ರನ್ನ, ಪರಮಾನ್ನ (ಸಿಹಿಅನ್ನ) ಮೊಸರನ್ನ ಮೊದಲಾದವುಗಳನ್ನು ಉಪಯೋಗಿಸುತ್ತಿದ್ದರೆಂದು ಸಾಹಿತ್ಯ ಕೃತಿಗಳು ತಿಳಿಸುತ್ತವೆ.[೩೨] ಸಾಮಾನ್ಯ ಜನರು ರಾಗಿ, ಜೋಳ, ಸಜ್ಜೆ, ನವಣೆ ಮೊದಲಾದ ಪದಾರ್ಥಗಳನ್ನು ಉಪಯೋಗಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ಕನಕದಾಸರು ರಚಿಸಿದ್ದ ರಾಮಧಾನ್ಯ ಚರಿತೆಯು ಅಕ್ಕಿ ಮತ್ತು ರಾಗಿಗಳ ನಡುವೆ ನಡೆಯುವ ಘರ್ಷಣೆಯನ್ನು ಚಿತ್ರಿಸುತ್ತದೆ.[೩೩] ಇದರಿಂದ ಅಂದು ಅಕ್ಕಿಯು ಶ್ರೀಮಂತರ ಅಥವಾ ಉನ್ನತ ವರ್ಗದವರ ಆಹಾರವಾದರೆ, ರಾಗಿಯು ಕೆಳವರ್ಗದವರ ಅಥವಾ ಬಡವರ ಆಹಾರ ವಾಗಿತ್ತೆಂಬುದು ಸ್ಪಷ್ಟ. ಕನಕದಾಸರು ತಮ್ಮ ಕಾವ್ಯಗಳಲ್ಲಿ ತೆಂಗಿನಕಾಯಿ, ಹಲಸು, ಕಿತ್ತಳೆ, ಮಾವು, ದಾಳಿಂಬೆ, ದ್ರಾಕ್ಷಿ, ಖರ್ಜೂರ, ಬಾಳೆ, ನೀರಲಹಣ್ಣು, ಮೊದಲಾದ ಹಣ್ಣುಗಳ ಬಗ್ಗೆ ಹೇಳಿದ್ದಾರೆ.[೩೪] ಇಬ್ನಬತೂತ ತನ್ನ ಕೃತಿಯಲ್ಲಿ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಬಗ್ಗೆ ತಿಳಿಸಿದ್ದಾನೆ.[೩೫] ಹೀಗಾಗಿ ಈ ಕಾಲದಲ್ಲಿ ವಿವಿಧ ರೀತಿಯ ಆಹಾರಗಳು ಲಭ್ಯವಿದ್ದವೆಂದು ತಿಳಿಯಬಹುದು.

ವಿಜಯನಗರೋತ್ತರ ಕಾಲದಲ್ಲಿದ್ದ ಗೋವಿಂದ ವೈದ್ಯರು ತಮ್ಮ ಕೃತಿಯಲ್ಲಿ ರಸವಾಳೆ, ಪುಟ್ಟವಾಳ್, ರಾಜವಾಳ್, ಸಕ್ಕರೆವಾಳ್, ಕಬ್ಬಾಳೆ, ಪಚ್ಚವಾಳೆ ಮೊದಲಾದ ಬಾಳೆಹಣ್ಣುಗಳ ಬಗ್ಗೆ ವರ್ಣಿಸಿದ್ದಾನೆ.[೩೬] ಅಲ್ಲದೆ ವೀಳ್ಯೆಯದೆಲೆ, ಅಡಿಕೆ, ಸುಣ್ಣ ಮೊದಲಾದವುಗಳನ್ನು ಊಟದ ನಂತರ ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ.

ಕೊಪ್ಪಳ ಜಿಲ್ಲೆಯ ಅಂಟೂರಠಾಣ,[೩೭] ಹುಲಿಗಿ,[೩೮] ಕಲ್ಲೂರು,[೩೯] ಕುಕನೂರು,[೪೦] ಪುರ[೪೧] ಶಾಸನಗಳಲ್ಲಿ ಆಹಾರ ಪಾನೀಯದ ಬಗ್ಗೆ ಉಲ್ಲೇಖವಿದೆ. ಸಾಂಬಾರ ಪದಾರ್ಥಗಳು, ಜಿಡ್ಡು ಪದಾರ್ಥಗಳು, ಅಹಾರ ಪದಾರ್ಥಗಳಾದ ಎಲೆ, ಕಾಯಿ, ತುಪ್ಪ, ಬೆಣ್ಣೆ, ಉಪ್ಪು, ಹತ್ತಿ, ಭತ್ತ, ಹೆಸರುಕಾಳು, ಮೆಣಸು, ಅರಷಿಣ, ಜೋಳ, ಸಜ್ಜೆ, ತೆಂಗು, ಹಲಸು, ಹುಣಸೆ, ಮಾವು, ನಿಂಬೆ, ಕಿತ್ತಾಳೆ, ಬೆಲ್ಲ ಮೊದಲಾದವುಗಳು ಪ್ರಮುಖ ಆಹಾರ –ಪಾನೀಯಗಳಾಗಿದ್ದವು. ಇದರಿಂದ ಈ ಭಾಗದಲ್ಲಿ ಕೃಷಿಕರಾಗಿದ್ದ ಕುರುಬರು ಭತ್ತ, ಜೋಳ, ಸಜ್ಜೆ ಮೊದಲಾದ ಆಹಾರಗಳನ್ನು ಉಪಯೋಗಿಸಿದರೆ, ಕುರಿಗಾರರಾದ ಕುರುಬರು ಹಾಲು, ಮಜ್ಜಿಗೆ, ಬೆಣ್ಣೆಯನ್ನು ಉಪಯೋಗಿಸುತ್ತಿದ್ದರೆಂದು ಸ್ಪಷ್ಟಪಡುತ್ತದೆ. ಆಹಾರ ಪದ್ಧತಿಯು ಭೌಗೋಳಿಕವಾಗಿ ಹಾಗೂ ಸ್ಥಾನಮಾನಕ್ಕನುಗುಣವಾಗಿ ವಿಭಿನ್ನತೆಯನ್ನು ಪಡೆದುಕೊಂಡಿದ್ದಿತೆಂಬದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಕುರುಬರ ಆಹಾರ ಪದ್ಧತಿಯು ಅವರ ಮನೆದೇವರ ಅಥವಾ ಕುಲದೇವರ ಮೇಲೆ ಅವಲಂಬಿತವಾಗಿದೆ. ಬೀರಪ್ಪ, ಮೈಲಾರಲಿಂಗ, ರೇವಣಸಿದ್ಧೇಶ್ವರ, ಅಮೋಘಸಿದ್ಧೇಶ್ವರ, ಮಾಳಿಂಗರಾಯ ಮೊದಲಾದ ದೇವರುಗಳಿಗೆ ಮಾಂಸಹಾರದ ನೈವೇಧ್ಯ ಮಾಡುವ ಸಂಪ್ರದಾಯವಿಲ್ಲ. ಹೀಗಾಗಿ ಈ ದೇವರುಗಳ ಜಾತ್ರೆ, ಉತ್ಸವ ಮೊದಲಾದ ಶುಭದಿನಗಳಂದು ಸಿಹಿ ಅಡಿಗೆ

ಮಾಡುತ್ತಾರೆ. ಸಾಮಾನ್ಯವಾಗಿ ಗೋಧಿ ಹುಗ್ಗಿ, ಜೋಳದ, ನುಚ್ಚಿನ ಅಂಬಲಿ, ಸಜ್ಜಕ, ಹೋಳಿಗೆ, ಕಡಬು ಮೊದಲಾದ ಅಡಿಗೆಗಳನ್ನು ಮಾಡುತ್ತಾರೆ. ಕುರುಬರ ಕುಲಗುರುಗಳಾದ ಗುರುವಿನ್‌ನವರು, ಒಡೆಯರು, ಪೂಜಾರಿಗಳು ದೀಕ್ಷೆ ಪಡೆದುಕೊಳ್ಳುವ ಸಂದರ್ಭದಲ್ಲಿ ಮದ್ಯ ಮಾಂಸಗಳನ್ನು ಬಳಸುವುದಿಲ್ಲವೆಂದು ಪ್ರಮಾಣ ಮಾಡಿರುತ್ತಾರೆ. ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಮೈಲಾರಲಿಂಗ, ಬೀರಪ್ಪನ ಜಾತ್ರೆಗಳ ಸಂದರ್ಭಗಳಲ್ಲಿ ಶಸ್ತ್ರಪವಾಡ, ಸರಪಳಿ ಪವಾಡ, ಹರಕೆ, ಸೇವೆಗಳನ್ನು ಸಲ್ಲಿಸುವವರು ಮಾಂಸಹಾರವನ್ನು ಸೇವಿಸುವಂತಿಲ್ಲ. ಸೇವಿಸಿದರೆ ಕೆಡಕು ಉಂಟಾಗುವುದು ಎಂಬ ನಂಬಿಕೆಯಿದೆ. ಹತ್ತಿಕಂಕಣದ ಕುರುಬರು ಕುರಿಸಾಕಾಣಿಕೆಯನ್ನು ಅಧಿಕವಾಗಿ ಅವಲಂಬಿಸಿರುವುದರಿಂದ ಮಾಂಸಹಾರಿಗಳಾಗಿದ್ದಾರೆ. ತಮ್ಮ ಮನೆದೇವರ ಉತ್ಸವ, ಹಬ್ಬಗಳಲ್ಲಿ ಮಾಂಸಹಾರದ ಅಡಿಗೆ ಮಾಡುತ್ತಾರೆ.

ಪ್ರಾಚೀನಕಾಲದಿಂದಲೂ ಕುರುಬರು ಪ್ರಾಣಿ ಬಲಿ ಕೊಡುವ ಸಂಪ್ರದಾಯ ಹೊಂದಿದ್ದಾರೆ. ಸ್ತ್ರೀ ದೇವತೆಗಳಾದ ಹುಲಿಗೆಮ್ಮ, ಮಾರಮ್ಮ, ಎಲ್ಲಮ್ಮ, ದುರ್ಗಮ್ಮ ಮೊದಲಾದ ದೇವತೆಗಳಿಗೆ ಪ್ರಾಣಿಬಲಿ ನೀಡುತ್ತಾರೆ. ಅಂದು ಕುರಿ, ಕೋಳಿ, ಆಡು ಮೊದಲಾದ ಪ್ರಾಣಿಗಳ ಬಲಿ ಕೊಡಲಾಗುತ್ತದೆ. ಮಾಂಸಹಾರದ ಜೊತೆಗೆ ಸಿಹಿ ಅಡಿಗೆಯನ್ನು ಮಾಡುತ್ತಾರೆ. ಕೊಪ್ಪಳ ತಾಲೂಕಿನ ಹೀರೆಸಿಂದೊಗಿ ಗ್ರಾಮದಲ್ಲಿ ಬೀರಪ್ಪನ ಜಾತ್ರೆಯ ದಿನ ಬೀರಪ್ಪನಿಗೆ ಸಸ್ಯಹಾರದ ನೈವೇದ್ಯ ಮಾಡುವರು, ಅಲ್ಲದೇ ಸ್ತ್ರೀ ದೇವತೆಯ ಹೆಸರಿನಲ್ಲಿ ಕುರಿಯನ್ನು ಬಲಿ ಕೊಡುತ್ತಾರೆ. ಕುಷ್ಟಗಿ ತಾಲೂಕಿನ ಗುಮಗೇರಿ ಗ್ರಾಮದ ದುರ್ಗಮ್ಮ, ಗಂಗಾವತಿಯ ಹಳ್ಳದ ದುರ್ಗಮ್ಮ ದೇವಾಲಯಗಳಿಗೆ ಕುರುಬರು ಪೂಜಾರಿಗಳಾಗಿದ್ದು, ಮಾಂಸಹಾರಿಗಳಾಗಿದ್ದಾರೆ. ಜಾತ್ರೆಯ ಸಂದರ್ಭದಲ್ಲಿ ಕುರಿ-ಕೋಳಿಗಳನ್ನು ಬಲಿ ಕೊಡಲಾಗುತ್ತದೆ. ಆಧುನಿಕತೆಯ ಪ್ರಭಾವದಿಂದ ಕುರುಬರ ಆಹಾರ ಪದ್ದತಿ ಸ್ವಲ್ಪ ಬದಲಾವಣೆಯಾದರೂ. ಇಂದಿಗೂ ತಮ್ಮ ಹಳೆಯ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಒಟ್ಟಾರೆ ಕುರುಬರ ಆಹಾರ ಪದ್ಧತಿ ಭೌಗೋಳಿಕವಾಗಿ ವಿಭಿನ್ನತೆಯನ್ನು ಹೊಂದಿರುವದಲ್ಲದೆ, ಸರಳ ಹಾಗೂ ಸಂಪ್ರದಾಯ ಬದ್ದವಾಗಿರವುದು ಸ್ಪಷ್ಟ.

### ೫.೧.೭ ಉಡುಗೆ ತೊಡುಗೆಗಳು

ಆದಿಕಾಲದಲ್ಲಿ ಆಹಾರ ಸಂಗ್ರಹಣೆ ಪ್ರಧಾನವಾಗಿದ್ದರಿಂದ ಉಡುಗೆ-ತೊಡುಗೆಗಳ ಬಗ್ಗೆ ಹೆಚ್ಚಿನ ಗಮನ ನೀಡಿರಲಿಲ್ಲ. ಮರದ ಸೊಪ್ಪು, ಎಲೆಗಳನ್ನು ವಸ್ತ್ರಗಳನ್ನಾಗಿ ಬಳಸುತ್ತಿದ್ದರು. ಪಶುಪಾಲನೆಯನ್ನು ಕೈಗೊಂಡನಂತರ ಪ್ರಾಣಿಗಳ ಮಾಂಸವನ್ನು ಆಹಾರಕ್ಕೆ ಬಳಸಿಕೊಂಡು ಚರ್ಮವನ್ನು ವಸ್ತ್ರವನ್ನಾಗಿ ಮಾಡಿಕೊಂಡರು. ಕುರುಬರು ಪಶುಪಾಲನೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದರು. ಹೀಗಾಗಿ ಕುರಿಗಳ ಉಣ್ಣೆಯಿಂದ ತಯಾರಿಸಿದ ವಸ್ತ್ರಗಳನ್ನು ಕಂಬಳಿಗಳೆಂದು ಕರೆದರು. ನಂತರ ಕೃಷಿಯನ್ನು ಅವಲಂಭಿಸಿದ ಮೇಲೆ ಹತ್ತಿ ಬಟ್ಟೆಯನ್ನು ಉಪಯೋಗಿಸಿದರು. ಹೀಗೆ ಕಾಲಾನಂತರ ಉಡುಗೆಗಳು ತಮ್ಮ ಸ್ವರೂಪವನ್ನು ಬದಲಾಯಿಸಿಕೊಂಡವು.

ವೇದಗಳ ಕಾಲದಲ್ಲಿ ಪಶುಪಾಲನೆ ಮತ್ತು ಕೃಷಿ ಪ್ರಮುಖ ಉದ್ಯೋಗಗಳಾಗಿದ್ದವು. ಸಾಮಾನ್ಯವಾಗಿ ಜನರ ಉಡುಪುಗಳು ಉಣ್ಣೆ ಹತ್ತಿ, ರೇಷ್ಮೆ ಮತ್ತು ನಾರುಗಳಿಂದ ತಯಾರಿಸಲಾಗಿದ್ದವು.[೪೨] ಉಣ್ಣೆಯ ವಸ್ತ್ರಗಳನ್ನು "ಕಂಬಲ" ಎಂದು ಕರೆಯುತ್ತಿದ್ದರು.[೪೩] ಅಂದಿನ ಕಂಬಲವೇ ಇಂದಿನ ಕಂಬಳಿಯಾಗಿದೆ. ಇದರಿಂದಾಗಿ ಕುರುಬರು ವೇದಕಾಲದಲ್ಲಿ ಕಂಬಳಿ ನೇಯುತ್ತಿದ್ದರೆಂದು

ತಿಳಿಯುತ್ತದೆ. ನೀವಿ (ಒಳ ಉಡುಗೆ), ವಾಪ್ರಿ (ಮೇಲುಡುಗೆ), ಉಷ್ನೀಷ(ತಲೆಯುಡುಗೆ) ಮತ್ತು ಉಪಾನಹ (ಚಪ್ಪಲಿ) ಮೊದಲಾದವುಗಳು ಪ್ರಮುಖ ಉಡುಗೆಗಳಾಗಿದ್ದವು.[೪೪] ಪುರುಷರ ಮತ್ತು ಸ್ತ್ರೀಯರ ಉಡುಪುಗಳಲ್ಲಿ ಹೆಚ್ಚಿನ ಭಿನ್ನತೆಯಿರಲಿಲ್ಲ. ಇಬ್ಬರೂ ಅಲಂಕಾರ ಪ್ರಿಯರಾಗಿದ್ದರು.

ಮಧ್ಯಯುಗದಲ್ಲಿ ಕುರುಬರು ರಾಜ ಪ್ರಭುತ್ವದಲ್ಲಿ ಪ್ರಮುಖವಾದ ಸ್ಥಾನಗಳನ್ನು ಹೊಂದಿದ್ದರು. ಉನ್ನತ ಸ್ಥಾನಮಾನಗಳನ್ನು ಹೊಂದಿ ಶ್ರೀಮಂತರಾಗಿದ್ದ ಕುರುಬರ ಉಡುಗೆತೊಡುಗೆಗಳು ವಿಶಿಷ್ಟವಾಗಿದ್ದವು. ಬೆಲೆಬಾಳುವ ರೇಷ್ಮೆಯದೋತರ, ನಿಲುವಂಗಿ, ಜರತಾರಿ ಮುಂಡಾಸು, ನಡುಪಟ್ಟಿ, ಮುತ್ತಿನಸರಗಳು, ಕರ್ಣಭೂಷಣ, ಶಿರಭೂಷಣ, ಕಂಕಣ, ಉಂಗುರ ಜೊತೆಗೆ ಕಿಲಾರಿ, ಷಡ್ಗತಿ, ವಾಲುಗತ್ತಿ ಹಾಗೂ ಶ್ರೀಮಂತ ವರ್ಗದ ಸ್ತ್ರೀಯರು ಚಿನ್ನ, ಬೆಳ್ಳಿ ಕಸೂತಿಯಿಂದ ಕೂಡಿದ ಜರತಾರಿ ಸೀರೆ, ಕುಪ್ಪಸ, ಹಾಗೂ ವಿವಿಧ ಬಗೆಯ ವಜ್ರ ವೈಡೂರ್ಯ, ಮುತ್ತು ರತ್ನಗಳ ಹಾರಗಳು, ಕೇಶಾಭರಣಗಳು, ತೋಳಬಂಧಿ, ಕಾಲಗೆಜ್ಜೆ, ಬಳೆಗಳು ಮೊದಲಾದ ಉಡುಗೆತೊಡುಗೆಗಳನ್ನು ಧರಿಸುತ್ತಿದ್ದರು.[೪೫] ಆದರೆ ಕೃಷಿ ಮತ್ತು ಕುರಿಸಾಕಾಣಿಕೆಯನ್ನು ವೃತ್ತಿಯನ್ನಾಗಿಸಿಕೊಂಡಿದ್ದ ಕುರುಬರು ಅಂಗಿ, ದೋತರ, ತಲೆಗೆರುಮಾಲು (ಮುಂಡಾಸು), ಹೆಗಲ ಮೇಲೆ ಕಂಬಳಿ ಮೊದಲಾದ ಸಾಮಾನ್ಯ ಉಡುಪುಗಳನ್ನು ಧರಿಸುತ್ತಿದ್ದರು. ಸ್ತ್ರೀಯರು ಉರುಟಾದ ಸೀರೆ, ಕುಪ್ಪಸಗಳನ್ನು ತೊಡುತ್ತಿದ್ದರು. ಇಬ್ನಬತೂತನು ಸ್ತ್ರೀಯರು ಮೂಗಿಗೆ ಬಂಗಾರದ ಮೂಗುತಿಯನ್ನು ಧರಿಸುತ್ತಿದ್ದರು. ಕುಪ್ಪಸವನ್ನು ಚೋಲಿ, ರವಿಕೆ ಎಂದು ಕರೆಯುತ್ತಿದ್ದರು ಎಂದು ತನ್ನ ಕೃತಿಯಲ್ಲಿ ವಿವರಿಸಿದ್ದಾನೆ.[೪೬] ಅಂದು ಉತ್ತಮ ವಸ್ತ್ರಗಳು ಪೊಡ್ಡಲಪುರ, ಚಿರಾಪಲ್ಲಿ, ನಾಗಪಟ್ಟಣ, ಸಿಲೋನ ಅನ್ಹಿಲವಾಡ್, ತೊಂಡಿ, ಪಂಚಪಟ್ಟಣ ಮೊದಲಾದ ಪ್ರದೇಶಗಳಿಂದ ಬರುತ್ತಿದ್ದವೆಂದು ತಿಳಿಯುತ್ತದೆ. ವಿಶೇಷವಾದ ಸಂದರ್ಭಗಳಲ್ಲಿ ಸಾಮಾನ್ಯರು ಸಹ ಉತ್ತಮವಾದ ಉಡುಗೆತೊಡುಗೆಗಳನ್ನು ಉಪಯೋಗಿಸುತ್ತಿದ್ದರು.

ಆಧುನಿಕ ಕಾಲದಲ್ಲಿ ಕುರುಬರ ಉಡುಗೆ-ತೊಡುಗೆಗಳು ಸಾಕಷ್ಟು ಬದಲಾವಣೆಗೊಂಡಿರುವುದು ಕಂಡುಬರುತ್ತದೆ. ಇವರ ಉಡುಗೆ-ತೊಡುಗೆಗಳು ಪ್ರಾದೇಶಿಕತೆ ಹಾಗೂ ಹವಾಗುಣಕ್ಕೆ ಅವಲಂಬಿತಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಕುರುಬರು ಸರಳ ಹಾಗೂ ಸಂಪ್ರದಾಯ ಬದ್ಧವಾದ ಉಡುಗೆಗಳನ್ನು ದರಿಸುತ್ತಾರೆ. ಕೃಷಿಯನ್ನು ಅವಲಂಬಿಸಿದವರು ಬಿಳಿವರ್ಣದ ಲುಂಗಿ, ದೋತರ ತಲೆಗೆ ರುಮಾಲು (ಪೆಟಗ) ಹೆಗಲ ಮೇಲೆ ಕಂಬಳಿ ಧರಿಸುತ್ತಾರೆ. ಆದರೆ ಕರಿಗಾರರು ಕಸಿಅಂಗಿ, ವೀರಗಚ್ಚೆಯ ದೋತ್ರ, ತಲೆಗೆ ರುಮಾಲು (ಪೆಟಗ), ಉಣ್ಣೆಯಿಂದ ಮಾಡಿದ ಟೊಪ್ಪಿಗೆ, ಕಂಬಳಿ ಧರಿಸುತ್ತಾರೆ. ಕಾಲಲ್ಲಿ ವಿಶೇಷವಾಗಿ ತಯಾರಿಸಿದ ದಪ್ಪವಾದ ಪಾದರಕ್ಷೆಗಳನ್ನು ಹಾಕುತ್ತಾರೆ. ಈ ಪಾದರಕ್ಷೆಗಳು ಒಂದು ವಿಶಿಷ್ಟ ರೀತಿಯ ನಾದವನ್ನು ಉಂಟು ಮಾಡುತ್ತವೆ. ಅಡವಿಯಲ್ಲಿ ಕುರಿಕಾಯಲು ಹೋದಾಗ ವಿಷಜಂತುಗಳು ಈ ಶಬ್ದದಿಂದ ದೂರ ಹೋಗುವಂತೆ ಮಾಡಲು ಈ ರೀತಿಯ ಪಾದರಕ್ಷೆಗಳನ್ನು ಬಳಸುತ್ತಾರೆ. ಕುರುಬರು ಕಿವಿಯಲ್ಲಿ ಓಲೆ ಮುರುವು, ಬಾವಲಿ ಹಾಗೂ ಕೈಯಲ್ಲಿ ಕಡಗ ಹಾಕುತ್ತಾರೆ. ವೀರಶೈವ ಧರ್ಮದ ಪ್ರಭಾವಕ್ಕೊಳಗಾದ ಕೆಲವರು ಮಠಗಳಿಂದ ದೀಕ್ಷೆಪಡೆದು ಲಿಂಗು ಧರಿಸುತ್ತಾರೆ. ಒಡೆಯರು ಹಣೆಗೆ ವಿಭೂತಿ, ರುದ್ರಾಕ್ಷಿ ಮಾಲೆಯನ್ನು ಧರಿಸುತ್ತಾರೆ. ಬೀರಪ್ಪ, ಮೈಲಾರಲಿಂಗನ ಭಕ್ತರು ಭಂಡಾರವನ್ನು ಭಸ್ಮವನ್ನಾಗಿ ಬಳಸುತ್ತಾರೆ. ಬಿಜಾಪುರ, ಬಾಗಲಕೋಟ, ಬೀದರ ಭಾಗದ ಕುರುಬರು ಹಳದಿ ಬಣ್ಣದ ರುಮಾಲು (ಪಟಗ) ಧರಿಸುತ್ತಾರೆ. ಈ ಹಳದಿ ಬಣ್ಣ

ಭಂಡಾರದ ಸಂಕೇತವಾಗಿದೆ. ಆದರೆ ಕೊಪ್ಪಳ ಭಾಗದ ಕುರುಬರು ಬಿಳಿಬಣ್ಣದ ರುಮಾಲು ತಲೆಗೆ ಸುತ್ತುತ್ತಾರೆ. ಅಲ್ಲದೆ ಬಿಳಿಬಣ್ಣದ ಟೊಪ್ಪಿಗೆಯನ್ನು ಹಾಕುವರು. ಇವರ ಜೊತೆಯಲ್ಲಿ ಯಾವಾಗಲೂ ಬಮಟಗೆ, ತಾಡಪತ್ರಿ, ಬ್ಯಾಟರಿ, ಎಲೆ ಅಡಿಕೆಯ ಚೀಲ ಸಾಮಾನ್ಯವಾಗಿರುತ್ತದೆ. ಸ್ತ್ರೀಯರು ಒರಟುಸೀರೆ ಕುಪ್ಪಸವನ್ನು ಧರಿಸುತ್ತಾರೆ. ಕಿವಿಗೆ ಬೆಂಡಾಲಿ, ಕೊರಳಲ್ಲಿ ತಾಳಿ, ಮೂಗಿನಲ್ಲಿ ಮೂಗುತಿ, ಕೈಯಲ್ಲಿ ಬಳೆ ತೋಳಬಂದಿ, ಮೊದಲಾದ ವಸ್ತುಗಳನ್ನು ಧರಿಸುತ್ತಾರೆ. ವಿಶೇಷ ಸಂಧರ್ಭಗಳಲ್ಲಿ ಬೋರಮಳ, ತೀಕಿ, ಗುಂಡಿನ ಸರ, ಅವಲಕ್ಕಿ ಸರ, ನಡುವಿಗೆ ನಡಪಟ್ಟ, ಕಾಲ್ಗೆಜ್ಜೆ, ಕಾಲುಂಗುರ ಮೊದಲಾದ ಆಭರಣಗಳನ್ನು ಧರಿಸುತ್ತಾರೆ. ಸಾಮಾನ್ಯವಾಗಿ ಕುರಿಕಾಯುವ ಅಥವಾ ಹೊಲದಲ್ಲಿ ದುಡಿಯುವದರಿಂದ ಸಾಮಾನ್ಯ ರೀತಿಯ ಉಡುಗೆ-ತೊಡುಗೆಗಳನ್ನು ಬಳಸುವದು ಕಂಡುಬರುತ್ತದೆ.

ಆರ್ಥಿಕವಾಗಿ ಸಬಲರಾದವರು, ಸರ್ಕಾರಿ ಉದ್ಯೋಗಿಗಳು, ಶಿಕ್ಷಣ ಪಡೆದವರು ಅಥವಾ ನಗರದಲ್ಲಿ ವಾಸಿಸುವ ಕುರುಬರು ನೂತನ ಮಾದರಿಯ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ಪುರುಷರು ಪ್ಯಾಂಟ, ಶರ್ಟ, ನಯವಾದ ಪಾದರಕ್ಷೆಗಳಲ್ಲದೆ, ಬಂಗಾರದ ಸರ, ಉಂಗುರಗಳನ್ನು ಧರಿಸುತ್ತಾರೆ. ಸ್ತ್ರೀಯರು ನಯವಾದ ಜರತಾರಿ ಸೀರೆ, ರವಿಕೆ, ಪಾದರಕ್ಷೆಗಳನ್ನು ಧರಿಸುತ್ತಾರೆ. ಕೊರಳಲ್ಲಿ ಬಂಗಾರದ ತಾಳಿ, ಹೆರಳೋಲೆ, ಬುಗುಡಿ, ಜುಮುಕಿ, ಮೂಗುತಿ, ಉಂಗುರ, ಕಾಲ್ಗೆಜ್ಜೆ, ಕಾಲುಂಗುರ ಮೊದಲಾದ ಆಭರಣಗಳನ್ನು ಧರಿಸುತ್ತಾರೆ. ಆಧುನಿಕತೆಯ ಪ್ರಭಾವದಿಂದ ಉಡುಗೆ-ತೊಡುಗೆಗಳಲ್ಲಿ ಬದಲಾವಣೆಯಾಗಿದ್ದರೂ ಕುರುಬರು ಇಂದಿಗೂ ಸರಳ ಹಾಗೂ ಸಂಪ್ರದಾಯ ಬದ್ಧ ಉಡುಗೆ-ತೊಡುಗೆಗಳನ್ನು ಬಳಸುವುದು ಕಂಡುಬರುತ್ತದೆ.

### ೩.೧.೮ ವಸತಿ ವ್ಯವಸ್ಥೆ

ಪಶುಪಾಲನೆಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿದ ಮೇಲೆ ತಮ್ಮ ಧನಕರುಗಳ ಪಾಲನೆ ಮಾಡುತ್ತ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೊಗುತ್ತಿದ್ದರು. ಹೀಗೆ ಪ್ರದೇಶದಿಂದ ಪ್ರದೇಶಕ್ಕೆ ಸಂಚಾರ ಕೈಗೊಂಡು ಆ ಪ್ರದೇಶಗಳಲ್ಲೆಲ್ಲ ಹಟ್ಟಿಗಳನ್ನು ನಿರ್ಮಿಸತೊಡಗಿದರು. ಪ್ರಾಚೀನ ಕಾಲದಲ್ಲಿ ಎಲ್ಲೆಡೆ ಹಟ್ಟಿಗಳೇ ಹಟ್ಟಿಗಳು. ಪಟ್ಟಿ, ಹಟ್ಟಿ, ವಾಟಿ, ವಾಡ, ವಾಡಿ ಈ ಬಗೆಯ ಹೆಸರಿನ ಊರುಗಳಿಲ್ಲದ ಭಾಗವು ದಕ್ಷಿಣ ಪ್ರದೇಶದಲ್ಲಿ ಎಲ್ಲಿಯಾದರೂ ದೊರೆಯಬಹುದೇ ಎಂಬುದು ಸಂದೇಹ ಎಂದು ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ.[೪೭] ಹಟ್ಟಿಗಳಲ್ಲಿ ವಾಸವಾಗಿರುವವರನ್ನು ಹಟ್ಟಿಕಾರರು ಎಂದು ಗುರುತಿಸಿದರು. ಕಾಲಾಂತರ ಕೃಷಿಯನ್ನು ಅವಲಂಬಿಸಿದ ಮೇಲೆ ಒಂದು ಸ್ಥಳದಲ್ಲಿ ನೆಲೆಸಿದರು. ಆದ್ದರಿಂದ ಮೊದಲು ಹಟ್ಟಿ ನಂತರ ಊರುಗಳು ಸೃಷ್ಟಿಯಾದವೆಂಬುದು ಸ್ಪಷ್ಟ.

ಕುರುಬರು ಭಾರತದಾದ್ಯಂತ ನೆಲೆಸಿದ್ದರೆಂಬುದಕ್ಕೆ ಎಲ್ಲೆಡೆ ಹಟ್ಟಿ, ಕೊಪ್ಪಗಳೆಂಬ ಹೆಸರಿನ ಊರುಗಳಿರುವುದು ಸಾಕ್ಷಿಯಾಗಿದೆ. ಭಾರತದ ಬೇರೆ ಬೇರೆ ಪ್ರದೇಶಗಳಿಗೆ ವಲಸೆಹೋಗುವುದಕ್ಕಿಂತ ಪೂರ್ವದಲ್ಲಿ ನರ್ಮದಾ, ಗೋದಾವರಿ ತೀರಪ್ರದೇಶದ ಉತ್ತರ ಭಾಗಗಳಲ್ಲಿ ನೆಲೆಸಿದ್ದರು.[೪೮] ಹಿಂದೂ ಪವಿತ್ರ ಗ್ರಂಥಗಳ ಪ್ರಕಾರ ಕಂದಾರ, ವಿದ್ಯಾರಣ್ಯ, ದಂಡಕಾರಣ್ಯ ಕುರುಬರ ಮೂಲ ಪ್ರದೇಶಗಳಾಗಿದ್ದವು. ಮ್ಯಾಕಡೊನೆಲ್‌ರು ಋಗ್ವೇದ ಕಾಲದಲ್ಲಿ ಸಿಂಧು ನದಿ ತೀರವು ಇವರ ವಸತಿ ಸ್ಥಾನವಾಗಿತ್ತೆಂದು ಊಹಿಸಿದ್ದಾರೆ.[೪೯] ಸಿಂಧೂ ತೀರದಿಂದ ವಲಸೆ ಹೊರಟ ಕುರುಬರ ಗುಂಪುಗಳು ಮಥುರಾ, ಸೌರಾಷ್ಟ, ವಿಧರ್ಭದ ಪ್ರದೇಶಗಳಲ್ಲಿ

ನೆಲೆಸಿದವು.[೨೦] ಕೆಲವು ಶತಮಾನಗಳವರೆಗೆ ರೇವಾನದಿಯೇ ಇವರ ವಾಸಸ್ಥಾನವಾಗಿತ್ತೆಂದು ತಿಳಿಯುತ್ತದೆ. ಈ ಪ್ರದೇಶಗಳಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಂಡು ನೆಲೆಸಿದರು.

ಭಾರತದಾದ್ಯಂತ ನೆಲೆಸಿದ ಕುರುಬರು ನಿರ್ಮಿಸಿಕೊಂಡ ಹಟ್ಟಿಗಳು ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದ್ದವು. ಪ್ರಾಚೀನ ಕಾಲದಿಂದಲೂ ಕುರಿಸಾಕಾಣಿಕೆ ಮತ್ತು ಕಂಬಳಿನೆಯ್ಗೆ ಪ್ರಮುಖ ವೃತ್ತಿಗಳಾದವು. ಇವುಗಳಿಗೆ ಅನುಕೂಲವಾಗುವಂತೆ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಹೀಗಾಗಿ ಕುರಿಗಳಿಗೆ ಉತ್ತಮವಾದ ಆಹಾರ ಒದಗಿಸಲು ಫಲವತ್ತಾದ ಪ್ರದೇಶಗಳು ಅಥವಾ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಈ ಪ್ರದೇಶಗಳಲ್ಲಿ ತಮ್ಮ ಹಟ್ಟಿಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು.

ಕುರುಬರ ಪ್ರತಿಯೊಂದು ಪಂಗಡದವರಲ್ಲೂ ವಸತಿ ವ್ಯವಸ್ಥೆ ಭಿನ್ನತೆಯಿಂದ ಕೂಡಿರುವುದು ಕಂಡುಬರುತ್ತದೆ. ಮೂಲತಃ ಕಾಡುಜನರಾದ ಜೇನುಕುರುಬರು ಹಾಗೂ ಕಾಡುಕುರುಬರು ಕತ್ತರಿಸಿದ ಬಿದಿರುಗಳಿಂದ ಗುಡಿಸಲುಗಳನ್ನು ಆಯತಾಕಾರದಲ್ಲಿ ಕಟ್ಟಿಕೊಳ್ಳುತ್ತಿದ್ದರು. ಆದರೆ ನಗರ ಅಥವಾ ಗ್ರಾಮದಲ್ಲಿ ವಾಸಿಸುವ ಕುರುಬರು ಮಣ್ಣಿನ, ಹಂಚಿನ, ಕಲ್ಲಿನ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಮಧ್ಯಕಾಲದಲ್ಲಿ ರಾಜರು, ಪಾಳೆಯಗಾರರಾಗಿದ್ದ ಕುರುಬರು ಉನ್ನತ ರೀತಿಯ ವಸತಿ ವ್ಯವಸ್ಥೆ ಹೊಂದಿದ್ದರು. ಅವರು ಅರಮನೆ, ಕೋಟೆಗಳನ್ನು ನಿರ್ಮಿಸಿದ್ದರೆಂಬುದಕ್ಕೆ ಆಧಾರಗಳಿವೆ. ವಿಜಯನಗರ ಕಾಲದ ಪ್ರವಾಸಿಯಾಗಿದ್ದ ಬಾರ್ಬೋಸನು ಪಾಳೆಯಗಾರ ಅಥವಾ ಶ್ರೀಮಂತರ ಮನೆಗಳು ಸುಂದರವಾಗಿದ್ದವು, ಅಲ್ಲದೆ ಅನೇಕ ಮಹಡಿಗಳಿಂದ, ಕಮಾನುಗಳಿಂದ ಕೂಡಿದ್ದವೆಂದು ವಿವರಿಸಿದ್ದಾನೆ. ಹೀಗಾಗಿ ಅಂದು ವಸತಿ ವ್ಯವಸ್ಥೆ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿದ್ದುದು ಸ್ಪಷ್ಟ.

ಕುರುಬರ ಮನೆಗಳು ಸಾಮಾನ್ಯವಾಗಿ ವಿಶಾಲವಾದ ಆವರಣವನ್ನು ಹೊಂದಿರುತ್ತವೆ. ಕೊಪ್ಪಳ ಜಿಲ್ಲೆಯಾದ್ಯಂತ ಮಣ್ಣಿನ, ಹಂಚಿನ, ಕಲ್ಲಿನ ಮನೆಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಮನೆಗಳನ್ನು ವಾಸ್ತು ಪ್ರಕಾರವೇ ನಿರ್ಮಿಸಿರುತ್ತಾರೆ. ಮನೆಯ ಪ್ರವೇಶಿಸಿದಾಗ ಎಡಭಾಗದಲ್ಲಿ ದನಕರುಗಳನ್ನು ಕಟ್ಟಲು ತಗ್ಗಾದ ಸ್ಥಳಗಳನ್ನು ನಿರ್ಮಿಸಿರುವುದು. ಕಂಡುಬರುತ್ತದೆ. ಎತ್ತರದ ಕಟ್ಟೆಯಾಕಾರದ ವಿಶಾಲವಾದ ಪಡಶಾಲೆಯಿರುತ್ತದೆ. ಈ ಕೋಣೆಯಲ್ಲಿ ಧಾನ್ಯಗಳನ್ನು ಸಂಗ್ರಹಿಸಿಡುತ್ತಾರೆ. ಪಡಸಾಲೆಯ ನಂತರ ವಿಶ್ರಾಮದ ಅಥವಾ ಮಲಗುವ ಕೋಣೆಗಳಿರುತ್ತವೆ. ಮನೆಯ ಹಜಾರಕ್ಕೆ ಹೊಂದಿ ದೇವರ ಮನೆಯಿರುತ್ತದೆ. ನಂತರ ಅಡಿಗೆ ಮನೆಯಿರುತ್ತದೆ. ಪ್ರತಿ ಮನೆಯಲ್ಲೂ ಬೀಸುವ ಕಲ್ಲು, ಒಳಕಲ್ಲು, ಒಲೆ, ಹಗೇವು ದನದ ಕೊಟ್ಟಿಗೆ ಪ್ರಮುಖವಾಗಿರುತ್ತವೆ.

ಕುರುಬರು ಮನೆಗಳನ್ನು ನಿರ್ಮಿಸುವಾಗ ಹಲವಾರು ವಿಧಿ–ವಿಧಾನಗಳನ್ನು ನಂಬಿಕೆಗಳನ್ನು ಅನುಸರಿಸುತ್ತಾರೆ. ಅವುಗಳಲ್ಲಿ ಪಶ್ಚಿಮ ದಿಕ್ಕಿಗೆ ಬಾಗಿಲಿರಬಾರದು, ಆಗ್ನೇಯ ಮೂಲೆಯಲ್ಲಿ ಒಲೆಯಿರಬೇಕು, ಮನೆಯ ಮುಂಭಾಗದಲ್ಲಿ ದನದ ಕೊಟ್ಟಿಗೆಯಿರಬೇಕು, ಮನೆಯ ಸುತ್ತಳತೆಯಲ್ಲಿ ಈಶಾನ್ಯ ಮೂಲೆ ಸ್ವಲ್ಪ ಅಧಿಕವಾಗಿರಬೇಕು, ದವಸ ಧಾನ್ಯದ ಹಗೇವುಗಳಿರಬೇಕು. ಈ ಮೊದಲಾದವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

ಆಧುನಿಕರಣ ಮತ್ತು ಪಾಶ್ಚಾತ್ಯಿಕರಣದಿಂದಾಗಿ ವಸತಿ ವ್ಯವಸ್ಥೆ, ಪರಿವರ್ತನೆಗೊಂಡಿದೆ. ಮಣ್ಣಿನ, ಹಂಚಿನ ಮನೆಗಳು ಇಲ್ಲವಾಗಿವೆ. ಬದಲಿಗೆ ಕಲ್ಲಿನ ಮನೆಗಳು, ಆರ್.ಸಿ.ಸಿ ಮನೆಗಳು ನಿರ್ಮಾಣಗೊಂಡಿವೆ. ವಿಭಕ್ತ ಕುಟುಂಬಗಳು

ಅಧಿಕವಾಗಿರುವದರಿಂದ ಮನೆಯು ನಿರ್ಮಾಣವು ಅದನ್ನು ಅವಲಂಭಿಸಿರುವುದು ಕಂಡುಬರುತ್ತದೆ. ಇಂದಿಗೂ ಅಲೆಮಾರಿ ಕುರುಬರು ತಮಗಿಷ್ಟವಾದ ಪ್ರದೇಶಗಳಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಒಟ್ಟಾರೆ ಕುರುಬರ ವಸತಿ ವ್ಯವಸ್ಥೆ ಅವರ ಆರ್ಥಿಕ ಸ್ಥಿತಿಗತಿಗನುಗುಣವಾಗಿರುವುದು ಕಂಡುಬರುತ್ತದೆ.

### ೫.೧೯ ನ್ಯಾಯ ಪದ್ಧತಿ

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಅರಸರು ತಮ್ಮ ನ್ಯಾಯ ತೀರ್ಮಾನದ ಕಾರ್ಯಭಾರವನ್ನು ಕಡಿಮೆ ಮಾಡಿಕೊಳ್ಳುವ ಹಾಗೂ ಆಯಾ ಸಮುದಾಯಗಳ ಕುಲಾಚಾರಗಳನ್ನು ಉಳಿಸಿ–ಬೆಳೆಸುವ ಹಿನ್ನೆಲೆಯಲ್ಲಿ ಕಟ್ಟೆಮನೆಗಳಿಗೆ ಅಧಿಕಾರವನ್ನು ನೀಡಿದರು. ಜನರು ಸಹ ತಮ್ಮ ಹಿತಾಸಕ್ತಿಗಳ ರಕ್ಷಣೆಗೆ ಮತ್ತು ಸಣ್ಣಪುಟ್ಟ ಸಮಸ್ಯೆಗಳ ನಿವಾರಣೆಗೆ ಗೌರವಾನ್ವಿತ, ಬುದ್ಧಿವಂತ ವ್ಯಕ್ತಿಯನ್ನು ಕಟ್ಟೆಮನೆಯ ಯಜಮಾನನ್ನಾಗಿ ನೇಮಿಸುತ್ತಿದ್ದರು.[೫೧] ನ್ಯಾಯಪಕ್ಷಪಾತಿಗಳಾದ ಇವರು ಜನರ ಪ್ರತಿನಿಧಿಗಳಾಗಿರುತ್ತಾರೆ. ಈ ಕಟ್ಟೆಮನೆಯ ಯಜಮಾನನನ್ನು ಗೌಡ, ನಾಡಗೌಡ ಎಂದು ಕರೆಯಲಾಗಿದೆ. ಜನತೆಯ ಸಾಮಾಜಿಕ ಹಾಗೂ ಧಾರ್ಮಿಕ ಬದುಕಿನ ಅವಿಭಾಜ್ಯ ಅಂಗವಾಗಿದ್ದ ಕಟ್ಟೆಮನೆಗಳು ಪ್ರತಿಯೊಂದು ಸಮುದಾಯದಲ್ಲೂ ಕಂಡುಬರುತ್ತವೆ.[೫೨] ಈ ರೀತಿಯ ಕಟ್ಟೆಮನೆಗಳನ್ನು ಕುರುಬ ಜನಾಂಗವೂ ಹೊಂದಿದೆ.

ಶಾಂತಿ ಹಾಗೂ ಸುವ್ಯವಸ್ಥಿವಾದ ಜೀವನ ನಡೆಸಲು ಕುರುಬ ಜನಾಂಗವೂ ತನ್ನದೇ ಆದ ನ್ಯಾಯ ವ್ಯವಸ್ಥೆಯನ್ನು ಹೊಂದಿದೆ. ಅದನ್ನು 'ಕಟ್ಟೆಮನೆ' ಎಂದು ಕರೆಯುತ್ತಾರೆ. ಇದರಲ್ಲಿ ಅನ್ಯ ಜಾತಿ ಜನಾಂಗಗಳ ಪ್ರವೇಶವಿರುವುದಿಲ್ಲ. ಕುಲದ ಸಮಸ್ಯೆಗಳನ್ನು ಗೌಡ, ಹೆಗ್ಗಡೆ, ಕಟ್ಟೆಮನೆ ಯಜಮಾನರು ಪರಿಹರಿಸುತ್ತಾರೆ. ಕಟ್ಟೆಮನೆಯ ಯಜಮಾನನಿಗೆ ವಯಸ್ಸು ಮುಖ್ಯವಾಗಿರುವುದಿಲ್ಲ. ಆತನು ತನ್ನ ನಾಯಕತ್ವ ಗುಣದೊಂದಿಗೆ ತನ್ನ ಜಾತಿ, ಜನಾಂಗಗಳ ಬಗ್ಗೆ ಕಾಳಜಿ, ಹಿತಚಿಂತನೆ, ಯೋಗಕ್ಷೇಮ, ವಿಚಾರಿಸುವ ಗುಣಉಳ್ಳವನಾಗಿರುತ್ತಾನೆ. ಇವನ ಹುದ್ದೆ ಅನುವಂಶಿಯವಾಗಿರುವುದಿಲ್ಲ. ಆದರೆ ಅವನ ಕಾರ್ಯದಕ್ಷತೆಯನ್ನು ಅವಲಂಭಿಸಿರುತ್ತದೆ. ಕಠಿಣವಾದ ವ್ಯಾಜ್ಯಗಳನ್ನು ನಾಡಗೌಡ, ದಳವಾಯಿ, ಕೋಲಕಾರ, ಗುರುಮಠದವರು ತೀರ್ಮಾನಿಸುತ್ತಾರೆ.[೫೩] ಇವರಿಗೆ ಸಮಾಜದಲ್ಲಿ ಗೌರವಯುತ ಸ್ಥಾನವಿರುತ್ತದೆ. ಇವರ ತೀರ್ಮಾನವೇ ಅಂತಿಮವಾಗಿರುತ್ತದೆ. ಅದನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇರುವದಿಲ್ಲ. ಹೀಗಾಗಿ ಕುರುಬರ ನ್ಯಾಯಿಕ ವ್ಯವಸ್ಥೆ ಉನ್ನತಮಟ್ಟದಲ್ಲಿತ್ತೆಂದು ಹೇಳಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದಾದ್ಯಂತ ನ್ಯಾಯ ಕಟ್ಟೆಮನೆಗಳಿದ್ದ ಬಗ್ಗೆ ಆಧಾರಗಳಿವೆ. ಹಕ್ಕ–ಬುಕ್ಕರ ಕಾಲದಲ್ಲಿ ನ್ಯಾಯಕಟ್ಟೆಗಳನ್ನು ಕುರುಬಕಟ್ಟೆಗಳು, ಕಟ್ಟೆಮನೆಗಳು ಹಾಗು ಮಹಾಜನ ಸಭೆಗಳೆಂಬ ಹೇಸರಿನಿಂದ ಕರೆಯುತ್ತಿದ್ದರು.[೫೪] ಈ ನ್ಯಾಯಕಟ್ಟೆಗಳು ಪ್ರಸ್ತುತ ಸಮಾಜದಲ್ಲಿ ಪ್ರಚಲಿತದಲ್ಲಿರುವ ಪಂಚಾಯತಿ ಕಟ್ಟೆಗಳಿಗೆ ಪ್ರೇರಣೆಯಾಗಿವೆ. ಅಗ್ರಹಾರಗಳ ಮುಖ್ಯಸ್ಥರು ನ್ಯಾಯದ ಮಂತ್ರ ದಂಡವನ್ನಿಡಿದು ನ್ಯಾಯಕಟ್ಟೆಗಳಲ್ಲಿ ಕುಳಿತು ಪ್ರಜೆಗಳ ಸಮ್ಮುಖದಲ್ಲಿ ನಿಸ್ಪಕ್ಷಪಾತವಾದ ತೀರ್ಪನ್ನು ಕೊಡುತ್ತಿದ್ದರು. ತಪ್ಪುಮಾಡಿದವರಿಗೆ ದಂಡ ವಿಧಿಸುವುದು, ಆಸ್ತಿ ಮುಟ್ಟುಗೋಲು ಹಾಕಿಕೊಳ್ಳುವುದು ಹಾಗು ಇನ್ನಿತರ ಕಠಿಣ ಶಿಕ್ಷೆಗಳನ್ನು ನೀಡುತ್ತಿದ್ದರು. ಜನರು ಈ ತೀರ್ಮಾನಗಳಿಗೆ ತಲೆಬಾಗುತ್ತಿದ್ದರು.

ವಿಜಯನಗರ ಕಾಲದಲ್ಲಿ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಲೇಪಾಕ್ಷಿ ದೇವಾಲಯವನ್ನು ನಿರ್ಮಿಸಿದ ವಾಸ್ತುಶಿಲ್ಪಿಗಳಿಗೆ ಗುತ್ತಿಗೆದಾರನು ನೀಡಬೇಕಾಗಿದ್ದ ವರಹಗಳ ಬಗ್ಗೆ ವಿವಾದ ಉಂಟಾಯಿತು. ಆಸಮಯದಲ್ಲಿ ಹತ್ತಿರದಲ್ಲೆ ಕುರಿಕಾಯುತ್ತಿದ್ದ ಕುರುಬರ ಹುಡುಗನು ಶಿಲ್ಪಿಗಳಿಗೆ ನೀಡಬೇಕಾದ ವರಹಗಳ ಬಗ್ಗೆ ತೀರ್ಪು ನೀಡಿದನು. ಉತ್ತಮ ತೀರ್ಪು ನೀಡಿದ ಕೃತಜ್ಞತೆಯ ಸಂಕೇತವಾಗಿ ಶಿಲ್ಪಿಗಳು ಆ ಹುಡುಗನ ಪ್ರತಿಮೆಯನ್ನು ಲೇಪಾಕ್ಷಿ ದೇವಾಲಯದ ಮುಖ್ಯದ್ವಾರದ ಕಲ್ಲಿನ ಕಂಬದ ಮೇಲೆ ಕೆತ್ತಿದರು.[೫೫] ಇದು ಕುರುಬರು ನ್ಯಾಯ ಸಮ್ಮತವಾದ ತೀರ್ಪು ನೀಡುವಲ್ಲಿ ಸಿದ್ಧಹಸ್ತರೆಂಬುದಕ್ಕೆ ಸಾಕ್ಷಿಯಾಗಿದೆ.

ವಿಜಯನಗರ ಕಾಲದಲ್ಲಿ ನಿರ್ಮಿತಗೊಂಡಿರುವ ಕೊಪ್ಪಳ ಜಿಲ್ಲೆಯ ಕನಕಗಿರಿಯ ಕನಕರಾಯನ ದೇವಾಲಯ ಹಾಗು ಯಲಬುರ್ಗಾ ತಾಲೂಕಿನ ಕಲ್ಲೂರು ದೇವಾಲಯಗಳ ಕಂಬಗಳು ವಿಶಿಷ್ಟವಾಗಿವೆ. ಈ ಕಂಬಗಳು ಅನೇಕ ಕೆತ್ತನೆಗಳನ್ನು ಒಳಗೊಂಡಿವೆ. ಕಂಬಗಳಮೇಲೆ ಒಬ್ಬ ವ್ಯಕ್ತಿ ತಲೆಯಿಂದ ಪಾದದಡಿಯವರೆಗೆ ಕಂಬಳಿಹೊದ್ದುಕೊಂಡಿದ್ದು, ಕೈಯಲ್ಲಿ ಬೆತ್ತವನ್ನು ಹಿಡಿದಿರುವುದು ಕಂಡುಬರುತ್ತದೆ. ಆ ಬೆತ್ತ ನ್ಯಾಯ ದಂಡವಾಗಿದೆ. ಕುರುಬರ ಕೈಯಲ್ಲಿರುವ ದಂಡವು ನ್ಯಾಯದಂಡವೆಂದು ಸ್ಕಂದ ಪುರಾಣದಲ್ಲಿ ಉಲ್ಲೇಖಿಸಿದೆ. ಇದರಿಂದ ಮಧ್ಯಕಾಲದಲ್ಲಿ ಕೊಪ್ಪಳ ಪ್ರದೇಶದ ಕುರುಬರು ನ್ಯಾಯ ತೀರ್ಮಾನ ಮಾಡುತ್ತಿದ್ದರೆಂದು ತಿಳಿಯುತ್ತದೆ.

ಆಧುನಿಕ ಕಾಲದಲ್ಲಿಯೂ ಕುರುಬರು ತಮ್ಮ ಹಳೆಯ ನ್ಯಾಯ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಗ್ರಾಮಗಳಲ್ಲಿ ಗುಡಿಮನೆ, ಕಟ್ಟೆಮನೆ, ಗೌಡರು, ಪಾಟೀಲರು, ಹಾಗೂ ಗುರುಗಳ ಸಮ್ಮುಖದಲ್ಲಿ ತಮ್ಮ ನ್ಯಾಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಯಾವುದೇ ನ್ಯಾಯವಾಗಲಿ ಹಟ್ಟಿಯಿಂದ ಹೊರ ಹೋಗುವಂತಿಲ್ಲ ಹಾಗು ಹಟ್ಟಿಯಲ್ಲೇ ತೀರ್ಮಾನವಾಗಬೇಕೆಂಬ ನಿಯಮವಿದೆ. ಈ ಕಟ್ಟೆಮನೆಗಳ ಮುಖಾಂತರ ಸಮುದಾಯದ ನ್ಯಾಯ ನಿರ್ಣಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಕಟ್ಟೆಮನೆಗಳಿಗೆ ಬರುವ ನ್ಯಾಯಗಳು ಈ ರೀತಿಯಾಗಿವೆ.[೫೬]

೧. ಆಸ್ತಿಯನ್ನು ಹಂಚಿಕೊಳ್ಳುವಲ್ಲಿ ಅಣ್ಣ– ತಮ್ಮಂದಿರ ನಡುವೆ ಕಲಹ

೨. ಗಂಡ– ಹೆಂಡತಿಯರ ಮನಸ್ತಾಪ ಅಥವಾ ವಿವಾಹ ವಿಚ್ಛೇದನ

೩. ಒಂದೆ ಕುಲ ಅಥವಾ ಸಪಂಗಡದಲ್ಲಿ ವಿವಾಹವಾದರೆ

೪. ಸ್ತ್ರೀ ಅಥವಾ ಪುರುಷ ಅನೈತಿಕ ಸಂಬಂಧ ಮಾಡಿದರೆ.

೫. ಕೊಲೆ, ಸುಲಿಗೆ ಅಥವಾ ಸಾಮಾಜಿಕ ನಿಯಮಗಳ ಉಲ್ಲಂಘನೆ

೬. ಹಟ್ಟಿಯ ಯಜಮಾನ ಅಥವಾ ಕುಲಗುರುಗಳಿಗೆ ಅವಮಾನ ಮಾಡಿದರೆ.

ಅಪರಾಧಿಯಾಗಿರುವ ವ್ಯಕ್ತಿಯ ಬಗ್ಗೆ ನಿಷ್ಪಕ್ಷಪಾತವಾದ ನ್ಯಾಯ ನಿರ್ಣಯಮಾಡಿ ದಂಡ ಅಥವಾ ಶಿಕ್ಷೆ ವಿಧಿಸುವ ಹಕ್ಕು ಯಜಮಾನನಿಗಿರುತ್ತದೆ. ಅಪರಾಧಕ್ಕೆ ತಕ್ಕಂತೆ ಶಿಕ್ಷೆ ವಿಧಿಸುತ್ತಾರೆ. ಹಣದ ರೂಪದಲ್ಲಿ ದಂಡ ವಿಧಿಸಿದರೆ, ಬಹಿಷ್ಕಾರ ರೂಪದಲ್ಲಿ ಕಠಿಣ ಶಿಕ್ಷೆ ನೀಡಲಾಗುತ್ತದೆ. ಈ ದಂಡ ಮತ್ತು ಬಹಿಷ್ಕಾರದಂತ ಶಿಕ್ಷೆಗೆ ಹೆದರಿ ಸಾಮಾಜಿಕ ನಿಯಮಗಳನ್ನು ಪಾಲಿಸುತ್ತಾರೆ.

ಇಂದಿಗೂ ಕೊಪ್ಪಳ ಜಿಲ್ಲೆಯಲ್ಲಿ ಕುರುಬರು ನ್ಯಾಯ ತೀರ್ಮಾನ ಮಾಡುವುದು ಕಂಡುಬರುತ್ತದೆ. ಗೌಡರು, ಪಾಟೀಲರು,

ಕಟ್ಟೆ ಮನೆಯವರು, ಗುರುಗಳು, ದಳಪತಿಗಳು ನ್ಯಾಯ ತೀರ್ಮಾನ ಮಾಡುತ್ತಾರೆ. ಕೊಪ್ಪಳ ಜಿಲ್ಲೆಯಾದ್ಯಂತ ಗೌಡರು, ಪೋಲೀಸ ಪಾಟೀಲ, ಓಲೆಕಾರ, ಗುರಿಕಾರ ಎನ್ನುವ ಮನೆತನದವರಿದ್ದಾರೆ. ಅಲ್ಲದೆ ಅನೇಕ ಮನೆತನದವರು ದಳಪತಿಗಳಾಗಿ ಗ್ರಾಮದ ಆಗು–ಹೋಗುಗಳನ್ನು ನೋಡಿಕೊಳ್ಳುತ್ತಿದ್ದಾರೆ. ಅವರಲ್ಲಿ ಕೊಪ್ಪಳ ತಾಲೂಕಿನ ಚಿಕ್ಕಬಗನಾಳ ಗ್ರಾಮದ ದಳಪತಿ ನಿಂಗಪ್ಪ ಗುಳದಳ್ಳಿ, ಬಿಳೇಬಾವಿಯ ದಳಪತಿ ಸಣ್ಣ ಹನುಮಂತಪ್ಪ ಕನಕಪ್ಪ ದಾಡೇಸುರ, ಕುದುರೆಮೋತಿಯ ದಳಪತಿ ಹನುಮನಗೌಡ ಕರೇಗೌಡ, ಉಪ್ಪಲದಿನ್ನಿಯ ಶಿವನಗೌಡ ಹನುಮಗೌಡ, ಚೌಡಾಪುರದ ಹನುಮನಗೌಡ ನೀಲನಗೌಡ, ದನಕನದೊಡ್ಡಿ ಹನುಮಪ್ಪ ಗಿಡ್ಡಪ್ಪ ಕತ್ತಿ ಮೊದಲಾದರು ದಳಪತಿಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಗ್ರಾಮದಲ್ಲಿ ಯಾವುದೇ ಕಲಹಗಳಾದರೂ ಪ್ರಥಮವಾಗಿ ಇವರು ವಿಚಾರಣೆ ನಡೆಸುತ್ತಾರೆ. ಪೋಲಿಸರು ಇವರ ಬಳಿ ಬಂದು ರಿಜಿಸ್ಟಾರ್‌ನಲ್ಲಿ ಸಹಿ ಮಾಡಿ ಹೋಗಬೇಕಾಗುತ್ತದೆ. ಒಟ್ಟಾರೆ ಗ್ರಾಮದ ಜವಾಬ್ದಾರಿ ಇವರಿಗೆ ನೀಡಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕುರುಬರು ನ್ಯಾಯ ತೀರ್ಮಾನ ಮಾಡುತ್ತಿದ್ದರೆಂದು ತಿಳಿಯುತ್ತದೆ. ಆದರೆ ಕೆಲವಡೆ ಕಟ್ಟೆಮನೆಗಳಿಂದ ತೀರ್ಮಾನವಾಗದ ನ್ಯಾಯಗಳನ್ನು ನ್ಯಾಯಾಲಯದಲ್ಲಿ ತೀರ್ಮಾನಿಸಿಕೊಳ್ಳಲಾಗುತ್ತದೆ. ಆಧುನಿಕತೆಯ ಪ್ರಭಾವಕ್ಕೊಳಗಾದವರು ಗೌಡರ, ದಳಪತಿಗಳ, ಗುರುಹಿರಿಯರ ತೀರ್ಪನ್ನು ತಿರಸ್ಕರಿಸಿ ನ್ಯಾಯಾಲಯದ ಮೊರೆ ಹೋಗುತ್ತಿರುವುದು ಕಂಡುಬರುತ್ತದೆ. ಇದು ನ್ಯಾಯ ಪದ್ಧತಿಯಲ್ಲಾದ ಬದಲಾವಣೆಯನ್ನು ಸ್ಪಷ್ಟಪಡಿಸುತ್ತದೆ.

**೫.೧.೧೦ ವೈದ್ಯ ಪದ್ಧತಿ**

ಆದಿಮಾನವನ ಜೀವನ ಸಂಪೂರ್ಣವಾಗಿ ನೈಸರ್ಗಿಕವಾಗಿತ್ತು. ದಿನವಿಡಿ ಕಾಡುಗಳಲ್ಲಿ ಅಲೆಯುತ್ತಿದ್ದರಿಂದ ಅವನಿಗೆ ಗಿಡಮೂಲಿಕೆಗಳ ಪರಿಚಯವಿತ್ತು. ಆದ್ದರಿಂದ ಮಾನವ ತನ್ನನ್ನು ಕಾಡುವ ರೋಗಗಳಿಗೆ ಪರಿಹಾರ ಕಂಡುಕೊಳ್ಳಲು ಮೊದಲು ಪ್ರಕೃತಿಗೆ ಮೊರೆಹೊದ. ನೈಸರ್ಗಿಕವಾಗಿ ದೊರೆಯುವ ಗಿಡಮೂಲಿಕೆಗಳಿಂದ ಔಷಧಿಗಳನ್ನು ತಯಾರಿಸಿದ. ಹೀಗಾಗಿ ಪ್ರಕೃತಿಯೇ ಅವನಿಗೆ ಸಂಜೀವಿನಿಯಾಯಿತು.

ಪ್ರಪಂಚದ ಇಂದಿನ ವೈದ್ಯ ಪದ್ಧತಿಗೆ ಜನಪದ ವೈದ್ಯವೇ ತಾಯಿಬೇರಾಗಿದೆ. ಈ ವೈದ್ಯ ಪದ್ಧತಿಯು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿದ್ದೆ. ನಾಟವೈದ್ಯ, ನಾಡವೈದ್ಯ, ಮನೆಮದ್ದು, ಕೈಔಷದಿ, ಹಸಿರುಔಷದಿ, ಮೊದಲಾದ ಹೆಸರುಗಳಿಂದ ವೈದ್ಯಪದ್ಧತಿಯನ್ನು ಗುರುತಿಸಲಾಗುತ್ತದೆ. ಅಲ್ಲದೆ ಇಂದು ಎಲ್ಲೆಡೆ ಬಳಕೆಯಲ್ಲಿರುವ ಅಲೋಪತಿ, ಆಯುರ್ವೇದ, ಯುನಾನಿ, ಹೋಮಿಯೋಪತಿ ಮೊದಲಾದ ಎಲ್ಲ ವೈದ್ಯ ಪದ್ಧತಿಗಳಿಗೂ ಜನಪದ ವೈದ್ಯ ಪದ್ಧತಿಯೇ ಮೂಲವಾಗಿದೆ. ಈ ರೀತಿಯ ಜನಪದ ವೈದ್ಯ ಪದ್ಧತಿಯು ಕುರುಬರಲ್ಲಿ ಕಂಡುಬರುತ್ತದೆ.

ಕುರುಬರು ಈ ವೈದ್ಯ ಪದ್ಧತಿಯಲ್ಲಿ ಪ್ರವೀಣರಾಗಿದ್ದಾರೆ. ಮೂಲತಃ ಕಾಡಿನವಾಸಿಗಳಾದ ಕುರುಬರು ಕುರಿಗಳನ್ನು ಸಾಕಲು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಇದರಿಂದಾಗಿ ಆ ಪ್ರದೇಶದ ಔಷಧೀಯ ಗಿಡಮೂಲಿಕೆಗಳ ಪರಿಚಯವಿರುತ್ತಿತ್ತು. ಔಷಧಿಯನ್ನು ತಯಾರಿಸುತ್ತಿದ್ದರಲ್ಲದೆ, ಕೆಲವರು ಯಂತ್ರ, ಮಂತ್ರ ಮಾಟಗಳನ್ನು ಮಾಡುತ್ತಿದ್ದರು.ತಮ್ಮ ಸುತ್ತ–ಮುತ್ತಲಿನ ಜನರಿಗೆ ದನಕರು, ಕುರಿ, ಮೇಕೆ, ಎಮ್ಮೆ, ಹಸು ಮೊದಲಾದವುಗಳಿಗೆ ನಾಟವೈದ್ಯ ಪದ್ಧತಿಯ ಮೂಲಕ ಕಾಯಿಲೆಗಳಿಗೆ ಔಷಧಿ ಕೊಡುತ್ತಿದ್ದರು.

ಪಶುಪಾಲಕರಾಗಿದ್ದ ಕುರುಬರು ತಮ್ಮ ಪ್ರಾಣಿಗಳಿಗೆ ತಗಲುವ ರೋಗಗಳಿಗೆ ತಾವೇ ಚಿಕಿತ್ಸೆ ಮಾಡುತ್ತಿದ್ದರು. ಜಾನುವಾರುಗಳಿಗೆ ತಗಲುವ ರೋಗಗಳಲ್ಲಿ ರಕ್ತಕುಂದು, ಹೊಟ್ಟೆನೋವು, ಗಂಟಲುನೋವು, ಕೆಚ್ಚಲಬಾವು, ಕಾಲು ಮುರಿತ, ಚಪ್ಪೆ ಜಾರುವುದು, ಬಾಯಿಜ್ವರ, ಕಳ್ಳೆಬಾವು ಮೊದಲಾದವುಗಳಾಗಿದ್ದವು.[೫೭] ಈ ಕಾಯಿಲೆಗಳಿಗೆ ಔಷಧಿಗಳನ್ನು ತಯಾರಿಸಲು ಹಸಿರೆಲೆ, ಬಳ್ಳಿ, ಬೇರು, ಕಾಯಿ, ಸೊಪ್ಪು, ಗಿಡ, ಹೂವು, ಬೀಜ ಮೊದಲಾದವುಗಳನ್ನು ತಂದು ಅವುಗಳನ್ನು ಅರೆದು ಕುರಿಹಾಲಿನಲ್ಲಿ ಬೆರೆಸಿ ಕುಡಿಸುವ ಪದ್ಧತಿಯಿದೆ.

ಮನುಷ್ಯನಿಗೆ ಬರುವ ರೋಗಗಳಲ್ಲಿ ಅರೆತಲೆನೋವು, ಹೊಟ್ಟೆನೋವು, ಬಿಳಿಕೆರೆ, ಕೆಂಪುಕರೆ, ಕೈಮಸುಗು, ಪಿತ್ತ, ಬೇಧಿ, ಜ್ವರ, ತೊನ್ನು,ನಿಸ್ಸಂತಾನ, ತಲೆಸುತ್ತುವುದು ಮೊದಲಾದವುಗಳಿದ್ದವು. ಈ ಕಾಯಿಲೆಗಳಿಗೆ ಸಹ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಿಯನ್ನು ಮೇಕೆಹಾಲು, ಎದೆಹಾಲು, ಬೆಲ್ಲ, ಮಜ್ಜಿಗೆ, ಜೇನುತುಪ್ಪ, ಮೊದಲಾದವುಗಳಲ್ಲಿ ಬೆರೆಸಿಕೊಡುತ್ತಿದ್ದರು ಅಥವಾ ಮೈಮೇಲೆ ಲೇಪಿಸುತ್ತಿದ್ದರು. ಔಷಧಿ ಕೊಡುವ ಪಂಡಿತರು ಅಥವಾ ವೈದ್ಯರು ಗುರುವಾರ ಹಾಗೂ ಭಾನುವಾರ ಮಾತ್ರ ಚಿಕಿತ್ಸೆ ಮಾಡುವುದು ಕಂಡುಬರುತ್ತದೆ.

ಕುರುಬರು ಮಂತ್ರ, ತಂತ್ರ, ಮಾಯಾ–ಮಾಟಗಳಲ್ಲಿ ಸಿದ್ಧಹಸ್ತರಾಗಿದ್ದರು. ತಾಯಿತ, ತಾಮ್ರದ ತಗಡು, ನಿಂಬೆಹಣ್ಣು, ದಾರ ಮೊದಲಾದ ವಸ್ತುಗಳನ್ನು ಮಂತ್ರಿಸಿ ರೋಗಗಳಿಗೆ ಕಟ್ಟುತ್ತಿದ್ದರು. ಇದರಿಂದ ರೋಗಗಳು ಗುಣವಾಗುತ್ತವೆ ಎಂಬ ನಂಬಿಕೆ ಜನರಲ್ಲಿದೆ. ಅಲ್ಲದೆ ಮತ್ತೊಬ್ಬರಿಗೆ ಕೇಡಕನ್ನುಂಟು ಮಾಡುವ ಮಾಯ–ಮಾಟಗಳನ್ನು ಮಾಡುತ್ತಿದ್ದರು. ಇವರು ಸಾಮಾನ್ಯವಾಗಿ ಶೈವಧರ್ಮಿಗಳಾಗಿರುತ್ತಾರೆ. ಕಾಳಬೈರವ, ಕುರಿಬೆಟ್ಟರಾಯ, ಹಿರಿದೇವ ಮೊದಲಾದ ಶೈವದೇವರುಗಳನ್ನು ಆರಾಧಿಸುತ್ತಾರೆ. ಕಾಲಾನಂತರ ಕುರುಬರು ಮಾಯ–ಮಾಟಗಳಿಂದ ಜನರನ್ನು ಕೊಲ್ಲುವರೆಂಬ ವದಂತಿ ಹಬ್ಬಿತು. ಬಡವರ, ತೊಡವರ ಮನೆಗಳಲ್ಲಿ ಯಾರಾದರೂ ರೋಗ ಬಂದು ಮರಣ ಹೊಂದಿದರೆ ಕುರುಬರ ಬಗ್ಗೆ ಅನುಮಾನ ಪಡುತ್ತಿದ್ದರು. ಹೀಗಾಗಿ ಕುರುಬರು ಏಕಾಂಗಿಯಾಗಿ ದೊರೆತರೆ ಕೊಲ್ಲುತ್ತಿದ್ದರು. ಇದರಿಂದಾಗಿ ಕ್ರಿ.ಶ. ೧೮೨೪, ಕ್ರಿ.ಶ. ೧೮೩೫, ಕ್ರಿ.ಶ. ೧೮೮೨, ಕ್ರಿ.ಶ. ೧೮೯೧ ಮತ್ತು ಕ್ರಿ.ಶ. ೧೯೦೦ರಲ್ಲಿ ಅಸಂಖ್ಯಾತ ಕುರುಬರ ವಸತಿಗಳು ನಾಶವಾದವು.[೫೮] ಈ ಹಿನ್ನೆಲೆಯಲ್ಲಿ ಕುರುಬರು ಮಾಯ–ಮಾಟ–ಮಂತ್ರ–ತಂತ್ರಗಳಲ್ಲಿ ಪ್ರಸಿದ್ಧರಾಗಿದ್ದರೆಂದು ತಿಳಿದು ಬರುತ್ತದೆ.

ಪ್ರಸ್ತುತ ಕಾಲದಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಕುರುಬರು ನಾಟಿವೈದ್ಯ ವೃತ್ತಿಯನ್ನು ಮಾಡುವುದು ಕಂಡುಬರುತ್ತದೆ. ಅವರಲ್ಲಿ ಪ್ರಮುಖರೆಂದರೆ ಕೊಪ್ಪಳ ತಾಲೂಕಿನ ಚಿಕ್ಕಸಿಂಧೋಗಿ ಗ್ರಾಮದ ಬೂತಣ್ಣನವರ್ ಮನೆತನದವರು. ಇವರು ವಂಶ ಪಾರಂಪರ್ಯವಾಗಿ ಈ ವೃತ್ತಿಯನ್ನು ಮಾಡಿಕೊಂಡು ಬರುತ್ತಿದ್ದಾರೆ. ಪಿಡ್ಸ, ಮೂಲವ್ಯಾಧಿ, ಮಾನಸಿಕ ಕಾಯಿಲೆ, ರಕ್ತದೊತ್ತಡ, ಅಲ್ಸರ, ಮೊದಲಾದ ರೋಗಗಳಿಗೆ ಔಷಧಿ ಕೊಡುತ್ತಾರೆ. ಅಲ್ಲದೆ ದೆವ್ವ ಭೂತ ಹಿಡಿದವರಿಗೆ ಅಥವಾ ಹುಚ್ಚು ಹಿಡಿದವರಿಗೆ ಔಷದಿ ನೀಡುತ್ತಾರೆ ಹಾಗೂ ತಾಯತ ಕಟ್ಟುತ್ತಾರೆ. ಕರ್ನಾಟಕದ ನಾನಾ ಭಾಗಗಳಿಂದ ಜನರು ಚಿಕಿತ್ಸೆಗಾಗಿ ಇವರಲ್ಲಿ ಬರುತ್ತಾರಲ್ಲದೆ, ಗುಣಮುಖರಾಗಿರುವುದು ಕಂಡುಬಂದಿದೆ.

ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಯಲ್ಲಿ ಒಬ್ಬ ನಾಟಿವೈದ್ಯನಿರುವುದು ಕಂಡುಬರುತ್ತದೆ. ಕೊಪ್ಪಳದಲ್ಲಿ ಯಮನಪ್ಪ ಹುದ್ದೂರ್ ಮನೆತನದವರು ಮೃಗಶಿರ ಮಳೆಯ ಸಂದರ್ಭದಲ್ಲಿ ಅಸ್ತಮ ರೋಗಿಗಳಿಗೆ ಔಷಧಿಯನ್ನು ಕೊಡುತ್ತಾರೆ. ಇದೇ

ರೀತಿ ಯಲಬುರ್ಗಾ ತಾಲೂಕಿನ ಮಸಬಹಂಚಿನಾಳ ಗ್ರಾಮದಲ್ಲಿ ಮುಟ್ಟಪ್ಪ ನಡಕಟ್ಟಿನ್ ಎಂಬುವರು ಔಷಧಿ ನೀಡುವವರಾಗಿದ್ದಾರೆ. ನಾಟಿವೈದ್ಯ ಪದ್ಧತಿಯನ್ನು ಅಧಿಕವಾಗಿ ಅನುಸರಿಸುತ್ತಿರುವವರು ಕುರುಬರೆಂದು ತಿಳಿದುಬರುತ್ತದೆ. ಒಟ್ಟಾರೆ ನಾಟಿವೈದ್ಯಕೀಯದಲ್ಲಿ ಕುರುಬರು ಸಿದ್ಧಹಸ್ತರಾಗಿದ್ದರೆಂಬುದು ಕಂಡುಬರುತ್ತದೆ.

### ೫.೧.೧೧. ಸಂಘ ಸಂಸ್ಥೆಗಳು

೧೯ನೇ ಶತಮಾನದಲ್ಲಿಯ ಪಾಶ್ಚಾತ್ಯ ಶಿಕ್ಷಣ, ಕಾನೂನಿನ ಆಡಳಿತ ಸಾರಿಗೆ ಸಂಪರ್ಕ ಮೊದಲಾದ ಬ್ರಿಟಿಷ ಸರಕಾರದ ಕ್ರಮಗಳಿಂದಾಗಿ ಭಾರತದ ಪ್ರಜೆಗಳಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಲಾರಂಭಿಸಿತು. ಸಮಾಜದಲ್ಲಿ ಅಸಮಾನತೆ, ಅನ್ಯಾಯಗಳು ಅಧಿಕಗೊಂಡಿದ್ದವು. ಧರ್ಮ ಹಾಗೂ ನ್ಯಾಯದ ಹೆಸರಿನಲ್ಲಿ ಕೆಲವೇ ಜನರು ಸರ್ಕಾರಿ ಸವಲತ್ತುಗಳನ್ನು ಅನುಭವಿಸುತ್ತಿದ್ದರು. ಇದನ್ನು ಕಂಡು ಪ್ರತಿಭಟನೆಗಳು ಆರಂಭಗೊಂಡವು. ಹಾಗಾಗಿ ಮೈಸೂರು ಅರಸರಾದ ಕೃಷ್ಣರಾಜ ಒಡೆಯರ ಪ್ರತಿಭಟನೆಗಳ ಹಿನ್ನೆಲೆಯನ್ನು ತಿಳಿದುಕೊಂಡು ಹಿಂದುಳಿದ ವರ್ಗಗಳಿಗೆ ಅಧಿಕಾರ ಸ್ಥಾನಗಳನ್ನು ಕಾಯ್ದಿರಿಸಲು ಕ್ರಮಕೈಗೊಳ್ಳಲು ಮುಂದಾದರು.

ಸಮಾಜದಲ್ಲಿ ಉಂಟಾಗುತ್ತಿದ್ದ ಜಾಗ್ರತೆ ಮತ್ತು ಸಂಘಟನೆ ಕುರುಬ ಸಮಾಜದ ಮೇಲೂ ಪ್ರಭಾವಬೀರಿತು. ರಾಜಕೀಯ ಕ್ಷೇತ್ರದಲ್ಲಿ ಹಿಂದುಳಿದಿದ್ದ ಕುರುಬರು ಅಭಿವೃಧಿಗೊಳ್ಳುವುದಕ್ಕಾಗಿ ಸಂಘಟಿತರಾಗುವ ಅವಶ್ಯಕತೆ ಕಂಡುಕೊಂಡರು. ಕ್ರಿ.ಶ.೧೯೨೧ರಲ್ಲಿ ನೀಲಗಿರಿ ಎಸ್.ಗಿರಿಯಪ್ಪ, ನೀಲಗಿರಿಜೆ, ಸಂಜೀವಯ್ಯ ಜೇ.ಮುನಿಯಪ್ಪ, ಬೋಜಪ್ಪ ಬಿ.ವೆಂಕಟಪ್ಪ, ಹುಲಿಯಪ್ಪ, ರಾಮಪ್ಪ, ನೀಲಿ ನರಸಿಂಹಯ್ಯ, ಎಲೆ ಅಂಗಡಿ ತಾಯಪ್ಪ, ದೊಡ್ಡಯ್ಯ, ತಮ್ಮಯ್ಯ ಹಾಗೂ ಜವರಪ್ಪ ಸಹೋದರರು ಮೊದಲಾದವರು ಅನೌಪಚಾರಿಕವಾಗಿ ಕುರುಬ ಸಂಘ ಸ್ಥಾಪಿಸಿದರು. ಎರಡು ವರ್ಷಗಳ ನಂತರ ೧೯೨೩ರ ಜುಲೈ ೧೦ರಂದು ೧೯೦೪ರ ಮೈಸೂರು ಸಂಘಗಳ ನಿಯಮಾವಳಿಗನುಗುಣವಾಗಿ ಕುರುಬರ ಸಂಘ ನೊಂದಣಿಗೊಂಡಿತು. ನಂತರ ಶಿಕ್ಷಣದ ಮಹತ್ವವನ್ನು ಅರಿತ ಸಂಘ ಬೆಂಗಳೂರಿನ ಗಾಂಧಿನಗರದಲ್ಲಿ ೧೯೪೨ರಲ್ಲಿ ಮೈಸೂರಿನ ದಿವಾನನ ಮಾಧವರಾವ ಅವರಿಂದ ಕುರುಬ ಸಂಘದ ವಸತಿ ನಿಲಯದ ಕಟ್ಟಡ ನಿರ್ಮಾಣವನ್ನು ಪ್ರಾರಂಭಿಸಿದರು. ಹಾಗೇಯೇ ೨೭-೦೩-೧೯೨೮ರಲ್ಲಿ ಕುರುಬರ ಪತ್ರಿಕೆ ಪ್ರಾರಂಭಿಸಿದರು.

೧೯೫೬ರಲ್ಲಿ ಕುರುಬರ ಸಂಘದ ಹೆಸರನ್ನು ಮೈಸೂರು ಪ್ರದೇಶ ಕುರುಬರ ಸಂಘವಾಗಿ ಪರಿವರ್ತಿಸಲು ನಿರ್ಣಯಿಸಿದರು. ೧೯೭೩ರಲ್ಲಿ ಮೈಸೂರು ರಾಜ್ಯ ಕರ್ನಾಟಕವೆಂದು ನಾಮಕರಣಗೊಂಡಾಗ ಮೈಸೂರು ಪ್ರದೇಶ ಕುರುಬರ ಸಂಘವನ್ನು ಕರ್ನಾಟಕ ಪ್ರದೇಶ ಕುರುಬರ ಸಂಘವೆಂದು ಮರುನಾಮಕರಣ ಮಾಡಲಾಯಿತು. ಪ್ರಥಮ ಅಧ್ಯಕ್ಷರಾಗಿ ಶ್ರೀ ನೀಲಗಿರಿ ಎಸ್.ಗಿರಿಯಪ್ಪನವರು ಕಾರ್ಯನಿರ್ವಹಿಸಿದರು.

ಕರ್ನಾಟಕ ಪ್ರದೇಶ ಕುರುಬರ ಸಂಘದ ಕಾರ್ಯದಿಂದಾಗಿ ರಾಜ್ಯದಾದ್ಯಂತ ಸಮುದಾಯದ ಸಂಘ ಸಂಸ್ಥೆಗಳು ಆರಂಭಗೊಂಡವು ಅವುಗಳಲ್ಲಿ ಶ್ರೀ ಎನ್.ಮಲ್ಲಪ್ಪನವರಿಂದ ೧೯೫೭ರಲ್ಲಿ ಸ್ಥಾಪನೆಗೊಂಡ ತುಮಕೂರು ಕಾಳಿದಾಸ ವಿದ್ಯಾವರ್ಧಕ ಸಂಘ, ಶ್ರೀ ಬಿ.ಎಲ್.ದಂಡಿನ್‌ನವರಿಂದ ೧೯೬೫ರಲ್ಲಿ ಸ್ಥಾಪನೆಗೊಂಡ ಗದಗ ಕನಕದಾಸ ಶಿಕ್ಷಣ ಸಮಿತಿ, ಶ್ರೀ ವಿ.ಎಲ್.ಪಾಟಿಲ್‌ರವರಿಂದ ೧೯೪೫ರಲ್ಲಿ ಸ್ಥಾಪನೆಗೊಂಡ ಬಾದಾಮಿ ಕಾಳಿದಾಸ ವಿದ್ಯಾವರ್ಧಕ ಸಂಘ, ಟಿ.ಕೆ.ಕಂಬಳಿಯವರು

ಸ್ಥಾಪಿಸಿದ ಧಾರವಾಡ ಕಾಳಿದಾಸ ವಿದ್ಯಾವರ್ಧಕ ಸಂಘ, ಶ್ರೀ ಯು.ಬಿ.ಓಲೆಗಾರ ಅವರ ಬಿಜಾಪುರ ಜಿಲ್ಲೆಯ ಜಮಖಂಡಿ ಕಾಳಿದಾಸ ವಿದ್ಯಾರ್ಥಿ ನಿಲಯ, ಬೆಂಗಳೂರು ಕಾಳಿದಾಸ ಗೆಳೆಯರ ಬಳಗ ಸೇವಸಂಸ್ಥೆ ಮೊದಲಾದವು ಸಮುದಾಯದ ಶೈಕ್ಷಣಿಕ ಸುಧಾರಣೆಗೆ ಪ್ರಯತ್ನ ನಡೆಸಿದವು.

ಕೊಪ್ಪಳ ಪ್ರದೇಶದಲ್ಲಿಯ ಕುರುಬರ ಅಭಿವೃದ್ಧಿ ಸಂಘಟನೆಗಾಗಿ ಅನೇಕ ಸಂಘ ಸಂಸ್ಥೆಗಳು ಸ್ಥಾಪನೆಗೊಂಡವು. ಕೊಪ್ಪಳದ ಕುರುಬರ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗಾಗಿ ಕ್ರಿ.ಶ.೧೯೫೪ರಲ್ಲಿ ಕರ್ನಾಟಕ ಕುರುಬರ ಬೋರ್ಡಿಂಗ್ ಕೊಪ್ಪಳ ಎಂಬ ಸಂಸ್ಥೆಯನ್ನು ಹಿರೇಗೌಡ್ರು ಮಾಲಿ ಪಾಟೀಲ್ ಬಿಸರಳ್ಳಿಯವರು ಸ್ಥಾಪಿಸಿದರು. ಚನ್ನಬಸವ ಬೂತಣ್ಣನವರು ಚಿಕ್ಕಸಿಂಧೋಗಿ, ಕೊಪ್ಪಳದ ಯಮನಪ್ಪ ಹುದ್ಲೂರ, ಬಿಸರಹಳ್ಳಿ ಹಿರೇಗೌಡ್ರು ಎಚ್.ಎಸ್. ಪಾಟೀಲ್ ಮೊದಲಾದವರು ಸ್ಥಾಪನೆಗೆ ಪ್ರಮುಖರಾಗಿದ್ದರು. ಬಿಸರಹಳ್ಳಿ ಹಿರೇಗೌಡ್ರು ತಮ್ಮ ಮನೆಯಲ್ಲಿಯೇ ಬಡ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಿದ್ದರು. ನಂತರ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿದರು. ಈ ಸಂಸ್ಥೆಗೆ ಚನ್ನಬಸವ ಬೂತಣ್ಣನವರ, ಹನುಮಂತಪ್ಪ ಅಂಗಡಿ, ಕೆ.ಬಸವರಾಜ ಹಿನ್ನಾಳ, ಕರಿಯಣ್ಣ ಸಂಗಡಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಸುಮಾರು ೫೦ ವರ್ಷಗಳನ್ನು ಪೂರೈಸಿರುವ ಈ ಸಂಸ್ಥೆ ಕುರುಬ ಸಮಾಜದ ಅಭಿವೃದ್ಧಿಗೆ ಇಂದಿಗೂ ಶ್ರಮಿಸುತ್ತಿರುವದು ಕಂಡುಬರುತ್ತದೆ. ಇದೆ ಹಿನ್ನೆಲೆಯಲ್ಲಿ ಯಲಬುರ್ಗಾ ತಾಲೂಕಿನ ಮುಧೋಳ ಗ್ರಾಮದಲ್ಲಿ ಕ್ರಿ.ಶ.೧೯೮೭ರಲ್ಲಿ ಕನಕದಾಸ ಹಿರಿಯ ಪ್ರಾಥಮಿಕ ಶಾಲೆ, ೧೯೮೫ರ ಶಿವಪದ್ಮ ವಿದ್ಯಾಸಂಸ್ಥೆ ಬಸವಪಟ್ಟಣದ ರಾಜರಾಜೇಶ್ವರಿ ವಿದ್ಯಾಸಂಸ್ಥೆ, ಗಂಗಾವತಿ ತಾಲೂಕಿನ ಕನಕಗಿರಿಯ ಕನಕ ವಿದ್ಯಾರ್ಥಿ ನಿಲಯ, ಓಲೆಕಾರ ಶಿಕ್ಷಣ ಸಂಸ್ಥೆ ಕೊಪ್ಪಳ, ವಿವೇಕಾನಂದ ಶಿಕ್ಷಣ ಸಂಸ್ಥೆ ಕಾರಟಗಿ, ಮೊದಲಾದವು ಸಮುದಾಯದ ಶಿಕ್ಷಣದ ಸುಧಾರಣೆಗೆ ಶ್ರಮಿಸುತ್ತಿರುವ ಸಂಸ್ಥೆಗಳಾಗಿವೆ.

ಸಮಾಜದಲ್ಲಿ ಕುರುಬರ ಸುಧಾರಣೆ ಅಥವಾ ಸಂಘಟನೆಗಾಗಿ ಅನೇಕ ಸಂಘಗಳು ಸೃಷ್ಟಿಗೊಂಡಿವೆ, ಅವುಗಳಲ್ಲಿ ಕೊಪ್ಪಳ ಜಿಲ್ಲಾ ಕುರುಬ ಸಂಘ ಸ್ಥಾಪಿಸಲಾಯಿತು. ಬೀರಲಿಂಗೇಶ್ವೇರ ನೌಕರರ ಸಹಕಾರಿ ಸಂಘ, ಕೊಪ್ಪಳ, ಬೀರಲಿಂಗೇಶ್ವರ ಜಿಲ್ಲಾ ಮತ್ತು ತಾಲೂಕ ನೌಕರರ ಸಂಘ, ಕೊಪ್ಪಳ, ಬೀರಲಿಂಗೇಶ್ವರ ಸಮಿತಿ, ಸಿದ್ದಾಪುರ, ಕನಕದಾಸ ಯುವಕ ಸಂಘ, ಬಸವಾಪಟ್ಟಣ, ಕಾಳಿದಾಸ ಸಂಘ, ಬಹದ್ದೂರಬಂಡಿ, ಕನಕಾಶ್ರಮ ಸಮಿತಿ, ಬಾದಿಮನಾಳ, ಕುರುಬ ಸಮಾಜ ಸೇವಾ ಕಲ್ಯಾಣ ಸಂಘ, ಕನಕದಾಸ ತರುಣ ಸಂಘ, ಹನುಮಸಾಗರ, ಬೀರಲಿಂಗೇಶ್ವರ ಯುವಕ ಸಂಘ, ಠಕ್ಕಳಕಿ, ನಂಜುಡೇಶ್ವರ ಭಜನಾ ಸಂಘ, ಬಸವಾಪಟ್ಟಣ, ಬೀರಲಿಂಗೇಶ್ವರ ಸಂಘ, ಹಿರೇಮನ್ನಾಪುರ, ಕನಕದಾಸ ಸಂಘ, ಕುಷ್ಟಗಿ, ಕುರುಬರ ಸಂಘ, ಕಿನ್ನಾಳ, ಡೊಳ್ಳಿನ ಸಂಘ, ಕೊರಡಕೇರಿ, ಕಾಳಿದಾಸ ಕ್ಷೇಮಾಭಿವೃದ್ಧಿ ಸಂಘ, ಶಿವಪುರ, ಸಂಗೊಳ್ಳಿ ರಾಯಣ್ಣ ಸಂಘ, ಬೇವಿನಹಳ್ಳಿ ಮೊದಲಾದವು ಪ್ರಮುಖವಾಗಿವೆ.

### ೫.೨. ಸಂಸ್ಕಾರಗಳು ಮತ್ತು ಸಂಪ್ರದಾಯಗಳು

ಮಾನವನ ನಿತ್ಯ ವ್ಯವಹಾರದ ಪದ್ಧತಿಗಳು ಹಾಗೂ ಅವುಗಳ ಹಿನ್ನೆಲೆಯಲ್ಲಿರುವ ಕಲ್ಪನೆಗಳು, ಉದ್ದೇಶಗಳು ಕೂಡಿ ಸಂಪ್ರದಾಯವಾಗಿ ರೂಪುಗೊಂಡಿವೆ. ಸಂಸ್ಕಾರಗಳು ಮತ್ತು ಸಂಪ್ರದಾಯಗಳು ಮಾನವನ ಸಾಮಾಜಿಕ ಜೀವನವನ್ನು

ನಿಯಂತ್ರಿಸುತ್ತವೆ. ಅಲ್ಲದೆ ಸಾಮಾಜಿಕ ಸಾಮರಸ್ಯ ನೆಲೆಸುವಂತೆ ಮಾಡುತ್ತವೆ. ಹೀಗಾಗಿ ಮಾನವನ ಜೀವನ ಸಂಪೂರ್ಣವಾಗಿ ಸಂಪ್ರದಾಯ ಮತ್ತು ಸಂಸ್ಕಾರಗಳನ್ನು ಅವಲಂಬಿಸಿದೆ. ಪ್ರತಿಯೊಂದು ಸಮುದಾಯವು ತನ್ನದೇ ಆದ ಸಂಸ್ಕಾರ ಹಾಗೂ ಸಂಪ್ರದಾಯಗಳನ್ನು ಹೊಂದಿರುತ್ತದೆ. ಅದೇ ರೀತಿ ಕುರುಬರಲ್ಲೂ ಅನೇಕ ಸಂಸ್ಕಾರ ಹಾಗೂ ಸಂಪ್ರದಾಯಗಳಿವೆ. ಅವರ ಸಾಮಾಜಿಕ ಜೀವನದಲ್ಲಿ ಜನನ, ನಾಮಕರಣ, ಋತುಮತಿ, ವಿವಾಹ, ಶವಸಂಸ್ಕಾರ ಮೊದಲಾದವು ತನ್ನದೆ ಆದ ವಿಧಿ-ವಿಧಾನಗಳನ್ನು ಹೊಂದಿವೆ. ಅವುಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

**೫.೨.೧ ಜನನ**

ಕುರುಬರು ಜನನದಿಂದ ಹಿಡಿದು ಮರಣದವರೆಗೂ ವಿವಿಧ ರೀತಿಯ ಸಂಸ್ಕಾರಗಳನ್ನೂ ಅನುಸರಿಸುತ್ತಾರೆ. "ಮಕ್ಕಳಿಲ್ಲದ ಯಾತರ ಜನ್ಮ, ಮಕ್ಕಳೇ ಮಾನವನ ಮೋಕ್ಷಕ್ಕೆ ದಾರಿದೀಪ" ಎಂಬ ನಂಬಿಕೆ ಕುರುಬರಲ್ಲಿದೆ.[೫೯] ಹೀಗಾಗಿ ಜನನ ಸಂಸ್ಕಾರ ಅಧಿಕ ಮಹತ್ವ ಪಡೆದಿದೆ. ಜನನ ಸಂಸ್ಕಾರಗಳ ಕುರಿತು ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಆದರೆ ಕೆಲವೊಂದು ಶಾಸನಗಳಲ್ಲಿ ಮಕ್ಕಳನ್ನು ಪಡೆಯಲು ಹರಕೆ ಹೊರುತ್ತಿದ್ದ ಬಗ್ಗೆ ಉಲ್ಲೇಖಗಳಿವೆ. ಮಧ್ಯಯುಗದ ಕಾಲದಲ್ಲಿ ಕುರುಬರು ಅರಸರು, ಪಾಳೆಯಗಾರರಾಗಿ ಜೀವನ ನಡೆಸಿದರು. ಶ್ರೀಮಂತರಾಗಿದ್ದ ಇವರಲ್ಲಿ ಸಂಸ್ಕಾರಗಳು ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದವು.

ಕುರುಬರಲ್ಲಿ ಸ್ತ್ರೀ ಗರ್ಭಿಣಿಯಾದ ದಿನದಿಂದಲೇ ಜನನ ಸಂಸ್ಕಾರಗಳು ಪ್ರಾರಂಭಗೊಳ್ಳುತ್ತವೆ. ಗರ್ಭಿಣಿಗೆ ಎಲ್ಲ ರೀತಿಯ ಸೌಕರ್ಯಗಳನ್ನು ಮಾಡಿಕೊಡುತ್ತಾರೆ. ಗರ್ಭವತಿಯಾದ ಐದು ಅಥವಾ ಎಂಟನೇ ತಿಂಗಳಲ್ಲಿ ಸೀಮಂತಕಾರ್ಯ ಮಾಡುತ್ತಾರೆ. ಈ ಕಾರ್ಯವನ್ನು ಹೆಣ್ಣಿನ ಕಡೆಯವರು ಗಂಡಿನ ಮನೆಯಲ್ಲಿ ಮಾಡುತ್ತಾರೆ. ಬಂಧು ಬಳಗದವರನ್ನು ಕರೆಸಲಾಗುತ್ತದೆ. ಅಂದು ಮನೆಯನ್ನು ಸಾರಿಸಿ ಅಲಂಕರಿಸುತ್ತಾರೆ. ಗರ್ಭವತಿಯನ್ನು ಶುದ್ಧವಾದ ಜಾಗದಲ್ಲಿ ಮಣೆ ಅಥವಾ ಕಂಬಳಿ ಮೇಲೆ ಕೂಡಿಸುತ್ತಾರೆ. ಆಗಮಿಸಿದ ಹಿರಿಯರಿಂದ ಆರತಿ ಮಾಡಲಾಗುತ್ತದೆ. ತವರು ಮನೆಯವರು ಹಸಿರು ಸೀರೆ ಕುಪ್ಪಸ ಬಳೆ ತೊಡಿಸುತ್ತಾರೆ. ಇದಕ್ಕೆ ಕುಪ್ಪಸ ಕಾರ್ಯಕ್ರಮವೆಂದೂ ಕರೆಯುತ್ತಾರೆ. ಮುತ್ತೈದೆಯರು ನೀತಿಯುತ ಪದಗಳನ್ನು ಹಾಡುತ್ತಾರೆ ಬಂಧು ಬಳಗಕ್ಕೆಲ್ಲ ಹೋಳಿಗೆ ಊಟವನ್ನು ಮಾಡಿಸಬೇಕೆಂಬ ರೂಢಿಯಿದೆ. ಈ ಕಾರ್ಯಕ್ರಮವು ಹೆಚ್ಚಾಗಿ ರಾತ್ರಿ ವೇಳೆಯಲ್ಲಿ ನಡೆಯುತ್ತದೆ.

ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕೆಂಬ ನಿಯಮವಿದೆ. ಆದ್ದರಿಂದ ಎಂಟನೇ ತಿಂಗಳಲ್ಲಿ ಮಗಳನ್ನು ತವರಿಗೆ ಕರೆದುಕೊಂಡು ಬರುತ್ತಾರೆ. ಈ ಸಮಯದಲ್ಲಿ ಅವಳ ಗಂಡ ಯಾವುದೇ ಪ್ರಾಣಿಯನ್ನು ಕೊಲ್ಲುವ, ಸತ್ತ ಪ್ರಾಣಿಯನ್ನು ಹೊರುವ, ಮನೆಕಟ್ಟಿಸುವ ಹಾಗೂ ಕ್ಷೌರಮಾಡಿಸಿಕೊಳ್ಳುವುದನ್ನು ನಿಷೇಧಿಸಿದೆ.[೬೦] ಇದರಿಂದ ಕುರುಬರು ಅನೇಕ ಕಟ್ಟುಪಾಡುಗಳನ್ನು ಅನುಸರಿಸುತ್ತಿದ್ದರೆಂಬುದು ತಿಳಿಯುತ್ತದೆ.

ಹೆರಿಗೆಯಾದ ಹತ್ತು ದಿನಗಳವರೆಗೆ 'ಸೂತಕ' [ಮೈಲಿಗೆ] ಎಂದು ಆಚರಿಸುತ್ತಾರೆ. ಇದು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕೆಲವೆಡೆ ೩,೫,೧೦,೧೨,೧೫ ದಿನಗಳವರೆಗೆ ಸೂತಕವೆಂದು ಆಚರಿಸುತ್ತಾರೆ. ಮೈಸೂರು ಭಾಗದ ಕಾಡುಕುರುಬರು ೨ ಅಥವಾ ೯ ದಿನಗಳವರೆಗೆ ಸೂತಕವೆಂದು ಆಚರಿಸುವರಲ್ಲದೆ ತಾಯಿ ಮತ್ತು ಮಗುವನ್ನು

ಪ್ರತ್ಯೇಕ ಗುಡಿಸಲಿನಲ್ಲಿಡುತ್ತಾರೆ.[೬೧] ಆದರೆ ಕೊಪ್ಪಳ ಭಾಗದ ಹಾಲುಮನೆತನದವರು ಪ್ರತ್ಯೇಕವಾದ ಕೋಣೆಯಲ್ಲಿಡದೆ ಅವರ ಸುತ್ತ ಪರದೆ ಕಟ್ಟುತ್ತಾರೆ. ಅವರನ್ನು ಯಾರೂ ಮುಟ್ಟುವಂತಿಲ್ಲ. ಈ ಸೂತಕದ ದಿನಗಳಲ್ಲಿ ಯಾವುದೇ ಶುಭಕಾರ್ಯಗಳನ್ನು ನೆರವೇರಿಸುವುದಿಲ್ಲ. ತಾಯಿ ಮತ್ತು ಮಗುವನ್ನು ದುೃಷ್ಟಶಕ್ತಿಗಳಿಂದ ರಕ್ಷಿಸಲು ಅವರ ಬಳಿ ಹಳೆಯ ಪಾದರಕ್ಷೆ, ಕಸಬರಿಗೆ, ಮರ ಹಾಗೂ ಬೇವಿನ ಟೊಂಗೆಗಳನ್ನಿಡುತ್ತಾರೆ.[೬೨] ಹುಟ್ಟಿದ ಮಗುವನ್ನು ಮರದಲ್ಲಿ ಹಾಕುವ ಪದ್ಧತಿಯಿದೆ. ಮಗುವಿನ ಹೊಕ್ಕಳ ಬಳ್ಳಿಯನ್ನು ತುಂಡುಮಾಡಿ ಹೊಸ ಗಡಿಗೆಯಲ್ಲಿಟ್ಟು ನಡುಮನೆಯ ಬಾಗಿಲ ಬಳಿ ಗುಂಡಿ ತೋಡಿ ಅದನ್ನು ಮುಚ್ಚುತ್ತಾರೆ. ತಾಯಿಗೆ ನೀರುಹಾಕಿ ಸ್ನಾನ ಮಾಡಿಸಿ ಶುದ್ಧಗೊಳಿಸುತ್ತಾರೆ.

ಸೂತಕದ ಕೊನೆಯ ದಿನ ಮನೆಯನ್ನು ಸಾರಿಸಿ, ಗುರುಗಳ ಪಾದೋದಕ ಸಿಂಪಡಿಸಿ ಶುದ್ಧಗೊಳಿಸುತ್ತಾರೆ. ನೆನೆಗಡಲೆ, ಹತ್ತಿಕಾಳು ಮೊದಲಾದ ಪೂಜೆಯ ಸಾಮಗ್ರಿಗಳೊಂದಿಗೆ ಹೊಸ ಬಿಂದಿಗೆಯನ್ನು ತೆಗೆದುಕೊಂಡು ಗಂಗೆಪೂಜೆಗೆ ಹೊರಡುತ್ತಾರೆ. ಹತ್ತಿಕಾಳನ್ನು ಉಡಿಯಲ್ಲಿ ತುಂಬಿಕೊಂಡು ಅವುಗಳನ್ನು ಮನೆಯಿಂದ ಹಳ್ಳ ಅಥವಾ ಬಾವಿಯವರೆಗೆ ದಾರಿಯುದ್ದಕ್ಕೂ ಚೆಲ್ಲುತ್ತರೆ. ಬಾವಿಯಲ್ಲಿ ಗಂಗೆ ಪೂಜೆಮಾಡಿ ಹೊಸ ಬಿಂದಿಗೆಯಲ್ಲಿ ನೀರನ್ನು ತುಂಬಿಕೊಂಡು ಬರುತ್ತಾರೆ. ಆ ನೀರಿನಿಂದ ಮಗುವಿಗೆ ಸ್ನಾನ ಮಾಡಿಸುವ ಪದ್ಧತಿಯಿದೆ. ಅಂದು ಮಗುವನ್ನು ತೊಟ್ಟಿಲಲ್ಲಿ ಹಾಕುವರು. ತೊಟ್ಟಿಲದ ಕೆಳಗೆ ಜೋಳದ ರಾಶಿ ಹಾಕಿ, ಗಂಧ- ಸಿಂಧೂರ, ಭಸ್ಮಗಳನ್ನು ಲೇಪಿಸುತ್ತಾರೆ. ಮುತ್ತೈದೆಯರು ದೀಪಹಚ್ಚಿ ಆರತಿ ಬೆಳಗುತ್ತಾರೆ. ಈ ರೀತಿ ಮಾಡುವ ತೊಟ್ಟಿಲ ಪೂಜೆಗೆ "ಸೆಟೆಗೆವ್ವನ ಪೂಜೆ" ಎಂದು ಕರೆಯುವರು. ಈ ಸೆಟೆಗೆವ್ವ ಹುಟ್ಟಿದ ಶಿಶುವಿನ ಹಣೆಬರಹ ಬರೆಯುವವಳು ಎಂದು ನಂಬಿಕೆಯಿದೆ . ಜೋಳದ ಕಿಚಡಿಯನ್ನು ಪ್ರಸಾದವನ್ನಾಗಿ ಮಾಡುವರು. ಸೂಲಗಿತ್ತಿಗೆ ಕಾಣಿಕೆಯನ್ನು ನೀಡುವರು. ಅಂದು ರಾತ್ರಿಯಿಂದ ಬೆಳಗಿನ ಜಾವದವರೆಗೂ ದೀಪಕಾಯಬೇಕೆಂಬ ಪದ್ಧತಿಯಿದೆ. ಈ ರೀತಿ ಅನೇಕ ವಿಧಿ- ವಿಧಾನಗಳನ್ನು ಅನುಸರಿಸಿ ಸೂತಕವನ್ನು ಕಳೆಯುತ್ತಾರೆ.

### ೩.೨.೨ ನಾಮಕರಣ

ಹುಟ್ಟಿದ ಮಗುವನ್ನು ಗುರುತಿಸಲು ವ್ಯವಹಾರಿಕವಾದ ಒಂದು ಹೆಸರು ಅವಶ್ಯಕ. ಈ ಹೆಸರನ್ನಿಡುವ ಕಾರ್ಯಕ್ರಮವನ್ನು ನಾಮಕರಣ ಶಾಸ್ತ್ರವೆಂದು ಕರೆಯುವರು. ಮಗು ಜನಿಸಿದ ೧೬ ಅಥವಾ ೨೧ನೇ ದಿನದಲ್ಲಿ ನಾಮಕರಣ ಶಾಸ್ತ್ರ ಮಾಡುವರು. ನಾಮಕರಣಕ್ಕಿಂತ ಪೂರ್ವದಲ್ಲಿ ಪುರೋಹಿತರ ಅಥವಾ ಕುಲಗುರುಗಳ ಹತ್ತಿರ ಮಗುವಿನ ಜನ್ಮಕುಂಡಲಿ ತೋರಿಸುತ್ತಾರೆ. ಗುರುಗಳು ಸೂಚಿಸಿದ ಹೆಸರನ್ನೇ ನಾಮಕರಣ ಮಾಡಲಾಗುತ್ತದೆ. ನಾಮಕರಣವಾದ ಹೆಸರಿನಿಂದಲೂ ಅವರ ಸ್ಥಾನಮಾನಗಳನ್ನು ತಿಳಿಯಬಹುದಾಗಿದೆ. ಸಾಮಾನ್ಯ ವರ್ಗದವರಾಗಿದ್ದರೆ ಅವರ ಹೆಸರಿನ ಮುಂದೆ ಅಣ್ಣ, ಅಪ್ಪ, ಅಕ್ಕ, ಅವ್ವ, ಎಂದು ಕೂಡಿರುತ್ತವೆ. ಒಂದು ವೇಳೆ ಹೆಸರುಗಳ ಮುಂದೆ ಗೌಡ, ಅರಸಿ, ಅರಸ, ಮೊದಲಾದವು ಕೂಡಿದ್ದರೆ ಅವು ವಿಶೇಷ ಸ್ಥಾನಮಾನಗಳನ್ನು ಸೂಚಿಸುತ್ತವೆ. ಈ ರೀತಿ ಹೆಸರುಗಳು ಕೆಲವು ಶಾಸನಗಳಲ್ಲಿ ದೊರೆಯುತ್ತವೆ. ಉದಾ : ಬೀರಣ್ಣ, ಮಾಳಪ್ಪ, ರೇವಕ್ಕ, ಸಿದ್ದವ್ವ ಎಂಬ ಹೆಸರುಗಳು ಸಾಮಾನ್ಯ ವರ್ಗವನ್ನು ಸೂಚಿಸಿದರೆ, ಬೀರೆಗೌಡ, ರೇವಕ್ಕಬ್ಬರಸಿ, ಮೊದಲಾದ ಹೆಸರುಗಳು ರಾಜ- ರಾಣಿಯರ ಅಥವಾ ಉನ್ನತ ವರ್ಗವನ್ನು ಸೂಚಿಸುತ್ತದೆ.[೬೩]

ನಾಮಕರಣದ ದಿನ ಮನೆಯನ್ನು ಸ್ವಚ್ಛಗೊಳಿಸುತ್ತಾರೆ. ತವರಿನವರು ತಂದಿರುವ ತೊಟ್ಟಿಲನ್ನು ಹೂಗಳಿಂದ ಶೃಂಗರಿಸುತ್ತಾರೆ. ಐದು ಬಗೆಯ ಧಾನ್ಯಗಳನ್ನು ಐದು ಮನೆಗೆ ಹೋಗಿ ತೆಗೆದುಕೊಂಡು ಬರುತ್ತಾರೆ. ಅವುಗಳೆನ್ನೆಲ್ಲ ಸೇರಿಸಿ ಗುಗ್ಗರಿ ಮಾಡುತ್ತಾರೆ. ಆ ಗುಗ್ಗರಿಯನ್ನು ಐದು ಗಂಟುಗಳಲ್ಲಿ ಕಟ್ಟುತ್ತಾರೆ. ತೊಟ್ಟಿಲದ ನಾಲ್ಕು ಮೂಲೆಗೂ ಕೆಳಗೆ ಗುಗ್ಗರಿಯ ಗಂಟುಗಳನ್ನು ಕಟ್ಟುತ್ತಾರೆ. ಐದನೆಯ ಗಂಟನ್ನು ಮಗುವಿನ ಕಾಲಬಳಿ ಇಡುತ್ತಾರೆ. ನಂತರ ಸೋದರತ್ತೆ ಅಥವಾ ಸೋದರಮಾವ ಮಗುವಿನ ಕಾಲಬಳಿ ಇರುವ ಗುಗ್ಗರಿಯನ್ನು ತಿಂದು ಎಲ್ಲರಿಗೂ ಹಂಚುತ್ತಾರೆ. ಮಗುವನ್ನು ಕೈಯಲ್ಲಿ ಹಿಡಿದುಕೊಂಡು ಆಯ್ಕೆ ಮಾಡಿದ ಹೆಸರಿನಿಂದ ಮೂರು ಬಾರಿ ಕರೆದು "ಕುಟ್ಟಟ್ಟೆ ಕುರ್ರು" ಎಂದು ಹೇಳುತ್ತ ಹೆಸರಿಡುತ್ತಾರೆ. ಸರ್ವಜ್ಞ ಕವಿ ತನ್ನ ತ್ರಿಪದಿಯಲ್ಲಿ ನಾಮಕರಣದ ಬಗ್ಗೆ ಈ ರೀತಿ ಹೇಳಿದ್ದಾನೆ.

> "ಬಂಧು ಬಳಗವ ಕೂಡಿ ಹೊಂದಿ ಜೋಗಳ ಪಾಡಿ
> ಹಿಂದೆ ಸತ್ತವರ ಹೆಸರಿಟ್ಟು, ಗುಗ್ಗರಿಯ
> ತಿಂದು ತೂಗುವರು, ಸರ್ವಜ್ಞ"

ಈ ತ್ರಿಪದಿಯಿಂದ ನಾಮಕರಣ ಶಾಸ್ತ್ರದಲ್ಲಿ ಮಗುವನ್ನು ತೊಟ್ಟಿಲಲ್ಲಿ ಹಾಕಿ ಜೋಗುಳ ಹಾಡುತ್ತಾರೆ. ಮೃತಪಟ್ಟಿರುವ ಹಿರಿಯರ ಹೆಸರಿಟ್ಟು ಗುಗ್ಗರಿಯನ್ನು ತಿಂದು ಮಗುವನ್ನು ತೂಗಿ ನಲಿದಾಡುತ್ತಿದ್ದರೆಂದು ತಿಳಿಯುತ್ತದೆ.[೬೪] ಅದೇ ರೀತಿ ಕುರುಬರು ತಮ್ಮ ಹಿರಿಯರ ಅಥವಾ ಕುಲದೇವರುಗಳ ಹೆಸರನ್ನು ನಾಮಕರಣ ಮಡುವುದು ಕಂಡುಬರುತ್ತದೆ. ಗಂಡು ಮಗುವಾದರೆ ಬೀರಪ್ಪ, ರೇವಣಸಿದ್ಧ, ಕನಕಪ್ಪ, ಮಲ್ಲಯ್ಯ, ಜುಂಜಪ್ಪ, ಭರಮಪ್ಪ, ಅಮೋಘಸಿದ್ಧ, ಮಾಳಪ್ಪ ಮೊದಲಾದ ಹೆಸರುಗಳನ್ನಿಡುತ್ತಾರೆ. ಹೆಣ್ಣು ಮಗುವಾದರೆ ಮಾಯವ್ವ, ಯಲ್ಲಮ್ಮ, ಲಕ್ಷ್ಮಮ್ಮ, ಸಿದ್ದಮ್ಮ, ರೇವಕ್ಕ, ದ್ಯಾಮವ್ವ, ಮಾಳವ್ವ, ಬೀರವ್ವ, ಮೂದಲಾದ ಹೆಸರುಗಳನ್ನಿಡುತ್ತಾರೆ. ಮಧ್ಯಕಾಲದಲ್ಲಿ ಅರಸರು, ಪಾಳೆಯಗಾರರಾಗಿದ್ದ ಕುರುಬರು ನಾಮಕರಣ ಶಾಸ್ತ್ರವನ್ನು ಶ್ರೀಮಂತಿಕೆಯಿಂದ ಆಚರಿಸುತ್ತಿದ್ದರೆಂದು ತಿಳಿಯುತ್ತದೆ. ಮೇಲ್ವರ್ಗದವರು ಆಚರಿಸುತ್ತಿದ್ದ ವಿಧಿ ವಿಧಾನಗಳನ್ನು ಅನುಸರಿಸುತ್ತಿದ್ದರು. ಆದರೂ ತಮ್ಮ ಕುಲದೇವರ ಅಥವಾ ಹಿರಿಯರ ಹೆಸರನ್ನೇ ನಾಮಕರಣ ಮಾಡುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಆಧಾರಗಳಿವೆ. ಅನೇಕ ರಾಜ ರಾಣಿಯರು, ಪಾಳೆಯಗಾರರು ತಮ್ಮ ಮನೆ ದೇವರ ಹೆಸರುಗಳನ್ನಿಟ್ಟುಕೊಳ್ಳುತ್ತಿದ್ದರು. ಚಾಲುಕ್ಯರ ತ್ರೈಲೋಕ್ಯಮಲ್ಲ ಸೋಮೇಶ್ವರನ ಪತ್ನಿಯ ಹೆಸರು ಮೈಳಲದೇವಿ ಎಂದಿತ್ತು.[೬೫] ವಾರಂಗಲ್ಲಿನ ಕಾಕತೀಯರ ಅರಸನಾದ ಗಣಪತಿದೇವನ ತಂಗಿಯ ಹೆಸರು ಮೈಲಾಂಬೆ ಎಂದಿತ್ತು.[೬೬] ಚಾಲುಕ್ಯರ ಅರಸ ತ್ರಿಭುವನ ಮಲ್ಲ ದೇವನ ಮಹಾಮಂಡಲೇಶ್ವರ ಬೀರದೇವ ಎಂಬುವನಿದ್ದನು.[೬೭] ಹಡಗಲಿ ತಾಲೂಕಿನ ಶಾಸನದಲ್ಲಿ ಬೀರಗಾವುಂಡನೆಂಬ ಗೌಡನ ಉಲ್ಲೇಖವಿದೆ.[೬೮] ಹೀಗಾಗಿ ಕುರುಬರು ತಮ್ಮ ಕುಲದೇವರ ಹೆಸರುಗಳನ್ನಿಟ್ಟುಕೊಳ್ಳುತ್ತಿದ್ದರೆಂದು ತಿಳಿಯುತ್ತದೆ.

ಆಧುನಿಕ ಕಾಲದಲ್ಲಿ ನಾಮಕರಣದ ವಿಧಿ ವಿಧಾನಗಳು ಪರಿವರ್ತನೆಗೊಂಡಿವೆ. ಹೆಸರುಗಳು ಆಧುನಿಕ ರೂಪ ಪಡೆದಿವೆ. ದೇವರ ಹೆಸರುಗಳ ಬದಲಿಗೆ ಸುರೇಶ, ವೀರೇಶ, ಬಸವ, ಜಗದೀಶ, ರಾಜ ಮೊದಲಾದ ಹೆಸರುಗಳನ್ನಿಡಲಾಗುತ್ತಿದೆ. ನಗರೀಕರಣ ಹಾಗೂ ಪಾಶ್ಚಾತ್ಯೀಕರಣದಿಂದಾಗಿ ನಾಮಕರಣ ಶಾಸ್ತ್ರ ತನ್ನ ಹಳೆಯ ಸಂಪ್ರದಾಯವನ್ನು ಕಳೆದುಕೊಂಡಿದೆ ಎಂದು ಹೇಳಬಹುದಾಗಿದೆ.

### ೫.೨.೩ ಜಾವುಳ ಕಾರ್ಯ

ಮಗುವಿನ ಹುಟ್ಟು ಕೂದಲನ್ನು ತೆಗೆಸುವ ಕಾರ್ಯಕ್ರಮವೇ ಚೌಲ ಅಥವಾ ಜಾವುಳ ಕಾರ್ಯವಾಗಿದೆ. ಈಪದ್ಧತಿಯೂ ಸಹ ಅನೇಕ ವಿಧಿ-ವಿಧಾನಗಳನ್ನು ಹೊಂದಿದೆ. ೨ ರಿಂದ ೪ ವರ್ಷದೊಳಗೆ ಗಂಡು ಮಗುವಿಗೆ ೩ ರಿಂದ ೫ ವರ್ಷದೊಳಗೆ ಹೆಣ್ಣು ಮಗುವಿಗೆ ಶುಭವಾರ ಅಥವಾ ಶುಭತಿಥಿ ನೋಡಿಕೊಂಡು ಜಾವುಳ ಕಾರ್ಯವನ್ನು ನೆರವೇರಿಸುವರು. ತಮ್ಮ ಕುಲದೇವರ ಅಥವಾ ಮನೆದೇವರ ದೇವಾಲಯದಲ್ಲಿ ಜಾವುಳ ತೆಗೆಸುತ್ತಾರೆ. ಬಂಧು- ಬಳಗಕ್ಕೆ ಆಮಂತ್ರಣ ನೀಡುತ್ತಾರೆ. ಮಗುವಿನ ಮುಂಗೈಗೆ ಕಂಕಣಕಟ್ಟಿ ವೀಳ್ಯದೆಲೆಯನ್ನು ಕತ್ತರಿಯಾಕಾರಮಾಡಿ ಜಂಗಮಯ್ಯನಿಂದ ತಲೆಯ ಕೇಶಗಳಿಗೆ ಸ್ಪರ್ಶಮಾಡಿಸುವರು. ಕೆಲವೆಡೆ ಕುರಿಗಳ ಮೈಮೇಲಿನ ಉಣ್ಣೆ ಕತ್ತರಿಸುವ ದೊಡ್ಡ ಕತ್ತರಿಯನ್ನು ತಂದು ತೊಳೆದು ಪೂಜಿಸುತ್ತಾರೆ. ಮಗುವನ್ನು ಕರಿಯ ಕಂಬಳಿಯ ಮೇಲೆ ಪೂರ್ವ- ಉತ್ತರಾಭಿಮುಖವಾಗಿ ಕೂಡಿಸುತ್ತಾರೆ. ನಂತರ ಐದು ಕೂದಲನ್ನು ಕತ್ತರಿಸಿ ತೆಗೆಯುತ್ತಾರೆ. ತಲೆಯ ಕೂದಲನ್ನು ತೆಗೆಯುವ ಕಾರ್ಯ ಮಗುವಿನ ಸೋದರ ಮಾವ ನೆರವೇರಿಸುತ್ತಾನೆ. ತೆಗೆದ ಕೂದಲನ್ನು ನದಿ, ಜಲಾಶಯದಲ್ಲಿ ಪೂಜೆ ಮಾಡಿ ತೇಲಿ ಬಿಡುತ್ತಾರೆ. ಕಾರಣ ದುಷ್ಟಶಕ್ತಿಗಳು ಮಗುವಿಗೆ ಸೋಕ ಬಾರದೆಂದು ಹಾಗು ನದಿಗಳು ಪವಿತ್ರವಾದ ಗಂಗಮ್ಮತಾಯಿ ಎಂದು ಭಾವಿಸಿ, ಅವಳು ನಮ್ಮ ಮಗುವನ್ನು ಕಾಪಾಡುತ್ತಾಳೆ ಎಂಬ ನಂಬಿಕೆಯಿದೆ. ಕಾರ್ಯಕ್ರಮಕ್ಕೆ ಆಗಮಿಸಿದವರಿಗೆಲ್ಲಾ ಊಟದ ವ್ಯವಸ್ಥೆ ಮಾಡಿಸುತ್ತಾರೆ.

### ೫.೨.೪ ಋತುಮತಿ

ಕುರುಬರಲ್ಲಿ ಹೆಣ್ಣು ಋತುಮತಿಯಾದರೆ ಅದನ್ನು ಮೈಲಿಗೆ ಅಥವಾ ಸೂತಕ ಎಂದು ಭಾವಿಸುವರು. ಐದರಿಂದ ಹತ್ತು ದಿನಗಳ ಅವಧಿಯನ್ನು ಸೂತಕ ಎಂದು ಆಚರಿಸುವರು. ಗೊರವರು ತೆಂಗಿನ ಸೊಗೆಗಳಿಂದ ತ್ರಿಕೋನಾಕಾರದಲ್ಲಿ ಚಪ್ಪರ ನಿರ್ಮಿಸಿ ಮೂರುದಿನಗಳ ಕಾಲ ಹೆಣ್ಣು ಮಗಳನ್ನು ಅದರಲ್ಲಿ ಕೂಡಿಸುತ್ತಾರೆ.[೮] ಆದರೆ ಹಾಲುಮತದವರು ಮನೆಯಲ್ಲಿಯೇ ಒಂದು ಕೋಣೆಯಲ್ಲಿ ಕೂಡಿಸುತ್ತಾರೆ. ಈ ಸಮಯದಲ್ಲಿ ಭೂತ-ದೆವ್ವಗಳು ಸುಳಿಯ ಬಾರದೆಂದು ಕಸಬರಿಗೆ, ಪಾದರಕ್ಷೆ, ಮೊದಲಾದ ವಸ್ತುಗಳನ್ನು ಬಾಗಿಲಬಳಿ ಇಡುವರು. ಪ್ರತಿದಿನ ಅವಳ ತಲೆಗೆ ಎಣ್ಣೆ ಹಾಕಿ ಅರಿಷಿಣ ಹಚ್ಚಿ ಬಿಸಿನೀರಿನಿಂದ ಸ್ನಾನಮಾಡಿಸುತ್ತಾರೆ. ಅವಳಿಗೆ ಸಾಧ್ಯವಾದಷ್ಟು ಪೌಷ್ಠಿಕವಾದ ಆಹಾರಗಳನ್ನು ನೀಡುವರು ಅವಳನ್ನು ಸಂತೋಷ ಪಡಿಸಲು ಅನೇಕ ಹಾಡು-ಕುಣಿತ ಗಳನ್ನು ಏರ್ಪಡಿಸುವರು.

ಕುರುಬರಲ್ಲಿ ಮೊದಲಿನಿಂದಲೂ ವೈವಾಹಿಕ ಸಂಬಂಧಗಳು ತಮ್ಮ-ತಮ್ಮಲ್ಲಿಯೇ ಮಾಡಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಹೀಗಾಗಿ ಸೋದರಮಾವನಿಗೆ ತಮ್ಮ ಮಕ್ಕಳನ್ನು ಕೊಡುವ ಪದ್ಧತಿ ಬಹಳ ಹಳೆಯದಾಗಿದೆ. ಆದ್ದರಿಂದ ಹೆಣ್ಣು ಋತುಮತಿಯಾದಾಗ ಪ್ರತಿಯೊಂದು ಜವಾಬ್ದಾರಿಯನ್ನು ಅವಳ ಸೋದರ ಮಾವನೇ ವಹಿಸಿ ಕೊಳ್ಳಬೇಕೆಂಬ ಸಂಪ್ರದಾಯವಿದೆ. ಆದ್ದರಿಂದಲೇ ಈ ಸಂದರ್ಭದಲ್ಲಿ ಸೋದರಮಾವನ ಪಾತ್ರ ಹಿರಿದಾಗಿರುವುದು ಕಂಡುಬರುತ್ತದೆ.

ಮದುವೆಯ ಪೂರ್ವದಲ್ಲಿ ಋತುಮತಿಯಾದರೆ ಒಬ್ಬಳನ್ನೇ ಕೂರಿಸಿ ಆರತಿ ಮಾಡುವರು. ಆದರೆ ಮದುವೆಯ ನಂತರ

ಋತುಮತಿಯಾದರೆ ಈ ವಿಷಯವನ್ನು ಗಂಡನ ಮನೆಯವರಿಗೆ ತಿಳಿಸುವರು. ವಿಷಯ ತಿಳಿದ ಹುಡುಗಿಯ ನಾದಿನಿಯರು, ಊರಿನವರು ಗಂಡಿಗೆ ಬಣ್ಣ ಹಾಕುವರು. ಗಂಡಿನ ಕಡೆಯವರು ಹುಡುಗಿಗೆ ಹಿಟ್ಟಕ್ಕಿ ಮುಯ್ಯ, ತರುವರು ಗಂಡು ಐದು ದಿನಗಳವರೆಗೆ ಬಣ್ಣದ ಬಟ್ಟೆಯಲ್ಲಿಯೇ ಇರಬೇಕು. ಹೆಣ್ಣಿನವರು ಹೊಸಬಟ್ಟೆ ಉಡಿಸಿದ ಮೇಲೆ ಬಣ್ಣದ ಬಟ್ಟೆಯನ್ನು ತೆಗೆಯಬೇಕೆಂಬ ರೂಢಿಯಿದೆ.[೨೦] ಗಂಡ ಹೆಂಡತಿ ಇಬ್ಬರನ್ನು ಕೂಡಿಸಿ ಮುತ್ತೈದೆಯರು ಆರತಿ ಮಾಡುವರು. ಕುಲಗುರುಗಳಿಂದ ಅವಳನ್ನು ಶುದ್ಧಿ ಗೊಳಿಸುತ್ತಾರಲ್ಲದೇ, ಎಲೆ, ಅಡಿಕೆ, ಟೆಂಗಿನಕಾಯಿ, ಲಿಂಬೆಹಣ್ಣು, ಮೊದಲಾದ ವಸ್ತುಗಳಿಂದ ಉಡಿ ತುಂಬುವ ಶಾಸ್ತ್ರ ಮಾಡುತ್ತಾರೆ.

ಪ್ರಾಚೀನ ಕಾಲದಿಂದಲೂ ಮೊದಲಿಗೆ ಮಾತೃ ಪ್ರಧಾನ ಸಂಸ್ಕೃತಿಯಿತ್ತು. ನಂತರದಲ್ಲಿ ಪುರುಷ ಪ್ರಧಾನ ಸಮಾಜವಿದ್ದರಿಂದ ಪುತ್ರ ಸಂತಾನಕ್ಕೆ ಅಧಿಕ ಮಹತ್ವವಿತ್ತು. ಹೆಣ್ಣುಸಂತಾನಕ್ಕೆ ಹೆಚ್ಚಿನ ಆದ್ಯತೆಯಿದ್ದಿಲ್ಲವಾದ್ದರಿಂದ ಗಂಡುಮಕ್ಕಳ ಜನನ, ನಾಮಕರಣ, ಜಾವಳ ಮೊದಲಾದ ಸಂದರ್ಭಗಳಲ್ಲಿ ರಾಜರು, ಪಾಳೆಯಗಾರರು ಅನೇಕ ದಾನದತ್ತಿಗಳನ್ನು ಬಿಡುತ್ತಿದ್ದರು. ಆದರೆ ಹೆಣ್ಣು ಮಕ್ಕಳು ಋತುಮತಿಯಾದ ಸಂದರ್ಭದಲ್ಲಿ ಯಾವುದೇ ದಾನಬಿಟ್ಟ ಬಗ್ಗೆ ಎಲ್ಲೂ ಉಲ್ಲೇಖಗಳಿಲ್ಲ. ಈಹಿನ್ನೆಲೆಯಲ್ಲಿ ಋತುಮತಿಶಾಸ್ತ್ರಕ್ಕೆ ಹೆಚ್ಚಿನ ಮಹತ್ವವಿದ್ದಿಲ್ಲ. ಅದು ಕೇವಲ ಸಂಪ್ರದಾಯಬದ್ಧವಾಗಿ ಆಚರಿಸುವ ಶಾಸ್ತ್ರವಾಗಿತ್ತೆಂದು ಹೇಳಬಹುದಾಗಿದೆ.

**೫.೨.೫ ವಿವಾಹ**

ಪ್ರಾಚೀನ ಕಾಲದಿಂದಲೂ ವಿವಾಹ ಒಂದು ಪವಿತ್ರ ಬಂಧನ ಹಾಗು ಸಂಸ್ಕಾರವೆಂಬ ನಂಬಿಕೆಯಿದೆ. ಪ್ರತಿಯೊಂದು ಆಚಾರ ನೇಮಗಳು, ಯಜ್ಞಯಾಗಗಳು ಗೃಹಸ್ಥನನ್ನೇ ಅವಲಂಬಿಸಿರುವುದರಿಂದ ವಿವಾಹವು ಎಲ್ಲ ಸಂಸ್ಕಾರಗಳಿಗೂ ಮೂಲ ಎಂದು ಗೃಹಸೂತ್ರವು ವಿವರಿಸುತ್ತದೆ. ಹೀಗಾಗಿ ಮಾನವನ ಎಲ್ಲ ಸಂಸ್ಕಾರಗಳಿಗೂ ವಿವಾಹ ಮೂಲವಾಗಿರುವುದು ಸ್ಪಷ್ಟ.[೨] ಪ್ರತಿಯೊಂದು ಧರ್ಮಗಳಲ್ಲೂ ವ್ಯಭಿಚಾರವನ್ನು ಪಾಪವೆಂದು ಪರಿಗಣಿಸಲಾಗಿತ್ತು. ಇದರಿಂದಾಗಿ ಶುದ್ಧವೂ, ಧಾರ್ಮಿಕವೂ ಆದ ದಾಂಪತ್ಯ ಜೀವನವನ್ನು ನಡೆಸಲು ವಿವಾಹವು ಪ್ರಮುಖ ಸಾಧನವಾಯಿತು. ಅಲ್ಲದೇ ಗಂಡು ಹೆಣ್ಣು ಒಂದು ಗೂಡಲು ಅನುಮತಿಯ ಮುದ್ರೆಯನ್ನು, ಶಾಸನಬದ್ಧತೆಯನ್ನು ಒದಗಿಸಿತು. ಹೀಗಾಗಿ ಮದುವೆ ಹಿಂದೂಗಳಿಗೆ ಒಂದು ಸಾಮಾಜಿಕ ಕಾರ್ಯವಾಗಿದೆ. ಅದೇ ರೀತಿ ಕುರುಬರಲ್ಲೂ ವಿವಾಹವು ವಿಶಿಷ್ಟ ಸ್ಥಾನ ಪಡೆದಿದೆ.

ಕುರುಬರಿಗೆ ವಿವಾಹವು ಒಂದು ಸಂಸ್ಕಾರ. ಅದು ಸಂಪೂರ್ಣವಾಗಿ ಹಿಂದೂ ಪದ್ಧತಿಯಲ್ಲಿ ನೆರವೇರುತ್ತದೆ. ವೈವಾಹಿಕ ಸಂಬಂಧಗಳ ಬಗ್ಗೆ ಕಟ್ಟು ನಿಟ್ಟಾದ ನಿರ್ಬಂಧಗಳಿರುವುದರಿಂದ ಈ ವಿವಾಹ ಪದ್ಧತಿಯು ವೈಯಕ್ತಿಕ ಅಗತ್ಯವೆಂದು ಭಾವಿಸಲ್ಪಡುವುದಕ್ಕಿಂತ ಹೆಚ್ಚಾಗಿ ಅದನ್ನು ಒಂದು ಪವಿತ್ರವಾದ ಧಾರ್ಮಿಕವಾದ ಸಂಸ್ಕಾರವೆಂದು ಪರಿಗಣಿಸಲಾಗುತ್ತದೆ. ಕುರುಬರಲ್ಲಿ ಸಗೋತ್ರ ವಿವಾಹ ನಿಷೇಧಿಸಲಾಗಿದೆ.[೨] ತಮ್ಮ-ತಮ್ಮಲ್ಲಿರುವ ಪಂಗಡಗಳಲ್ಲಿಯ ಬೆಡಗನ್ನು ನೋಡಿ ಮದುವೆಯಾಗುತ್ತಾರೆ. ಒಂದೇ ಬೆಡಗಿನವರೊಂದಿಗೆ ಸಂಬಂಧ ಬೆಳೆಸುವುದಿಲ್ಲ. ಹೀಗೆ ಹಲವಾರು ವಿಧಿ-ವಿಧಾನಗಳನ್ನು ತಮ್ಮ ವಿವಾಹ ಪದ್ಧತಿಯಲ್ಲಿ ಅನುಸರಿಸುತ್ತಾರೆ. ಕುರುಬರ ವಿವಾಹ ಪದ್ಧತಿ ಲಿಂಗಾಯತರ ಪದ್ಧತಿಯನ್ನೇ ಅಧಿಕವಾಗಿ ಹೋಲುತ್ತದೆ. ಇವರಲ್ಲಿ ವಧುವಿನ ಆಯ್ಕೆ, ಕನ್ಯೆನೋಡುವುದು, ನಿಶ್ಚಿತಾರ್ಥ, ಹಂದರ ಹಾಕುವ, ಹಾಲುಗಂಬತರುವಶಾಸ್ತ್ರ, ಸುರಗಿ ಸುತ್ತುವ ಕಾರ್ಯ, ಅಕ್ಷತೆಯ ಕಾರ್ಯ ಮೊದಲಾದ ಆಚರಣೆಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ.

ಕುರುಬರ ವಿವಾಹ ಪದ್ಧತಿಯ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಮಧ್ಯಯುಗದಲ್ಲಿ ಅರಸರು, ಪಾಳೆಯಗಾರರಾಗಿದ್ದ ಕುರುಬರು ಹಿಂದೂ ಧರ್ಮದ ಪ್ರಕಾರವೇ ವಿವಾಹವಾಗುತ್ತಿದ್ದರು. ಅಗ್ನಿ ಕುಂಡ ರಚನೆ, ಹಸೆಕಟ್ಟೆ ಯಜ್ಞೋಪವೀತಧಾರಣೆ ಮೊದಲಾದ ಧಾರ್ಮಿಕ ವಿಧಿ– ವಿಧಾನಗಳನ್ನು ಅನುಸರಿಸುತ್ತಿದ್ದರು. ಕೆಲವು ಅರಸರು ಶೈವ ಅಥವಾ ವೈಷ್ಣವ ಸಂಸ್ಕಾರಗಳನ್ನು ಅನುಸರಿಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದವರು ಕುರುಬರು ಎಂಬುದಕ್ಕೆ ಆಧಾರಗಳಿವೆ. ಇದರ ಬಗ್ಗೆ ಮೂರನೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇವರಲ್ಲಿ ವಿವಾಹಗಳು ಸಾಮಾನ್ಯವಾಗಿ ಸವರ್ಣೀಯರಲ್ಲಿಯೇ ನಡೆಯುತ್ತಿದ್ದವು. ಹರಿಹರ ಮತ್ತು ಬುಕ್ಕರು ಕುರುಬರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದರು.[೭೪] ಇದರಿಂದಾಗಿ ಸಂಗಮ ಅರಸರು ತಮ್ಮ ಕುಲದವರೊಂದಿಗೆ ವಿವಾಹ ಮಾಡಿಕೊಳ್ಳುತ್ತಿದ್ದರೆಂದು ಸ್ಪಷ್ಟಪಡುತ್ತದೆ. ಆದರೆ ಕೆಲವು ಬಾರಿ ರಾಜಮನೆತನಗಳಲ್ಲಿ ವಿವಾಹಗಳು ಇತರೆ ಕುಲದವರೊಂದಿಗೆ ನಡೆಯುತ್ತಿದ್ದವು. ಸಮಕಾಲೀನ ಸಮಾಜದಲ್ಲಿ ಗೌರವ ಹೊಂದಲು, ವೈರಿಗಳನ್ನು ನಾಶಪಡಿಸಲು, ಯುದ್ಧ ನಿಲ್ಲಿಸಿ ಸಂಧಾನ ಮಾಡಿಕೊಳ್ಳುವ ಮೊದಲಾದ ಉದ್ದೇಶಗಳಿಗಾಗಿ ವಿವಾಹ ನಡೆಯುತ್ತಿದ್ದವು. ಸಂಗಮ ಅರಸರು ಹೊಯ್ಸಳರೊಂದಿಗೆ ರಕ್ತಸಂಬಂಧ ಹೊಂದಿದ್ದರು. ಮೂರನೇ ಬಲ್ಲಾಳನ ಸೋದರಳಿಯನಾದ ಬಿಲ್ಲಪ ದಣ್ಣಾಯಕನು ಹರಿಹರನ ಅಳಿಯನಾಗಿದ್ದನು.[೭೫] ಹೀಗೆ ರಾಜಕೀಯ ಕಾರಣಗಳಿಗಾಗಿ ಬೇರೆ ಕುಲದವರೊಂದಿಗೆ ವಿವಾಹವಾಗಿರುವುದು ಕಂಡುಬರುತ್ತದೆ. ಇವರ ವಿವಾಹಗಳು ವೈಭವದಿಂದ ನಡೆಯುತ್ತಿದ್ದವು. ಆದರೆ ಅದರ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ.

ಕುರುಬರಲ್ಲಿ ಅನೇಕ ಪಂಗಡಗಳಿವೆ. ಅವುಗಳೆಲ್ಲ ತಮ್ಮದೇ ಆದ ಸಂಸ್ಕಾರ –ವಿಧಿಗಳನ್ನು ಅನುಸರಿಸುತ್ತವೆ. ಹೀಗಾಗಿ ಅವುಗಳ ನಡುವೆ ಪರಸ್ಪರ ಕೊಡು–ಕೊಳ್ಳುವಿಕೆ ನಡೆಯುವುದಿಲ್ಲ. ಸಗೋತ್ರದವರಲ್ಲಿ ರಕ್ತಸಂಬಂಧ ಬೆಳೆಸುವುದಿಲ್ಲ. ಸಗೋತ್ರದವರು ಸಹೋದರರಾಗುತ್ತಾರೆ ಎಂಬ ನಂಬಿಕೆಯಿದೆ. ತಮ್ಮ ಪಂಗಡಗಳಲ್ಲಿ  ಬೇರೆ ಬೆಡಗನ್ನು ಹೊಂದಿರುವವರೊಂದಿಗೆ ಸಂಬಂಧಬೆಳೆಸುತ್ತಾರೆ. ಉದಾ: ಹಾಲು ಮತದವರಲ್ಲಿ ಹತ್ತಿ ಕಂಕಣ ಮತ್ತು ಉಣ್ಣಿಕಂಕಣ ಎಂಬ ಎರಡು ಪಂಗಡಗಳಿವೆ. ಅವುಗಳ ನಡುವೆ ವಿವಾಹ ನಡೆಯುವುದಿಲ್ಲ. ಕಾರಣ ಇವರು ಸಹೋದರರಾಗುತ್ತಾರೆ ಎಂಬ ನಂಬಿಕೆ ರೂಢಿಯಲ್ಲಿದೆ. ಹಾಲುಮತ ಪುರಾಣದ ಪ್ರಕಾರ ಕುರುಬರ ಮೂಲ ಪುರುಷನಾದ ಪದ್ಮಗೊಂಡ ಇಬ್ಬರನ್ನು ವಿವಾಹ ವಾಗುತ್ತಾನೆ ಮದುವೆಯ ಸಂದರ್ಭದಲ್ಲಿ ಒಬ್ಬಳಿಗೆ ಹತ್ತಿ ಕಂಕಣ ಇನ್ನೊಬ್ಬಳಿಗೆ ಉಣ್ಣೆಕಂಕಣ ಕಟ್ಟುತ್ತಾನೆ. ಇವರಿಬ್ಬರಿಂದ ಜನಿಸಿದ ಮಕ್ಕಳಿಗೆ ಹತ್ತಿ ಕಂಕಣ ಮತ್ತು ಉಣ್ಣಿ ಕಂಕಣದವರೆಂದು ಕರೆಯತೊಡಗಿದರು. ಈ ಎರಡು ಕಂಕಣದವರು ಒಬ್ಬ ತಂದೆಯ ಮಕ್ಕಳಾದ್ದರಿಂದ ಸಹೋದರರಾಗುತ್ತಾರೆ. ಈ ಹಿನ್ನೆಲೆಯಲ್ಲಿ ಕುರುಬರು ಬೇರೆ ಬೇರೆ ಪಂಗಡಗಳಲ್ಲಿ ರಕ್ತ ಸಂಬಂಧ ನಡೆಸುವುದಿಲ್ಲ. ಈ ವಿವಾಹದ ಸಂದರ್ಭಗಳಲ್ಲಿ ಅನೇಕ ರೀತಿಯ ವಿಧಿ–ವಿಧಾನಗಳನ್ನು ಆಚರಿಸುತ್ತಾರೆ.

### ೧. ವಿವಾಹದ ವಯಸ್ಸು

ಹಿಂದೂಗಳು ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿಕೊಳ್ಳುತ್ತಾರೆ ಎಂದು ಅಲ್ಬೆರೂನಿ ಅಭಿಪ್ರಾಯ ಪಟ್ಟಿದ್ದಾನೆ.[೭೬] ಹಿಂದೂ ಪದ್ಧತಿಯನ್ನೇ ಪಾಲಿಸುವ ಕುರುಬರಲ್ಲಿ ಸಹ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿತ್ತೆಂದು ತಿಳಿಯುತ್ತದೆ. ಕೆಲವು ಶಾಸನಗಳಲ್ಲಿ ಕಂಡುಬರುವ ಕೊಡಗೂಸಿನ ಮದುವೆ ಎಂಬ ಉಲ್ಲೇಖ ಈ ಬಾಲ್ಯವಿವಾಹ ಪದ್ಧತಿಯನ್ನು ಸೂಚಿಸುತ್ತದೆ.[೭೭] ಕುರುಬರಲ್ಲಿ ಸೋದರ ಗೋತ್ರ ಅಥವಾ ಅಜ್ಜಿಯ ಗೋತ್ರಕ್ಕೆ ಸಂಬಂಧಿಸಿದ ಕನ್ಯೆಯೊಂದಿಗೆ ವಿವಾಹವಾಗುವುದು ಸಾಮಾನ್ಯ

ಹೀಗಾಗಿ ಒಂದೇ ಕುಟುಂಬದಲ್ಲಿಯೇ ಸಂಬಂಧಗಳು ನೆರವೇರುವುದರಿಂದ ಹೆಚ್ಚಾಗಿ ಬಾಲ್ಯವಿವಾಹಗಳು ನಡೆಯುತ್ತವೆ. ಹಿಂದಿನ ಕಾಲದಲ್ಲಿ ತೊಟ್ಟಿಲಲ್ಲಿರುವ ಕೂಸುಗಳಿಗೆ ವಿವಾಹ ಮಾಡುತ್ತಿದ್ದ ಬಗ್ಗೆ ತಿಳಿದು ಬರುತ್ತದೆ. ಆದರೂ ಹೆಣ್ಣಿನ ವಯಸ್ಸು ಗಂಡಿನ ವಯಸ್ಸಿಗಿಂತಲೂ ಕಡಿಮೆಯಿರಬೇಕೆಂಬ ನಿಯಮವಿದೆ. ಇಂದಿನ ಆಧುನಿಕ ಯುಗದಲ್ಲಿ ಬಾಲ್ಯ ವಿವಾಹ ಪದ್ಧತಿ ನಿಷೇಧಿಸಿದೆ. ಆದರೆ ಇತ್ತೀಚೆಗೆ ಕುಷ್ಟಗಿ ತಾಲೂಕಿನ ಕಬ್ಬರಗಿಯಲ್ಲಿ ಬಾಲ್ಯವಿವಾಹವು ನಡೆಯಿತು. ಆದರೂ ಹೆಚ್ಚಾಗಿ ಈ ಪದ್ಧತಿ ರೂಢಿಯಲ್ಲಿ ಇಲ್ಲವೆಂದೇ ಹೇಳಬಹುದು.

**೨. ವಧುವಿನ ಆಯ್ಕೆ**

ಕುರುಬರಲ್ಲಿ ಸೋದರ ಮಾವನ ಮಗಳೊಂದಿಗೆ ಅಥವಾ ಅಜ್ಜಿಯ ಗೋತ್ರಕ್ಕೆ ಸಂಬಂಧಿಸಿದ ಕನ್ಯೆಯೊಂದಿಗೆ ವಿವಾಹವಾಗುವುದು ರೂಢಿಯಲ್ಲಿದೆ. ಅಕ್ಕನ ಅಥವಾ ತಂಗಿಯ ಮಗಳನ್ನು ಮುದುವೆಯಾಗಬಹುದಾಗಿದೆ. ಕುರುಬರಲ್ಲಿ ಸೋದರ ಸಂಬಂಧಗಳಿಗೆ ಅಧಿಕ ಮಹತ್ವವಿದೆ. ಹೀಗಾಗಿ ವಧುವಿನ ಆಯ್ಕೆ ಸುಲಭವಾಗಿದೆ. ಆದರೆ ಕೆಲವಡೆ ಹೊರ ಸಂಬಂಧವನ್ನು ಬಯಸುವವರು ಕನ್ಯೆಯ ಮತ,ಬೆಡಗು,ಕಂಕಣ,ದೇವರು,ಸ್ವಭಾವ,ಮನೆತನದ ಹಿನ್ನೆಲೆ, ಆರ್ಥಿಕ ಸ್ಥಿತಿ ಮೊದಲಾದವುಗಳ ಬಗ್ಗೆ ತಿಳಿದುಕೊಳ್ಳುತ್ತಾರೆ. ಎಲ್ಲಾ ರೀತಿಯಿಂದಲೂ ತಮಗೆ ಸಮಾನವಾದ ಸಂಬಂಧವೆಂದು ತಿಳಿದರೆ ಮಾತ್ರ ಅವರೊಂದಿಗೆ ಸಂಬಂಧ ಬೆಳೆಸಲು ಮುಂದಾಗುತ್ತಾರೆ.

**೩. ಕನ್ಯೆ ಪರೀಕ್ಷೆ**

ಒಂದು ಶುಭದಿನದಂದು ಕನ್ಯೆ ನೋಡಲು ಗಂಡಿನ ತಂದೆ, ತಾಯಿ, ಗುರು, ಹಿರಿಯರು ಹೋಗುತ್ತಾರೆ. ಆಗ ಕೆಲವು ಶುಭ-ಅಶುಭ ಸೂಚನೆಗಳನ್ನು ನೋಡುತ್ತಾರೆ. ಮನೆಯಿಂದ ಹೊರಡುವಾಗ ಎದುರಿಗೆ ಖಾಲಿಕೊಡಬಂದರೆ,ಬೆಕ್ಕು ಎಡಕ್ಕೆ ಹೋದರೆ,ಕಾಗೆ ಎಡಕ್ಕೆ ಹಾರಿದರೆ, ಕತ್ತೆಯು ಬೆನ್ನಹಿಂದೆ ಕಿರುಚಿದರೆ, ಹಾವು, ವಿಧವೆ ಎದುರಿಗೆ ಬಂದರೆ, ಹೆಣ್ಣಿನವರ ಮನೆಯಲ್ಲಿ ಕಸಗೂಡಿಸುತ್ತಿದ್ದರೆ, ಮನೆಯ ಬಾಗಿಲು ಹಾಕಿದ್ದರೆ ಮೊದಲಾದವುಗಳನ್ನು ಅಶುಭ ಸೂಚನೆಗಳೆಂದು ನಂಬುತ್ತಾರೆ.[೭೮] ಕನ್ಯೆನೋಡಲು ಹೊರಟ ಸಂಧರ್ಭದಲ್ಲಿ ಇವುಗಳೆಲ್ಲ ನಡೆದರೆ ಆಕಾರ್ಯವನ್ನು ಮುಂದೂಡುವ ಸಾಧ್ಯತೆಯಿದೆ. ಮನೆಯಿಂದ ಹೊರಡುವಾಗ ಜೋಡು ಸೀನಿದರೆ, ಕಾಗೆಯು ಬಲಕ್ಕೆ ಹಾರಿದರೆ, ಬೆಕ್ಕು ಎಡದಿಂದ ಬಲಕ್ಕೆ ಹೋದರೆ, ಮುತ್ತೈದೆಯರು, ತುಂಬಿದ ಕೊಡಗಳು ಬಂದರೆ,ದಾರಿಯಲ್ಲಿ ಹೆಣ ಒಯ್ಯುವುದು ಕಂಡರೆ ಶುಭ ಸೂಚಕ ಎಂಬ ನಂಬಿಕೆಯಿದೆ.[೭೯] ಶುಭಸೂಚನೆಗಳು ಅಧಿಕವಾದರೆ ಮಾತ್ರ ಹೆಣ್ಣು ನೋಡಲು ಹೊರಡುತ್ತಾರೆ. ಹೆಣ್ಣು ನೋಡಲು ಬರುವ ವಿಷಯವನ್ನು ಕುಲದ ಗಂಡನಿಗೆ ಹೆಣ್ಣಿನ ತಂದೆ ತಿಳಿಸುತ್ತಾನೆ. ಗಂಡ ಹೆಣ್ಣಿನ ಮನೆಗೆ ಬರಲು ಕೋಲಕಾರನ ಮೂಲಕ ಹೇಳಿಕಳಿಸುತ್ತಾನೆ. ನಂತರ ಹೆಣ್ಣು ನೋಡುವ ಶಾಸ್ತ್ರ ಪ್ರಾರಂಭವಾಗುತ್ತದೆ.

ಕನ್ಯೆಯು ಸೀರೆ,ಕುಪ್ಪಸ ತೊಟ್ಟು,ಮುಡಿಗೆ ಹೂವಿನ ಅಲಂಕಾರ ಮಾಡಿಕೊಂಡು ಬಂದು ಹಿರಿಯರಿಗೆಲ್ಲ ನಮಸ್ಕರಿಸುತ್ತಾಳೆ. ನಂತರ ಎದುರಿಗೆ ಹಾಕಿರುವ ಕಂಬಳಿ ಅಥವಾ ಮಣೆಯ ಮೇಲೆ ಕೂಡುವಳು. ಗಂಡಿನ ಕಡೆಯ ಹಿರಿಯ ಅಥವಾ ಗುರುಸ್ವಾಮಿ

ಹೆಣ್ಣಿನ ಹಸ್ತರೇಖೆ ನೋಡುತ್ತಾನೆ. ಅವಳ ಧ್ವನಿ ಪರೀಕ್ಷಿಸಲು ಸಂಭಾಷಣೆ ನಡೆಸುತ್ತಾನೆ. ಗಂಡಿನ ಕಡೆಯ ಹೆಣ್ಣುಮಗಳು ಕನ್ಯೆಯ ಹಣೆಗೆ ಕುಂಕುಮ ವಿಡುತ್ತಾಳೆ. ನಂತರ ವೀಳ್ಯೆದೆಲೆ,ಅಡಿಕೆಬೆಟ್ಟ, ಬಾಳೆಹಣ್ಣುಗಳನ್ನು ಅವಳ ಉಡಿಯಲ್ಲಿಟ್ಟು ಉಡಿ ತುಂಬುವ ಶಾಸ್ತ್ರ ಮಾಡುತ್ತಾಳೆ. ಅಲ್ಪ ಉಪಹಾರದೊಂದಿಗೆ ಕನ್ಯೆನೋಡುವ ಶಾಸ್ತ್ರ ಮುಗಿಯುತ್ತದೆ. ಕನ್ಯೆ ಒಪ್ಪಿಗೆಯಾಗಿದೆ ಅಥವಾ ಒಪ್ಪಿಗೆಯಾಗಿಲ್ಲ ಎಂಬುದರ ಬಗ್ಗೆ ಆಮೇಲೆ ತಿಳಿಸುವುದಾಗಿ ಹೇಳಿ ಹೋಗುತ್ತಾರೆ.

ಹೆಣ್ಣು ಒಪ್ಪಿಗೆಯಾದ ನಂತರ ಗಂಡಿನ ಮನೆಯ ಯಜಮಾನ ಕೊಡು-ಕೊಳ್ಳುವಿಕೆಯ ಬಗ್ಗೆ ಮಾತುಕತೆ ನಡೆಸುತ್ತಾನೆ. ಪ್ರಾಚೀನ ಕಾಲದಲ್ಲಿ ಕನ್ಯಾಶುಲ್ಕ ಪದ್ಧತಿಯು ಸಮಾಜದ ಕೆಳವರ್ಗದ ಜನರಲ್ಲಿ ರೂಢಿಯಲ್ಲಿತ್ತು.[೮೦] ಊರ ಹಿರಿಯರು ಈ ಕನ್ಯಾಶುಲ್ಕವನ್ನು ನಿಶ್ಚಯಿಸುತ್ತಿದ್ದರು. ಇದು ಅಂದಿನ ಕಾಲದ ಒಂದು ತೆರಿಗೆಯಾಗಿತ್ತು. ಈ ತೆರಿಗೆಯು ರಾಜನ ಬೊಕ್ಕಸಕ್ಕೆ ಹೋಗುವುದಕ್ಕಿಂತ ದೇವಸ್ಥಾನ ಜೀರ್ಣೋದ್ಧಾರ, ಕೆರೆನಿರ್ಮಾಣಗಳಂತಹ ಕಾರ್ಯಕ್ಕೆ ವಿನಿಮಯವಾಗುತ್ತಿತ್ತು.[೮೧] ಇದರಿಂದಾಗಿ ತೆರ ಪದ್ಧತಿ ಪ್ರಮುಖ ಸ್ಥಾನ ಪಡೆದಿತ್ತೆಂಬುದು ಸ್ಪಷ್ಟ.

ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದ್ದ ಕನ್ಯಾಶುಲ್ಕ ಪದ್ಧತಿಯನ್ನು ಕುರುಬರು ಅನುಸರಿಸುತ್ತಿದ್ದರು. ಈ ಕನ್ಯಾಶುಲ್ಕವನ್ನು ಒಂದು ರೀತಿಯ ತೆರಿಗೆಯನ್ನಾಗಿ ವಿಧಿಸಿದ್ದರು. ಕುರುಬರು ಮದುವೆಯ ಸಂದರ್ಭದಲ್ಲಿ ಒಂದು ಪಣವನ್ನು ಕನ್ಯಾಶುಲ್ಕವನ್ನಾಗಿ ನೀಡುತ್ತಿದ್ದರು. ಮದುವೆಯ ಸಮಯದಲ್ಲಿ ಮದುವಣಿಗ ಮತ್ತು ಮದುವಣಗಿತ್ತಿಯರು ತಲಾ ಒಂದು ಪಣವನ್ನು ಕೊಡಬೇಕೆಂದು ಹಾಗೂ ಆ ಹಣವನ್ನು ದೇವಸ್ಥಾನಕ್ಕೆ ನೀಡಬೇಕೆಂದು ತೀರ್ಮಾನಿಸಲಾಗಿತ್ತೆಂದು ತಿಳಿಯುತ್ತದೆ.[೮೨] ತೆರವು ನೀಡುವುದನ್ನು ಯಾರಾದರೂ ತಿರಸ್ಕರಿಸಿದರೆ ಸಾವಿರ ಕವಿಲೆಯನ್ನು ಕೊಂದ ಪಾಪಕ್ಕೆ ಗುರಿಯಾಗುವರು ಎಂದು ಹೇಳಲಾಗಿದೆ.[೮೩] ಇದರಿಂದ ಅಂದು ಮದುವೆ ತೆರಿಗೆ ಅಥವಾ ಕನ್ಯಾಶುಲ್ಕ ನೀಡುವುದು ಅನಿವಾರ್ಯವಾಗಿತ್ತೆಂದೂ ತಿಳಿಯುತ್ತದೆ.

ಆಧುನಿಕ ಕಾಲದಲ್ಲೂ ಕುರುಬರಲ್ಲಿ ತೆರ ಅಥವಾ ಕನ್ಯಾಶುಲ್ಕ ಪದ್ಧತಿಯಿತ್ತು. ಕನ್ಯಾಶುಲ್ಕವು ಕನ್ಯೆಯ ಸ್ಥಿತಿಗತಿಯನ್ನು ಕುರಿತು ನಿರ್ಧರಿಸಲಾಗುತ್ತಿತ್ತು. ೧೫೦, ೨೦೦, ೫೦೦ ರೂ. ಗಳು ಎಂದು ನಿಗದಿಗೊಳಿಸಲಾಗುತ್ತಿತ್ತು. ಆದರೆ ವಿಧವಾವಿವಾಹ ಅಥವಾ ಎರಡನೆಯ ವಿವಾಹದಂದು ಕನ್ಯಾಶುಲ್ಕವನ್ನು ದ್ವಿಗುಣಗೊಳಿಸುತ್ತಿದ್ದರು. ಕ್ರಿ.ಶ.೧೯೭೫ರ ವರೆಗೂ ಈ ಪದ್ಧತಿ ರೂಢಿಯಲ್ಲಿದ್ದಿತೆಂದು ಬಿಜಾಪುರದ ಜನರು ತಿಳಿಸುತ್ತಾರೆ. ಆದರೆ ಇಂದು ಕುರುಬರಲ್ಲಿ ಸಂಪೂರ್ಣವಾಗಿ ವರದಕ್ಷಿಣೆ ಪದ್ಧತಿ ರೂಢಿಯಲ್ಲಿದೆ. ಆದರೂ ಸಂಪ್ರದಾಯವನ್ನು ಉಳಿಸಿಕೊಂಡುಬರುವುದಕ್ಕಾಗಿ ಗಂಡು ಹೆಣ್ಣಿಗೆ ಸ್ವಲ್ಪ ಮಟ್ಟದ ಹಣವನ್ನು ನೀಡುವುದು ಕಂಡುಬರುತ್ತದೆ. ಇದು ಹಿಂದಿನ ಕಾಲದಲ್ಲಿ ತೆರ ಅಥವಾ ಕನ್ಯಾಶುಲ್ಕ ಪದ್ಧತಿ ಇದ್ದಿತೆಂಬುದಕ್ಕೆ ಸಾಕ್ಷಿಯಾಗಿದೆ. ಗಂಡಿನ ಕಡೆಯವರು ಹಿರಿಯರ ಸಮ್ಮುಖದಲ್ಲಿ ಕೊಡು-ಕೊಳ್ಳುವ ಮಾತುಗಳನ್ನಾಡುತ್ತಾರೆ. ಇಬ್ಬರಿಗೂ ಒಪ್ಪಿಗೆಯಾದರೆ ವೀಳ್ಯೆಯನ್ನು ವಿನಿಮಯಿಸಿಕೊಳ್ಳುವರು. ಇದಕ್ಕೆ ಸಾಕ್ಷಿ ವೀಳ್ಯ ಎಂದು ಕರೆಯುವರು. ಆಗಮಿಸಿದವರೆಲ್ಲರಿಗೂ ಊಟದ ವ್ಯವಸ್ಥೆ ಮಾಡುವರು.

**೪. ನಿಶ್ಚಿತಾರ್ಥ**

ಈ ಕಾರ್ಯವು ಸಾಮಾನ್ಯವಾಗಿ ಹೆಣ್ಣಿನವರ ಮನೆಯಲ್ಲಿ ನಡೆಯುತ್ತದೆ. ಒಂದು ಶುಭದಿನ ನೋಡಿಕೊಂಡು ಅಂದು

ಸಂಜೆ ನಿಶ್ಚಿತಾರ್ಥ ಮಾಡುತ್ತಾರೆ. ಗಂಡಿನವರು ಹೆಣ್ಣಿಗೆ ಹೊಸ ವಸ್ತ್ರ ಒಡವೆಗಳನ್ನು ಕೊಡುತ್ತಾರೆ. ಅವುಗಳಿಂದ ಅಲಂಕೃತಗೊಂಡ ಕನ್ಯೆಯನ್ನು ಗಂಡು ಹಾಗೂ ಹೆಣ್ಣಿನ ಕಡೆಯವರು ಕೂಡಿ ಮನೆಯೊಳಗಿಂದ ಕರೆತಂದು ಕಂಬಳಿ ಗದ್ದಿಗೆಯ ಮೇಲೆ ಕೂಡಿಸುತ್ತಾರೆ. ಅಲ್ಲದೆ ಮುತ್ತೈದೆಯರು ಆರತಿ ಬೆಳಗುತ್ತಾರೆ. ಇದನ್ನು ಸಕ್ಕರೆ ಕಾರಣವೆಂದೂ ಕರೆಯುವರು.

ವಿವಾಹ ಸಂಪ್ರದಾಯಗಳು ಯಾವಾಗಲೂ ಕಾರ್ತೀಕ, ವಸಂತ ಹಾಗೂ ಜೇಷ್ಠ ಮಾಸದಲ್ಲಿಯೇ ನಡೆಯುತ್ತವೆ. ಒಳ್ಳೆಯ ಶುಭದಿನದಂದು ಮದುವೆಯ ಕಾರ್ಯಗಳನ್ನು ಪ್ರಾರಂಭಿಸುತ್ತಾರೆ. ಮದುವೆಯು ಗಂಡಿನ ಮನೆಯಲ್ಲಿ ನಡೆಯಬೇಕೆಂಬ ಪದ್ಧತಿಯಿದೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಮಾತ್ರ ಹೆಣ್ಣಿನವರ ಕಡೆಗೆ ಮದುವೆಯ ಕಾರ್ಯಗಳು ನಡೆಯುತ್ತವೆ. ಹಿಂದೆ ಮದುವೆ ಕಾರ್ಯಗಳು ಮೂರು ದಿನಗಳವರೆಗೆ ನಡೆಯುತ್ತಿದ್ದವು ಆದರೆ ಇಂದು ಆಚರಣೆಗಳು ಬದಲಾವಣೆಗೊಂಡಿವೆ.

### ೫. ಲಗ್ನ ಪತ್ರಕಟ್ಟಿಸುವ ಶಾಸ್ತ್ರ

ವಿವಾಹ ಪೂರ್ವದ ಎರಡು ಅಥವಾ ಮೂರು ದಿನದಂದು ಗುರುಹಿರಿಯರ ಸಮ್ಮುಖದಲ್ಲಿ ಲಗ್ನ ಪತ್ರಿಕೆ ಬರೆಸುತ್ತಾರೆ. ಮೊದಲ ಆಮಂತ್ರಣ ಪತ್ರಿಕೆಯನ್ನು ಮನೆದೇವರ ಹೆಸರಿಗೆ ಬರೆಯುವ ಪದ್ಧತಿಯಿದೆ. ಪ್ರತಿಯೊಂದು ಆಮಂತ್ರಣ ಪತ್ರಿಕೆಯ ನಾಲ್ಕು ಮೂಲೆಗೂ ಅರಿಷಿಣ,ಕುಂಕುಮ ಲೇಪಿಸುತ್ತಾರೆ. ತಮ್ಮ ಬಂಧು ಬಳಗ,ಹಾಗೂ ಆಪ್ತರಿಗೆ ಪತ್ರಿಕೆಯನ್ನು ಹಂಚುತ್ತಾರೆ. ಅಂದು ಹೊಸ ವಸ್ತ್ರದಲ್ಲಿ ಧಾನ್ಯ, ಕೊಬ್ಬರಿ, ಉತ್ತತ್ತಿ, ಅರಿಷಿಣ, ಎಲೆ, ಅಡಿಕೆ, ಕಣಗಳನ್ನು ಹಾಕಿಗಂಟು ಕಟ್ಟುವರು.[೮೪] ಮಾಳಿಗೆಯ ಕುಂಬಿಗೆ ಸುಣ್ಣದ ಹಾಗೂ ಕೆಮ್ಮಣ್ಣಿನ ಜೋರು ಬಿಡುವರು. ಗೋಡೆಗಳಿಗೆಲ್ಲ ಸುಣ್ಣ,ಬಣ್ಣ ಬಳಿಯುವರು. ನಂತರ ಒಳಕಲ್ಲು ಪೂಜೆ, ಹಂದರ ಹಾಕುವ ಶಾಸ್ತ್ರ, ಹಾಲುಗಂಬ ತರುವ ಕಾರ್ಯ ಮಾಡುವರು.

### ೬. ಒಳಕಲ್ಲು ಪೂಜೆ

ಮದುವೆಯ ಮೊದಲ ದಿನ ಒಳಕಲ್ಲು ಪೂಜೆಯನ್ನು ಗಂಡಿನವರ ಮನೆಯಲ್ಲಿ ಮಾಡುತ್ತಾರೆ. ಇದು ಹೆಣ್ಣು ಮಕ್ಕಳಿಗೆ ಸಂಬಂಧಿಸಿದ ಕಾರ್ಯವಾಗಿದೆ. ಮನೆಯಲ್ಲಿಯ ಒಳಕಲ್ಲು, ಬೀಸುವಕಲ್ಲು, ಕುಡಗೋಲು, ಒನಕೆ, ಮೊದಲಾದ ವಸ್ತುಗಳನ್ನು ತೊಳೆಯುತ್ತಾರೆ. ನಂತರ ಅವುಗಳಿಗೆ ವಿಭೂತಿ, ಕುಂಕುಮ ಹಚ್ಚಿ ಪೂಜಿಸುತ್ತಾರೆ. ಹಿಡಿಕಾಳುಗಳನ್ನು ತೆಗೆದುಕೊಂಡು ಬೀಸುವ,ಕುಟ್ಟುವ ಕಾರ್ಯ ಆರಂಭಿಸುತ್ತಾರೆ. ಆ ಸಂದರ್ಭದಲ್ಲಿ ಮುತ್ತೈದೆಯರು ಒಳಕಲ್ಲು ಪೂಜೆಯ ಹಾಡುಗಳನ್ನು ಹಾಡುತ್ತಾರೆ. ಅಕ್ಕಿ ಕುಟ್ಟುವ,ಅರಿಷಿಣ ಬೀಸುವ ಮೊದಲಾದ ಕಾರ್ಯಗಳು ನಡೆಯುತ್ತವೆ.

### ೭. ಹಂದರ ಹಾಕುವ ಶಾಸ್ತ್ರ

ಹಂದರವನ್ನು ಗಂಡಿನ ಮನೆಯವರ ಮುಂದೆ ಹಾಕಬೇಕೆಂಬ ನಿಯಮವಿದೆ. ಹಂದರಕ್ಕೆ ಬೇಕಾಗುವ ಕಟ್ಟಿಗೆ ಮೊದಲಾದ ಸಾಮಾನುಗಳನ್ನು ಗಂಡಿನವರಾಗಲಿ, ಹೆಣ್ಣಿನವರಾಗಲಿ ತರುವುದಿಲ್ಲ. ಗಂಡು ಹಾಗೂ ಹೆಣ್ಣಿನ ಬೆಡಗನ್ನು ಬಿಟ್ಟು ಬೇರೆ ಬೆಡಗಿನವರು ತರುತ್ತಾರೆ. ಹಂದರದ ಮೇಲೆ ಜೋಳದ ಕಣಿಕೆಯನ್ನು ಹಾಕಿ ಒಳಗಡೆ ಅಲ್ಲಲ್ಲಿ ಮಾವಿನ ತಳಿರು ಇಳಿಬಿಟ್ಟರುತ್ತಾರೆ. ಕಂಬಗಳಿಗೆ ತೆಂಗಿನಗರಿ ಕಟ್ಟಿ ಹಂದರವನ್ನು ಶೃಂಗರಿಸಿರುತ್ತಾರೆ.

## ೮. ಹಾಲುಗಂಬ ತರುವ ಶಾಸ್ತ್ರ

ಮದುವೆಯ ಸಂದರ್ಭದಲ್ಲಿ ಹಂದರಕ್ಕೆ ಹಾಲುಗಂಬ ತಂದು ಕಟ್ಟುವ ಸಂಪ್ರದಾಯವಿದೆ. ಈ ಹಾಲುಗಂಬವನ್ನು ಗಂಡಿನ ಸೋದರ ಮಾವ ಕಡಿದು ತರಬೇಕೆಂಬ ನಿಯಮವಿದೆ. ತೆಂಗಿನಕಾಯಿ,ಊದಿನಕಡ್ಡಿ ಹಾಗೂ ಇತರೇ ಪೂಜಿಸಿ ನಂತರ ಕಡಿಯುತ್ತಾನೆ. ಕಳ್ಳಿಗಿಡದಲ್ಲಿ ಹಾಲಿನಂತಹ ದ್ರವ್ಯವಿರುವುದರಿಂದ ಅದನ್ನು ಹಾಲುಗಂಬ ಎಂದು ಕರೆಯುತ್ತಾರೆ. ಈ ಗಿಡವನ್ನು ತೆಗೆದುಕೊಂಡು ವಾದ್ಯ ವೈಭವಗಳೊಂದಿಗೆ ಬೀರದೇವರ ಗುಡಿಯ ಮುಂದೆ ಹಾಯ್ದು ಹಂದರಕ್ಕೆ ಬರುತ್ತಾನೆ. ಹಾಲು, ಮೊಸರು, ತುಪ್ಪ, ಮತ್ತು ಹವಳ ಹಾಗೂ ಬಂಗಾರವನ್ನು ಕುಣಿಯಲ್ಲಿಟ್ಟು ಹೂಳಿದ ನಂತರ ನೂಲಿನ ಕಂಕಣ, ಒಂಬತ್ತು ರೀತಿಯ ಧಾನ್ಯಗಳನ್ನು ಒಳಗೊಂಡ ಕೆಂಪು ಬಣ್ಣದ ಅರಿವೆಯ ಗಂಟನ್ನು ಕಂಬಕ್ಕೆ ಕಟ್ಟುತ್ತಾನೆ. ಮುತ್ತೈದೆಯರು ಈ ಹಾಲುಗಂಬಕ್ಕೆ ಆರತಿ ಮಾಡುತ್ತಾರೆ.

## ೯. ಎದುರುಗೊಳ್ಳುವ ಕಾರ್ಯ

ಹೆಣ್ಣಿನ ಕಡೆಯವರು ಗಂಡಿನವರ ಊರಿಗೆ ಬರುತ್ತಾರೆ. ಹೆಣ್ಣಿನ ಕಡೆಯವರು ಊರ ಹೊರಗಿನ ದೇವಸ್ಥಾನದ ಹತ್ತಿರ ಬಿಡಾರ ಹೂಡುತ್ತಾರೆ. ಆಗ ಗಂಡಿನ ಕಡೆಯವರು ವಾದ್ಯ ವೈಭವಗಳೊಂದಿಗೆ ಎದುರುಗೊಳ್ಳಲು ಹೋಗುತ್ತಾರೆ. ಅಲ್ಲಿ ಪರಸ್ಪರ ಶುಭಾಶಯಗಳನ್ನು ವಿನಿಮಯಿಸಿಕೊಂಡ ಮೇಲೆ ಎಲ್ಲರಿಗೂ ಬೆಲ್ಲದ ನೀರು ಹಾಗೂ ಎಲೆ ಅಡಿಕೆ ನೀಡಲಾಗುತ್ತದೆ. ಹೆಣ್ಣಿನವರಿಗೆ ಗೊತ್ತು ಮಾಡಿದ ಒಂದು ಸ್ಥಳದಲ್ಲಿ ವಿಶ್ರಮಿಸಲು ಸೂಚಿಸುತ್ತಾರೆ.

## ೧೦. ಐರಣಿ ತರುವ ಶಾಸ್ತ್ರ

ಐರಣಿ ಎಂದರೆ ವಿಶೇಷ ರೀತಿಯ ಮಡಿಕೆ ಎಂದರ್ಥ ಮುತ್ತೈದೆಯರು ಒಂದು ಸೇರು ಅಕ್ಕಿ ಐದು ಎಲೆ, ಅಡಿಕೆ, ಐದು ರೂಪಾಯಿ ತೆಗೆದುಕೊಂಡು ಕುಂಬಾರನ ಮನೆಗೆ ಹೋಗುತ್ತಾರೆ. ಕುಂಬಾರನಿಗೆ ಪೂರ್ವಭಾವಿ ಸೂಚನೆ ನೀಡಿರುತ್ತಾರೆ. ಹಾಗಾಗಿ ಬೇಕಾದ ಮಡಿಕೆಗಳಿಗೆ ಸುಣ್ಣಬಣ್ಣ ಬಳಿದು ಸಿದ್ಧಪಡಿಸಿರುತ್ತಾನೆ.[೨೫] ಮುತ್ತೈದೆಯರು ಮಡಿಕೆಗಳಿಗೆ ಆರತಿ ಮಾಡಿ ಕುಂಬಾರನಿಗೆ ಹಣ, ಎಲೆ ಅಡಿಕೆ ಕೊಟ್ಟು ಮಡಿಕೆಗಳನ್ನು ವಾದ್ಯ–ವೈಭವಗಳೊಂದಿಗೆ ಮದುವೆಯ ಹಂದರಕ್ಕೆ ತರುತ್ತಾರೆ. ಈ ಸಂದರ್ಭದಲ್ಲಿ ಅನೇಕ ಸಂಪ್ರದಾಯದ ಹಾಡುಗಳನ್ನು ಹಾಡುತ್ತಾರೆ.

ಕುಂಬಾರನ ಮನೆಯಿಂದ ತಂದ ಮಡಿಕೆಗಳಲ್ಲಿ ಮೂರನ್ನು ಹೊತ್ತುಕೊಂಡು ಹೋಗಿ ಬಾವಿ ಅಥವಾ ಕೆರೆಯಿಂದ ನೀರನ್ನು ತರುವ ಪದ್ಧತಿಯಿದೆ. ಆಗ ಅಗಸನು ಹಾಸಿದ ಹಡದಿಯ ಬಟ್ಟೆಯ ಮೇಲೆ ನಡೆದುಕೊಂಡು ಹಂದರ ತಲುಪುತ್ತಾರೆ. ಈ ಮೂರು ಮಡಿಕೆಗಳಲ್ಲಿ ಒಂದು ಮಡಿಕೆಯನ್ನು ಬೀರದೇವರಿಗೆ ಮೀಸಲಾಗಿರುಸುತ್ತಾರೆ. ಅದನ್ನು ಪುರುಷ ತರುತ್ತಾನೆ. ನೀರು ತುಂಬಿದ ಮೂರು ಮಡಿಕೆಗಳ ಮೇಲೆ ಚರಿಗೆ ಹಾಗೂ ಕಳಸಗಿಂಡಿ ಇಡುತ್ತಾರಲ್ಲದೆ, ಅವುಗಳನ್ನು ಹಂದರದ ಹಾಲಗಂಬದ ಬಳಿಯಿಟ್ಟು ಪೂಜಿಸುತ್ತಾರೆ. ಇದನ್ನು 'ಪೂರ್ಣಕಂಬ' ಎಂದು ಕರೆಯುತ್ತಾರೆ.[೨೬]

## ೧೨. ಅರಿಷಿಣ ಹಚ್ಚುವ ಶಾಸ್ತ್ರ

ಕರಿಕಂಬಳಿ ಗದ್ದಿಗೆಯ ಮೇಲೆ ಶಶಿಯಕ್ಕಿಯ ಹಾಕುತ್ತಾರೆ. ಅದಕ್ಕೂ ಪೂರ್ವದಲ್ಲಿ ಕ್ಷೌರಿಕನು ವಧು-ವರರ ಉಗುರು ತೆಗೆಯುತ್ತಾನೆ. ನಂತರ ವಧು-ವರರನ್ನು ಕಂಬಳಿ ಮೇಲೆ ಕೂಡಿಸುತ್ತಾರೆ. ಆರತಿ ಅಕ್ಷತೆ ಮಾಡಿ ಮೈಗೆ ಅರಿಷಣ ಹಾಗೂ ತಲೆಗೆ ಎಣ್ಣೆಯ ಹಚ್ಚುತ್ತಾರೆ. ವಧು-ವರರ ಹಿಂದೆ ತಾಯಿ ಅಥವಾ ಸಹೋದರಿಯರು ಕುಳಿತುಕೊಂಡು ಅರಿಷಣ ಹಚ್ಚಿಸಿಕೊಳ್ಳುವರು.

## ೧೩. ಸುರಗಿ ನೀರು ಹಾಕುವುದು

ಅರಿಷಿಣ ಹಚ್ಚಿದ ನಂತರ ಅಂಗಳದಲ್ಲಿ ಹಲಗೆಯನ್ನಿಡುತ್ತಾರೆ. ವಧು-ವರರು ಹಾಗೂ ಅವರ ಹಿಂದೆ ಕುಳಿತವರು ಬಂದು ಕುಳಿತ ನಂತರ, ನಾಲ್ಕು ದಿಕ್ಕಿಗೆ ನೀರು ತುಂಬಿದ ನಾಲ್ಕು ತಾಮ್ರದ ಗಿಂಡಿಗಳನ್ನಿಡುತ್ತಾರೆ. ಅದಕ್ಕೆ ಹತ್ತಿದಾರದ ಎಳೆಯ ಸುತ್ತುವರು. ಅನ್ನದ ಆರತಿ ಮಾಡಿ ಇಳಿದೆಗೆದು ತಲೆಯ ಮೇಲೆ ವೀಳ್ಯೆದೆಲೆಯಿಂದಲೇ ಎಣ್ಣೆಯ ಹಾಕುತ್ತಾರೆ. ಅವರಿಗೆ ಆರತಿ ಬೆಳಗಿ ನಂತರ ತುಂಬಿದ ಕೊಡದಿಂದ ನೀರನ್ನು ಹಾಕಿ ಸ್ನಾನ ಮಾಡಿಸುವರು. ಆಗ ವರ ಬಿಳಿಯ ಬಟ್ಟೆ ತೊಡುತ್ತಾನೆ. ಕನ್ಯೆಯು ಅರಿಷಿಣ ಬಣ್ಣದ ಸೀರೆ ಉಡುತ್ತಾಳೆ. ಇದರಲ್ಲಿ ಯಾರು ಬೇಗನೆ ಬಟ್ಟೆ ಧರಿಸುವರೋ ಅವರು ಒಳ್ಳೆಯ ಚಟುವಟಿಕೆಯಿಂದಿರುವರೆಂದು ಜನರು ತೀರ್ಮಾನಿಸುತ್ತಾರೆ. ಕೈಗಳಿಗೆ ಕಂಕಣಕಟ್ಟಿ ಮನೆಯೊಳಗೆ ಕರೆದೊಯ್ಯುತ್ತಾರೆ.

## ೧೪. ದೇವರು ಹೊಳೆಗೆ ಹೋಗುವುದು

ವಾದ್ಯಗಳೊಂದಿಗೆ ವಧು-ವರರ ಸಮೇತವಾಗಿ ಮನೆಯ ದೇವರುಗಳ ಜೊತೆಗೆ ಹೊಳೆ ಹಳ್ಳ, ಕೆರೆ ಬಾವಿಗೆ ಹೋಗುತ್ತಾರೆ. ಅಲ್ಲಿ ಆರತಿ ಬೆಳಗಿ ಪೂಜೆ ಮಾಡುತ್ತಾರೆ. ಈ ಪದ್ಧತಿ ಬೀರದೇವರು ಹಾಗೂ ಮೈಲಾರಲಿಂಗನ ಆರಾಧಕರಲ್ಲಿ ಅಧಿಕವಾಗಿದೆ.

## ೧೫. ಪಂಚಕಳಸ ಹೂಡುವುದು

ಧಾನ್ಯದ ರಾಶಿಯ ಮೇಲೆ ತಂಬಿಗೆಯಿಟ್ಟು, ಅದರ ಮೇಲೆ ತೆಂಗಿನಕಾಯಿ ಇಡುತ್ತಾರೆ. ಅದಕ್ಕೆ ಒಂದು ಖಣವನ್ನು ಹಾಗೂ ವಿಳ್ಯೆಯದೆಲೆಯನ್ನು ಇಡುವರು. ಅಲ್ಲದೆ ಮಂಗಳಸೂತ್ರ, ನತ್ತು, ಹಾಗೂ ಅನೇಕ ಆಭರಣಗಳನ್ನು ಹಾಕುವರು. ಅದಕ್ಕೆ ದಾರದ ಐದು ಎಳೆಯ ಸುತ್ತು ಹಾಕುವರು, ಐದು ಕಳಸಗಿಂಡಿಯಿಂದ ಐದು ಕಂಕಣ ಕಟ್ಟಿರುವರು. ಐದು ಕೊಬ್ಬರಿಬಟ್ಟಲು, ಉತ್ತತ್ತಿ, ಎಲೆ, ಅಡಿಕೆ, ಬೆಲ್ಲದಚ್ಚು, ಅರಿಶಿಣ ಕೊಂಬು, ಹಣವನ್ನು ಇಡುತ್ತಾರೆ. ಇವುಗಳನ್ನೆಲ್ಲ ಕನ್ಯೆಯ ಉಡಿ ತುಂಬಿದ ಮೇಲೆ ಮದುವೆ ಮಾಡಿಸುವವರು ಬಾಬತ್ತೆಂದು ಪಡೆಯುವರು.

ವರನಿಗೆ ಬಾಸಿಂಗವನ್ನು ಕಟ್ಟಿದರೆ, ವಧುವಿಗೆ ದಂಡೆಯ ಕಟ್ಟಿ ಕಂಬಳಿ ಗದ್ದುಗೆಯಲ್ಲಿ ಕೂಡಿಸುತ್ತಾರೆ. ವಿವಾಹ ವಿಧಿ ನಡೆಸಲು ಕುರುಬರು ಪುರೋಹಿತರನ್ನು ಹಿಂದೆ ಕರೆಸುತ್ತಿದ್ದರು. ಆದರೆ ಇತ್ತೀಚೆಗೆ ತಮ್ಮ ಕುಲಗುರುಸ್ವಾಮಿ (ಒಡೆಯರು) ಗಳನ್ನು ಆಮಂತ್ರಿಸುತ್ತಾರೆ. ಗುರುಸ್ವಾಮಿ ಹಂದರ ಹಾಲುಗಂಬದ ಬಳಿ ಕಂಬಳಿ ಹಾಸಿ ಅದರ ಮೇಲೆ ನೆಲ್ಲಕ್ಕಿ ಹೊಯ್ದು

ಪಂಚಕಳಸ ಸ್ಥಾಪಿಸುತ್ತಾನೆ. ನಂತರ ಕಂಬಳಿಯ ಮೇಲೆ ಹೋಯ್ದು ನೆಲ್ಲಕ್ಕಿಯ ನಾಲ್ಕು ಮೂಲೆಗೂ ನಾಲ್ಕು ವಿಭೂತಿಗಳನ್ನಿಡುತ್ತಾನೆ. ಅದಕ್ಕೆ ಊದಿನಕಡ್ಡಿ ಬೆಳಗಿ ಕಾಯಿ ಒಡೆದು ಪೂಜಿಸುತ್ತಾನೆ. ಅನೇಕ ಹಿರಿಯರು ಮುತ್ತೈದೆಯರು ತಾಳಿ ಸ್ಪರ್ಶಿಸಿದ ನಂತರ ಗುರುಸ್ವಾಮಿ ತಾಳಿಯನ್ನು ವರನ ಕೈಗೆ ನೀಡಿ ವಧುವಿನ ಕೊರಳಿಗೆ ಕಟ್ಟಲು ತಿಳಿಸುತ್ತಾನೆ. ವಧುವಿನ ಕೊರಳಿಗೆ ವರ ತಾಳಿಯನ್ನು ಕಟ್ಟುತ್ತಾನೆ. (ಉಣ್ಣೆ ಕಂಕಣದವರಲ್ಲಿ ಕೆಲವಡೆ ವರನ ಬದಲಿಗೆ ಗುರುಗಳೇ ತಾಳೀ ಕಟ್ಟುತ್ತಾರೆ) ಆ ಸಂದರ್ಭದಲ್ಲಿ ಗುರುಸ್ವಾಮಿ ಅಥವಾ ಒಡೆಯರು ನೂತನ ದಂಪತಿಗಳನ್ನು ಈ ರೀತಿ ಹರಸುತ್ತಾರೆ.[೮೭]

"ಕಲ್ಲು ಕಲ್ಲಾಗಿ
ಕರೆಬ್ಬನಾಗಿ
ಭೀಮಣ್ಣನಾಗಿ
ಗುರು ರೇವಣ ಕಟ್ಟಿದ
ಶಾಸೆ ಸ್ಥಿರವಾಗಿರಲಿ".

ಗುರುಸ್ವಾಮಿಯ ಹರಸುವಿಕೆ ಮುಗಿದ ನಂತರ ನೆರೆದ ಜನರೆಲ್ಲರು ದಂಪತಿಗಳ ಮೇಲೆ ಅಕ್ಷತೆ ಹಾಕಿ ಶುಭಕೋರುತ್ತಾರೆ. ನಂತರ ಎದುರು-ಬದುರು ಮುಖಮಾಡಿ ನಿಂತುಕೊಳ್ಳುವ ವಧುವರರು ಒಬ್ಬರ ಹಸ್ತಗಳ ಮೇಲೆ ಇನ್ನೊಬ್ಬರು ಹಸ್ತಗಳನ್ನಿಡುತ್ತಾರೆ, ಅವರ ಹಸ್ತಗಳಮೇಲೆ ಗುರುಸ್ವಾಮಿ ಕುಂಕುಮ ಹಚ್ಚಿದ ಟೆಂಗಿನಕಾಯಿ, ನಾಲ್ಕಣೆ ನಾಣ್ಯವನ್ನಿಟ್ಟು, ವೀಳ್ಯೆಯದೆಲೆಯ ಮೂಲಕ ಟೆಂಗಿನಕಾಯಿಯ ಮೇಲೆ ಹಾಲು ಸುರಿಯುತ್ತಾನೆ. ನಂತರ ಗುರು ಸ್ವಾಮಿಯು "ಮಹಾಲಕ್ಷ್ಮಿ, ಗೌರಿ, ಪಾರ್ವತಿ, ಸರಸ್ವತಿ, ಕಂತಮುತ್ತಯ್ಯ, ಗುರುರೇವಣ್ಣ ಕಟ್ಟಿದ ಕಲ್ಯಾಣ ಪಟ್ಟಣ ಸ್ಥಿರಜೀವಿಯಾಗಲಿ" ಎಂದು ನುಡಿಯುತ್ತಾನೆ.[೮೮] ನೂತನ ದಂಪತಿಗಳು ಜೊತೆಯಾಗಿ ಕುಳಿತ ಮೇಲೆ ಅವರಿಬ್ಬರು ಹೊದ್ದುಕೊಂಡಿರುವ ವಸ್ತ್ರಗಳನ್ನು ಕೂಡಿಸಿ ಗಂಟು ಹಾಕುತ್ತಾರೆ. ಗಂಡಿನವರು ಹೆಣ್ಣಿನ ಮುಂಗೈ ಹಾಗೂ ಹೆಣ್ಣಿನವರು ಗಂಡಿನ ಮುಂಗೈಗೆ ಕಂಕಣ ಕಟ್ಟುತ್ತಾರೆ. ಚಚೌಕಾಗಿ ಇಟ್ಟ ನಾಲ್ಕು ಮಡಿಕೆಗಳಿಗೆ ನೂಲಿನ ದಾರ ಇಲ್ಲವೆ ಉಣ್ಣೆದಾರ ಸುತ್ತುತ್ತಾರೆ. ನಂತರ ಅದನ್ನು ಕತ್ತರಿಸಿ ಎರಡು ಭಾಗಮಾಡಿ ಪ್ರತಿಯೊಂದಕ್ಕೆ ಕುಂಕುಮ ಚೀಟು ಹಾಗೂ ಕಬ್ಬಿಣದ ಉಂಗುರ ಕಟ್ಟಿ ಅವುಗಳನ್ನು ನೂತನ ದಂಪತಿಗಳಿಗೆ ಮುಂಗೈಗೆ ಕಟ್ಟುತ್ತಾರೆ.

ದಂಪತಿಗಳು ಹಾಲುಗಂಬಕ್ಕೆ ಮೂರುಬಾರಿ ಪ್ರದಕ್ಷಿಣೆ ಹಾಕಿ ದೇವರ ಆಶೀರ್ವಾದ ಪಡೆಯಲು ದೇವರ ಕೋಣೆಗೆ ಹೋಗುತ್ತಾರೆ. ಈ ಸಂಧರ್ಭದಲ್ಲಿ ಕೆಲವು ಯುವತಿಯರು ಬಾಗಿಲಲ್ಲಿ ತಡೆದು ದಂಪತಿಗಳ ಹೆಸರು ಕೇಳಿ ತಿಳಿದುಕೊಳ್ಳುತ್ತಾರೆ. ಕೆಲವೆಡೆ ಅಕ್ಕ ಅಥವಾ ತಂಗಿ ತನ್ನ ಮಗನಿಗೆ ಹುಟ್ಟಲಿರುವ ಮಗಳನ್ನು ಕೊಡುವ ಬಗ್ಗೆ ಭಾಷೆ ತೆಗೆದುಕೊಂಡು ದೇವರಕೋಣೆಗೆ ಪ್ರವೇಶಿಸಲು ಅನುಮತಿ ನೀಡುತ್ತಾಳೆ.[೮೯] ಇದು ಕುರುಬರಲ್ಲಿ ಒಂದೇ ಕುಟುಂಬದಲ್ಲಿ ವೈವಾಹಿಕ ಸಂಬಂಧಗಳು ನಡೆಯುತ್ತವೆ ಎಂದು ಸ್ಪಷ್ಟಪಡಿಸುತ್ತದೆ.

### ೧೫. ಮಸಿಊಟ ತರುವ ಪದ್ಧತಿ

ಹೆಣ್ಣಿನ ತಂದೆ ತಾಯಿಗಳು ಮಗಳಿಗಾಗಿ ಭಾಂಡೆ ವಸ್ತುಗಳ ಉಡುಗೊರೆಯ ನೀಡುವ ಪದ್ಧತಿಯಿದೆ. ಈ ಭಾಂಡೆ ವಸ್ತುಗಳನ್ನು

ಒಂದುವಾಹನದಲ್ಲಿರಿಸಿಕೊಂಡು ಅಥವಾ ತಲೆಯಮೇಲೆ ಹೊತ್ತುಕೊಂಡು ಪ್ರದರ್ಶನ ನಡೆಸುತ್ತಾರೆ. ಇಬ್ಬರು ಹುಡುಗರನ್ನು ಸ್ತ್ರೀರೂಪದಲ್ಲಿ ಅಲಂಕರಿಸುವರಲ್ಲದೆ. ತುಂಬಿದ ಕೊಡವನ್ನು ಹೊರಿಸಿಕೊಂಡು ವಾದ್ಯಸಮೇತ ಮೆರವಣಿಗೆ ನಡೆಸುತ್ತಾರೆ. ಇದನ್ನು ಮದುಮಕ್ಕಳು ನೋಡಬಾರದೆಂಬ ನಂಬಿಕೆಯಿದೆ. ಮೆರವಣಿಗೆಯ ನಂತರ ತುಂಬಿದ ಕೊಡವನ್ನು ಪೂಜಿಸಿ ಮೆರವಣಿಗೆಯಲ್ಲಿದ್ದವರಿಗೆಲ್ಲ ಸ್ವಲ್ಪ ಹಣವನ್ನು ಕಾಣಿಕೆಯಾಗಿ ನೀಡುತ್ತಾರೆ.

ವಿವಾಹಕ್ಕೆ ಆಗಮಿಸಿದ ಬಂಧುಗಳು, ಆಪ್ತರು ತಾವು ತಂದ ಉಡುಗೊರೆಗಳನ್ನು ವಧು-ವರರಿಗೆ ಅರ್ಪಿಸುತ್ತಾರೆ. ಕೆಲವರು ಹಣವನ್ನು ಆಯರ ರೂಪದಲ್ಲಿ ನೀಡುತ್ತಾರೆ. ನಂತರ ಜನರು ಸಿಹಿ ಊಟವನ್ನು ಮಾಡುತ್ತಾರೆ. ನಂತರ ವೀಳ್ಯೆದೆಲೆಯನ್ನು ಪಡೆದುಕೊಂಡು ತಮ್ಮ ಮನೆಗೆ ಹಿಂದಿರುಗುತ್ತಾರೆ.

ಇಂದಿನ ಆಧುನಿಕ ಕಾಲದಲ್ಲಿ ವಿವಾಹದ ವಿಧಿಗಳು ಬದಲಾವಣೆಗೊಂಡಿವೆ. ಪಾಶ್ಚಾತ್ಯಶಿಕ್ಷಣ, ಆರ್ಥಿಕ ಸ್ವಾವಲಂಬನೆಗಳು ವಿವಾಹ ವಿಧಿಗಳಲ್ಲಿ ಪರಿವರ್ತನೆ ಉಂಟುಮಾಡಿವೆ. ಹಿಂದೆಯಿದ್ದ ಬಾಲ್ಯವಿವಾಹ ತನ್ನ ಅಸ್ತಿತ್ವ ಕಳೆದುಕೊಂಡಿದೆ. ಗಂಡಿನ ಮನೆಯ ಬದಲಿಗೆ ಹೆಣ್ಣಿನ ಮನೆಯಲ್ಲಿ ಅಥವಾ ಕಲ್ಯಾಣಮಂಟಪಗಳಲ್ಲಿ ವಿವಾಹಗಳು ನಡೆಯುತ್ತವೆ. ತೆರವು ಪದ್ಧತಿಯ ಸ್ಥಾನವನ್ನು ವರದಕ್ಷಿಣೆ ಆಕ್ರಮಿಸಿಕೊಂಡಿದೆ. ಸಮೀಪ ಸಂಬಂಧಿಗಳು ಉಪಜಾತಿ ಹಾಗೂ ಪ್ರಾದೇಶಿಕ ನಿರ್ಬಂದಗಳನ್ನು ವಿವಾಹದಲ್ಲಿ ಕಡೆಗಣಿಸಲಾಗಿದೆ. ಆದರೆ ಇಂದಿಗೂ ಕೆಲವು ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿರುವುದು ಕಂಡುಬರುತ್ತದೆ.

**೫.೨.೬ ವಿಧವಾ ವಿವಾಹ**

ಕುರುಬರಲ್ಲಿ ವಿಧವಾ ವಿವಾಹಕ್ಕೆ ಮಾನ್ಯತೆ ನೀಡಲಾಗಿದೆ. ಗಂಡ ಮರಣಹೋದಿದ ಮೇಲೆ ವಿಧವೆಯು ಮರುವಿವಾಹ ಮಾಡಿಕೊಳ್ಳಬಹುದಾಗಿದೆ. ಇದಕ್ಕೆ ಉಡಿಕೆ, ಕೂಡಿಕೆ, ಕೂಟಿಕೆ, ಸೀರುಡಿಕೆ ಹಾಗೂ ತಾಳಿಕಟ್ಟುವುದು ಎಂದುಕರೆಯಲಾಗುತ್ತದೆ.[೧೦] ಈ ವಿಧವಾ ವಿವಾಹದ ವಿಧಿವಿಧಾನಗಳು ವಿಭಿನ್ನವಾಗಿರುತ್ತವೆ. ಕೆಲವೊಂದು ಕಟ್ಟುಪಾಡುಗಳನ್ನು ವಿಧಿಸುತ್ತಾರೆ.

ಪ್ರಾಚೀನ ಕಾಲದಿಂದಲೂ ವಿಧವಾ ವಿವಾಹ ರೂಢಿಯಲ್ಲಿದೆ. ಆದರೆ ಇದಕ್ಕೆ ಸಾಕ್ಷಿ ಆಧಾರಗಳಿಲ್ಲ. ಸಹಗಮನ ಪದ್ಧತಿ ರೂಢಿಯಲ್ಲಿತ್ತೆಂದು ಶಾಸನಗಳಿಂದ ಸ್ಪಷ್ಟಪಡುತ್ತದೆ. ಸಹಗಮನ ಪದ್ಧತಿ ಕೇವಲ ಕ್ಷತ್ರಿಯರಲ್ಲಿ ಮಾತ್ರ ರೂಢಿಯಲ್ಲಿತ್ತು. ಶೂದ್ರರಾದ ಕುರುಬರಲ್ಲಿ ವಿಧವಾವಿವಾಹ ಪದ್ಧತಿಯಿತ್ತು. ಆದರೆ ಗಣ್ಯ ವರ್ಗದವರಾಗಿದ್ದ ಕುರುಬರ ಸ್ತ್ರೀಯರು ತಮ್ಮ ಪತಿಯು ಮರಣಹೊಂದಿದಾಗ ಸತಿಯನ್ನಾಚರಿಸುತ್ತಿದ್ದರು ಎಂದು ತಿಳಿಯುತ್ತದೆ.

ಮಧ್ಯಯುಗದಲ್ಲಿ ಅನೇಕ ರಾಜಮನೆತನಗಳನ್ನು ಸ್ಥಾಪಿಸಿ ರಾಜ್ಯಭಾರ ಮಾಡಿದ ಕುರುಬರ ಮನೆತನದ ಸ್ತ್ರೀಯರು ಸತಿಪದ್ಧತಿಯನ್ನು ಆಚರಿಸಿದರು. ನಿರಂಪೂರು ಮತ್ತು ಸಾಲಪಾಕ್ಕಂ ಎಂಬ ಪಟ್ಟಣಗಳಲ್ಲಿ ಕುರುಂಬರಾಯರು ಆಳ್ವಿಕೆ ಮಾಡಿದರು. ಕುರುಂಬರು ದಬ್ಬಾಳಿಕೆಯಿಂದ ರಾಜ್ಯಭಾರ ಮಾಡಿದರು. ಅವರ ಆಳ್ವಿಕೆಯಿಂದ ವಳ್ಳಾರರು, ಮೊದಲಿಯಾರರು ಬೇಸತ್ತಿದ್ದರು. ಕುರುಬರಲ್ಲಿ ಯಾರಾದರೂ ಮರಣಹೊಂದಿದರೆ ಎಲ್ಲರೂ ತಲೆಬೋಳಿಸಿಕೊಳ್ಳುವ ಪದ್ಧತಿಯಿತ್ತು.[೧೧] ಈ ಪದ್ಧತಿಯನ್ನು ಉಪಯೋಗಿಸಿಕೊಂಡುವೆಳ್ಳಾರರು ಕ್ಷೌರಿಕರಿಗೆ ಹಣ ನೀಡಿ ಕುರುಬರ ಕೊರಳು ಕೊಯಿಸಿದರು. ಹೀಗಾಗಿ ಸಾವಿರಾರು ಕುರುಬರ

ಕೊರಳು ಕೊಯ್ಯಲ್ಪಟ್ಟವು. ಈ ವಿಷಯವನ್ನು ತಿಳಿದ ಮೃತರ ಪತ್ನಿಯರು ಕೇಳಿ ತಮ್ಮ ಗಂಡಂದಿರ ಜೊತೆಯಲ್ಲಿಯೇ ಚಿತೆಯಲ್ಲಿ ಹಾರಿ ಪ್ರಾಣಬಿಟ್ಟರು. ಇದು ಸ್ತ್ರೀಯರಲ್ಲಿ ವಿಧವಾ ವಿವಾಹಕ್ಕಿಂತ ಸತಿಯಾಗುವುದರಲ್ಲಿ ಹೆಚ್ಚಿನ ಆಸಕ್ತಿಯಿತ್ತೆಂದು ಸೂಚಿಸುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಿಧವಾ ವಿವಾಹವನ್ನು ನಿಷೇಧಿಸಿರಲಿಲ್ಲ. ಕೆಳಜಾತಿಗಳಲ್ಲಿ ಸತಿ ಆಚರಣೆ ರೂಢಿಯಲ್ಲಿರಲಿಲ್ಲ. ಅವರು ವಿಧವಾ ವಿವಾಹವನ್ನು ಪ್ರೋತ್ಸಾಹಿಸುತ್ತಿದ್ದರು. ಹೀಗಾಗಿ ಅಂದು ವಿಧವಾ ವಿವಾಹ ಪ್ರಮುಖ ಸ್ಥಾನ ಪಡೆದಿತ್ತೆಂದು ತಿಳಿಯುತ್ತದೆ.

ಕುರುಬರು ವಿಧವಾ ವಿವಾಹವನ್ನು ನೆರವೇರಿಸುವಲ್ಲಿ ಅನೇಕ ವಿಧಿ ವಿಧಾನಗಳನ್ನು ಅನುಸರಿಸುತ್ತಿದ್ದರು. ವಿಧವೆಯು ಗಂಡನ ಮನೆಯಲ್ಲಿ ನೆಲೆಸಿರುವವರೆಗೂ ಮರು ವಿವಾಹವಾಗಲು ಬರುವುದಿಲ್ಲ. ಹಾಗೂ ಗಂಡನ ಸೋದರನನ್ನು ಮದುವೆ ಆಗುವಂತಿಲ್ಲ. ವಿಧವೆಯನ್ನು ಮದುವೆ ಆಗಬೇಕೆನ್ನುವ ಗಂಡಿನ ಬೆಡಗು ಆಕೆಯ ಗಂಡಿನ ಬೆಡಗನ್ನು ಹೋಲಬಾರದು. ಬೇರೆ ಬೆಡಗನ್ನು ಹೊಂದಿರುವ ಗಂಡಿನೊಂದಿಗೆ ಮದುವೆ ಆಗಬಹುದು. ಒಬ್ಬ ಅವಿವಾಹಿತನು ವಿಧವೆಯನ್ನು ವಿವಾಹವಾಗಬಹುದು. ಆದರೆ ಅದಕ್ಕೆ ವಿಧವೆಯ ಒಪ್ಪಿಗೆ ಅಗತ್ಯವಾಗಿರುತ್ತದೆ.

ವಿಧವಾ ವಿವಾಹವಾಗುವವರು ಗೌಡನ ಅಪ್ಪಣೆ ಪಡೆಯಬೇಕು. ಗೌಡನು ಹಿರಿಯರ ಸಮ್ಮುಖದಲ್ಲಿ ಮದುವೆಯ ದಿನವನ್ನು ನಿಶ್ಚಯಿಸುತ್ತಾನೆ. ಮದುವೆಯು ಸಾಮಾನ್ಯವಾಗಿ ರಾತ್ರಿ ವೇಳೆ ನಡೆಯುತ್ತದೆ. ಮದುವೆಯಲ್ಲಿ ಮುತ್ತೈದೆಯರು ಭಾಗವಹಿಸುವಂತಿಲ್ಲ. ಮದುವೆಯಾಗುವ ಗಂಡು ಹೆಣ್ಣಿಗೆ ಸೀರೆ, ಕುಪ್ಪಸ ಆಭರಣ ಕೊಡುತ್ತಾನೆ. ಅದೇ ರೀತಿ ಹೆಣ್ಣಿನವರು ಗಂಡಿಗೆ ಬಟ್ಟೆ, ಬಂಗಾರ ಕೊಡುತ್ತಾರೆ. ವಧುವರರನ್ನು ಮನೆಯ ಅಂಗಳದಲ್ಲಿ ಹಾಸಿದ ಕಂಬಳಿಯ ಮೇಲೆ ನಿಲ್ಲಿಸುತ್ತಾರೆ. ಸಮಾವೇಶಗೊಂಡ ಜನಗಳ ಸಮ್ಮುಖದಲ್ಲಿ ತಾಳಿಕಟ್ಟುತ್ತಾನೆ. ವರನು ವಿಧವೆಯ ಗಂಡನ ಮನೆಯವರಿಗೆ ಮೊದಲ ಮದುವೆಗಿಂತಲೂ ಅರ್ಧದಷ್ಟು ತೆರವು ಕೊಡಬೇಕಾಗುತ್ತದೆ. ಈ ತೆರವನ್ನು ಗಂಡಿನ ಕಡೆಯವರು ತಿರಸ್ಕರಿಸಿದರೆ ವಿಧವೆಯ ತಂದೆ ತೆಗೆದುಕೊಳ್ಳಬೇಕಾಗುತ್ತದೆ. ನಂತರ ಎಲ್ಲರಿಗೂ ಸಿಹಿ ಊಟ ಹಾಕಿಸಲಾಗುತ್ತದೆ.

ಮರು ವಿವಾಹವಾದವಳು ತನ್ನ ಮೊದಲ ಗಂಡನ ಆಸ್ತಿಯ ಹಕ್ಕನ್ನು ಕಳೆದುಕೊಳ್ಳುತ್ತಾಳೆ. ಅವಳಿಗೆ ಮಕ್ಕಳಾಗಿದ್ದರೆ ಅವು ಮೊದಲ ಗಂಡನ ಮನೆತನಕ್ಕೆ ಸೇರುತ್ತವೆ. ಇವಳು ಸಾಮಾನ್ಯ ವಿವಾಹದಲ್ಲಿ ಪಾಲ್ಗೊಳ್ಳುವಂತಿಲ್ಲ ಹಾಗೂ ಅವಳಿಗೆ ಜನಿಸುವ ಮಕ್ಕಳನ್ನು ಪ್ರತ್ಯೇಕವರ್ಗ ಅಥವಾ ಚಿಕ್ಕ ತಾಯಿ ಮಕ್ಕಳಂತೆ ಪರಿಗಣಿಸಲಾಗುತ್ತದೆ. ಕೂಡಿಕೆ ವಿವಾಹವಾದವರು ಕೂಡಿಕೆಯ ಸಾಲಿನವರೆಂದೇ ಪ್ರತ್ಯೇಕ ಪಂಗಡವನ್ನಾಗಿಸಿ ಗುರುತಿಸಲಾಗುತ್ತದೆ. ಹಿಂದೆಲ್ಲ ಅವರಲ್ಲಿಯೇ ಹೆಣ್ಣು ಕೊಡುವ-ತರುವ ಪದ್ಧತಿಯಿತ್ತು. ಇಂದು ಆ ಪದ್ಧತಿ ಇಲ್ಲವಾಗಿದೆ. ಹೀಗಾಗಿ ಸ್ತ್ರೀಯರು ವಿಧವಾ ವಿವಾಹಕ್ಕೆ ಹೆಚ್ಚಿನ ಆಸಕ್ತಿ ತೋರುತ್ತಿರಲಲ್ಲಿವಂದು ಕಾಣುತ್ತದೆ. "ಉಡಿಕಿಗಂಡಅಲ್ಲ, ಗುಳ್ಳವ್ವದೇವರಲ್ಲ" ಎನ್ನುವ ಗಾದೆ ಉಡಿಕೆ ಮದುವೆ ಫಲಪ್ರದವಾಗುವುದಿಲ್ಲವೆಂಬುದನ್ನು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರು ವಿಧವಾ ವಿವಾಹಕ್ಕಿಂತ ಸತಿಹೋಗುವುದೇ ಶ್ರೇಷ್ಠ ಎಂಬ ಭಾವನೆ ಬೆಳೆಸಿಕೊಂಡಿದ್ದರೆಂಬುದು ಸ್ಪಷ್ಟ. ಗಂಡ ಸತ್ತ ನಂತರ ಹೆಣ್ಣಿನ ತಲೆ ಬೋಳಿಸಿ ಮೂಲೆಗುಂಪಾಗಿಸುವ ಪದ್ಧತಿಗಿಂತ ಮರು ವಿವಾಹವಾಗುವ ಸ್ವಾತಂತ್ರ್ಯ ನೀಡಿದ ಕುರುಬರು ಸ್ತ್ರೀಯರ ಬಗ್ಗೆ ಉನ್ನತ ಗೌರವವನ್ನು ಹೊಂದಿದ್ದರೆಂದು ತಿಳಿಯುತ್ತದೆ.

### ೫.೨.೭ ಬಹುಪತ್ನಿತ್ವ

ಒಬ್ಬ ಪುರುಷ ಏಕಕಾಲಕ್ಕೆ ಒಬ್ಬರಿಗಿಂತ ಹೆಚ್ಚಿನ ಸ್ತ್ರೀಯರನ್ನು ಪತ್ನಿಯರನ್ನಾಗಿ ಹೊಂದಿದ್ದರೆ ಅದನ್ನು ಬಹುಪತ್ನಿತ್ವ ಎನ್ನಲಾಗಿದೆ.ಪ್ರಾಚೀನ ಕಾಲದ ಸಮಾಜವು ಬಹುಪತ್ನಿತ್ವವನ್ನು ಒಪ್ಪಿಕೊಂಡಿತ್ತು. ಪ್ರಭುವರ್ಗದವರಲ್ಲಿ ಅಧಿಕವಾಗಿ ಕಂಡು ಬರುತ್ತಿದ್ದ ಈ ಪದ್ಧತಿ ಸಾಮಾನ್ಯರಲ್ಲಿ ವಿರಳವಾಗಿತ್ತು. ಚಕ್ರವರ್ತಿಗಳು ಹಾಗೂ ಸಾಮಂತರು ಬಹುಪತ್ನಿವಲ್ಲಭರಾಗಿದ್ದರು. ಬಹುಪತ್ನಿತ್ವವನ್ನು ಅನುಸರಿಸುವುದು ಪ್ರತಿಷ್ಠೆಯ ಸಂಕೇತವಾಗಿತ್ತು.

ಮಧ್ಯಕಾಲದಲ್ಲಿ ವಿಜಯನಗರ ಸಮ್ರಾಜ್ಯವನ್ನು ಸ್ಥಾಪಿಸಿದ ಕುರುಬರು ಬಹುಪತ್ನಿತ್ವವನ್ನು ಅನುಸರಿಸುತ್ತಿದ್ದರು.ಸಂಗಮ ವಂಶದ ೨ನೇ ಹರಿಹರ ಪಂಪಾದೇವಿ ಮತ್ತು ಮಲ್ಲಾದೇವಿ ಎಂಬ ಇಬ್ಬರು ಪತ್ತಿಯರನ್ನು ಹೊಂದಿದ್ದನು.[೬೫] ರಾಜನ ಹಿರಿಯ ಪತ್ನಿಯನ್ನು ಅಗ್ರಮಹಿಷಿ. ಪಿರಿಯರಸಿ, ಪಟ್ಟಮಹಾದೇವಿ ಎಂದು ಕರೆಯುತ್ತಿದ್ದರು.[೬೬] ಕೆಲವು ಶಾಸನಗಳು ರಾಣಿಯರಲ್ಲಿದ್ದ ಸವತಿಮಾತ್ಸರ್ಯ್ಯದ ಬಗ್ಗೆ ಉಲ್ಲೇಖಿಸುತ್ತವೆ. ಕೊಪ್ಪಳ ಜಿಲ್ಲೆಯ ಲಕ್ಕುಂಡಿ ಶಾಸನ ಸವತಿಯರ ಮಾತ್ಸರ್ಯ್ಯ ಎಷ್ಟೋಸಲ ಪ್ರಾಣಾಂತಿಕ ಅಪಾಯಗಳಲ್ಲಿ ಕೊನೆಗೊಳ್ಳುತ್ತಿದಿತ್ತೆಂದು ತಿಳಿಸುತ್ತದೆ.[೬೭] ಇದು ಬಹುಪತ್ನಿತ್ವ ಅಸ್ತಿತ್ವದಲ್ಲಿದ್ದ ಬಗ್ಗೆ ಸ್ಪಷ್ಟಪಡಿಸುತ್ತದೆ.

ಸಾಮಾನ್ಯ ವರ್ಗದವರಾಗಿದ್ದ ಕುರುಬರಲ್ಲಿ ಏಕಪತ್ತಿತ್ವ ರೂಢಿಯಲ್ಲಿತ್ತು . ಆದರೆ ಕೆಲವು ಸಂದರ್ಭಗಳಲ್ಲಿ ಬಹುಪತ್ನಿತ್ವಕ್ಕೆ ಅವಕಾಶ ಕಲ್ಪಿಸಿಕೊಡಲಾಗಿತ್ತು. ಪುತ್ರಸಂತಾನವಿಲ್ಲದೆ ಸದ್ಗತಿ ದೊರೆಯುವುದಿಲ್ಲ. ಎಂಬ ನಂಬಿಕೆಯಿತ್ತು. ಆದ್ದರಿಂದ ಪತ್ನಿಯು ಬಂಜೆ ಎಂದು ಕಂಡುಬಂದಲ್ಲಿ ಎರಡನೆಯ ವಿವಾಹವಾಗಬಹುದಾಗಿದೆ. ಪತ್ನಿಯು ತನ್ನ ಧಾರ್ಮಿಕ ಕಾರ್ಯಗಳನ್ನು ಸರಿಯಾಗಿ ನೆರವೇರಿಸದಿದರೆ. ಹತ್ತು ವರ್ಷಗಳ ಕಾಲ ಹೆಣ್ಣು ಮಕ್ಕಳನ್ನೇ ಹಡೆಯುತ್ತಿದ್ದರೆ, ಯಾವುದೊ ಕಾಯಿಲೆಯಿಂದ ನರಳುತ್ತಿದ್ದರೆ. ಅಕಾಲಿಕ ಮರಣಹೊಂದಿದರೆ ಮಾತ್ರ ಎರಡನೆ ಮದುವೆ ಆಗಬಹುದಾಗಿದೆ. ಈ ರೀತಿಯ ವ್ಯವಸ್ಥೆಯನ್ನು ಕುರುಬರಲ್ಲಿ ಇಂದಿಗೂ ಕಾಣಬಹುದಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಕುಟುಂಬಗಳು ಬಹುಪತ್ನಿತ್ವವನ್ನು ಅನುಸರಿಸುತ್ತಿವೆ. ಈ ಪದ್ಧತಿಯಿಂದ ಯಾವುದೇ ರೀತಿಯ ಕೌಟುಂಬಿಕ ನೆಮ್ಮದಿ ಕಳೆದುಕೊಂಡಿಲ್ಲದಿರುವುದು ಕಂಡುಬರುತ್ತದೆ. ಪತ್ನಿಯರು ಅಕ್ಕ-ತಂಗಿ ಎಂಬ ಭಾವನೆಯಿಂದ ಕೂಡಿ ಸಂಸಾರ ಮಾಡುವುದು ಕಂಡು ಬರುತ್ತದೆ. ನಗರ ಪ್ರದೇಶಗಳಲ್ಲಿ ಕಂಡುಬರದ ಈ ಪದ್ಧತಿ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ರೂಢಿಯಲ್ಲಿದೆ. ಒಟ್ಟಾರೆ ಕುರುಬರಲ್ಲಿ ಬಹುಪತ್ನಿತ್ವವು ಕೆಲವು ಸಂದರ್ಭಗಳಿಗೆ ಸೀಮಿತವಾಗಿರುವುದೆಂದು ತಿಳಿಯುತ್ತದೆ. ಹೀಗಾಗಿ ಪದ್ಧತಿ ಆಚರಣೆಯಲ್ಲಿದ್ದರೂ ಅಲ್ಪಪ್ರಮಾಣದಲ್ಲಿದೆ.

### ೫.೨.೮ ಬಸವಿ ಬಿಡುವ ಪದ್ಧತಿ

ದೇವರ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಬಸವಿ ಬಿಡುವುದು ಕಂಡುಬರುತ್ತದೆ. ಗಂಡು ಸಂತಾನವಿಲ್ಲದೆ ಸ್ವರ್ಗ ಪ್ರಾಪ್ತಿಯಾಗುವುದಿಲ್ಲ ಎಂಬ ನಂಬಿಕೆಯಿತ್ತು. ಆದ್ದರಿಂದ ಗಂಡು ಸಂತಾನದ ಹರಕೆಗಾಗಿ ಮನೆಯ ಹಿರಿಯ ಹೆಣ್ಣು ಮಗಳನ್ನು ದೇವರ ಹೆಸರಿನಲ್ಲಿ ಬಸವಿ ಬಿಡುತ್ತಿದ್ದರೆಂದು ತಿಳಿಯುತ್ತದೆ.[೬೮] ಹೆಣ್ಣು ಮಗಳನ್ನು ಬಸವಿ ಮಾಡಿದರೆ ಅವಳ ಕುಲ-ಗೋತ್ರ ಬದಲಾಗುವುದಿಲ್ಲ, ಅಲ್ಲದೆ ಅವಳಿಗೆ ಹುಟ್ಟುವ ಮಕ್ಕಳು ಅದೇ ವಂಶದವರಾಗುತ್ತಾರೆ. ಈ ಹಿನ್ನೆಲೆಯಲ್ಲಿ ಹೆಣ್ಣು ಮಗಳನ್ನು ಬಸವಿಯಾಗಿ ಬಿಡುತ್ತಿದ್ದರು.[೬೯]

ಪ್ರಾಚೀನ ಕಾಲದಿಂದಲೂ ಬಸವಿ ಪದ್ಧತಿ ತನ್ನ ಆಚರಣೆಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ವಿಜಯನಗರ ಕಾಲದಲ್ಲಿ ವೇಶ್ಯಾವೃತ್ತಿಯು ಒಂದು ಶಾಸನಬದ್ಧವಾದ ವೃತ್ತಿಯಾಗಿತ್ತು. ಕಾಲಾನಂತರ ವೇಶ್ಯಾವೃತ್ತಿ ಅಥವಾ ದೇವದಾಸಿ ಪದ್ಧತಿ ಅಂದು ಡೊಂಬರು, ವಡ್ಡರು, ಬೇಡರು, ಗೊಲ್ಲರು ಮತ್ತು ಕುರುಬರಲ್ಲಿ ರೂಢಿಯಲ್ಲಿತ್ತು.

ವಿಜಯನಗರೋತ್ತರ ಕಾಲದಲ್ಲಿ ದೇವಾಲಯಗಳಲ್ಲಿ ದೇವದಾಸಿಯರು, ಬಸವಿಯರಿದ್ದರು. ಈ ಬಸವಿಯರಲ್ಲಿ ಲಿಂಗಬಸವಿ ಹಾಗೂ ವೈಷ್ಣಬಸವಿ ಎಂಬ ಎರಡು ವರ್ಗದ ಬಸವಿಯರಿದ್ದರು. [೧೦೦] ಇವರು ನರ್ತನ- ಗಾಯನಗಳಲ್ಲಿ ಮತ್ತು ಸಂಗೀತ ವಾದ್ಯಗಳನ್ನು ನುಡಿಸುವುದರಲ್ಲಿ ಪರಿಣಿತರಾಗಿದ್ದರೆಂದು ತಿಳಿದುಬರುತ್ತದೆ. ಬಸವಿಯಾದವರನ್ನು ಮದುವೆಯಾಗಲು ಯಾರೂ ಮುಂದೆ ಬರುತ್ತಿರಲಿಲ್ಲ. ತಂದೆ ತಾಯಿಗಳು ಈ ಪದ್ಧತಿಯನ್ನು ಒಂದು ಹರಕೆ ತೀರಿಸುವ ಸಲುವಾಗಿ ಮಾತ್ರ ಆಚರಿಸುತ್ತಿದ್ದರೆಂಬುದು ಸ್ಪಷ್ಟ.

ಬಸವಿ ಬಿಡುವ ವಿದಿವಿಧಾನಗಳು ಮದುವೆಯ ವಿಧಿವಿಧಾನಗಳಂತಿವೆ. ಋತುಮತಿಯಾದ ಒಂದೆರಡು ವರ್ಷಗಳಲ್ಲಿ ಬಸವಿಬಿಡುವ ಪದ್ಧತಿಯಿದೆ. ಒಂದು ಶುಭದಿನದಂದು ಬಸವಿ ಬಿಡುವ ಹೆಣ್ಣನ್ನು ಸ್ನಾನಮಾಡಿಸುತ್ತಾರೆ. ವಧು ವಿನಂತೆ ಶೃಂಗಾರ ಮಾಡಿ ಹಳದಿ ಬಟ್ಟೆಯ ಮೇಲೆ ನಡೆಸಿಕೊಂಡು ವಾದ್ಯ–ಮೇಳಗಳೊಂದಿಗೆ ಬೀರದೇವರ ಅಥವಾ ಹನುಮಂತನ ದೇವಸ್ಥಾನಕ್ಕೆ ಹೋಗುತ್ತಾರೆ. ಕಳಸ ಐದು ತೆಂಗಿನಕಾಯಿ, ಐದು ಉತ್ತತಿ, ಎಲೆ, ಅಡಿಕೆ ಹಾಗೂ ಅಕ್ಕಿಯನ್ನು ದೇವಸ್ಥಾನದ ಪೂಜಾರಿಗೆ ನೀಡುತ್ತಾರೆ.[೧೦೧] ಕುಲದ ಗುರು–ಹಿರಿಯರ ಅನುಮತಿ ಪಡೆದ ಮೇಲೆ ಹಿರಿಯ ಬಸವಿ ಅಥವಾ ಮುತ್ತೈದೆ ಕುಂಕುಮಹಚ್ಚಿ, ಕೊರಳಿಗೆ ತಾಳಿ ಹಾಗೂ ಮುಂಗೈಗೆ ಕಂಕಣ ಕಟ್ಟುತ್ತಾಳೆ. ಆಗಮಿಸಿದ ಬಂಧು–ಬಳಗದವರೆಲ್ಲರೂ ಆಕೆಯ ತಲೆಯ ಮೇಲೆ ಅಕ್ಷತೆಯನ್ನು ಹಾಕುತ್ತಾರೆ. ಅವಳಿಗೆ ಬೆಳ್ಳಿಯ ಕಡಗ ಹಾಗೂ ಕಾಲುಂಗುರಗಳನ್ನು ತೊಡಿಸುತ್ತಾರೆ. ಬಸವಿಯಾದವಳು ತನ್ನ ತಂದೆಯ ಮನೆಯಲ್ಲಿಯೇ ವಾಸಿಸುತ್ತಾಳೆ. ತಾನು ಇಚ್ಛಿಸಿದ ಸ್ವಜಾತಿ ಅಥವಾ ಉಚ್ಛಜಾತಿಯ ಯಾವುದೇ ಪುರುಷನೊಡನೆ ದೈಹಿಕ ಸಂಬಂಧ ಹೊಂದಬಹುದಾಗಿದೆ. ಆದರೆ ತಂದೆ, ಚಿಕ್ಕಪ್ಪ, ದೊಡ್ಡಪ್ಪ, ಅಣ್ಣ, ತಮ್ಮ ಮೊದಲಾದವರೊಂದಿಗೆ ಸಂಬಂಧ ಬೆಳೆಸುವಂತಿಲ್ಲ.[೧೦೨] ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲುಧಾರಳಾಗಿರುತ್ತಾಳೆ. ಅವಳನ್ನು ಸದಾ ಸುಮಂಗಲಿ ಎಂದು ಸಮಾಜ ಭಾವಿಸುತ್ತದೆ.

ಕೊಪ್ಪಳ ಪ್ರದೇಶದ ಕುರುಬರಲ್ಲೂ ಬಸವಿ ಪದ್ಧತಿ ಆಚರಣೆಯಲ್ಲಿತ್ತು. ಕನಕಗಿರಿಯ ಕನಕರಾಯನ ಭಕ್ತರಾದ ಕುರುಬರಲ್ಲಿ ಬಸವಿ ಬಿಡುವ ಪದ್ಧತಿಯಿತ್ತೆಂದು ತಿಳಿಯುತ್ತದೆ. ಆದರೆ ಇಂದಿನ ಆಧುನಿಕ ಕಾಲದ ಶಿಕ್ಷಣ ಹಾಗೂ ಸರಕಾರದ ಕಾನೂನಿನ ಕಟ್ಟಳೆಯಿಂದಾಗಿ ಕುರುಬರಲ್ಲಿ ಈ ಪದ್ಧತಿ ಇಲ್ಲವಾಗಿದೆ. ಕೊಪ್ಪಳ ತಾಲೂಕಿನ ಹುಲಿಗಿ ಕ್ಷೇತ್ರದ ಹುಲಿಗೆಮ್ಮ ದೇವಸ್ಥಾನದಲ್ಲಿ ಜೋಗಿ ಪದ್ಧತಿಯು ಆಚರಣೆಯಲ್ಲಿದೆ. ಕುರುಬರಲ್ಲಿ ಕೆಲವರು ದೇವರ ಹೆಸರಿನಲ್ಲಿ ಜೋಗಿಗಳಾಗಿದ್ದಾರೆ. ಗಂಡುಜೋಗಿಗಳನ್ನು ಜೋಗಪ್ಪ ಎಂದು, ಹೆಣ್ಣು ಜೋಗಿಗಳನ್ನು ಜೋಗಮ್ಮ ಎಂದು ಕರೆಯುತ್ತಾರೆ. ಈ ಪದ್ಧತಿಯನ್ನು ಎಲ್ಲಮ್ಮ ಹಾಗೂ ಹುಲಿಗೆಮ್ಮ ದೇವತೆಯ ಹೆಸರಿನಲ್ಲಿ ಆಚರಿಸಲಾಗುತ್ತದೆ. ಇವರು ಭಿಕ್ಷೆ ಬೇಡಿ ಜೀವನ ನಡೆಸುತ್ತಾರೆ. ಸರ್ಕಾರ ಅನೇಕ ಕಾನೂನುಗಳನ್ನು ಮಾಡಿ ಈ ಪದ್ಧತಿಯನ್ನು ನಿಷೇಧಿಸಿತು. ಹೀಗಾಗಿ ಇಂದು ದೇವಾಲಯಕ್ಕೆ ಮಹಿಳೆಯರನ್ನು , ಬಾಲಕಿಯರನ್ನು ದೇವರ

ಹೆಸರಿನಲ್ಲಿ ಬಿಡುವ ಪದ್ಧತಿ ಇಲ್ಲವಾಗಿದೆ. ಇಂತಹ ವ್ಯವಸ್ಥೆ ಕೊಪ್ಪಳ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ಕ್ವಚಿತ್ತಾಗಿ ನಡೆದಿದೆ. ಇಂದು ಸಂಪೂರ್ಣವಾಗಿ ಈ ಪದ್ಧತಿ ಆಚರಣೆಯಲ್ಲಿ ಇಲ್ಲವೆಂದು ಹೇಳಬಹುದಾಗಿದೆ.

### ೫.೨.೯ ಮರಣ

ಕುರುಬರಲ್ಲಿ ಜನನ ಸಂದರ್ಭದಲ್ಲಿ ಯಾವ ರೀತಿ ಸಂಸ್ಕಾರಗಳಿವೆಯೋ, ಅದೇ ರೀತಿ ಮರಣ ಸಂದರ್ಭದಲ್ಲೂ ಅನೇಕ ಸಂಸ್ಕಾರಗಳಿವೆ. ಮರಣ ಮತ್ತು ಮರಣೋತ್ತರ ಕ್ರಿಯಗಳಿಗೆ ಸಂಬಂಧಿಸಿದಂತೆ ಅನೇಕ ವಿಧಿ ಸಂಸ್ಕಾರಗಳನ್ನು ಆಚರಿಸುತ್ತಾರೆ. ಸತ್ತವರ ಪರಲೋಕ ಸಾಧನೆಗೆ ನೆರವಾಗುವುದೆಂಬ ಹಾಗೂ ಸತ್ತವರ ಆತ್ಮಕ್ಕೆ ಶಾಂತಿಸಿಗದೆ ಅದು ತಮ್ಮನ್ನು ಪಿಡಿಸಬಹುದೆಂಬ ಭಯ ಅಥವಾ ನಂಬಿಕೆಯೇ ಈ ಸಂಸ್ಕಾರಕ್ಕೆ ಕಾರಣವಾಗಿದೆ. ಸತ್ತ ದೇಹಕ್ಕೆ ಸಲ್ಲಿಸುವ ಅಂತಿಮ ಗೌರವವೇ ಶವಸಂಸ್ಕಾರವಾಗಿದೆ.

ಕುರುಬರಲ್ಲಿ ಮರಣ ಹೊಂದಿದವರನ್ನು ಸುಡುವ ಮತ್ತು ಹೂಳುವ ಪದ್ದತಿಗಳಿವೆ. ಆದರೆ ಸಾಮಾನ್ಯವಾಗಿ ಸತ್ತವರನ್ನು ಹೂಳುತ್ತಾರೆ. ತೊನ್ನು ಅಥವಾ ಇನ್ನಿತರ ಭಯಂಕರ ವಾಸಿಯಾಗದ ರೋಗದಿಂದ ಮರಣ ಹೊಂದಿದರೆ ಅಥವಾ ಬಾಣಂತಿ ತೀರಿಕೊಂಡರೆ ಅವರ ಶವವನ್ನು ಸುಡಲಾಗುತ್ತದೆ. ಕಾರಣ ತೊನ್ನು ಇದ್ದವರನ್ನು ಹೂಳಿದರೆ ಮಳೆಯಾಗುವುದಿಲ್ಲ ಹಾಗೂ ಬಾಣಂತಿಯನ್ನು ಹೂಳಿದರೆ ಮಂತ್ರವಾದಿಗಳು ಅವಳ ಕೈ ಬೆರಳುಗಳನ್ನು ಕಡಿದು ಮಾಂತ್ರಿಕತೆಗೆ ಉಪಯೋಗಿಸಬಹುದೆಂಬ ಆತಂಕದಿಂದ ಅವರನ್ನು ಸುಡುತ್ತಾರೆ.[೧೦೩]

ವ್ಯಕ್ತಿ ಮರಣ ಹೊಂದಿದ ಸುದ್ದಿಯನ್ನು ಗ್ರಾಮದ ಗೌಡನಿಗೆ ತಿಳಿಸಲಾಗುತ್ತದೆ. ಗೌಡ ಆ ಸುದ್ದಿಯನ್ನು ಕುಲ ಭಾಂದವರಿಗೆ ತಿಳಿಸುವಂತೆ ಕೋಲಕಾರನಿಗೆ ಆದೇಶ ನೀಡುತ್ತಾನೆ. ಕೋಲಕಾರನಿಂದ ಸುದ್ದಿ ತಿಳಿದುಕೊಂಡ ಭಾಂದವರು ಮೃತನ ಮನೆಯಲ್ಲಿ ಸೇರುತ್ತಾರೆ. ಮೃತ ವ್ಯಕ್ತಿಗಳಿಗೆ ಸ್ನಾನಮಾಡಿಸಿ ಮಡಿಬಟ್ಟೆ ತೊಡಿಸುತ್ತಾರೆ. ತಲೆಗೆ ರುಮಾಲು ಸುತ್ತಿ ಹಣೆಗೆ ವಿಭೂತಿ ಹಾಗು ಕೊರಳಿಗೆ ಹೂಮಾಲೆ ಹಾಕಿ ಶವವನ್ನು ಶೃಂಗರಿಸಲಾಗುತ್ತದೆ.[೧೦೪] ಅಲ್ಲದೇ ಅವನನ್ನು ಗೂಟಕ್ಕೆ ಬಡಿಯುತ್ತಾರೆ .ಆದರೆ ಸತ್ತ ವ್ಯಕ್ತಿಗೆ ಮದುವೆಯಾಗದಿದ್ದರೆ ಗೂಟಕ್ಕೆ ಬಡಿಯದೆ ಮಲಗಿಸುತ್ತಾರೆ. ನಂತರ ಗುರುಸ್ವಾಮಿ ಮೃತ ವ್ಯಕ್ತಿಗೆ ಸದ್ಗತಿ ಸಿಗಲೆಂದು ಮಂತ್ರ ಹೇಳಿ ಪೂಜೆ ಮಾಡುತ್ತಾನೆ. ಬಂಧುಗಳು ಆಗಮಿಸಿದಾಗ ಮೃತ ವ್ಯಕ್ತಿಯನ್ನು ವಾದ್ಯ ವೈಭವಗಳೊಂದಿಗೆ ಸ್ಮಶಾನಕ್ಕೆ ಕೊಂಡೊಯ್ಯಲಾಗುತ್ತದೆ.

ವಿಮಾನ ಅಥವಾ ತೇರು ಕಟ್ಟುವರಲ್ಲದೆ ಅದರಲ್ಲಿ ಮೃತ ವ್ಯಕ್ತಿಯನ್ನು ಕೂಡಿಸಿ ನಾಲ್ಕು ಮಂದಿ ಹೊತ್ತುಕೂಂಡು ಹೋಗುತ್ತಾರೆ. ಆದರೆ ಮದುವೆ ಆಗದೆ ಮರಣ ಹೊಂದಿದವರನ್ನು ಚಟ್ಟದ ಮೇಲೆ ಅಂಗಾತ ಮಲಗಿಸಿ ನಾಲ್ಕು ಮಂದಿ ಹೊತ್ತುಕೊಂಡು ಹೋಗುತ್ತಾರೆ. ಕೆಲವಡೆ ಮೃತ ವ್ಯಕ್ತಿಯ ಹಿರಿಯ ಮಗ ಶವದ ಮುಂದೆ ಒಂದು ಕೈಯಲ್ಲಿ ಅನ್ನದ ಮಡಿಕೆ ಹಾಗು ಮತ್ತೊಂದು ಕೈಯಲ್ಲಿ ಬೆಂಕಿ ಇರುವ ಮಡಿಕೆಯನ್ನು ಹಿಡಿದುಕೊಂಡು ಹೋಗುವುದು ಕಂಡುಬರುತ್ತದೆ. ಶವಯಾತ್ರೆ ಸ್ಮಶಾನ ತಲುಪುತ್ತಿದ್ದಂತೆ ವಿಮಾನವನ್ನು ಕೆಳಗಿಳಿಸಲಾಗುತ್ತದೆ. ಸಮಾಧಿಯನ್ನು ಮುಂಚಿತವಾಗಿ ತೋಡಲಾಗಿರುತ್ತದೆ.

ಮೃತ ವ್ಯಕ್ತಿ ಗುರುಸ್ವಾಮಿಯಾದರೆ ಅವನನ್ನು ಕುಳಿತ ಭಂಗಿಯಲ್ಲಯೇ ಶವಚೀಲದಲ್ಲಿಟ್ಟು ವಿಭೂತಿ ಗಟ್ಟ, ಬಿಲ್ವಪತ್ರ,

ಪ್ರಣಮಗಳನ್ನು ಬರೆದ ತಾಮ್ರದ ತಗಡು ಹಾಗೂ ಕೈಯಲ್ಲಿ ಕೆಲವು ನಾಣ್ಯಗಳನ್ನಿಟ್ಟು ಶವಚೀಲದ ಬಾಯಿ ಕಟ್ಟುತ್ತಾರೆ. ಅದನ್ನು ಉತ್ತಾರಾಭಿಮುಖವಾಗಿ ಸಮಾಧಿಯಲ್ಲಿ ಮಾಡಿರುವ ಗೂಡಿನಲ್ಲಿ ಕೂಡಿಸಲಾಗುತ್ತದೆ.[೧೦೫] ಆದರೆ ಸಾಮನ್ಯವ್ಯಕ್ತಿಯ ಶವವನ್ನು ಸಮಾಧಿಯಲ್ಲಿ ದಕ್ಷಿಣಕ್ಕೆ ತಲೆ ಮಾಡಿ ಮಲಗಿಸುತ್ತಾರೆ. ನಂತರ ಮೃತ ವ್ಯಕ್ತಿಗೆ ಸದ್ಗತಿ ಕೋರುವ ಮಂಗಳವನ್ನು ಗುರುಸ್ವಾಮಿ ಹಾಡಿ ಮುಗಿಸಿತ್ತಿದ್ದಂತೆ ಬಂಧುಗಳು, ಆಪ್ತರು, ಐದು ಬೊಗಸೆ ಮಣ್ಣನ್ನು ಸಮಾಧಿಯಲ್ಲಿ ಹಾಕುತ್ತಾರೆ ನಂತರ ಉಳಿದ ಮಣ್ಣನ್ನು ಸಲಿಕೆಯಿಂದ ಎಳೆದು ಸಮಾಧಿ ಮುಚ್ಚಲಾಗುತ್ತದೆ.

ಸಿಂಧನೂರ ತಾಲೂಕಿನ ಕುರುಕುಂದ ಗ್ರಾಮದಲ್ಲಿ ಗುರುಸ್ವಾಮಿಗಳು ಮರಣ ಹೊಂದಿದರೆ ಮನೆಯವರು ಹಾಗೂ ಗ್ರಾಮಸ್ಥರು ದುಃಖದಿಂದ ಶೋಕವನ್ನಾಚರಿಸುವುದಿಲ್ಲ. ಎಲ್ಲರೂ ಅಂದು ಸಿಹಿಊಟ ಮಾಡುವರಲ್ಲದೆ, ಸಂತೋಷದಿಂದ ಶವಸಂಸ್ಕಾರ ನೆರವೇರಿಸುತ್ತಾರೆ ಗುರುಸ್ವಾಮಿಗಳು ಮೃತರಾಗಿಲ್ಲ ಅವರು ಎಂದಿಗೂ ನಮ್ಮೊಂದಿಗೆ ನೆಲೆಸಿರುತ್ತಾರೆ ಎಂಬ ಭಾವನೆಯಿಂದ ಈ ರೀತಿಯ ಸಂಸ್ಕಾರವನ್ನು ಆಚರಿಸುತ್ತಾ ಬಂದಿದ್ದಾರೆ. ಸಮಾದಿ ಕಾರ್ಯ ಮುಗಿದ ಮೇಲೆ ಜನರು ಮನೆಗೆ ಹಿಂದಿರುಗುತ್ತಾರೆ. ಆದರೆ ಅವರು ಸ್ನಾನ ಮಾಡದೆ ಮನೆಯ ಒಳಗೆ ಪ್ರವೇಶಿಸುವಂತಿಲ್ಲ. ಕೆಲವರು ಹಳ್ಳ-ಕೆರೆಗಳಲ್ಲಿ ಸ್ನಾನ ಮಾಡಿ ಮನೆಗೆ ಬಂದರೆ, ಕೆಲವರು ಮನೆಯ ಮುಂದೆ ಸ್ನಾನ ಮಾಡಿ ಬಟ್ಟೆಧರಿಸುತ್ತಾರೆ.

ಅಂತ್ಯಕ್ರಿಯೆ ಮುಗಿದ ನಂತರ ಮನೆಯನ್ನು ಸಾರಿಸಲಾಗುತ್ತದೆ. ಸಂಬಂಧಿಗಳು ಸ್ನಾನಮಾಡಿ ಮಡಿಬಟ್ಟೆ ತೊಟ್ಟು ಗುರುಸ್ವಾಮಿಯನ್ನು ಆಮಂತ್ರಿಸಿ ಆತನನ್ನು ಪೂಜಿಸುತ್ತಾರೆ. ಕಾರಣ ಮರಣ ಹೊಂದಿರುವುದನ್ನು ಸೂತಕ ಎಂದು ನಂಬಿದ್ದಾರೆ. ಹಾಲುಮತದವರು ೩, ೧೦ ದಿನ ಸೂತ್ರಕ ಎಂದು ಆಚರಿಸುವ ಪದ್ಧತಿಯಿದೆ. ಈ ಅವಧಿಯಲ್ಲಿ ದೇವರ ಪೂಜೆ ಮಾಡುವುದಿಲ್ಲ, ಕೃಷಿ ಕಾರ್ಯದಲ್ಲಿ ತೊಡಗುವುದಿಲ್ಲ. ಸೂರ್ಯಾಸ್ತವಾಗುವುದರೊಳಗೆ ಊಟೋಪಚಾರ ಮಾಡಿಕೊಳ್ಳಬೇಕೆಂಬ ನಿಯಮ ವಿಧಿಸಲಾಗಿದೆ. ಹೀಗಾಗಿ ಗುರುಸ್ವಾಮಿಯನ್ನು ಕರೆಸುವರಲ್ಲದೆ, ಪೂಜೆಮಾಡಿಸಿ ಅವರಿಗೆ ಧಾನ್ಯದಕ್ಷಿಣೆಗಳನ್ನು ನೀಡಿ ಬೀಳ್ಕೊಡುತ್ತಾರೆ.

ಮೃತ ವ್ಯಕ್ತಿಯ ಆತ್ಮಕ್ಕೆ ಶಾಂತಿ ದೊರೆಯಿತೆಂದು ಮೂರು ಅಥವಾ ಒಂಬತ್ತನೆ ದಿನ ದೈವದಾಗ ಕರೆದುಕೊಳ್ಳುವ ಕಾರ್ಯ ನೆರವೇರಿಸುತ್ತಾರೆ. ಸಮಾಧಿಯನ್ನು ಪೂಜಿಸುತ್ತಾರೆ. ನಂತರ ಕಾಗೆ ಪಿಂಡವನ್ನು ಇಡಲಾಗುತ್ತದೆ, ಮೃತನ ಆತ್ಮ ಕಾಗೆಗಳಲ್ಲಿರುವುದೆಂಬ ನಂಬಿಕೆಯಿದೆ, ಹೀಗಾಗಿ ನೈವೇದ್ಯ ರೂಪದಲ್ಲಿರುವ ಭಕ್ಷಗಳನ್ನು ಮುಟ್ಟದಿದ್ದಲ್ಲಿ ಮೃತನು ಯಾವುದೋ ಆಶೆಯಿಂದ ತೀರಿರುವನೆಂದು ತಿಳಿಯುತ್ತದೆ. ಕಾಗೆ ಪಿಂಡವನ್ನು ತಿಂದರೆ ಮೃತನ ಆತ್ಮಕ್ಕೆ ಶಾಂತಿ ದೊರೆತಿದೆ ಎಂದು ತಿಳಿಯುತ್ತದೆ. ಕೊನೆಗೂ ಕಾಗೆಗಳು ತಿನ್ನದಿದ್ದರೆ ಅದನ್ನು ನದಿಹಳ್ಳದಲ್ಲಿ ಎಸೆಯುತ್ತಾರೆ.

ಒಂದು ಶುಭದಿನದಂದು ಮನೆಯನ್ನು ಸಾರಿಸಿ ಪಾದೋದಕ ಚಿಮುಕಿಸುತ್ತಾರೆ. ಅಲ್ಲದೆ ಹೊಸಬಟ್ಟೆ, ಹೊಸಬಿಂದಿಗೆ, ಕಾಯಿ, ಖಣ ಮೊದಲಾದವುಗಳನ್ನು ಧಾನ್ಯಗಳ ಮೇಲಿರಿಸಿ ಧೂಪವ ಹಾಕಿನಮಸ್ಕರಿಸುವರು. ಬಂಧು-ಬಳಗದವರೆಲ್ಲ ಧೂಪಹಾಕಿ ಊಟಮಾಡುತ್ತಾರೆ. ಕೆಲವರು ಬಡವರಿಗೆ ದಾನ ನೀಡುವುದು ವಿಶೇಷವಾಗಿದೆ.

ಕುರುಬರು ಮಹಾಲಯ ಅಮವಾಸ್ಯೆಯ ಪ್ರತಿಪದ ಹಾಗೂ ಯುಗಾದಿ ಅಮವಾಸ್ಯೆ ಪ್ರತಿಪದ ತಿಂಗಳದಲ್ಲಿ ಹಿರಿಯರ

ಹಬ್ಬವನ್ನು ಆಚರಿಸುತ್ತಾರೆ. ಅಂದು ಮನೆಯನ್ನು ಶುದ್ಧಗೊಳಿಸಿ ಒಂದು ಜಾಗದಲ್ಲಿ ಮೃತನ ಸಂಕೇತವಾಗಿ ನೀರು ತುಂಬಿದ ತಂಬಿಗೆಯ ಮೇಲೆ ಕಳಸವನ್ನಿಡುತ್ತಾರೆ. ಅವರಿಗೆ ಪ್ರಿಯವಾದ ಭೋಜನವನ್ನು ಎಡೆಮಾಡುವರಲ್ಲದೆ, ಇನ್ನಿತರ ವಸ್ತುಗಳನ್ನು ತಂದಿಡುತ್ತಾರೆ. ಈ ವಿಧಿವಿಧಾನಗಳಲ್ಲಿ ಸ್ವಲ್ಪ ಬದಲಾವಣೆಗಳಾಗಿದ್ದರೂ ತಮ್ಮ ಮೂಲ ಪರಂಪರೆ ಸಂಪ್ರದಾಯವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ: ಡಾ.ಚನ್ನಬಸಯ್ಯ ಹಿರೇಮಠ, ಪ್ರ : ಸಂಗಣ್ಣನವರು ಅಗಡಿ ಪ್ರತಿಷ್ಠಾನ, ಕೊಪ್ಪಳ-೧೯೯೫. ಪು-೧೮೧

೨. ವೇದಗಳಲ್ಲಿ ಜನಸಮಾನ್ಯರು, ಲೇ: ಬಿ.ವಿ.ವೀರಭದ್ರಪ್ಪ, ಪ್ರ : ನವಕರ್ನಾಟಕ ಪ್ರಕಾಶನ, ಬೆಂಗಳೂರು-೨೦೦೩ ಪು-೪೮

೩. ಹೈದರಾಬಾದ್ ಕರ್ನಾಟಕ ಭಾಗದ ಶಿಲಾಶಾಸನಗಳು, ಸಂ: ಡಾ.ವಿ.ಶಿವಾನಂದ, ಪ್ರ:ಕನ್ನಡ ಪೀಠ, ಬನಾರಸ ಹಿಂದೂ ವಿದ್ಯಾಲಯ, ವಾರಣಾಸಿ-೧೯೯೩, ಪು- xxxix

೪. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ: ಡಾ.ಚನ್ನಬಸಯ್ಯ ಹಿರೇಮಠ. ಪ್ರ:ಸಂಗಣ್ಣನವರು ಅಂಗಡಿ ಪ್ರತಿಷ್ಠಾನ, ಕೊಪ್ಪಳ-೧೯೯೫. ಪು-೧೮೩

೫. ಬಂಟರು ಒಂದು ಸಮಾಜೋಸಾಂಸ್ಕೃತಿಕ ಅಧ್ಯಯನ, ಲೇ: ಇಂದಿರಾ ಹೆಗ್ಗಡೆ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೪ ಪು-೧೪೧

೬. ಕುಂಚಿಟಗರ ಸಾಂಸ್ಕೃತಿಕ ಇತಿಹಾಸ, ಲೇ: ಎಂ. ಎಚ್.ನಾಗರಾಜು, ಪ್ರ: ಅನಿಕೇತನ, ಪ್ರಕಾಶನ, ತುಮಕೂರು-೨೦೦೪. ಪು-೧೨೨

೭. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩ ಪು-೧೫

೮. ಹಾಲುಮತದ ಹುಟ್ಟು, ಲೇ: ಬೋನಬಸವರಾಜ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ-೨೦೦೦ ಪು-೮೪

೯. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೧೫

೧೦. ಕುಂಚಿಟಗರ ಸಾಂಸ್ಕೃತಿಕ ಇತಿಹಾಸ, ಲೇ: ಎಂ.ಎಚ್. ನಾಗರಾಜು, ಪ್ರ: ಅನಿಕೇತನ ಪ್ರಕಾಶನ, ತುಮಕೂರು-೨೦೦೪. ಪು-೧೨೧

೧೧. ಅದೇ, ಪು-೧೨೨

೧೨. ಕುರುಬರ ಚರಿತ್ರೆ. ಸಂ: ಸುಧಾಕರ. ಪ: ಪ್ರತಿಭಾ ಪ್ರಕಾಶನ ಮೈಸೂರು-೧೯೯೯. ಪು-೬೮

೧೩. ಅದೇ. ಪು-೭೩

೧೪. ಅದೇ. ಪು-೭೭

೧೫. ಅದೇ. ಪು-೮೪

೧೬. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೧೭

೧೭. ಹಾಲುಮತಸ್ಥರು, ಲೇ: ಬ.ಪ.ನಾಯ್ಕರ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ - ೨೦೦೩ ಪು-೨೫

೧೮. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಸಂಪುಟ-೧, ಲೇ: ಜೆ.ಎಂ.ನಾಗಯ್ಯ, ಪ್ರ: ಲೋಹಿಯಾ ಪ್ರಕಾಶನ, ಬಳ್ಳಾರಿ-೨೦೦೨. ಪು-೧೬೩

೧೯. ಹಾಲುಮತ ಹುಟ್ಟು, ಲೇ: ಬೋನಾ ಬಸವರಾಜ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ ೨೦೦೦ ಪು-೬೫

೨೦. ಅದೇ, ಪು-೬೪

೨೧. ಅದೇ, ಪು-೯೯

೨೨. ಅದೇ, ಪು-೯೩

೨೩. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೧೭

೨೪. ಬಂಟರು ಒಂದು ಸಮಾಜೋಸಾಂಸ್ಕೃತಿಕ ಅಧ್ಯಯನ, ಲೇ: ಇಂದಿರಾ ಹೆಗ್ಗಡೆ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೪. ಪು-೨೧೨

೨೫. ಮಾತೃಪ್ರಧಾನ ಪರಿಕಲ್ಪನೆ, ಡಾ. ಶೈಲಜಾ ಹಿರೇಮಠ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಕರ್ನಾಟಕ ಚರಿತ್ರೆ. ಸಂ: ೩, ಸಂ:ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭. ಪು-೨೫೮

೨೭. ಕುರುಬರ ಚರಿತ್ರೆ. ಸಂ: ಸುಧಾಕರ. ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೬ ಪು-೧೮

೨೮. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩ ಪು-೧೮

೨೯. ಕರ್ನಾಟಕ ಚರಿತ್ರೆ. ಸಂ: ೩, ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭. ಪು-೨೫೭

೩೦. ಕೊಪ್ಪಳ ಜಿಲ್ಲೆಯ ಶಾಸನಗಳು, ಸಂ: ದೇವರಕೊಂಡಾರೆಡ್ಡಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯. ಪು-೨೫

೩೧. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೮

೩೨. ಫುಡ್ ಅಂಡ್ ಫುಡ್ ಹ್ಯಾಬಿಟ್ಸ ಇನ್ ವಿಜಯನಗರ ಟೈಮ್ಸ, ಲೇ: ಜೋತ್ಸನಾ ಬರ್ಡೆ, ಪ್ರ ಜನರಲ್ ಆಫ್ ಕರ್ನಾಟಕ ವಿಶ್ವವಿದ್ಯಾಲಯ, ಸಂ : ೭ ೧೯೬೩ ಪು-೧೭೬

೩೩. ಕರ್ನಾಟಕ ಚರಿತ್ರೆ. ಸಂ: ೩, ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭ ಪು-೨೨೦

೩೪. ಫುಡ್ ಅಂಡ್ ಫುಡ್ ಹ್ಯಾಬಿಟ್ಸ ಇನ್ ವಿಜಯನಗರ ಟೈಮ್ಸ, ಲೇ: ಜೋತ್ಸನಾ ಬರ್ಡೆ, ಪ್ರ ಜನರಲ್ ಆಫ್ ಕರ್ನಾಟಕ ವಿಶ್ವವಿದ್ಯಾಲಯ, ಸಂ:೭ ೧೯೬೩ ಪು-೧೭೭

೩೫. ಅದೇ, ಪು-೧೭೬

೩೬. ಕರ್ನಾಟಕ ಚರಿತ್ರೆ. ಸಂ: ೩, ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭ ಪು-೨೨೦

೩೭. ಕೊಪ್ಪಳ ಜಿಲ್ಲೆಯ ಶಾಸನಗಳು, ಸಂ: ದೇವರಕೊಂಡಾರೆಡ್ಡಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯ ಪು-೨೭

೩೮. ಅದೇ, ಪು-೧೪೮

೩೯. ಅದೇ, ಪು-೧೫

೪೦. ಅದೇ, ಪು-೫೦

೪೧. ಅದೇ ಪು-೧೪

೪೨. ವೇದಗಳಲ್ಲಿ ಜನಸಾಮಾನ್ಯರು, ಲೇ: ಬಿ.ವಿ. ವೀರಭದ್ರಪ್ಪ, ಪ್ರ : ನವ ಕರ್ನಾಟಕ ಪ್ರಕಾಶನ, ಬೆಂಗಳೂರು-೨೦೦೩. ಪು-೪೮

೪೩. ಅದೇ, ಪು-೪೮

೪೪. ಅದೇ, ಪು-೪೮

೪೫. ಕರ್ನಾಟಕ ಚರಿತ್ರೆ, ಸಂ: ೩ ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭ ಪು-೨೫೩

೪೬. ಅದೇ, ಪು-೨೫೫

೪೭. ಶಂಬಾಕೃತಿ, ಸಂಪುಟ-೧, ಸಂ: ಮಲ್ಲೇಪುರಂ ಜಿ. ವೆಂಕಟೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು-೨೭೨

೪೮. ಬ್ಯಾಕವರ್ಡ ಕ್ಯಾಸ್ಟ ಆಂಡ್ ಕ್ಲಾಸ ಮೂವಮೆಂಟ್ ಇನ್ ಕರ್ನಾಟಕ: ವಿಥ್ ರೆಫರೆನ್ಸ ಟು ಕುರುಬ ಪಿ.ಎಚ್.ಡಿ ಪ್ರಬಂಧ, (ಅಪ್ರಕಟಿತ) ಸಂಶೋ: ಕೆ.ಎಮ್ ಬಸವರಾಜ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೩, ಪು ೮೬

೪೯. ಅದೇ, ಪು-೮೬

೫೦. ಶಂಬಾಕೃತಿ, ಸಂಪುಟ ೧, ಸಂ: ಮಲ್ಲೇಪುರಂ ಜಿ. ವೆಂಕಟೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯ ಪು-೩೦೭

೫೧. ಕುರುಗೋಡು ಸಿಂದರು ಒಂದು ಅಧ್ಯಯನ, ಲೇ: ಡಾ ಚನ್ನಬಸವಯ್ಯ ಹಿರೇಮಠ ಪ್ರ: ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, ೧೯೯೫, ಪು-೧೮೭

೫೨. ಚೆನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ, ಲೇ: ಡಾ.ಟಿ. ಗೋವಿಂದರಾಜು, ಪ್ರ. ಪುಸ್ತಕಜೇನು ಚನ್ನಾದೇವಿ ಅಗ್ರಹಾರ, ದೊಡ್ಡ ಬಳ್ಳಾಪುರ-೧೯೯೩, ಪು-೮೧

೫೩. ಕುರುಬರ ಚರಿತ್ರೆ, ಸಂ: ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೩ ಪು-೩೦

೫೪. ಕಾಗಿನೆಲೆ, ಪ್ರ.ಸಂ.: ಕಾ.ತ ಚಿಕ್ಕಣ್ಣ, ಪ್ರ: ಕಾಗಿನೆಲೆ, ಮಹಾಸಂಸ್ಥಾನ ಕನಕಗುರು ಪೀಠ, ಕಾಗಿನೆಲೆ-೨೦೦೨, ಪು-೭೩

೫೫. ಅದೇ, ಪು-೭೪

೫೬. ಜನಪದ ವೈದ್ಯ ಪದ್ಧತಿ, ಲೇ: ಪ್ರೊ. ಸೂಗಯ್ಯ ಹಿರೇಮಠ, ಪ್ರ : ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೧೯೯೯, ಪು-೨೦

೫೭. ಅದೇ, ಪು-೬೦

೫೮. ಕುರುಬರ ಚರಿತ್ರೆ, ಸಂ: ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೭ ಪು-೪೪

೫೯. ಹಾಲುಮತಸ್ಥರು, ಲೇ: ಬ.ಪ.ನಾಯ್ಕರ, ಪ್ರ ವಿದ್ಯಾನಿಧಿ ಪ್ರಕಾಶನ, ಗದಗ-೨೦೦೩ ಪು-೬೬

೬೦. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩ ಪು-೨೦

೬೧. ಅದೇ, ಪು-೨೦

೬೨. ಅದೇ. ಪು-೨೦

೬೩. ಶಾಸನಗಳಲ್ಲಿ ಕರ್ನಾಟಕದ ಸ್ತ್ರಿ ಸಮಾಜ. ಲೇ: ಡಾ.ಚನ್ನಕ್ಕ ಎಲಿಗಾರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೦. ಪು-೩೬

೬೪. ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಲೇ: ಕೆ.ಜಿ ವೆಂಕಟೇಶ ಜೋಯಿಸ. ಪ್ರ: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೯೬ ಪು-೯೩

೬೫. ಅದೇ, ಪು-೯೪

೬೬. ಅದೇ, ಪು-೯೪

೬೭. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಸಂಪುಟ-೧, ಲೇ: ಜೆ.ಎಂ ನಾಗಯ್ಯ, ಪ್ರ: ಲೋಹಿಯಾ ಪ್ರಕಾಶನ, ಬಳ್ಳಾರಿ-೨೦೦೨. ಪು-೧೬೪

೬೮. ಅದೇ, ಪು-೧೬೪

೬೯. ಗೊರವರ ಸಂಸ್ಕೃತಿ, ಲೇ: ಚಕ್ಕೆರೆ ಶಿವಶಂಕರ, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪು-೭೨

೭೦. ಬುಡಕಟ್ಟು ಸಮಾಜ : ಹುಟ್ಟು ಸಾವಿನ ನಡುವೆ ಲೇ: ಗಂಗಾದರ ದೈವಜ್ಞ ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦. ಪು-೫೨

೭೧. ಉತ್ತರ ಕರ್ನಾಟಕದ ಜನಪದ ಗೀತೆ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಡಾ. ವೀರೇಶ ಬಡಿಗೇರ, ಪ್ರ: ವಿಮೋಚನಾ ಪ್ರಕಾಶನ, ಅಥಣಿ-೧೯೯೯. ಪು- ೧೬೫

೭೨. ಕುರುಗೋಡು ಸಿಂಧರು: ಒಂದು ಅಧ್ಯಯನ, ಲೇ: ಡಾ.ಚನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ-೧೯೯೫, ಪು-೧೮೭

೭೩. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೨೨

೭೪. ಕರ್ನಾಟಕ ಚರಿತ್ರೆ. ಸಂ: ೩ ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭. ಪು-೨೪೮

೭೫. ಹಕ್ಕ ಬುಕ್ಕ, ಲೇ: ಪ್ರೊ. ಒಡೆಯರ ಡಿ. ಹೆಗ್ಗಡೆ, ಪ್ರ: ತನುಮನ ಪ್ರಕಾಶನ, ಮೈಸೂರು-೨೦೦೩. ಪು-೪೦

೭೬. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಲೇ: ಡಾ: ಚನ್ನಕ್ಕ ಎಲಿಗಾರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೦. ಪು-೧೪

೭೭. ಅದೇ, ಪು-೧೫

೭೮. ಹಾಲುಮತಸ್ಥರು, ಲೇ: ಬ.ಪ.ನಾಯ್ಕರ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ-೨೦೦೩. ಪು-೨೨

೭೯. ಕರ್ನಾಟಕ ಚರಿತ್ರೆ, ಸಂ: ೩ ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೪೦

೮೦. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಲೇ: ಡಾ: ಚನ್ನಕ್ಕ ಎಲಿಗಾರ ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೧೯೯೦. ಪು-೨೨

೮೧. ಅದೇ, ಪು ೨೨

೮೨. ಅದೇ, ಪು ೨೩

೮೩. ಹಾಲುಮತಸ್ಥರು, ಲೇ: ಬ.ಪ.ನಾಯ್ಕರ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ-೨೦೦೩. ಪು-೫೯

೮೪. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩ ಪು-೨೫

೮೫. ಅದೇ, ಪು-೨೫

೮೬. ಕುರುಬರ ಚರಿತ್ರೆ, ಸಂ: ಸುಧಾಕರ, ಪ್ರ : ಪ್ರತಿಭಾ ಪ್ರಕಾಶನ, ಮೈಸೂರು-೧೯೯೩. ಪು-೪೪

೮೭. ಅದೇ, ಪು-೪೦

೮೮. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೨

೮೯. ಅದೇ, ಪು-೩೦

೯೦. ಕುರುಬರ ಚರಿತ್ರೆ, ಸಂ: ಸುಧಾಕರ ಪ್ರ : ಪ್ರತಿಭಾ ಪ್ರಕಾಶನ ಮೈಸೂರು-೧೯೯೩ ಪು-೪೪

೯೧. ಅದೇ, ಪು-೪೧

೯೨. ಕರ್ನಾಟಕ ಚರಿತ್ರೆ, ಸಂ: ೩, ಸಂ: ಪ್ರೊ ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೭. ಪು-೨೪೭

೯೩. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೩೦

೯೪. ಅದೇ, ೩೦

೯೫. ಕರ್ನಾಟಕ ಚರಿತ್ರೆ. ಸಂ: ೩, ಸಂ:ಪ್ರೊ ಬಿ. ಷೇಕ್ ಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ ಹಂಪಿ - ೧೯೯೩ ಪು-೨೬

೯೬. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಲೇ: ಡಾ. ಚನ್ನಕ್ಕ ಎಲಿಗಾರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೧೯೯೦. ಪು-೨೫

೯೭. ಅದೇ, ಪು-೨೬

೯೮. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೩೧

೯೯. ಅದೇ, ಪು-೩೧

೧೦೦. ಕರ್ನಾಟಕ ಚರಿತ್ರೆ. ಸಂ:೩, ಸಂ: ಪ್ರೊ ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೭. ಪು-೩೨೩

೧೦೧. ಕರ್ನಾಟಕದ ಕುರುಬರು, ಲೇ: ಶಿವಾನಂದ ಗುಬ್ಬಣ್ಣವರ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೩. ಪು-೩೧

೧೦೨. ಅದೇ, ಪು - ೩೧

೧೦೩. ಅದೇ, ಪು - ೩೨

೧೦೪. ಅದೇ, ಪು - ೩೨

೧೦೫. ಅದೇ, ಪು - ೩೩

# ಅಧ್ಯಾಯ ೬

## ಧಾರ್ಮಿಕ ಜೀವನ

೬.೧ ದೇವ–ದೇವತೆಗಳು

೬.೨ ಕುರುಬರ ಮೇಲೆ ಇತರೆ ಧರ್ಮಗಳ ಪ್ರಭಾವ

೬.೩ ಧಾರ್ಮಿಕ ಆಚರಣೆಗಳು

೬.೪ ಹರಕೆಗಳು ಮತ್ತು ನಂಬಿಕೆಗಳು

೬.೫ ಗುರುಮಠಗಳು

## ೬.೧ ದೇವ ದೇವತೆಗಳು

ಹಿಂದೂ ಧರ್ಮದಲ್ಲಿ ದೇವರುಗಳು ಅಸಂಖ್ಯಾತವಾಗಿವೆ, ಭಯ ಭಕ್ತಿಯೇ ಇವರ ಆರಾಧನೆಗೆ ಪ್ರಮುಖ ಕಾರಣವಾಗಿದೆ.[೧] ಈ ದೇವರುಗಳ ವಿಷಯ ಒಂದು ಧರ್ಮಕ್ಕೆ ಅಥವಾ ಒಂದು ಮತ, ಪಂಥಕ್ಕೆ ಸಂಬಂಧಿಸಿದುದಾಗಿದೆ ಹೀಗಾಗಿ ಭಗವಂತನ ಶಕ್ತಿ ಉಗ್ರರೂಪ, ವಾಣಿ, ಕಾನೂನು ಕಟ್ಟಳೆ, ಅವನೊಡನೆ ಮಾನವನ ಸಂಬಂಧ ಮೊದಲಾದವುಗಳನ್ನು ನಾವು ದೇವರ ವಿಷಯದಲ್ಲಿ ಚರ್ಚಿಸುತ್ತೇವೆ. ಈ ದೇವರುಗಳು ಒಬ್ಬನಾಗಿರಬಹುದು ಅಥವಾ ಹಲವರಾಗಿರಬಹುದು. ದೇವರುಗಳನ್ನು ಮನೆದೇವರು, ಕುಲದೇವರು, ಗ್ರಾಮದೇವರು ಎಂದೂ ಆರಾಧಿಸುತ್ತಾರೆ. ಇದರಿಂದ ದೇವರುಗಳು ಒಂದೊಂದು ಕಲ್ಪನೆಯ ಹಿನ್ನೆಲೆಯಲ್ಲಿ ಹೊರಹೊಮ್ಮಿರುವುದು ಕಂಡುಬರುತ್ತದೆ.

ಒಂದು ಗುಂಪು ಅಥವಾ ಸಮುದಾಯದ ದೇವರುಗಳಾದವರು ಬಹುಶಃ ಅಯಾ ಗುಂಪಿನವರ ಯಾವುದೋ ಕಾಲದ ಮುಖಂಡರಾಗಿರುವ ಸಾಧ್ಯತೆಯಿದೆ.[೨] ಅವರು ಆ ಗುಂಪಿನ ಮೇಲೆ ಮಾಡಿದ ಪ್ರಭಾವದ ಕುರುಹುಗಳನ್ನು ಅಥವಾ ಅದ್ಭುತ ಲೀಲೆಗಳನ್ನು ಮುಂದಿನ ಪೀಳಿಗೆಯವರು ಕೊಂಡಾಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ನಾಯಕರು ಅಥವಾ ಹಲವಾರು ವೀರರು ದೇವರಾಗಿರುವುದಕ್ಕೆ ಇಂದಿಗೂ ಪೂಜಿಸಲ್ಪಡುವ ಅನೇಕ ವೀರಗಲ್ಲುಗಳೇ ಸಾಕ್ಷಿಯಾಗಿವೆ. ಅದರಲ್ಲೂ ಪ್ರಮುಖವಾದ ವ್ಯಕ್ತಿಯ ವೀರಗಲ್ಲು ನಿಲ್ಲಿಸಿರುವುದಲ್ಲದೇ, ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.[೩] ಹೀಗೆ ಪ್ರತಿಯೊಂದು ಸಮುದಾಯದವರು ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಂಡು ಕುಲದೇವರೆಂದು ಆರಾಧಿಸುತ್ತಿರುವುದು ಸ್ಪಷ್ಟ. ಈ ಪದ್ಧತಿ ಕುರುಬರಲ್ಲೂ ಕಂಡುಬರುತ್ತೆ.

ಕುರುಬರಲ್ಲಿ ಅನೇಕ ವೀರರು, ಪವಾಡ ಪುರುಷರು ದೇವರಾಗಿದ್ದಾರೆ. ಅವರನ್ನು ಕುಲದೇವರು, ಮನೆದೇವರು, ಗ್ರಾಮದೇವರು, ನಾಡದೇವರು ಎಂದು ವರ್ಗೀಕರಿಸಿ ಆರಾಧಿಸುವುದು ಕಂಡುಬರುತ್ತದೆ. ಅವರಲ್ಲಿ ಬೀರದೇವರು, ರೇವಣಸಿದ್ಧ, ಮೈಲಾರಲಿಂಗ, ಅಮೋಘಸಿದ್ಧ, ಮಾಳಿಂಗರಾಯ, ಜಟ್ಟಿಂಗರಾಯ, ಭರಮದೇವರು, ಕನಕದಾಸ, ಗ್ಯಾನಪ್ಪಯ್ಯ, ಬಾಳಪ್ಪಯ್ಯ, ಗವಿಸಿದ್ಧಪ್ಪ ಮೊದಲಾದವರಲ್ಲದೆ, ಸ್ತ್ರೀ ದೇವತೆಗಳಾದ ಎಲ್ಲಮ್ಮ, ದುರ್ಗಮ್ಮ, ಹುಲಿಗೆಮ್ಮ, ದ್ಯಾಮಮ್ಮ ಮೊದಲಾದ ದೇವ–ದೇವತೆಗಳನ್ನು ಆರಾಧಿಸುತ್ತಾರೆ. ಈ ದೇವ–ದೇವತೆಗಳ ಆರಾಧನೆಯ ವೈಶಿಷ್ಟತೆಯನ್ನು ಈ ಕೆಳಗೆ ವಿವರಿಸಲಾಗಿದೆ

### ೬.೧.೧ ಬೀರದೇವರು

ಭಾರತೀಯ ಸಮಾಜದಲ್ಲಿ ಪ್ರತಿಯೊಂದು ಸಣ್ಣಗುಂಪಿಗೂ ಒಬ್ಬ ದೇವರಿರುವುದನ್ನು ಕಾಣಬಹುದಾಗಿದೆ. ಹೀಗೆ ಗುಂಪಿನವರಿಗೆ ದೇವರುಗಳಾದವರು ಒಂದು ಕಾಲದಲ್ಲಿ ಮುಖಂಡರಾಗಿದ್ದು, ಅಂದಿನ ಗುಂಪಿನ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಯಿದೆ. ಇವರ ಬಗ್ಗೆ ನಂತರ ಕಾಲದಲ್ಲಿ ಪುರಾಣ ಕಥೆಗಳು ಸೃಷ್ಟಿಗೊಂಡಿವೆ. ಬೀರಪ್ಪನೂ ಈ ರೀತಿಯ ವ್ಯಕ್ತಿಯಾಗಿರುವ ಸಾಧ್ಯತೆಯಿದೆ.

ಕುರುಬರು ಬೀರದೇವರನ್ನು ತಮ್ಮ ಕುಲದೇವರೆಂದು ಆರಾಧಿಸುತ್ತಾರೆ. ಬೀರ ಎನ್ನುವ ಪದ ಮೂಲತಃ ವೀರ ಎಂಬ ಪದದ ತದ್ಭವವಾಗಿದೆ.[೯] ಇದರಿಂದಾಗಿ ವೀರನಾಗಿದ್ದ ಕುರುಬರ ವ್ಯಕ್ತಿ ನಂತರ ಬೀರನಾಗಿ ದೇವರಾಗಿದ್ದಾನೆಂದು ಹೇಳಬಹುದಾಗಿದೆ. ಬೀರಪ್ಪನನ್ನು ವೀರಭದ್ರನ ಅವತಾರವೆಂದೂ ಪರಿಗಣಿಸಲಾಗುತ್ತದೆ. ಬೀರಪ್ಪನಿಂದಲೇ ಕುರುಬರ ಕುಲ ಸೃಷ್ಟಿಯಾಯಿತೆಂಬ ಪ್ರತೀತಿಯಿದೆ.

ಪ್ರಾಚೀನ ಕಾಲದಿಂದಲೂ ಪ್ರಕೃತಿಯ ಆರಾಧಕರಾಗಿದ್ದ ಕುರುಬರು ಕಲ್ಲು ಬಂಡೆಗಳನ್ನು ಪೂಜಿಸುತ್ತಿದ್ದರು. ಇಂದಿಗೂ ಅಧಿಕವಾಗಿ ಬೀರದೇವರ ದೇವಾಲಯಗಳಲ್ಲಿ ಮೂರ್ತಿಗಳ ಬದಲಿಗೆ ಕಲ್ಲು ಗುಂಡುಗಳನ್ನು ಅಥವಾ ಲಿಂಗಗಳನ್ನೇ ಪೂಜಿಸುತ್ತಾರೆ. ಇದರಿಂದಾಗಿ ಬೀರಪ್ಪ ಪ್ರಾಚೀನ ಕಾಲದ ದೇವರೆಂದು ಸ್ಪಷ್ಟಪಡುತ್ತದೆ. ಅನೇಕ ಪದ್ಯಗಳಲ್ಲಿ ಬೀರ್‍ಲಿಂಗ ಎಂದು ಕರೆದಿರುವುದರಿಂದ ಬೀರಪ್ಪ ಲಿಂಗಸ್ವರೂಪಿ ಎಂದು ತಿಳಿಯುತ್ತದೆ. ಕುರುಬರಿರುವ ಪ್ರತಿಯೊಂದು ಗ್ರಾಮಗಳಲ್ಲೂ ಬೀರದೇವರ ದೇವಸ್ಥಾನಗಳಿರುತ್ತವೆ. ಬೀರದೇವರ ಸಮಸ್ತರಿಗೂ ಹಿತಬಯಸುವ ದೇವರೆಂದು ಪುರಾಣ ಹಾಗೂ ಡೊಳ್ಳಿನ ಹಾಡುಗಳಿಂದ ತಿಳಿಯುತ್ತದೆ.

ಹಾಲ್ಮತೋತ್ತೇಜಕ ಪುರಾಣ, ಜನಪದ ಹಾಲುಮತ ಮಹಾಕಾವ್ಯ ಮೊದಲಾದ ಪುರಾಣಗಳು ಬೀರದೇವರ ಸೃಷ್ಟಿಮೂಲದ ಬಗ್ಗೆ ಮಾಹಿತಿ ನೀಡುತ್ತವೆ. ಇವುಗಳ ಪ್ರಕಾರ ಪುಷ್ಪದತ್ತನೆಂಬ ಶಿವಭಕ್ತನು ನಿತ್ಯವೂ ಶಿವಲಿಂಗ ಪೂಜೆ ಮಾಡುತ್ತಿದ್ದನು. ಅದೇ ಶಿವಲಿಂಗವನ್ನು ವಿಷ್ಣುವೂ ಪೂಜೆ ಮಾಡುತ್ತಿದ್ದನು. ವಿಷ್ಣುವು ಪುಷ್ಪದತ್ತನ ಮೇಲಿನ ಅಸೂಯೆಯಿಂದ ಅವನು ಮಾಡಿದ ಪೂಜೆಯನ್ನು ಕೆಡಿಸಿದನು. ಇದರಿಂದ ಕೋಪಗೊಂಡ ಶಿವನು ವಿಷ್ಣುವಿಗೆ ನೀನು ದೋಷಿ ಎಂದು ನುಡಿದನು.[೧೦] ವಿಷ್ಣು ಕ್ಷಮೆಯನ್ನು ಕೋರಲು, ಕಾಶಿಯಿಂದ ಗಂಗಾಜಲ ತಂದು ಅಭಿಷೇಕ ಮಾಡಿ ಪಾಪದಿಂದ ಮುಕ್ತನಾಗು ಎಂದು ಶಿವನು ಆದೇಶಿಸಿದನು. ಇದರಿಂದಾಗಿ ನಿತ್ಯ ಶಿವಲಿಂಗ ಪೂಜೆ ಮಾಡಲು ಚಂದ್ರಗಿರಿಯ ನೀಲಕಂಠ ಅರಸನ ಮಗನಾದ ಭರಮದೇವನನ್ನು ನೇಮಿಸಿದನಲ್ಲದೇ, ತಾನು ಗಂಗಾಜಲ ತರಲು ಕಾಶಿಗೆ ಹೋದನು.

ವಿಷ್ಣುವಿನ ಸೋದರಿ ಸುರಾವತಿಯ ಗಂಡನಾದ ಭರಮದೇವನು ದಿನಾಲು ಭಕ್ತಿಯಿಂದ ಶಿವಪೂಜೆಯನ್ನು ಮಾಡುತ್ತಿರುತ್ತಾನೆ. ಇದನ್ನು ಮೆಚ್ಚಿದ ಶಿವನು ವಿಷ್ಣು ಬಂದರೆ ಪೂಜೆ ಮಾಡಲು ಬಿಡಬೇಡವೆಂದು ಆಜ್ಞಾಪಿಸುತ್ತಾನೆ. ಗಂಗಾಜಲವನ್ನು ತಂದ ವಿಷ್ಣುವಿಗೆ ಶಿವನ ಆಜ್ಞೆಯಂತೆ ಭರಮದೇವ ಪೂಜೆ ಮಾಡಲು ಬಿಡುವುದಿಲ್ಲ. ಆಗ ವಿಷ್ಣು ಕೋಪಗೊಂಡು ಮಕ್ಕಳಾಗದವರಿಂದ ಪೂಜೆ ಮಾಡಿಸಿಕೊಳ್ಳುವುದು ಸರಿಯೆ ಎಂದು ಪ್ರಶ್ನಿಸುತ್ತಾನೆ. ಶಿವನು ಮಕ್ಕಳಾಗದವರಿಂದ ಪೂಜೆ ಮಾಡಿಸಿಕೊಳ್ಳಲಾರೆ ಎಂದು ಭರಮದೇವನಿಗೆ ತಿಳಿಸುತ್ತಾನೆ. ಇದರಿಂದ ದುಃಖಿತನಾದ ಭರಮದೇವ ವಿಷಯವನ್ನು ಪತ್ನಿಗೆ ತಿಳಿಸುತ್ತಾನೆ. ಸುರಾವತಿ ಸಂತಾನಭಾಗ್ಯಕ್ಕಾಗಿ ಗಜಗೌರಿ ವ್ರತ ಕೈಗೊಳ್ಳುತ್ತಾಳೆ. ಅವಳ ಪೂಜೆಗೆ ಮೆಚ್ಚಿದ ಶಿವ ತನ್ನ ಹಣೆಯ ಬೆವರನ್ನು ಉಗುರಿನಿಂದ ಗೀರಿ ಸುರಾವತಿಗೆ ಸೇವಿಸುವಂತೆ ಹೇಳಿ ಮಾಯವಾಗುತ್ತಾನೆ. ಶಿವನ ಹಣೆಯ ಬೆವರನ್ನು ಸೇವಿಸಿದ ಸುರಾವತಿ ಗರ್ಭವತಿಯಾಗುತ್ತಾಳೆ. ಈ ವಿಷಯ ತಿಳಿದ ವಿಷ್ಣು ಹುಟ್ಟಲಿರುವ ಮಗು ತನ್ನ ಮಗಳನ್ನು ವಿವಾಹವಾಗಿ ನನ್ನನ್ನು ಅವಮಾನಕ್ಕೆಡೆ ಮಾಡಿಕೊಡುವುದು ಎಂದು ಭಯಗೊಂಡು ಗರ್ಭದಲ್ಲಿರುವಾಗಲೇ ಶಿಶುವನ್ನು ಕೊಲ್ಲಲು ಪ್ರಯತ್ನಿಸುತ್ತಾನೆ.[೬]

ವಿಷ್ಣು ತನ್ನ ಸೋದರಿಯಾದ ಸುರಾವತಿಯ ಬಯಕೆ ಊಟದಲ್ಲಿ ವಿಷ ಬೆರೆಸುತ್ತಾನೆ. ಆದರೆ ಗರ್ಭದಲ್ಲಿರುವ ಮಗು

ತಾಯಿಗೆ ಮುನ್ಸೂಚನೆ ನೀಡಿರುತ್ತದೆ. ಅದರಿಂದಾಗಿ ಸುರಾವತಿ ಊಟ ಮಾಡುವುದಿಲ್ಲ. ನಂತರ ನವಮಾಸಗಳು ತುಂಬಿದ ಮೇಲೆ ಗಂಡು ಶಿಶುವಿಗೆ ಜನ್ಮ ನೀಡುತ್ತಾಳೆ. ಶಿಶುವಿನ ಜನನವಾದ ಮೇಲೆ ಬಡಬ್ರಾಹ್ಮಣನ ವೇಷಧಾರಿಯಾಗಿ ಬಂದ ವಿಷ್ಣು ಶಿಶು ಜನಿಸಿದ ಸಮಯ ಸರಿಯಿಲ್ಲ, ಅಲ್ಲದೆ ನಿನ್ನ ಸೋದರನಿಗೆ ಮರಣವುಂಟಾಗುವ ಸಾಧ್ಯತೆಯಿರುವುದರಿಂದ ಮಗುವನ್ನು ಅಡವಿಯಲ್ಲಿ ಬಿಟ್ಟು ಬರಬೇಕೆಂದು ತಿಳಿಸುತ್ತಾನೆ. ಬ್ರಾಹ್ಮಣನ ಮಾತನ್ನು ನಂಬಿದ ಸುರಾವತಿ ಶಿಶುವನ್ನು ತೊಟ್ಟಿಲಲ್ಲಿ ಮಲಗಿಸಿ ಅಡವಿಯಲ್ಲಿ ಬಿಟ್ಟು ಬರುವಂತೆ ಸೇವಕರಿಗೆ ತಿಳಿಸುತ್ತಾಳೆ. ಅಡವಿಯಲ್ಲಿ ಸೇವಕರು ನೀರು ಕುಡಿಯಲೆಂದು ತೊಟ್ಟಿಲನ್ನು ಕೆಳಗಿಳಿಸಿದಾಗ ತೊಟ್ಟಿಲು ತಾನೇ ಮೇಲೇರಿ ವೃಟು ವೃಕ್ಷದ ಟೊಂಗೆಯಲ್ಲಿ ನೇತಾಡುತ್ತದೆ. ಇದನ್ನು ಕಂಡ ಸೇವಕರು ರಕ್ತಕಾರಿ ಸಾಯುತ್ತಾರೆ. ಶಿವಪಾರ್ವತಿ ಬಂದು ಮಗುವಿಗೆ ಬೀರೇಶ್ವರ ಎಂದು ನಾಮಕರಣ ಮಾಡುತ್ತಾರೆ.[೭]

ಚಾಮರಾಜನ ಸಾಕು ಮಕ್ಕಳಾದ ಅಕ್ಕಮ್ಮ, ಮಾಯವ್ವ, ಮಂಕವ್ವ, ಕಾಳವ್ವ, ಲಕ್ಷ್ಮವ್ವ ಕುರಿ ಮೇಯಿಸುತ್ತ ಆ ವೃಕ್ಷದ ಕೆಳಗೆ ಬರುತ್ತಾರೆ. ತೊಟ್ಟಿಲಲ್ಲಿ ತೂಗಾಡುತ್ತಿರುವ ಶಿಶುವನ್ನು ಪಡೆಯಲು ಅವರಲ್ಲಿ ಪೈಪೋಟಿ ಪ್ರಾರಂಭವಾಗುತ್ತದೆ. ಕೊನೆಗೆ ಯಾರ ಉಡಿಯಲ್ಲಿ ಮಗು ಬೀಳುವುದೋ ಅವರೇ ಮಗುವಿನ ಸಾಕುತಾಯಿಯಾಗಬೇಕೆಂದು ತೀರ್ಮಾನಿಸಿ ಎಲ್ಲರೂ ಉಡಿಯನ್ನು ಮುಂದೊಡ್ಡುತ್ತಾರೆ. ಶಿಶು ಅಕ್ಕಮ್ಮನ ಉಡಿಯಲ್ಲಿ ಬೀಳುತ್ತದೆ. ಹೀಗೆ ಅಕ್ಕಮ್ಮನು ಶಿಶುವಿನ ಸಾಕುತಾಯಿಯಾಗುತ್ತಾಳೆ. ಆದರೆ ಎಲ್ಲರೂ ಮಗುವನ್ನು ಅಕ್ಕರೆಯಿಂದ ಬೆಳೆಸುತ್ತಾರೆ. ಇವರ ಲಾಲನೆ-ಪಾಲನೆಯಲ್ಲಿ ಬೆಳೆದ ಬೀರೇಶ್ವರ ಆಡಿನ ಮರಿಗಳು ಕುಡಿದ ಎಂಜಲು ಹಾಲನ್ನು ಕುಡಿಯುವುದಿಲ್ಲವೆಂದು ಹಠಮಾಡುತ್ತಾನೆ. ಹೀಗಾಗಿ ಆಡಿನ ಕೊರಳಲ್ಲಿರುವ ಮೊಲೆಗಳ ಹಾಲನ್ನು ಕುಡಿದು ಬೆಳೆಯುತ್ತಾನೆ.

ಬೀರದೇವ ದೊಡ್ಡವನಾದ ಮೇಲೆ ಅನೇಕ ಪವಾಡಗಳನ್ನು ಮಾಡುತ್ತಾನೆ. ಚೆಂಡಿನ ಆಟವಾಡುವಾಗ ಸಾಹುಕಾರ ಬಸಪ್ಪನ ಮಗ ಲಿಂಗಬಸಪ್ಪ ಬೀರೇಶ್ವರನ ಚೆಂಡಿನೇಟಿನಿಂದ ಮೃತನಾಗುತ್ತಾನೆ. ಆದರೆ ಅವನನ್ನು ಪುನಃ ಜೀವಂತಗೊಳಿಸಿ ಪವಾಡ ಮಾಡುತ್ತಾನೆ. ಹಿರೇಬೇನೆಯಿಂದ ಕುರಿಗಳು ಸತ್ತಾಗ ಅವುಗಳ ಮೇಲೆ ಭಸ್ಮ ಉದುರಿಸಿ ಬದುಕಿಸುತ್ತಾನೆ. ಮದವೇರಿದ ಕೋಣವನ್ನು ಕತ್ತಿಯಿಂದ ತುಂಡರಿಸಿ ಮುಂಡ ಬಿದ್ದ ಜಾಗವನ್ನು ಮುಂದಗನೂರ ಹಾಗೂ ರುಂಡಬಿದ್ದ ಜಾಗವನ್ನು ಕೋಣನೂರು ಎಂದು ಸಾರುತ್ತಾನೆ. ಈ ಹೆಸರಿನ ಊರುಗಳು ಇಂದಿಗೂ ಇವೆ.[೮] ವಿಷ್ಣುವಿನ ವಿರೋಧವಿದ್ದರೂ ಅವನ ಮಗಳಾದ ಕನ್ನಿಕಾಮಾಲೆಯನ್ನು ಪ್ರೀತಿಸಿ ವಿವಾಹವದನು.

ಬೆಳ್ಳಿಗುತ್ತಿಯ ಹಿರೇಕುರಬ ಹೇಮಣ್ಣನ ಮಗ ಮಲ್ಲಣ್ಣ, ಮುದ್ದಣ್ಣನ ಮಗ ಬುಳ್ಳ ಕೊಲ್ಲಿಪಾಕಿ ಹಾಲುಮತದವರ ಒಡೆಯ ಶಿದ್ದೇಂದ್ರ ಹಾಗೂ ಭೂಜೇಂದ್ರ ಭೂಪಾಲನ ಮಗ ಮೃತರಾದಾಗ ಭಸ್ಮ ಲೇಪಿಸಿ ಅವರನ್ನು ಬದುಕಿಸುತ್ತಾನೆ. ಮಾಳಿಂಗರಾಯನನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಆತನ ಗುರು ಭಕ್ತಿಯನ್ನು ಲೋಕಕ್ಕೆ ತಿಳಿಯಲು ಮಾಳಿಂಗರಾಯನಿಗೆ ಕಪ್ಪೆಕಲಕದ ಜಲ, ಪುಳಮುಟ್ಟದ ಪುಷ್ಪಗಳನ್ನು ತಂದು ಪೂಜಿಸುವಂತೆ ಆಜ್ಞಾಪಿಸುತ್ತಾನೆ. ಇದೇ ರೀತಿಯಾಗಿ ಅನೇಕ ಪವಾಡಗಳನ್ನು ಮಾಡಿ ಭಕ್ತರನ್ನು ಉದ್ಧರಿಸಿದ ಬೀರೇಶ್ವರ ಶಿವನಾಜ್ಞೆಯಂತೆ ಮಾಘ ಮಾಸ ಶುಕ್ಲ ಪಕ್ಷ ತ್ರಯೋದಶಿ ತಿಥಿ ರವಿವಾರದಂದು ಕೈಲಾಸಕ್ಕೆ ಹೊರಟು ಹೋಗುತ್ತಾನೆ ಎಂದು ಪುರಾಣಗಳಿಂದ ತಿಳಿದುಬರುತ್ತದೆ.[೯] ಇದರಿಂದಾಗಿ ಬೀರಪ್ಪ ದೇವಪುರುಷ, ಶಿವನ ಪ್ರತಿರೂಪ ಎಂಬುದು ಸ್ಪಷ್ಟಪಡುತ್ತದೆ.

ಬೀರಪ್ಪ ಚಾರಿತ್ರಿಕ ವ್ಯಕ್ತಿಯಾಗಿರುವಂತೆಯೂ ಕಂಡುಬರುತ್ತದೆ. ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಒಂದು ಪ್ರಮುಖ ಗ್ರಾಮವಾಗಿರುವ ಸಿರಾಡೋಣ ಬೀರದೇವರ ಪ್ರಮುಖ ಸ್ಥಳವಾಗಿದೆ.[೧೦] ಇಲ್ಲಿ ಬೀರದೇವರ ಗದ್ದುಗೆಯಿರುವ ಗುಡಿಯಿದೆ. ಬೀರದೇವರ ವೃತ್ತಾಂತ ಸಂಪೂರ್ಣವಾಗಿ ಈ ಸಿರಾಡೋಣದಲ್ಲಿ ದೊರೆಯುತ್ತದೆ.[೧೧] ಕುರುಬರ ಮೂಲ ಪುರುಷ ಪದ್ಮಗೊಂಡನ ಕುರಿ ರಕ್ಷಣೆಗೆ ಬೀರದೇವ ಅವತರಿಸಿದನೆಂಬ ನಂಬಿಕೆಯಿದೆ. ಕುರುಬರಿಗೆ ತೊಂದರೆ ನೀಡುತ್ತಿದ್ದ ಕೋಣಾಸುರನನ್ನು ಕತ್ತಿಯಿಂದ ಸಂಹರಿಸಿದನು.

"ಹರಿಹರ ಎನ್ನ ಕರಿದೇವರಿಗೆ ಎಂತಹ ಮಾಲಿಗಳು ಒಂದಾವೋ" ಎಂಬ ವಾಕ್ಯ ಬೀರಪ್ಪ ದ್ರಾವಿಡ ದೇವತೆ ಎಂಬುದನ್ನು ತಿಳಿಸುತ್ತದೆ. ಕಲ್ಲುಗುಂಡುಗಳನ್ನೇ ಬೀರಪ್ಪನೆಂದು ಇಂದಿಗೂ ಪೂಜಿಸುವದರಿಂದ ಬೀರಪ್ಪ ಪ್ರಾಚೀನ ಕಾಲದ ದೇವರೆಂದು ಕಂಡುಬರುತ್ತದೆ. ಬೀರದೇವರ ಬಗ್ಗೆ ಅನೇಕ ಉಲ್ಲೇಖಗಳು ದೊರೆಯುತ್ತವೆ. ೧೨ನೇ ಶತಮಾನದಲ್ಲಿದ್ದ ಬಸವಣ್ಣನವರ ಒಂದು ವಚನದಲ್ಲಿ ಈ ರೀತಿಯಿದೆ.[೧೨]

"ಹಾಳು ಮೊರಡಿಗಳಲ್ಲಿ ಊರದಾರಿಗಳಲ್ಲಿ ಕೆರೆ, ಬಾವಿ, ಹೂ ಗಿಡಮರಗಳಲ್ಲಿ
ಗ್ರಾಮ ಮಧ್ಯಗಳಲ್ಲಿ, ಚೌಪಥ ಪಟ್ಟಣ ಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ,
ಮನೆಯ ಮಾಡಿ ಕರೊವೆಮ್ಮೆಯ ಹಸುಗೂಸು, ಬಸುರಿ, ಬಾಣಂತಿ
ಕುಮಾರಿ ಕೊಡಗೂಸೆಂಬವರ ಹಿಡಿದು, ತಿಂಬ, ತಿರಿದುಂಬ
ಮಾರಯ್ಯ, ಬೀರಯ್ಯ , ಕೇಚರಗಾವಿಲ, ಅಂತರಚಿಂತರ,
ಕಾಳಯ್ಯ, ದೂಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ
ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ?"

ಈ ವಚನದಲ್ಲಿ ಬೀರಯ್ಯನ ಹೆಸರು ಬಂದಿದೆ. ಕ್ರಿ.ಶ ೧೬ನೇ ಶತಮಾನಕ್ಕಿಂತಲೂ ಪೂರ್ವದಲ್ಲಿ ಬೀರದೇವರು ಕಿರುಕುಳ ದೈವಗಳಲ್ಲಿ ಒಬ್ಬರಾಗಿದ್ದರೆಂದು ತಿಳಿಯುತ್ತದೆ. ಕ್ರಿ.ಶ ೧೪೦೦ರಲ್ಲಿದ್ದ ಮಧುರ ಕವಿಯ ಪದ್ಯ ಈ ರೀತಿಯಿದೆ.[೧೩]

"ಪಂಡಿತರೂ ವಿವಿಧಕಳಾ ! ಮಂಡಿತರೂ ಕೇಳತಕ್ಕೆ ಕೃತಿಯಾ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ, ಗೊರವರ ! ಡು(ದು)ಂಡುಚಿಯೇ ಬೀದಿವರೆಯೇ ಬೀರನಕತೆಯೇ."

ಬೀರ ಕುರುಬರ ಕಥಾ ಪುರುಷ ಅವನ ಕಥೆಗಳಲ್ಲಿ ಅನೇಕ ಅಂಶಗಳು ನಂಬಲರ್ಹವಲ್ಲ ಹಾಗೂ ಕೇಳಲು ಯೋಗ್ಯವಲ್ಲ ಎಂಬ ಅಭಿಪ್ರಾಯವನ್ನು ಮಧುರ ಕವಿ ನೀಡುತ್ತಾನೆ. ಇದರಿಂದಾಗಿ ಬೀರಪ್ಪ ಅಂದು ಕಥಾ ಪುರುಷನಾಗಿದ್ದು ಅವನ ಬಗ್ಗೆ ಅನೇಕ ಕಥೆಗಳನ್ನು ಸೃಷ್ಟಿಸಲಾಗಿತ್ತೆಂದು ತಿಳಿಯುತ್ತದೆ.

ಮಧ್ಯಕಾಲದಲ್ಲಿ ಬೀರದೇವರ ಅನೇಕ ದೇವಾಲಯಗಳು ನಿರ್ಮಿಸಲ್ಪಟ್ಟವಲ್ಲದೆ, ಅನೇಕ ರಾಜ ಮನೆತನದವರು ವಿಶೇಷ ಸಂದರ್ಭಗಳಲ್ಲಿ ದಾನದತ್ತಿಗಳನ್ನು ನೀಡಿದ ಬಗ್ಗೆ ಆಧಾರಗಳಿವೆ. ರಾಷ್ಟ್ರಕೂಟರ ಅರಸ ಮೂರನೇ ಇಂದ್ರನ ಕಾಲದಲ್ಲಿ ಬೀರನಾರಾಯಣ ದೇವಾಲಯ ನಿರ್ಮಾಣವಾಯಿತು.[೧೪] ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಸಂಗಮ ವಂಶದವರ

ಕುಲದೇವರಾಗಿದ್ದ ಬೀರದೇವರು ಕಾಲಾನಂತರ ವಿರೂಪಾಕ್ಷನಾಗಿ ಮಾರ್ಪಾಡಾದನು ಎಂದು ಡಾ.ಎಂ.ಎಂ. ಕುಲಬರ್ಗಿಯವರು ಅಭಿಪ್ರಾಯ ಪಟ್ಟಿದ್ದಾರೆ. ಇದಕ್ಕೆ ಕಾರಣ ವಿರೂಪಾಕ್ಷನು ಲಿಂಗರೂಪಿಯಾಗಿರುವುದು. ಅಲ್ಲದೇ ಸಂಗಮ ವಂಶಸ್ಥರು ಕುರುಬರೆಂಬುದು ದೃಢಪಟ್ಟಿರುವುದಾಗಿದೆ. ಹೀಗಾಗಿ ವಿಜಯನಗರ ಕಾಲದ ಬಿರುಪಾಕ್ಷ ನಂತರದ ಕಾಲದಲ್ಲಿ ವಿರೂಪಾಕ್ಷನಾಗಿ ಸಂಸ್ಕೃತೀಕರಣಗೊಂಡನೆಂಬುದು ಸ್ಪಷ್ಟ.

ಶಾಲಿವಾಹನ ಶಕೆ ವರ್ಷ ೧೫೦೨ ಅಂದರೆ ಕ್ರಿ.ಶ. ೧೫೮೦ರಲ್ಲಿ ತಿಮ್ಮರಾಜನು ಅನೆಗೊಂದಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ರಾಜನ ಕಾರ್ಯಕರ್ತನಾದ ಬಾಗುಳಿಯ ಮಾಚಿನಾಯಕನ ಮಗನಾದ ವಾದಿನಾಯಕನು ತನ್ನ ತಂದೆ-ತಾಯಿಗಳಿಗೆ ಪುಣ್ಯ ಸಿಗಲೆಂದು ಬಾಗುಳಿಯ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ಕೊಟ್ಟೂರು ಸೀಮೆಯ ಕುರುಬರಿಗೆ ಕುರಿ ತೆರಿಗೆಯನ್ನು ಬಿಡುತ್ತಾನೆ.[೧೫] ಈ ಶಾಸನದ ಅಂತ್ಯದಲ್ಲಿ ಶ್ರೀ ಬೀರಲಿಂಗ ಎಂದಿರುವುದು ಅಂದು ಈ ದೇವರ ಅರಾಧನೆಯು ಪ್ರಮುಖವಾಗಿತ್ತೆಂದು ತಿಳಿಯುತ್ತದೆ.

ಬೀರದೇವರ ಹೆಸರನ್ನು ಹೊಂದಿದ ಅನೇಕ ವ್ಯಕ್ತಿಗಳ ಹೆಸರುಗಳು ಶಾಸನದಲ್ಲಿವೆ ಕ್ರಿ.ಶ ೧೨ನೇ ಶತಮಾನದ ಬೆಳಗುತ್ತಿಯ ಸಿಂದರ ಅರಸರಲ್ಲಿ ಬೀರದೇವನು ದಿನಕರ ದೇಸಾಯಿ ನಂತರ ಅಧಿಕಾರಕ್ಕೆ ಬಂದನು. ಬಳ್ಳಾರಿ ತಾಲೂಕಿನ ಬೈಲೂರಿನ ಶಾಸನಲ್ಲಿ ಬೀರಗೌಡ ಎಂಬ ವ್ಯಕ್ತಿ ದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಉತ್ತಂಗಿಯ ಶಾಸನದಲ್ಲಿ ಬೀರಗೌಡನು ಬೇಡರನ್ನು ಎದುರಿಸಿದ್ದನಲ್ಲದೆ. ಬೇಡರ ಗಂಡ ಎಂಬ ಬಿರುದನ್ನು ಹೊಂದಿದ್ದನೆಂದು ಉಲ್ಲೇಖವಿದೆ.[೧೬] ಹೀಗೆ ಅನೇಕ ವ್ಯಕ್ತಿಗಳು ಬೀರದೇವರ ಹೆಸರನ್ನು ಹೊಂದಿರುವುದು ಅವರೆಲ್ಲ ಬೀರದೇವರ ಆರಾಧಕರಾಗಿದ್ದರೆಂದು ತಿಳಿಸುತ್ತದೆ.

ಮಧ್ಯಯುಗದ ಅಂತ್ಯದವರೆಗೆ ಪ್ರಚಲಿತದಲ್ಲಿದ್ದ ಬೀರದೇವರ ಪ್ರಾಮುಖ್ಯತೆಯು ನಂತರದ ಕಾಲದಲ್ಲಿ ಕ್ಷೀಣಿಸತೊಡಗಿತು. ಹಿಂದೂಗಳಲ್ಲಿ ಸಂಸ್ಕೃತೀಕರಣ ವ್ಯಾಪಕವಾದಂತೆ ಬೀರದೇವರ ದೇವಾಲಯಗಳು ವೀರಭದ್ರನ ದೇವಾಲಯಗಳಾದವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇಂದಿಗೂ ವೀರಭದ್ರದೇವರ ಮೂರ್ತಿ ಪಕ್ಕದಲ್ಲಿ ಟಗರಿನ ರುಂಡವುಳ್ಳ ಒಬ್ಬ ದಕ್ಷಬ್ರಹ್ಮನ ಮೂರ್ತಿ ಇರುವುದು ಇದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕದಾದ್ಯಂತ ಅನೇಕ ಬೀರದೇವರ ದೇವಾಲಯಗಳಲ್ಲಿ ಮೂರ್ತಿಗಳ ಬದಲಾಗಿ ಕಲ್ಲು ಗುಂಡುಗಳನ್ನು ಪೂಜಿಸುವುದು ಕಂಡುಬರುತ್ತದೆ. ಆದರೆ ಕೆಲವು ದೇವಾಲಯಗಳಲ್ಲಿ ಬೀರದೇವರ ಮೂರ್ತಿಯನ್ನು ಕಾಣಬಹುದಾಗಿದೆ. ಹೀಗಾಗಿ ಬೀರದೇವರು ಅತಿ ಪ್ರಾಚೀನ ಕಾಲದ ದೇವರೆಂಬುದು ಪ್ರಸ್ತುತ ಸಂಶೋಧನಾ ಅಧ್ಯಯನದ ಮೂಲಕ ಸ್ಪಷ್ಟಪಡಿಸಲಾಗಿದೆ.

ಬೀರದೇವ ಕೈಲಾಸಕ್ಕೆ ಹೊರಟುಹೊದದ್ದು ರವಿವಾರವಾದ್ದರಿಂದ ಕುರುಬರಿಗೆ ರವಿವಾರ ಪವಿತ್ರ ದಿನವಾಗಿದೆ. ರವಿವಾರದಂದು ದೇವರಿಗೆ ವಿಶೇಷವಾದ ಪೂಜೆ ಸಲ್ಲಿಸಲಾಗುತ್ತದೆ.[೧೭] ಹಬ್ಬದ ದಿನಗಳಂದು ಬೀರದೇವರ ಮೂರ್ತಿಯನ್ನು ಅಲಂಕರಿಸಲಾಗುತ್ತದೆ. ಸಿಹಿ ಅಡುಗೆ ಮಾಡಿ ನೈವೇದ್ಯೆ ಇಡಲಾಗುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಹಿರೇಸಿಂಧೋಗಿ, ಕೊಪ್ಪಳ, ಸಂಗನಹಾಳ, ಕುಷ್ಟಗಿ, ಹಿರೇಮನ್ನಾಪುರ, ತಾವರಗೇರೆ, ಬೂದಗುಂಪಾ, ಸಿದ್ದಾಪುರ, ಕಾರಟಗಿ, ಯಲಬುರ್ಗಾ, ಚಿಕ್ಕೇನಕೊಪ್ಪ, ಮಸಬಾಹಂಚಿನಾಳ, ಹಣವಾಳ, ಲಿಂಗನಬಂಡಿ, ತಕ್ಕಳಕೇರಿ, ಬಿಜಕಲ್ಲ ಮೊದಲಾದೆಡೆ ಪುರಾತನವಾದ ದೇವಾಲಯಗಳಿವೆ.

ಕೊಪ್ಪಳ ಜಿಲ್ಲೆಯ ಹಿರೇಸಿಂಧೋಗಿಯಲ್ಲಿ ೧೮-೧೯ನೇ ಶತಮಾನದಲ್ಲಿ ಪಾಳೆಯಗಾರರು ನಿರ್ಮಿಸಿದ ದೇವಾಲಯವಿದೆ.

ಈ ದೇವಾಲಯದ ನಿರ್ಮಾಣಕ್ಕೆ ಒಂದು ಐತಿಹ್ಯವಿದೆ. ಕೆಂಭಾವಿ ಮೂಲದ ಕುರುಬರ ಒಂದು ಗುಂಪು ಆ ಊರಿನ ಶ್ರೀಮಂತನ ಮಗನನ್ನು ಕೊಂದರು. ಆ ಹುಡುಗ ಕುರುಬರಿದ್ದ ಓಣಿಯಲ್ಲಿ ಹೋದನೆಂದು ಕೆಲವರು ಹೇಳಿದಾಗ, ಪ್ರತಿ ಮನೆಯನ್ನು ಪರೀಕ್ಷಿಸಲಾಯಿತು. ಆ ಹುಡುಗನನ್ನು ಕಡಿದು ಹಾಕಲಾಗಿತ್ತು. ಆಗ ಅಲ್ಲಿದ್ದ ಹಿರೇಕ್ಕ ಈ ಹುಡುಗ ಟಗರಿನ ಮಾಂಸವಾಗಲೆಂದು ಬೇಡಿಕೊಂಡಳು. ಆ ಬುಟ್ಟಿಯನ್ನು ತೆರೆದು ನೋಡಿದರೆ ಟಗರಿನ ಮಾಂಸವಿತ್ತು. ಅಂದೇ ಇವರೆಲ್ಲ ಊರು ಬಿಟ್ಟು ಕೃಷ್ಣಾ ನದಿ ದಾಟಿ ಬಂದರು. ಬರುವಾಗ ನೆರವಾಗಿದ್ದ ಕಂಸಾಳೆಯ ಮಾದಿಗರು ಇವರ ಜೊತೆಗಿದ್ದರು. ಇವರು ಕುಕನೂರು ಮಾಹಾಮಾಯಿ ದೇವಸ್ಥಾನದಲ್ಲಿ ಆಶ್ರಯ ಪಡೆದು ಕುಷ್ಟಗಿ ತಾಲೂಕಿನ ಹಿರೇಮನ್ನಾಪುರ, ಭಾನಾಪುರ, ಕೊಪ್ಪಳ ತಾಲೂಕಿನ ಹಣವಾಳ ಮುಖಾಂತರ ಹಿರೇಸಿಂಧೋಗಿಗೆ ಬಂದು ತಾವು ತಂದಿದ್ದ ಕರೆಕಲ್ಲನ್ನು ಪೂಜಿಸುತ್ತಿದ್ದರು. ಆ ಕರೆಕಲ್ಲು ಅಲ್ಲಿಯೇ ಕೂಸಿದು ಬಿದ್ದಿತು. ಎಲ್ಲರೂ ಪ್ರಯತ್ನಿಸಿದರು ಮೇಲೆ ಎತ್ತಲಾಗಲಿಲ್ಲ. ಹೀಗಾಗಿ ಬೀರದೇವರ ಗುಡಿಯನ್ನು ಸ್ಥಾಪಿಸಿದರು. ನಂತರ ಈ ಪ್ರದೇಶವು ಕಾತರಕಿಯ ದೇಸಾಯಿಯ ಅಧೀನಕ್ಕೆ ಬಂದಿತು. ನಂತರ ಬಿಸರಳ್ಳಿ ಎಂಬ ಊರನ್ನು ನಿರ್ಮಿಸಿದರು. ಈ ಕುರುಬರ ಅಲ್ಲಿಯ ಪೊಲೀಸಗೌಡರಾದರು. ಇವರು ಹಿರೇಸಿಂಧೋಗಿ ಗ್ರಾಮದಲ್ಲಿ ಬೀರದೇವರ ಮೂರ್ತಿಯನ್ನು ಪ್ರತಿಸ್ಥಾಪಿಸಿದರು. ಇಂದಿಗೂ ಇರುವ ಈ ದೇವಾಲಯವು ಎರಡು ಗರ್ಭಗೃಹಗಳು ಮತ್ತು ತೆರೆದ ಸಭಾ ಮಂಟಪ ಹೊಂದಿದೆ. ಎಡಬದಿಯ ಗರ್ಭಗೃಹದಲ್ಲಿ ಕೀರ್ತಿಮುಖ ಮತ್ತು ಬೀರಲಿಂಗೇಶ್ವರ ಶಿಲ್ಪಗಳಿವೆ.[೧೮] ಈ ದೇವಾಲಯದಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಶಿವರಾತ್ರಿಯಲ್ಲಿ ನಡೆಯುವ ಎರಡು ದಿನದ ಜಾತ್ರೆಯಲ್ಲಿ ಹಲವೆಡೆಯಿಂದ ಜನರು ಆಗಮಿಸುತ್ತಾರೆ. ದೇವರ ಅಲಂಕಾರ, ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಭಕ್ತರು ತಮ್ಮ ಹರಕೆಗಳನ್ನು ನೆರವೇರಿಸಿಕೊಳ್ಳುತ್ತಾರೆ. ಅಂದು ಬೀರದೇವನಿಗೆ ಗೋಧಿಹುಗ್ಗಿ, ಅನ್ನದ ಪ್ರಸಾದ ಮಾಡುತ್ತಾರೆ. ಮಾಂಸಹಾರದ ನೈವೇದ್ಯ ಮಾಡುವಂತಿಲ್ಲ. ಹೀಗಾಗಿ ಭಕ್ತರು ಸ್ವಲ್ಪ ದೂರದಲ್ಲಿರುವ ದೇವಿಗೆ ಕುರಿಬಲಿ ನೀಡುತ್ತಾರೆ. ಜಾತ್ರೆಯ ದಿನದಂದು ರಾತ್ರಿಯಿಡಿ ಪುರಾಣ ಪ್ರವಚನ ನಡೆಯುತ್ತದೆ. ಹೀಗೆ ಇತರ ಬೀರದೇವರ ದೇವಾಲಯಗಳಲ್ಲೂ ಜಾತ್ರೆ, ಉತ್ಸವಗಳು ನಡೆಯುತ್ತವೆ.

### ೬.೧.೨ ರೇವಣಸಿದ್ಧೇಶ್ವರ

ರೇವಣಸಿದ್ಧೇಶ್ವರ ಕುರುಬರ ಕುಲಗುರುವಾಗಿದ್ದಾರೆ. ಇವರಿಗೆ ರೇವಣಸಿದ್ಧೇಶ್ವರ, ರೇಣುಕಾಚಾರ್ಯ, ಸಿದ್ಧೇಶ್ವರ, ಕರಿಸಿದ್ಧೇಶ್ವರ, ಕಾಡಸಿದ್ಧೇಶ್ವರ, ಚೆನ್ನಮಲ್ಲೇಶ, ಮಳೆಯಮಲ್ಲೇಶ, ದೊಡ್ಡಯ್ಯ, ಭೀಮೇಶ್ವರ, ಡಿಳ್ಳಿಯಪ್ಪ ಹಾಗೂ ಪಿಣ್ಣಾಕ ಎಂಬ ಅನೇಕ ಹೆಸರುಗಳಿರುವುದು ಕಂಡುಬರುತ್ತದೆ.[೧೯] ತಮ್ಮ ಕಾಲಾವಧಿಯಲ್ಲಿ ಧಾರ್ಮಿಕವಲ್ಲದೆ, ಸಾಮಾಜಿಕ, ರಾಜಕೀಯ ಕ್ಷೇತ್ರಗಳ ಮೇಲೆಯೂ ವಿಪುಲ ಪ್ರಭಾವ ಬೀರಿದ್ದಾರೆ. ಹೀಗಾಗಿ ವೀರಶೈವ ಮತ್ತು ಕುರುಬ ಸಮಾಜದಲ್ಲಿ ಲಿಖಿತ ಮತ್ತು ಅಲಿಖಿತ ಮಾಧ್ಯಮಗಳ ಮೂಲಕ ವ್ಯಾಪಕವಾಗಿ ಹರಡಿರುವುದು ಕಂಡುಬರುತ್ತದೆ.

ರೇವಣಸಿದ್ಧೇಶ್ವರರ ಜೀವನದ ಬಗ್ಗೆ ತಿಳಿಯಲು ಅನೇಕ ಪುರಾಣಗಳು ಹಾಗೂ ಡೊಳ್ಳಿನ ಹಾಡುಗಳು ಸಹಾಯಕವಾಗಿವೆ. ಒಂದು ಪುರಾಣದ ಪ್ರಕಾರ ಒಂದು ದಿನ ಕೈಲಾಸದಲ್ಲಿ ಶಿವನ ಸಮ್ಮುಖದಲ್ಲಿ ದೇವ-ದೇವತೆಗಳು ಬೃಂಗಿಯ ನೃತ್ಯ ನೋಡುತ್ತಿರುತಾರೆ. ಶಿವನ ದರ್ಶನಕ್ಕಾಗಿ ರೇವಣನು ಬರುವಾಗ ಅವನ ಪಾದ ದಾರುಕಮುನಿಗೆ ಬಡಿಯುತ್ತದೆ. ಇದನ್ನು ತಿಳಿದ ಶಿವನು ದಾರುಕನನ್ನು ಸಮಾಧಾನ ಪಡಿಸುತ್ತಾನಲ್ಲದೆ, ರೇವಣಸಿದ್ಧನಿಗೆ ನರಜನ್ಮ ಪ್ರಾಪ್ತವಾಗುವಂತೆ ಶಾಪ ನೀಡುತ್ತಾನೆ. ಶಿವನ ಆದೇಶದಂತೆ ರೇವಣಸಿದ್ಧರು ಭೂಲೋಕದಲ್ಲಿ ಜನಿಸುತ್ತಾರೆ.[೨೦]

ಹಾಲುಮತದ ಮುದ್ದಗೊಂಡ ಮುದ್ದಪ್ಪ ದಂಪತಿಗಳ ಏಳು ಜನ ಮಕ್ಕಳಲ್ಲಿ ಕೊನೆಯವನೇ ಉಂಡಾಡು ಪದ್ಮಗೊಂಡ. ಇವನು ಕುರುಬರ ಮೂಲ ಪುರುಷ. ಇವನ ಮೊದಲ ಹೆಂಡತಿಯಾದ ಜೆಂಕಾದೇವಿಯಲ್ಲಿ ಜಗ್ಗಲಿ ಮುತ್ತಯ್ಯ, ಸಹಾಯ ಮುತ್ತಯ್ಯ ಸೋಹ ಮುತ್ತಯ್ಯ, ಶಾಂತಿಮಯಮುತ್ತಯ್ಯ, ಮತ್ತು ದೇವರಾಜ ಎಂಬ ಐದು ಜನ ಮಕ್ಕಳು ಜನಿಸುತ್ತಾರೆ. ಇವರಲ್ಲಿ ನಾಲ್ಕನೇ ಮಗನಾದ ಶಾಂತಿಮಯ ಮುತ್ತಯ್ಯನ ಮಗನೇ ರೇವಣಸಿದ್ಧ.[೨೧] ಕೊಲ್ಲಿಪಾಕಿಯ ಸೀಮೆಯಲ್ಲಿ ಶಾಂತಿಮಯಮುತ್ತಯ್ಯ ಮತ್ತು ಮಹಾದೇವಿಗೆ ಜನಿಸಿದನು. ಶಾಂತಿಮಯ್ಯನು ಶಿವಭಕ್ತನಾಗಿದ್ದು, ಕೆಲವು ಸಮಾಜಹಿತ ಕಾರ್ಯಗಳನ್ನು ಮಾಡುತ್ತಿದ್ದನು.

ರೇವಣಸಿದ್ಧರು ಕ್ರಿ.ಶ. ೧೧೧೦ರಲ್ಲಿ ಜನಿಸಿ ಕ್ರಿ.ಶ. ೧೧೧೭ರಲ್ಲಿ ನಿಧನರಾದರೆಂದು ತಿಳಿದು ಬರುತ್ತದೆ. ಅಂದರೆ ೧೦೭ ವರ್ಷ ಬದುಕಿದ್ದರೆಂದು ತಿಳಿಯುತ್ತದೆ.[೨೨] ೧೧೨೭ರ ಕಕ್ಕೇರಿ ಶಾಸನ, ೧೧೭೦ರ ಸಿರಿವಾಳ ಶಾಸನ, ಹಾಗೂ ೧೧೭೫ರ ಹೋತಗಲ್ಲಾ ಶಾಸನಗಳು ಬಸವ ಚಳುವಳಿಯ ಕೊನೆಯ ಘಟ್ಟದಲ್ಲಿಯೇ ರೇವಣಸಿದ್ಧರಿದ್ದರೆಂದು ತಿಳಿಸುತ್ತವೆ.

ರೇವಣಸಿದ್ಧ ಕಾಯಕಜೀವಿ ಹಾಗೂ ಸಮಾಜದ ಹಿತಕ್ಕಾಗಿ ದುಡಿಯುವವನಾಗಿದ್ದನು. ಕಲ್ಯಾಣದಲ್ಲಿ ಭೀಕರ ಬರಗಾಲ ಉಂಟಾದಾಗ ತಮ್ಮ ಹೆಂಡತಿಯರೊಡನೆ ಕೂಡಿ ಕೆರೆ ತೋಡಿಸುತ್ತಾನೆ. ಮಂಗಳವಾಡದಲ್ಲಿ ಗಾಣದ ಕಲ್ಲಿಸಟ್ಟಿಯ ಮನೆಯಲ್ಲಿ ಗಾಣ ಹೊಡೆದು ಅವನ ಬಡತನ ನಿವಾರಿಸುತ್ತಾನೆ.[೨೩]

ಮಾಯಿದೇವಿ ಎಂಬ ವೇಶ್ಯೆಯ ಮನೆಯಲ್ಲಿ ನೀರು ತರುವ ಕೆಲಸಮಾಡುತ್ತಿದ್ದನೆಂದು ಹರಿಹರ ತನ್ನ ಕೃತಿಯಲ್ಲಿ ತಿಳಿಸಿದ್ದಾನೆ.[೨೪] ಕಾಲಾನಂತರ ಮಾಯಿದೇವಿ ಹಾಗೂ ರೇವಣಸಿದ್ಧರಿಗೆ ದೈಹಿಕ ಸಂಪರ್ಕವಾಗಿ ರೇವಕ್ಕ ಜನಿಸುತ್ತಾಳೆ. ಕಲ್ಯಾಣದಲ್ಲಿ ಕ್ರಾಂತಿಯಾದಾಗ ಇವರು ಬೆಂಗಳೂರು ಜಿಲ್ಲೆಯ ರಾಮನಗರ ಹತ್ತಿರದ ರೇವಣಸಿದ್ಧೇಶ್ವರ ಬೆಟ್ಟಕ್ಕೆ ಮಾಯಿದೇವಿ ಹಾಗೂ ರೇವಕ್ಕಳೊಂದಿಗೆ ಬಂದು ನೆಲೆಸುತ್ತಾರೆ. ವೇಶ್ಯೆಯನ್ನು ಕೀಳಾಗಿ ಕಾಣದೆ ಕೊನೆಯವರೆಗೂ ಕೈಹಿಡಿದು ಕಾಪಾಡಿದ್ದು ಅವರ ಸಾಮಾಜಿಕ ಬದ್ಧತೆಯನ್ನು ಸೂಚಿಸುತ್ತದೆ.

ರೇವಣಸಿದ್ಧನು ಅನೇಕ ರಾಜ ಮಹಾರಾಜರಿಂದ ಪೂಜಿತನಾಗಿದ್ದಾನೆ. ದೇವಗಿರಿಯಾದವರ ೫ನೇ ಬಿಲ್ಲಮನಿಗೆ ರಾಜಗುರುವಾಗಿದ್ದನು. ಶಿಲಾಹಾರರು ಹಾಗೂ ಬಿಜ್ಜಳನ ಆಸ್ಥಾನದಲ್ಲಿ ಉತ್ತಮ ಸ್ಥಾನ ಪಡೆದಿದ್ದನು. ಬಿಜ್ಜಳ ತನ್ನ ಮಗಳನ್ನು ಶ್ರವಣಬೆಳಗೊಳ ಮೊದಲಾದ ಕಡೆಗೆ ತೀರ್ಥಯಾತ್ರೆಗೆ ಕಳುಹಿಸುವಾಗ ರೇವಣಸಿದ್ಧನನ್ನು ಜೊತೆಗೆ ಕಳುಹಿಸಿಕೊಟ್ಟನೆಂದು ಬಿಜ್ಜಳನ ಚರಿತ್ರೆಯಿಂದ ತಿಳಿಯುತ್ತದೆ.[೨೫]

ಶಿವಭಕ್ತರನ್ನು ಸಹಿಸದ ವಿಷ್ಣುಮತದ ಅನುಯಾಯಿಯಾಗಿದ್ದ ಚೋಳರಾಜನು ವಿಷ್ಣು ಪ್ರತಿಮೆಯನ್ನು ನಿಲ್ಲಿಸಲು ಮಾಡಿದ ಪ್ರಯತ್ನಗಳು ವಿಫಲವಾಗುತ್ತವೆ. ಹೀಗಾಗಿ ಹಿತೈಷಿಗಳ ಸಲಹೆಯಂತೆ ಕುಲೋತ್ತುಂಗಚೋಳ ರೇವಣಸಿದ್ಧನನ್ನು ಬೇಡಿಕೊಳ್ಳುತ್ತಾನೆ. ರೇವಣಸಿದ್ಧ ವಿಷ್ಣು ಪ್ರತಿಮೆಯನ್ನು ನಿಲ್ಲಿಸಿದನಲ್ಲದೇ, ಚೋಳರಾಜ ಶಿವಮತ ಸ್ವೀಕರಿಸುವಂತೆ ಮಾಡುತ್ತಾನೆ.[೨೬] ಇದರಿಂದಾಗಿ ಚೋಳರಾಜ ತನ್ನ ಮಗಳಾದ ಸೌಂದರಿಯನ್ನು ರೇವಣಸಿದ್ಧನಿಗೆ ಕೊಟ್ಟು ವಿವಾಹ ಮಾಡುತ್ತಾನಲ್ಲದೆ, ಆನೇಕಲ್ ರಾಜಾಪುರದಲ್ಲಿ ಒಂದು ಗುರುಮಠ ನಿರ್ಮಿಸಿಕೊಟ್ಟನು.

೧೨ನೇ ಶತಮಾನದಲ್ಲಿ ಬಿಜ್ಜಳನಿಂದ ಕಾಡಿಗೆ ದೂಡಲ್ಪಟ್ಟ ಕುರುಬರನ್ನು ಸಂಘಟಿಸಿದನು. ಉನ್ನತ ವರ್ಗದವರಿಂದ ಶೋಷಿಸಲ್ಪಡುತ್ತಿದ್ದ ಕುರುಬರಿಗೆ ಒಡೆಯರು ಎಂಬ ವರ್ಗವನ್ನು ಸೃಷ್ಟಿಸಿದನು. ೧೨ನೇ ಶತಮಾನದಲ್ಲಿ ರೇವಣಸಿದ್ಧನ ನಾಥಪಂಥ ಎಲ್ಲೆಡೆ ಹರಡಿತು. ೧೬ ಮತ್ತು ೧೭ನೇ ಶತಮಾನದಲ್ಲಿ ರೇವಣಸಿದ್ದರ ಹೆಸರಿನಲ್ಲಿ ಬಾಳೆಹಳ್ಳಿ ಪೀಠ ದಕ್ಷಿಣ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದಿತು.[೨೮] ಈ ಪೀಠದ ಮಠಗಳು ಉತ್ತರ-ದಕ್ಷಿಣ ಭಾಗಗಳಲ್ಲಿ ಹರಡಿದವು.

ರೇವಣಸಿದ್ಧರ ಮಠಗಳು ಕರ್ನಾಟಕದಾದ್ಯಂತ ಸ್ಥಾಪಿಸಲ್ಪಟ್ಟವು. ಉತ್ತರ ಕನ್ನಡ ಜಿಲ್ಲೆ-೨, ಕೊಡಗು ಜಿಲ್ಲೆ-೨, ಕೋಲಾರ ಜಿಲ್ಲೆ-೪, ಗದಗ ಜಿಲ್ಲೆ-೧೧, ಗುಲ್ಬರ್ಗ ಜಿಲ್ಲೆ-೪೬, ಚಾಮರಾಜನಗರ ಜಿಲ್ಲೆ -೬, ಚಿಕ್ಕಮಂಗಳೂರ ಜಿಲ್ಲೆ-೭, ಚಿತ್ರದುರ್ಗ ಜಿಲ್ಲೆ-೧, ದಾವಣಗೆರೆ ಜಿಲ್ಲೆ-೬, ಧಾರವಾಡ ಜಿಲ್ಲೆ-೭, ಬಳ್ಳಾರಿ ಜಿಲ್ಲೆ-೫, ಬಿಜಾಪುರ ಜಿಲ್ಲೆ- ೩೮, ಬೀದರ ಜಿಲ್ಲೆ-೬, ರಾಯಚೂರು ಜಿಲ್ಲೆ-೧೦, ಹಾಸನ ಜಿಲ್ಲೆ-೨, ಹಾವೇರಿ ಜಿಲ್ಲೆ-೧೭, ಅದೇ ರೀತಿ ಕೊಪ್ಪಳ ಜಿಲ್ಲೆಯಲ್ಲಿ-೧೩ ಗುರುಮಠಗಳಿವೆ.[೨೯] ಈ ಮಠಗಳು ತಮ್ಮದೇ ಆದ ಭಕ್ತವರ್ಗವನ್ನು ಹೊಂದಿವೆ.

ಕೊಪ್ಪಳದಲ್ಲಿರುವ ಕೊರಡಕೇರಿ, ಬಸವಪಟ್ಟಣ, ಕೊಪ್ಪಳ, ಕುಕನೂರು, ಬಿಸರಳ್ಳಿ, ಹಿರೇಸಿಂದೋಗಿ, ಚಿಕ್ಕಸಿಂದೋಗಿ ಮೊದಲಾದ ಪ್ರದೇಶಗಳಲ್ಲಿ ಮಠಗಳಿವೆ. ಈ ಮಠಗಳಲ್ಲಿ ರೇವಣಸಿದ್ಧೇಶ್ವರ ಹಾಗೂ ಅಮೋಘಸಿದ್ಧೇಶ್ವರನನ್ನು ಆರಾಧಿಸಲಾಗುತ್ತದೆ. ಮಠಗಳ ಗುರುಗಳನ್ನು ಒಡೆಯರು ಎನ್ನಲಾಗಿದೆ. ರೇವಣಸಿದ್ಧೇಶ್ವರನ ಕೃಪೆಯ ಮೇರೆಗೆ ಪ್ರಾರಂಭಗೊಂಡ ಮಠಗಳು ಭಕ್ತರ ಏಳ್ಗೆಗೆ ಶ್ರಮಿಸುತ್ತಿವೆ. ಬಿಜಾಪುರ ಜಿಲ್ಲೆಯ ಸರೂರು ಮೂಲ ಮಠವಾಗಿದ್ದು ಪ್ರತಿವರ್ಷ ಜಾತ್ರೆ ನಡೆಸುತ್ತಾರೆ. ಅದೇ ರೀತಿ ಕೊಪ್ಪಳ ಭಾಗದಲ್ಲಿರುವ ಮಠಗಳು ರೇವಣಸಿದ್ದೇಶ್ವರನ ಜಾತ್ರೆ ಮತ್ತು ಉತ್ಸವಗಳನ್ನು ಶಿವರಾತ್ರಿ, ಬದಾಮಿ ಅಮವಾಸಿ, ಕಾರ್ತಿಕ ಮಾಸ, ಯುಗಾದಿ ದಿನಗಳಲ್ಲಿ ನೆರವೇರಿಸುತ್ತವೆ. ಭಕ್ತರು ಹಲವಡೆಗಳಿಂದ ಆಗಮಿಸುತ್ತಾರೆ.

ಒಟ್ಟಾರೆ ರೇವಣಸಿದ್ಧೇಶ್ವರ ಗುರುಮಠವನ್ನು ಹೊಂದಿದ ಕುರುಬರು ಒಂದು ಹೊಸ ಸ್ವರೂಪವನ್ನು ಪಡೆದುಕೊಂಡರೆಂದು ಹೇಳಬಹುದು. ಹೀಗಾಗಿ ಬೀರೇಶ್ವರ ಕುರುಬರ ಕುಲದೇವರಾದರೆ, ರೇವಣ ಸಿದ್ಧೇಶ್ವರ ಕುರುಬರ ಕುಲಗುರುವಾಗಿರುವುದು ಕಂಡುಬರುತ್ತದೆ.

### ೬.೧.೩ ಮೈಲಾರಲಿಂಗ

ಮೈಲಾರಲಿಂಗೇಶ್ವರ ಕುರುಬರ ಆರಾಧ್ಯ ದೈವಗಳಲ್ಲಿ ಪ್ರಮುಖನಾಗಿದ್ದಾನೆ. ಕುರುಬರ ಆರಾಧ್ಯದೈವನಾದ ಮೈಲಾರಲಿಂಗ ಬೆಟ್ಟದ ದೇವರು.[೩೦] ಮೂಲತ ಬೇಟೆ ಸಂಸ್ಕೃತಿಗೆ ಸೇರಿದ ದೇವತೆಯಾಗಿದ್ದು. ಕುರುಬರ ಪ್ರಾಚೀನ ದೇವರುಗಳಲ್ಲಿ ಒಬ್ಬನಾಗಿದ್ದಾನೆ. ಈ ದೇವರು ಕರ್ನಾಟಕ, ಮಹಾರಾಷ್ಟ್ರ, ಆಂಧ್ರದ ಭಕ್ತರಿಗೆ ವಿಶೇಷವಾದ ಒಂದು ಜೀವಂತ ದೈವೀಶಕ್ತಿ ಎನ್ನಬಹುದಾಗಿದೆ. ಧಾರವಾಡ ಜಿಲ್ಲೆಯ ದೇವರ ಗುಡ್ಡ ಹಾಗೂ ಬಳ್ಳಾರಿ ಜಿಲ್ಲೆಯ ಮಣ್ಣ ಮೈಲಾರ ಮೈಲಾರಲಿಂಗನ ಮೂಲ ಕ್ಷೇತ್ರಗಳೆಂದು ಪ್ರಸಿದ್ಧಿಗೊಂಡಿವೆ. ಕುರುಬರಲ್ಲದೆ ಪ್ರತಿಯೊಂದು ಸಮುದಾಯದವರೂ ಮನೆದೇವರನ್ನಾಗಿ ಸ್ವೀಕರಿಸಿರುವುದು ಮೈಲಾರಲಿಂಗ ದೇವರ ಜನಪ್ರಿಯತೆಗೆ ಪ್ರಮುಖ ಸಾಕ್ಷಿಯಾಗಿದೆ.

ಮೈಲಾರಲಿಂಗನ ಸೃಷ್ಟಿಯ ಬಗ್ಗೆ ಪುರಾಣದಲ್ಲಿ ಒಂದು ಕಥೆಯಿದೆ. ಮಣಿಚೂಲ ಪರ್ವತದಲ್ಲಿ ಮಣಿ, ಮಲ್ಲಾಸುರರೆಂಬ ದೈತ್ಯರು ಬ್ರಹ್ಮನು ಕೊಟ್ಟ ವರದಿಂದ ಚಿರಂಜೀವಿಗಳಾದರು. ನಂತರ ಮುನಿಗಳ ಯಜ್ಞ ಯಾಗಾದಿಗಳನ್ನು ನಾಶಪಡಿಸತೊಡಗಿದರು. ದೈತ್ಯರ ಉಪಟಳದಿಂದ ತಮ್ಮನ್ನು ರಕ್ಷಿಸಬೇಕೆಂದು ಮುನಿಗಳು ವಿಷ್ಣುವಿನಲ್ಲಿ ಮೊರೆಯಿಟ್ಟರು. ದೈತ್ಯರು ದೇವ-ದಾನವರಿಂದ ಮರಣ ಹೊಂದದ ವರ ಪಡೆದುಕೊಂಡಿದ್ದರು. ಹೀಗಾಗಿ ವಿಷ್ಣು ಶಿವನಲ್ಲಿ ಪ್ರಾರ್ಥಿಸಿಕೊಂಡನು.

ದೇವತೆಗಳ ಆಗ್ರಹದ ಮೇರೆಗೆ ಶಿವನು ಮಾರ್ತಂಡ ಭೈರವನಾಗಿ ತನ್ನ ಜಡೆಯಿಂದ ಮೂಡಿದ ಮಹಾಮಾಯೆಯೊಂದಿಗೆ ಕೂಡಿ ಯುದ್ಧಕ್ಕೆ ಸಿದ್ಧನಾದನು. ವಿಲಕ್ಷಣ ವೇಷಧರಿಸಿ ಗುಡಿಗಿದಾಗ ಅವನ ಕೋಪದಿಂದ ನಾಯಿ, ವೀರಭದ್ರ, ಜಯನಂದಿ, ಹೆಗ್ಗಯ್ಯ, ಮೊದಲಾದ ಏಳುಕೋಟಿ ಸೈನ್ಯ ಸೃಷ್ಟಿಗೊಂಡಿತು. ಸೈನ್ಯದೊಡನೆ ಕುದುರೆ ಏರಿ ಮಣಿ-ಮಲ್ಲಾಸುರರ ಮೇಲೆ ಯುದ್ಧ ಪ್ರಾರಂಭಿಸಿದನು. ನಿರಂತರವಾಗಿ ಹನ್ನೊಂದು ದಿನಗಳವರೆಗೆ ನಡೆದ ಯುದ್ಧದಲ್ಲಿ ರಾಕ್ಷಸರ ಸಂಹಾರ ಮಾಡಿದನು ಮಲ್ಲಾ-ಸುರರನ್ನು ಸಂಹಾರ ಮಾಡಿದ್ದರಿಂದ ತನ್ನನ್ನು ಮಲ್ಹಾರಿಲಿಂಗ ಅಥವಾ ಮೈಲಾರಲಿಂಗ ಎಂದು ಕರೆಯುವಂತೆ ಆಜ್ಞಾಪಿಸಿದನು.[೫೧] ಅಂದಿನಿಂದ ಶಿವ ಮೈಲಾರಲಿಂಗನ ರೂಪದಲ್ಲಿ ಆರಾಧಿಸಲ್ಪಟ್ಟನು.

ಯುದ್ಧವಾಡುವ ಸಂದರ್ಭದಲ್ಲಿ ಶಿವ ಗೊರವಯ್ಯನವೇಷ ಧರಿಸಿ ಬಂದವನಾಗಿದ್ದರಿಂದ ಗೊರವರಿಗೆ ಮೈಲಾರಲಿಂಗನೇ ಮೂಲ ಎಂಬ ಪ್ರತೀತಿಯಿದೆ. ಮೈಲಾರಲಿಂಗ ಗೊರವರಿಗೆ ದೀಕ್ಷೆ ನೀಡಿ ಮೂರು ಕವಡೆಕಟ್ಟಿ, ಐದು ಭಂಡಾರ ಬಟ್ಟಲು, ಐದು ಡಮರುಗ, ತ್ರಿಶೂಲಗಳನ್ನು ನೀಡಿ ದೋಣಿ ಸೇವೆ ಮಾಡಿಸಿದನೆಂಬ ಪ್ರತೀತಿಯಿದೆ. ಹೀಗಾಗಿ ಗೊರವಯ್ಯಗಳು ಮೈಲಾರಲಿಂಗನ ಪ್ರತಿರೂಪ ಎಂಬ ನಂಬಿಕೆಯಿದೆ.

ಜಾನಪದ ಪರಂಪರೆಯಂತೆ ಮೈಲಾರನ ಸ್ವರೂಪವು ವಿಶಿಷ್ಟವಾಗಿದೆ. ಮೈಮೇಲೆ ಕಂಬಳಿಯಿಂದ ಮಾಡಿದ ಕಂತೆ, ತಲೆಯ ಮೇಲೆ ಮುರುಗಿ,-ಮುಂಡಾಸ, ಕೈಯಲ್ಲಿ ತ್ರಿಶೂಲ, ಡಮರು, ಭಂಡಾರದ ಚೀಲ, ಗಂಟೆ ಮತ್ತು ಡೋಣಿ ಮೊದಲಾದವುಗಳನ್ನು ಹೊಂದಿದ್ದನೆಂದು ತಿಳಿಯುತ್ತದೆ.[೫೨] ಮೈಲಾರಲಿಂಗ, ಮಾಲತೇಶ, ಮಾರ್ತಾಂಡಭೈರವ, ಮಲ್ಲಯ್ಯ, ಗುಡ್ಡದಯ್ಯ ಎಂಬುದಾಗಿ ಅನೇಕ ಹೆಸರುಗಳಿಂದ ಸಂಬೋಧಿಸುತ್ತಾರೆ. ಆದರೆ ದೇವರ ಹೆಸರನ್ನು ಹಿಡಿದು ಉದ್ಘೋಷಿಸುವಾಗ ಮಾತ್ರ ತಪ್ಪದೆ ಏಳು ಕೋಟಿಯೆಂದು ಘೋಷಿಸುತ್ತಾರೆ. ಇದಕ್ಕೆ ಶಾಸನಗಳು ಸಮರ್ಥನೆ ನೀಡುತ್ತವೆ.

ಮೈಲಾರಲಿಂಗನನ್ನು ಅನೇಕ ರಾಜಮನೆತನದವರು ತಮ್ಮ ಕುಲದೇವರನ್ನಾಗಿ ಮಾಡಿಕೊಂಡಿದ್ದರೆಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಚಾಲುಕ್ಯ ಸಾಮ್ರಾಟ ತ್ರಿಭುವನಮಲ್ಲ ಐದನೆಯ ವಿಕ್ರಮಾದಿತ್ಯನು ಏಳ್ಕೋಟಿ ತಪೋಧನರ ಸೂತ್ರಕ್ಕೆ ೧೨ ಮತ್ತರು ಭೂಮಿಯನ್ನು ದತ್ತಿಯಾಗಿ ಬಿಟ್ಟನು ಎಂದು ಶಾಸನ ಉಲ್ಲೇಖಿಸುತ್ತದೆ.[೫೩]

ಕಲ್ಯಾಣದ ಚಾಲುಕ್ಯರ ೧ನೇ ಸೋಮೇಶ್ವರ ಮತ್ತು ೨ನೇ ಸೋಮೇಶ್ವರನ ಪತ್ನಿಯ ಹೆಸರು ಮೈಳಲದೇವಿ ಎಂದಿತ್ತು ಎಂದು ಅಣದೂರ ಶಾಸನ ಉಲ್ಲೇಖಿಸುತ್ತದೆ.[೫೪] ಮೈಲಾರದಲ್ಲಿರುವ ಹೆಗ್ಗಪ್ಪನ ಪ್ರಾಚೀನ ಮೂರ್ತಿ ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ಹೀಗಾಗಿ ೧೧ನೇ ಶತಮಾನದ ಆದಿಭಾಗದಲ್ಲೇ ಮೈಲಾರ ದೇವರು ಪ್ರಖ್ಯಾತಿಗೊಂಡ ದೇವರಾಗಿದ್ದರೆಂಬುದು ಸ್ಪಷ್ಟ

ವಿಜಯನಗರ ಅರಸರು ಮೈಲಾರ ದೇವರಿಗೆ ಅನೇಕ ದಾನ ದತ್ತಿಗಳನ್ನು ಬಿಟ್ಟ ಬಗ್ಗೆ ಉಲ್ಲೇಖಗಳಿವೆ ಕ್ರಿ.ಶ. ೧೪೧೨ರಲ್ಲಿ ಮೈಲಾರದೇವರ ಭಂಡಾರಿಯಾದ ಗಂಗರಸನು ಮಾಳಲದೇವಿಗೆ ಸುಖನಾಸಿ ಸಭಾಮಂಟಪವನ್ನು ಕಟ್ಟಿಸಿದ ಉಲ್ಲೇಖವಿದೆ.[೩೫]

ಮೈಲಾರಲಿಂಗ, ಖಂಡೋಬಾ ದೇವರ ೧೨ ತೀರ್ಥಕ್ಷೇತ್ರಗಳಿವೆ.[೩೬] ಅವುಗಳಲ್ಲಿ ೭ ಮಹಾರಾಷ್ಟ್ರದಲ್ಲಿ ಹಾಗೂ ೫ ಕರ್ನಾಟಕದಲ್ಲಿವೆ. ಮಹಾರಾಷ್ಟ್ರದವರು "ಖಂಡೋಬಾ" ಎಂಬ ಹೆಸರಿನಿಂದ ಹಾಗೂ ಕರ್ನಾಟಕದವರು "ಶ್ರೀಮಲ್ಲಯ್ಯ" ಎಂಬ ಹೆಸರಿನಿಂದ ಕರೆಯುತ್ತಾರೆ. ಪ್ರಮುಖವಾದ ತೀರ್ಥಕ್ಷೇತ್ರಗಳೆಂದರೆ ೧) ಜೆಜೂರಿ(ಪುಣೆ) ೨) (ಸಾತಾರಾ) ೩) ಮಂಗಸೂಳಿ(ಬೇಳಗಾವ) ೪) ದೇವರಗುಡ್ಡ (ರಾಣೆಬೆನ್ನೂರು) ೫) ಮೈಲಾರಲಿಂಗ(ಖಾನಾಪುರ) ೬) ಮೈಲಾಪುರ(ಯಾದಗಿರಿ) ೭) ಆದಿಮೈಲಾರ (ಬೀದರ) ೮) ಅಣದೂರ (ಉಸ್ಮನಾಬಾದ) ೯) ಮಾಳೆಗಾವ (ನಾಂದೆಡ) ೧೦) ಸಾತಾರೆ(ಔರಂಗಬಾದ) ೧೧) ಶೇಗಿಡ(ಅಹ್ಮದನಗರ) ೧೨) ನಿಮಗಾವ ದಾವಡಿ (ಪುಣೆ). ಈ ಕ್ಷೇತ್ರಗಳಲ್ಲೆಲ್ಲ ಭಕ್ತರು ಪ್ರತಿವರ್ಷ ಜಾತ್ರೆಯನ್ನು ನೆರವೇರಿಸುವುದು ಕಂಡುಬರುತ್ತದೆ.

ಮೈಲಾರನ ಮೂಲ ಸ್ಥಳವೆಂದು ನಂಬಿರುವ ಬಳ್ಳಾರಿ ಜಿಲ್ಲೆಯ ಮೈಲಾರ ಕ್ಷೇತ್ರಕ್ಕೆ ಭಕ್ತರು ಪ್ರತಿವರ್ಷ ಭಾರತ ಹುಣ್ಣಿಮೆಯಂದು ಜಾತ್ರೆಗೆ ಹೋಗುತ್ತಾರೆ ಅಲ್ಲಿ ನಡೆಯುವ ಪಲ್ಲಕ್ಕಿ ಉತ್ಸವ, ಕಾರ್ಣಿಕೋತ್ಸವ, ಕಡುಬಿನ ಕಾಳಗ, ಪವಾಡಗಳನ್ನು ವೀಕ್ಷಿಸುತ್ತಾರೆ. ಭಕ್ತರು ದೇವರಿಗೆ ಪೂಜೆ ಸಲ್ಲಿಸಿ ಕೆಲವು ಹರಕೆಗಳನ್ನು ಸಲ್ಲಿಸುತ್ತಾರೆ. ದೋಣಿ ತುಂಬಿಸಿ ಪರುವು ಮಾಡುವ ಕಾರ್ಯಕ್ರಮಗಳು ನಡೆಯುತ್ತವೆ. ಗೊರವರು ಕುದುರೆಕಾರರು ಸೇವೆ ಸಲ್ಲಿಸುತ್ತಾರೆ. ಅಲ್ಲದೆ ಕಾರ್ಣಿಕದ ದಿನದಂದು ಹೇಳುವ ವಾಣಿಯನ್ನು ತಮ್ಮ ದೈನಂದಿನ ಜೀವನಕ್ಕೆ ಹೋಲಿಸಿಕೊಳ್ಳುವುದು ಕಂಡುಬರುತ್ತದೆ.

ಕೊಪ್ಪಳ ಜಿಲ್ಲೆಯ ಕುರುಬರಲ್ಲಿ ಅತ್ಯಧಿಕ ಜನ ಮೈಲಾರಲಿಂಗನ ಭಕ್ತರಿರುವುದು ಕಂಡುಬರುತ್ತದೆ. ಜನರು ಪ್ರತಿ ರವಿವಾರ ಮೈಲಾರಲಿಂಗನ ವಾರವೆಂದು ಪೂಜೆ ಸಲ್ಲಿಸುತ್ತಾರೆ. ಪ್ರತಿಯೊಂದು ವಿಶೇಷ ಹುಣ್ಣಿಮೆಯಲ್ಲೂ ದೀಪ ಬೆಳಗುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಯಲಬುರ್ಗಾ, ಹಲಗೇರಿ ಮಾದಿನೂರು ಮೊದಲಾದ ಭಾಗಗಳಲ್ಲಿ ಮೈಲಾರಲಿಂಗನ ದೇವಾಲಯಗಳನ್ನು ಕಾಣಬಹುದಾಗಿದೆ. ಅದರಲ್ಲೂ ಸಾಮಾನ್ಯವಾಗಿ ಪ್ರತಿಯೊಂದು ಊರಿನ ಹೊರಭಾಗದಲ್ಲಿ ಮೈಲಾರಲಿಂಗನ ಪ್ರತೀಕವಾದ ಶಿಬಾರಕಟ್ಟೆಯನ್ನು ನಿರ್ಮಿಸಲಾಗಿರುತ್ತದೆ. ಕೊಪ್ಪಳ, ಹಲಗೇರಿ, ಮುಧೋಳ, ರಾಜೂರು, ಸಂಗನಹಾಳ, ಕುಕನೂರು, ಚಿಕ್ಕೇನಕೊಪ್ಪ, ಯಲಬುರ್ಗಾ, ಕುದುರೆಮೋತಿ, ಲೇಬಗೇರಿ, ಬೇವೂರು, ಇರಕಲ್ಲಗಡಾ, ಎಲಮಗೇರಿ, ಕುಷ್ಟಗಿ, ಹನುಮಸಾಗರ, ಗಂಗಾವತಿ, ಕೊರಡಕೇರಿ, ತಾವರಗೇರೆ, ಗುಮಗೇರಿ, ತಳಗೇರಿ, ಮಾದಿನೂರು, ಬಹದ್ದೂರಬಂಡಿ, ಬಿಸರಳ್ಳಿ, ಹಿರೇಸಿಂಧೋಗಿ, ಅಳವಂಡಿ, ಬಸವಪಟ್ಟಣ, ಗಿಣಗೇರಿ, ಇಂದರಗಿ, ಗುಳದಳ್ಳಿ, ಗೊಂಡಬಾಳ ಮೊದಲಾದ ಪ್ರದೇಶಗಳಲ್ಲಿ ಕಾಣಬಹುದಾಗಿದೆ. ಒಂದು ಕಟ್ಟೆ ನಿರ್ಮಿಸಲಾಗಿದ್ದು, ಅದರ ಮೇಲೆ ಎರಡು ಕಂಬಗಳನ್ನು ನಿರ್ಮಿಸಲಾಗಿರುತ್ತದೆ. ಕಮಾನುಗಳ ಮೇಲೆ ತ್ರಿಶೂಲವಿರುತ್ತದೆ. ಕಟ್ಟೆಯ ಮೇಲೆ ಲಿಂಗವನ್ನು ಪ್ರತಿಸ್ಥಾಪಿಸಲಾಗಿರುತ್ತದೆ. ವಿಶೇಷ ದಿನಗಳಂದು ದೇವರಿಗೆ ಸಿಹಿಭಕ್ಷಗಳನ್ನು ಎಡೆ ಮಾಡಲಾಗುತ್ತದೆ. ಅಲ್ಲದೆ ಹಾಲು ಹಣ್ಣು ತುಪ್ಪ ಪ್ರಮುಖವಾದ ನೈವೇದ್ಯವಾಗಿರುವುದು ವಿಶೇಷ.

ಮೈಲಾರಲಿಂಗನ ಭಕ್ತರಲ್ಲಿ ಹೆಚ್ಚಾಗಿ ಕುರುಬರು ಕಂಡುಬಂದರೂ, ಎಲ್ಲ ವರ್ಗದವರು ಆರಾದಕರಾಗಿರುವುದನ್ನು

ಕಾಣಬಹುದಾಗಿದೆ ಕೊಪ್ಪಳ ಭಾಗದಲ್ಲಿರುವ ಲಿಂಗಾಯತರು, ಬ್ರಾಹ್ಮಣರು, ವಿಶ್ವಕರ್ಮ ಮೊದಲಾದವರು ಮೈಲಾರಲಿಂಗನನ್ನು ಮನೆದೇವರನ್ನಾಗಿ ಆರಾದಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮೈಲಾರಲಿಂಗ ಸರ್ವಧರ್ಮದವರಿಂದ ಆರಾದಿಸಲ್ಪಟ್ಟ ದೇವರೆಂದು ಸ್ಪಷ್ಟಪಡುತ್ತದೆ.

### ೬.೧.೪ ಅಮೋಘಸಿದ್ಧ

ಅಮೋಘಸಿದ್ಧ ಕುರುಬರ ಗುರುಗಳಾದ ಒಡೆಯರ ಮೂಲಪುರುಷ. ಇವನು ಶಿವಭಕ್ತನಾಗಿದ್ದು ಅಮೋಘವಾದ ಭಕ್ತಿಯನ್ನು ಪ್ರಕಟಮಾಡಿದ್ದರಿಂದ ಅಮೋಘಸಿದ್ಧನೆಂದು ಕರೆಯತೊಡಗಿದರು. ರೇವಣಸಿದ್ಧೇಶ್ವರನಿಂದ ಸೃಷ್ಟಿಸಲ್ಪಟ್ಟ ಗುರು ಮಠಗಳಲ್ಲಿ ಅಮೋಘಸಿದ್ಧನ ಆರಾಧನೆಯೇ ನಡೆಯುತ್ತದೆ. ಇಂದಿಗೂ ಅಮೋಘಸಿದ್ಧನ ಭಕ್ತರೆಂದು ಒಡೆಯರನ್ನು ಗುರುತಿಸಲಾಗುತ್ತದೆ. ಕುರುಬರ ಗುರುಗಳಾದ ಒಡೆಯರ ಪಂಗಡಕ್ಕೆ ಅಮೋಘಸಿದ್ಧ ಮೂಲ ಪುರುಷನಾಗಿರುವುದು ಕಂಡುಬರುತ್ತದೆ.

ಅಮೋಘಸಿದ್ಧನ ಸೃಷ್ಟಿಯ ಬಗ್ಗೆ ಪುರಾಣದಲ್ಲಿ ಈ ರೀತಿ ಹೇಳಲಾಗಿದೆ. ಭೂಲೋಕ ಸಂಚಾರ ಕೈಗೊಂಡ ಶಿವನು ಕುರಿಯ ಹಟ್ಟಿಯಲ್ಲಿದ್ದ ಹಾಲುಗಡಿಗೆಯಲ್ಲಿ ಶಿವಲಿಂಗವನ್ನಿಟ್ಟು ಹೋಗುತ್ತಾನೆ. ಆ ಶಿವಲಿಂಗ ಶಿಶುವಾಗಿ ಅರಳುತ್ತದೆ. ಆ ಶಿಶುವಿಗೆ ಅಮೋಘಸಿದ್ಧನೆಂದು ನಾಮಕರಣ ಮಾಡುತ್ತಾನೆ.[೩೭] ಅಮೋಘಸಿದ್ಧ ಬೆಳೆದು ದೊಡ್ಡವನಾದ ಮೇಲೆ ಬೀರದೇವ ಅವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಬೀರದೇವನ ಆಜ್ಞೆಯಂತೆ ಅಮೋಘಸಿದ್ಧ ಉಗ್ರ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡನಲ್ಲದೆ, ಹೋಮಗಂಬಳಿ ಹಾಗೂ ನೇಮಚಿತ್ತವನ್ನು ಪಡೆದುಕೊಳ್ಳುತ್ತಾನೆ.

ಅಮೋಘಸಿದ್ಧ ರೇವಣಸಿದ್ಧೇಶ್ವರನಿಂದ ಮಂತ್ರಬೋಧ, ಶಿವಲಿಂಗ ದೀಕ್ಷೆ ತೆಗೆದುಕೊಳ್ಳುತ್ತಾನೆ. ನಾಡಿಗೆ ಗೌಡನಾಗುವ ನಾಡಗೌಡ ಪದವಿ ಪಡೆಯುತ್ತಾನೆ. ನಂತರ ಪದ್ಮಾವತಿಯೊಂದಿಗೆ ವಿವಾಹವಾಗುತ್ತಾನೆ. ಇವರಿಬ್ಬರಿಗೆ ಅವದೂತಸಿದ್ಧ, ಬಿಳಿಯಾನಿಸಿದ್ಧ, ಸೋಮಸಿದ್ಧ, ಕನ್ಯಾಮುತ್ಯಾ, ಮತ್ತು ರೆಬ್ಬವ್ವ ಎಂಬ ಮಕ್ಕಳು ಜನಿಸುತ್ತಾರೆ. ಅಮೋಘಸಿದ್ಧನ ಪ್ರಮುಖ ಶಿಷ್ಯರೆಂದರೆ ಮಹಾಸಿದ್ಧ, ಮಂಗರಾಯ, ಮತ್ತು ಮಲಕಾರಿಸಿದ್ಧ. ಇವರೆಲ್ಲ ಮುಂದೆ ಮಹಾರಾಷ್ಟದ ಸಾಂಗಲಿ, ಸಾತಾರಾ, ಸೊಲ್ಲಾಪೂರ ಜಿಲ್ಲೆಗಳಲ್ಲಿ ಹಾಗೂ ಕರ್ನಾಟಕದ ಬೆಳಗಾವಿ, ಬಿಜಾಪುರ, ಗುಲಬರ್ಗಾ ಜಿಲ್ಲೆಗಳಲ್ಲಿ ನೆಲೆ ನಿಲ್ಲುವರಲ್ಲದೆ, ದೈವತ್ವದ ಪಟ್ಟ ಸೃಷ್ಟಿಸಿಕೊಂಡು ಆರಾಧನ ಮೂರ್ತಿಗಳಾಗಿ ಮಠಗಳನ್ನು ನಿರ್ಮಿಸುತ್ತಾರೆ.[೩೮] ಕಾಲಾನಂತರ ಇವರಿಂದ ನೂರೊಂದು ಜನ ಸಿದ್ಧ ಒಡೆಯರು, ಸಾವಿರದ ಒಂದು ಜನ ಸಿದ್ಧ ಒಡೆಯರು, ನವಕೋಟಿ ಸಿದ್ಧ ಒಡೆಯರು ಎಂಬುದಾಗಿ ಇವರ ಸಂತತಿ ಬೆಳೆದಿದೆ ಎಂಬ ಅಭಿಪ್ರಾಯವಿದೆ.

ಅಮೋಘಸಿದ್ಧ ತನ್ನ ತಪಸ್ಸು ಮತ್ತು ವಾಕ್‌ಸಿದ್ಧಿಯಿಂದ ಅಸಂಖ್ಯಾತ ಶಿಷ್ಯರನ್ನು ಹೊಂದಿದ್ದನು. ಮಾಯಾಮಕಳಾಪುರದಲ್ಲಿ ಬರಗಾಲ ಉಂಟಾಗಿ ಜನ ದೇಶಾಂತರ ಹೊರಟ್ಟಿದ್ದರು. ಆಗ ಅಮೋಘಸಿದ್ಧ ಪರಶಿವಕೊಟ್ಟ ಹೋಮಗಂಬಳಿಯನ್ನು ಬೀಸಿ ಮಳೆತರಿಸಿ ಜನರ ಕಷ್ಟವನ್ನು ಬಗೆಹರಿಸಿದನು.[೩೯] ಇದರಿಂದ ಪ್ರಭಾವಿತರಾದ ಜನರು ಅಮೋಘಸಿದ್ಧನ ಅನುಯಾಯಿಗಳಾದರು. ಹಲವೆಡೆ ಗುರುಮಠಗಳನ್ನು ಸ್ಥಾಪಿಸಿ ಕುರುಬರಿಗೆ ಗುರುಗಳನ್ನು ನೀಡಿದನು. ಕುರುಬರ ಧಾರ್ಮಿಕ ವಿದಿವಿಧಾನಗಳನ್ನು ಪೂರೈಸುವದು ಇವರ ಕಾರ್ಯವಾಗಿತ್ತು. ಗೋಕಾಕ, ಅಥಣಿ, ಸೌದತ್ತಿ, ಅಂಕಲಿ, ಶಿವಣಗಿ, ಮೊರಬ, ಸೊಲ್ಲಾಪುರ, ಕಲ್ಲೂರ,

ಸುಂಗಠಾಣ, ಅನಂತಪುರ, ಶಿರನಾಳ, ಚಂದ್ರಾಳ, ಸಿಂದಗಿ, ಮೈಲಾರಹಟ್ಟಿ ಮೊದಲಾದವು ಇವರ ಹೆಸರಿನಿಂದ ಜಾಗೃತವಾದ ಸ್ಥಳಗಳಾಗಿವೆ.[೪೦]

ಅಮೋಘಸಿದ್ಧ ಪರಂಪರೆಯವರು ಅಂದರೆ ಒಡೆಯರು ಲಿಂಗಧಾರಿಗಳಾಗಿರುತ್ತಾರೆ. ಸಸ್ಯಹಾರಿಗಳಾಗಿ ಶರಣ ಸಂಪ್ರದಾಯ ಆಚರಣೆಗಳನ್ನೇ ಪಾಲಿಸುತ್ತಾರೆ. ಕುರುಬ ಸಮುದಾಯದ ಜಂಗಮರು ಎಂದು ಕೂಡ ಹೇಳಿಕೊಳ್ಳುತ್ತಾರೆ. ಪುರುಷರು ಒಡೆಯರಾದರೆ ಸ್ತ್ರೀಯರು ಒಡೇರಮ್ಮ ಆಗುತ್ತಾಳೆ. ಕೊಪ್ಪಳ ಜಿಲ್ಲೆಯಾದ್ಯಂತ ಕಂಡುಬರುವ ಅಮೋಘಸಿದ್ಧ ಮಠಗಳು ಸಿದ್ಧ ಸಂಪ್ರದಾಯಕ್ಕೆ ಸಾಕ್ಷಿಯಾಗಿದೆ. ಈ ಭಾಗದಲ್ಲಿ ಕೊರಡಕೇರಿ, ಬಸವಪಟ್ಟಣ, ಕುಕನೂರ ಮೊದಲಾದೆಡೆ ಗುರುಮಠಗಳಿವೆ. ಈ ಮಠದವರು ಅಮೋಘಸಿದ್ಧನ ಆರಾಧಕರಾಗಿದ್ದಾರೆ. ಪ್ರತಿವರ್ಷ ಜಾತ್ರೆ, ಉತ್ಸವ, ಹಬ್ಬಗಳನ್ನು ಆಚರಿಸುತ್ತಾರೆ.

ಒಟ್ಟಾರೆ ಅಮೋಘಸಿದ್ಧನ ಗುರು ಮಠಗಳು ಅಸಂಖ್ಯಾತವಾಗಿದ್ದು ಕುರುಬ ಸಮುದಾಯದ ಸಾಮಾಜಿಕ ಧಾರ್ಮಿಕ ಶ್ರೇಯಾಭಿವೃದ್ಧಿಗೆ ಪ್ರಮುಖ ಕಾಣಿಕೆ ನೀಡುತ್ತಿವೆ. ಇಂದಿಗೂ ಕುರುಬರು ಅಮೋಘಸಿದ್ಧನ ಮಠಗಳಿಗೆ ಭಕ್ತಿ–ಭಾವದಿಂದ ನಡೆದುಕೊಳ್ಳುತ್ತಾರೆ. ಪ್ರತಿಯೊಂದು ಧಾರ್ಮಿಕ ಕಾರ್ಯಗಳಿಗೆ ತಪ್ಪದೆ ಗುರುಗಳನ್ನು ಕರೆಯಿಸುವುದು ಕಂಡುಬರುತ್ತದೆ. ಹೀಗಾಗಿ ಒಡೆಯರ ಮೂಲ ಪುರುಷನಾದ ಅಮೋಘಸಿದ್ಧ ಕುರುಬರಿಗೆ ಪ್ರಮುಖ ಆರಾಧ್ಯ ದೈವ ವಾಗಿರುವುದು ಸ್ಪಷ್ಟ.

### ೬.೧.೫ ರುದ್ರಮುನಿ ದೇವರು

ಕುರುಬರ ಕುಲಗುರುವಾದ ರೇವಣಸಿದ್ಧೇಶ್ವರ ಮಗನಾದ ರುದ್ರಮುನಿದೇವನು ಕುರುಬರ ಆರಾಧ್ಯ ದೈವಗಳಲ್ಲಿ ಒಬ್ಬನಾಗಿದ್ದಾನೆ. ಇವನು ೧೧೪೬ –೮೭ರಲ್ಲಿ ಜನಿಸಿದನು.[೪೧] ಚೋಳ ಅರಸನ ಮಗಳಾದ ಸೌಂದರಿಯನ್ನು ರೇವಣಸಿದ್ಧೇಶ್ವರ ವಿವಾಹವಾಗಿದ್ದನು. ಕಲ್ಯಾಣದಲ್ಲಿ ಕೆರೆಯನ್ನು ರೇವಣಸಿದ್ಧೇಶ್ವರ ಕಟ್ಟಿಸುತ್ತಿದ್ದನು. ತಾನೇ ಸ್ವತ ಗುದ್ದಲಿ ಹಿಡಿದು ಮಣ್ಣನ್ನು ಅಗೆಯುತ್ತಿದ್ದನಲ್ಲದೆ, ಮಣ್ಣಿನ ಪುಟ್ಟಿಯನ್ನು ತಮ್ಮ ಹೆಂಡತಿಯರ ಮೇಲೆ ಹೋರಿಸುತ್ತಿದ್ದನು. ಸೌಂದರಿ ಮಣ್ಣನ್ನು ಹೊರಲು ನಿರಾಕರಿಸಿದಳು. ಇದರಿಂದ ಕೋಪಗೊಂಡ ರೇವಣಸಿದ್ಧ ಸೌಂದರಿಯ ಉದರದಿಂದ ಮೂರು ತಿಂಗಳ ಪಿಂಡವನ್ನು ಹೊರತೆಗೆದು ರಕ್ಷಿಸಿದರೆಂಬ ಐತಿಹ್ಯವಿದೆ.

ರೇವಣಸಿದ್ಧ ಹಾಗೂ ಸೌಂದರಿಯ ಮಗನಾದ ರುದ್ರಮುನಿ ತನ್ನ ಎಂಟನೇ ವರ್ಷಕ್ಕೆ ವೀರಶೈವ ದೀಕ್ಷೆ ಪಡೆದುಕೊಂಡನು. ನಂತರ ಪ್ರಭು ವಂಶೋದ್ಧವರಾದ ಗುರುಲಿಂಗಣ್ಣಾಚಾರ್ಯರಿಂದ ಷಟಸ್ಥಲ ಜ್ಞಾನೋಪದೇಶ ಪಡೆದುಕೊಂಡನು.[೪೨] ಈ ದೀಕ್ಷೆ ಪಡೆದವರು ಮುಂದೆ ಗುರುವರ್ಗದ ಅಥವಾ ವಿರಕ್ತವರ್ಗದ ಅಧಿಕಾರವನ್ನು ಪಡೆದುಕೊಳ್ಳಬಹುದಾಗಿದೆ. ಇವರನ್ನು ದೇವರು, ದೇಶಿಕರು ಎಂದು ಕರೆಯುವುದು ಕಂಡುಬರುತ್ತದೆ.

ಕ್ರಿ.ಶ. ೧೧೬೭ರಲ್ಲಿ ಶೂನ್ಯ ಸಿಂಹಾಸನ ಎರಡನೆಯ ಚರಪಟ್ಟಾಧಿಕಾರಿಗಳಾದ ಚನ್ನಬಸವಣ್ಣನವರು ಕಲ್ಯಾಣವನ್ನು ಬಿಟ್ಟ ಹೊರಟು ಹೋದರು. ಆಗ ಪಟ್ಟಾಧಿಕಾರದ ಸ್ಥಾನಕ್ಕೆ ಸಿದ್ಧರಾಮೇಶ್ವರನನ್ನು ಆಹ್ವಾನಿಸಿದರು. ಆದರೆ ಅವರು ನಿರಾಕರಿಸಿ ರುದ್ರಮುನಿಯನ್ನು ಮೂರನೇ ಚರಪಟ್ಟಾಧಿಕಾರಿಯನ್ನಾಗಿ ನೇಮಿಸಿದರು. ನಂತರ ಕಲ್ಯಾಣದಲ್ಲಿ ದಂಗೆಯಾಗಿ ಬಿಜ್ಜಳದೇವ

ಕೊಲೆಯಾದನು. ಅದರಿಂದಾಗಿ ರೇವಣಸಿದ್ಧೇಶ್ವರ ರುದ್ರಮುನಿಯ ಶೂನ್ಯಸಿಂಹಾಸನದ ಚರಪಟ್ಟಾಧಿಕಾರವನ್ನು ಬಿಡಿಸಿದರಲ್ಲದೆ, ಕಲ್ಯಾಣದಿಂದ ಮಂಗಳವಾಡಕ್ಕೆ ಕರೆದುಕೊಂಡು ಹೋದರು. ಕಾರಣ ಬಿಜ್ಜಳನ ಮಗನಾದ ಸೋವಿದೇವ ಮಂಗಳವಾಡದಲ್ಲಿದ್ದು, ಅವನು ವೀರಶೈವರ ವಿರೋಧಿಯಾಗಿದ್ದನು. ಮಂಗಳವಾಡಕ್ಕೆ ಸೋವಿದೇವನ ಆಶ್ರಯಪಡೆದುಕೊಳ್ಳಲು ಅಲ್ಲಿಗೆ ವಲಸೆ ಹೋದರಲ್ಲದೆ, ಶೈವರಂತೆಯೇ ನಡೆದುಕೊಂಡರು. ಸೋವಿದೇವಿನ ಒಂದು ಶಾಸನದಲ್ಲಿ ರುದ್ರಮುನಿದೇವರು ಎಂದಿರದೆ "ರುದ್ರ ಶಕ್ತಿ ಮುನಿಪ" ಎಂದಿರುವುದು ಇದಕ್ಕೆ ಸಾಕ್ಷಿಯಾಗಿದೆ.[೮]

ರುದ್ರಮುನಿ ಅವಿವಾಹಿತವಾಗಿಯೇ ಜೀವ ಕಳೆದನು. ವೀರಶೈವರ ಗೋತ್ರ, ಸ್ತೋತ್ರಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಕೈಗೊಂಡನು. ರೇವಣಸಿದ್ಧ ಹಾಗೂ ರುದ್ರಮುನಿಗಳದ್ದು ಪಡುವಿಡಿ ಸೂತ್ರ, ವೀರಗೋತ್ರವಾಗಿದೆ. ವೀರಗೋತ್ರದವರ ಅಧಿಪತಿಯಾದ ವೀರಭದ್ರನ ಮೂರ್ತಿ ಅವರು ನೆಲೆಸಿದ್ದ ಪ್ರದೇಶಗಳಲ್ಲಿ ಕಂಡುಬರುತ್ತದೆ. ಶಿವಗಂಗೆ ಬೆಟ್ಟದಮೇಗಳ ಗವಿಮಠ ರೇವಣಸಿದ್ಧರ ಮುಖ್ಯ ಪೀಠವಾಗಿದೆ.[೯] ಅಲ್ಲಿ ರುದ್ರಮುನಿಯ ಸಂಕೇತವಾಗಿ ವೀರಭದ್ರನ ವಿಗ್ರಹವಿರುವುದು ಇದಕ್ಕೆ ಸಾಕ್ಷಿಯಾಗಿದೆ.

ರುದ್ರಮುನಿದೇವ ವೀರಶೈವಧರ್ಮ ಹರಡಲು ತಂದೆಯ ಜೊತೆ ಸಂಚಾರ ಕೈಗೊಂಡನೆಂದು ತಿಳಿಯುತ್ತದೆ. ಕಲ್ಯಾಣದಿಂದ ಮರಿದೇವರಗುಡ್ಡದ ಚಂಗಣಿಗೆಳ ಮಂಟಪದಲ್ಲಿದ್ದುಕೊಂಡು ಶಿವಾನುಭವಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದನು. ನಂತರ ಶಿವಗಂಗೆ, ಶ್ರೀಶೈಲ ಮೊದಲಾದ ಸ್ಥಳಗಳಲ್ಲಿ ವೀರಶೈವಧರ್ಮದ ಪ್ರಚಾರಕಾರ್ಯ ಕೈಗೊಂಡನೆಂದು ತಿಳಿಯುತ್ತದೆ.

ಕೊಪ್ಪಳ ತಾಲೂಕಿನ ಕುಕನೂರು ಗ್ರಾಮದ ಹತ್ತಿರದ ಮುಸುಕಿನ ಹಂಚಿನಹಾಳಗೆ ಹೋದನು. ಅಲ್ಲಿ ಹುಣಸೆಮರಗಳುಳ್ಳ ತೋಪಿನ ಮಧ್ಯೆಯಿದ್ದ ಒಂದು ಗವಿಯೊಳಗೆ ಪ್ರವೇಶಿಸಿ ಯೋಗ ಸಾದನೆಗೆ ಕುಳಿತುಕೊಂಡನು. ಅಂದಿನಿಂದ ಈ ಪ್ರದೇಶವನ್ನು ಗುದ್ನೇಪ್ಪನಮಠ ಎಂದು ಕರೆಯುತ್ತಾರೆ. ಇಲ್ಲಿ ಪ್ರತಿವರ್ಷವೂ ಜಾತ್ರೆ ನಡೆಯುತ್ತದೆ. ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಆಗಮಿಸುತ್ತಾರೆ. ಜಾತ್ರೆಯಲ್ಲಿ ಭಾಗಿಗಳಾಗುವವರು ರೇವಣಸಿದ್ಧೇಶ್ವರ, ರುದ್ರಮುನಿಯ ಪಡುವಿಡಿ ಸೂತ್ರದವರೆಂಬ ಅಭಿಪ್ರಾಯವಿದೆ.

ರುದ್ರಮುನಿಗಳು ಕ್ರಿ.ಶ ೧೨೦೨ರಲ್ಲಿ ಶ್ರೀ ರುದ್ರಮುನಿಕಾಲಜ್ಞಾನ ಹಾಗೂ ಕ್ರಿ.ಶ ೧೨೧೨ರಲ್ಲಿ ಶ್ರೀ ರುದ್ರಭಾರತ ಎಂಬ ಕೃತಿಯನ್ನು ರಚಿಸಿರಬಹುದೆಂಬ ಅಭಿಪ್ರಾಯವಿದೆ.[೧೦] ಕ್ರಿ.ಶ ೧೨೨೦ರಲ್ಲಿ ದೈವಾಧೀನರಾದರೆಂದು ತಿಳಿಯುತ್ತದೆ. ಹಳೆಯ ಮೈಸೂರು ಭಾಗದಲ್ಲಿ ರೇವಣಸಿದ್ಧರಿಗೆ ದೊಡ್ಡಯ್ಯ ಎಂದು, ರುದ್ರಮುನಿಗೆ ಚಿಕ್ಕಯ್ಯ ಎಂದು ಕರೆಯುತ್ತಾರೆ. ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ ದೊಡ್ಡಯ್ಯ ಚಿಕ್ಕಯ್ಯ ದೇವಾಲಯಗಳಿದ್ದು, ಪ್ರತಿವರ್ಷ ಕುರುಬರು ಜಾತ್ರೆ ನಡೆಸುತ್ತಾರೆ. ಆದರೆ ರೇವಣಸಿದ್ಧ ಹಾಗೂ ರುದ್ರಮುನಿ ದೇವರುಗಳನ್ನು ವೀರಶೈವ ಧರ್ಮದವರು ಅಧಿಕ ಸಂಖ್ಯೆಯಲ್ಲಿ ಆರಾಧಿಸುವುದು ಕಂಡುಬರುತ್ತದೆ.

**೬.೧.೬ ಮುಗಳಖೋಡದ ಯಲ್ಲಾಲಿಂಗ**

ಕುರುಬರು ಆರಾಧಿಸುವ ದೇವರುಗಳಲ್ಲಿ ಯಲ್ಲಾಲಿಂಗರು ಒಬ್ಬರಾಗಿದ್ದಾರೆ. ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಮಿರಗಿ ಎಂಬ ಚಿಕ್ಕ ಗ್ರಾಮದಲ್ಲಿ ನೆಲೆಸಿದ್ದ ಕಾಶಿಬಾಯಿ ಮತ್ತು ಶಿವಪ್ಪ ಎಂಬ ಹಾಲುಮತ (ಕುರುಬರ) ದಂಪತಿಗಳಿದ್ದರು.

ಶಿವಪ್ಪನವರು ಕುರಿಕಾಯುವ ವೃತ್ತಿಯನ್ನು ಅವಲಂಭಿಸಿದ್ದರಲ್ಲದೆ, ಕುಸ್ತಿ ಪಟುಗಳಾಗಿದ್ದರು. ತಾಯಿ ಶಿವಭಕ್ತೆಯಾಗಿದ್ದಳು. ಈ ದಂಪತಿಗಳಿಗೆ ಬಹಳ ಕಾಲದವರೆಗೂ ಮಕ್ಕಳಾಗಿರಲಿಲ್ಲವಾದ್ದರಿಂದ ಮನೆದೇವರಾದ ಜಟ್ಟಂಗರಾಯರಲ್ಲಿ ಬೇಡಿಕೊಂಡರು. ಆಗ ಜಟ್ಟಂಗರಾಯ ದೇವರ ಪೂಜಾರಿಯು ನಿಮಗೆ ಇಬ್ಬರು ಮಕ್ಕಳ ಯೋಗವಿದೆ. ಮೊದಲನೇ ಮಗನನ್ನು ಜಟ್ಟಂಗರಾಯನಿಗೆ ಬಿಡಬೇಕೆಂದು ಹೇಳಿದನು.

ಕ್ರಿ.ಶ. ೧೮೮೭ರ ಚೈತ್ರಮಾಸದ ಶುಕ್ಲಪಕ್ಷ ರವಿವಾರ ಮುಂಜಾನೆ ಯಲ್ಲಾಲಿಂಗನ ಜನನವಾಯಿತು.[೪೬] ತಂದೆ-ತಾಯಿಯರು ಯಲ್ಲಿಂಗ ಎಂದು ನಾಮಕರಣ ಮಾಡಿದರು. ಶಿವಶರಣರಿಂದ ಶಿಶುಸಂಸ್ಕಾರ ನೀಡಲಾಯಿತು. ಯಲ್ಲಿಂಗ ಅಥವಾ ಯಲ್ಲಪ್ಪ ಎಂದು ಕರೆಯಲ್ಪಡುತ್ತಿದ್ದ ಬಾಲಕ ಪ್ರೌಢಾವಸ್ಥೆಗೆ ಬಂದಾಗ ಕುರಿಕಾಯುವ ಕೆಲಸ ಪ್ರಾರಂಭಿಸಿದನು. ಅಲ್ಲದೆ ಗರಡಿಮನೆ ಕುಸ್ತಿಯಲ್ಲಿ ಪಾಲ್ಗೊಳ್ಳುತ್ತಿದ್ದನು. ರಾತ್ರಿಯಲ್ಲಿ ಏಕಾಗ್ರ ಚಿತ್ತದ ಶಿವಧ್ಯಾನ ಮಾಡುತ್ತಿದ್ದನು. ಎತ್ತರದ ಅಜಾನುಬಾಹು, ಸುಗುಣ, ಸುಂದರ ಯುವಕನಾಗಿ ಬೆಳೆದದ್ದನ್ನು ಕಂಡ ತಾಯಿ ಮಗನಿಗೆ ವಿವಾಹವಾಗಲು ಆಗ್ರಹಿಸಿದಳು. ಆದರೆ ವಿವಾಹವಾಗಲು ಯಲ್ಲಪ್ಪ ನಿರಾಕರಿಸಿದರೂ ಕೊನೆಗೆ ತಾಯಿಯ ಆಪೇಕ್ಷೆಯಂತೆ ಹೊನ್ನವ್ವ ಎಂಬ ಕನ್ಯೆಯನ್ನು ವಿವಾಹವಾದನು. ಆದರೆ ಹೊನ್ನವ್ವ ಅಲ್ಪ ಕಾಲದಲ್ಲೇ ವಿಧಿವಶಳಾದಳು. ಅಂತ್ಯಕ್ರಿಯೆಯ ಸಂದರ್ಭದಲ್ಲಿ ಸುಡುವ ಅಗ್ನಿಯ ಕಂಡು ಮನಪರಿವರ್ತಿಸಿಕೊಂಡು, ಬೂದಿಯನ್ನು ಮೈಗೆ ಹಚ್ಚಿಕೊಂಡು ಜೈ ಸಿದ್ಧಲಿಂಗಾ ಎನ್ನುತ್ತ ಹೊರಟನು.

ವೈರಾಗ್ಯವನ್ನು ಮೈಗೂಡಿಸಿಕೊಂಡ ಯಲ್ಲಪ್ಪ ಲಚ್ಯಾಣ ಗ್ರಾಮದಲ್ಲಿದ್ದ ಕಮರೀ ಮಠಕ್ಕೆ ಬಂದು ಅಲ್ಲಿದ್ದ ಸಿದ್ಧಲಿಂಗ ಮಹಾರಾಜರನ್ನು ಭೇಟಿ ಮಾಡಿದನು. ಸಿದ್ದಲಿಂಗ ಮಹಾರಾಜರು ಯಲ್ಲಪ್ಪನಿಗೆ ಅನೇಕ ಅಗ್ನಿ ಪರೀಕ್ಷೆಗಳನ್ನು ನೀಡಿ ನಂತರ ಶಿಷ್ಯನನ್ನಾಗಿ ಸ್ವೀಕರಿಸಿದರು. ನಂತರ ಗುರುಗಳು ನೀನು ಇಲ್ಲಿಂದ ಎರಡು ನದಿಗಳನ್ನು ದಾಟಿ ಸಂಚಾರ ಮಡುತ್ತಾ ಭಕ್ತರನ್ನು ಉದ್ದಾರ ಮಾಡಿ ಹಳ್ಳಿಯ ಸ್ಮಶಾನದಲ್ಲಿ ಮಠ ನಿರ್ಮಿಸು ಎಂದು ಹೇಳಿದರು.

ಗುರುಗಳ ಆದೇಶದಂತೆ ಯಲ್ಲಪ್ಪ ಕಾವಿಯನ್ನು ಧರಿಸಿ ಸಂಚಾರ ಕೈಗೊಂಡನು. ಭಕ್ತರಿಗೆ ಕಾಯಕದ ಉಪದೇಶವನ್ನು ನೀಡುತ್ತ ಅನೇಕ ಪವಾಡಗಳನ್ನು ಮಾಡಿದನು. ಕರ್ಜಗಿ ಎಂಬ ಗ್ರಾಮದಲ್ಲಿದ್ದ ಭೂತ-ಪಿಶಾಚಿಗಳ ಉಪಟಳ, ಜನರ ಅನೇಕ ರೋಗ-ರುಜಿನಗಳ, ಮೂಢ ನಂಬಿಕೆಗಳ ನಿವಾರಣೆ ಮಾಡಿ ಜನರ ಮನಸ್ಸನ್ನು ಒಲಿಸಿಕೊಂಡನು.

ಮುಗಳಖೋಡದಲ್ಲಿ ಮಠವನ್ನು ಸ್ಥಾಪಿಸಿದನು.[೪೭] ಕಾಯಕನಿಷ್ಠೆ ಮತ್ತು ಶಿವನಿಷ್ಠೆ ಪ್ರಮುಖ ಮಂತ್ರಗಳಾಗಿದ್ದವು. ಯಲ್ಲಾಲಿಂಗರು ಸ್ವತ: ಗುದ್ದಲಿ-ಸಲಿಕೆ ಹಿಡಿದು ಕೃಷಿ ಹಾಗೂ ಕಟ್ಟಡದ ಕೆಲಸ ನಿರ್ವಹಿಸಿದನು. ಎತ್ತು ಆಕಳುಗಳನ್ನು ಸಾಕುತ್ತ, ಮಠಕ್ಕೆ ಬಂದ ಭಕ್ತರಿಗೆಲ್ಲ ಪ್ರಸಾದದ ವ್ಯವಸ್ಥೆ ಮಾಡಿದರಲ್ಲದೆ, ಉಪದೇಶಗಳನ್ನು ನೀಡತೊಡಗಿದರು. ಶರೀರ, ಮನ, ಮನೆ, ಹೊಲ ಸ್ವಚ್ಛವಾಗಿಡಲು ತಿಳಿಸಿದರು. ಕಾಯಕ ಪ್ರತಿಯೊಬ್ಬರಿಗೂ ಅಗತ್ಯ. ಜಾತಿ-ಭೇದ ಮಾಡುವಂತಿಲ್ಲ. ಹೊಲಸು ತಿನ್ನುವುದು, ಹೊಲಸು ಮಾತನಾಡುವುದು ಉತ್ತಮವಲ್ಲ. ಪ್ರತಿಯೊಬ್ಬರು ಹಾಸಿಗೆಯಿದ್ದಷ್ಟು ಕಾಲು ಚಾಚಬೇಕು, ಪ್ರತಿದಿನ ಶಿವಧ್ಯಾನಮಾಡಬೇಕು. ಸಂಸಾರದಲ್ಲಿದ್ದು ಸುಖ ಸಾಧಿಸಿ ಮುಕ್ತಿ ಪಡೆಯಬೇಕು. ಈ ಉಪದೇಶಗಳನ್ನು ಕೇಳಿದ ಜನರು ತೃಪ್ತಿಗೊಂಡರು. ಇದರಿಂದಾಗಿ ಇವರ ಕೀರ್ತಿ ಎಲ್ಲೆಡೆ ಹಬ್ಬಿತು. ನೂರಾರು ಜಾತಿಯ ಜನರು ಎಲ್ಲೆಡೆಯಿಂದ

ಆಗಮಿಸತೊಡಗಿದರು. ಹೀಗಾಗಿ ಉತ್ತರದ ಮುಂಬೈ ಗಡಿದಾಟಿ ದಕ್ಷಿಣದ ಕನ್ಯಾಕುಮಾರಿಯವರೆಗೆ ಯಲ್ಲಾಲಿಂಗರ ಅನುಯಾಯಿಗಳು ಅಥವಾ ಭಕ್ತರು ಸೃಷ್ಟಿಗೊಂಡರು.[೪೮]

ಪ್ರತಿವರ್ಷ ರಾಮನವಮಿಯೆಂದು ಯಲ್ಲಾಲಿಂಗರ ಜಾತ್ರೆ ನಡೆಸತೊಡಗಿದರು. ಇವರು ಶತಾಯುಶಿಗಳಾಗುತ್ತಾರೆಂದು ತಿಳಿದ ಭಕ್ತರು ಅಸಂಖ್ಯ ಸಂಖ್ಯೆಯಲ್ಲಿ ಆಗಮಿಸತೊಡಗಿದರು. ಜಾತ್ರೆಯದಿನದಂದು ರಥೋತ್ಸವ ಮಂದಿರದಿಂದ ದೀಪಕಂಬದವರೆಗೆ ಸಾಗುತ್ತದೆ. ಅಂದು ವಿಮಾನಗಳಿಂದ ಹೂಮಳೆಸುರಿದು ಜನರು ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಅದೇ ರೀತಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಮನ್ನೆರಾಳ ಗ್ರಾಮದಲ್ಲಿ ಯಲ್ಲಾಲಿಂಗೇಶ್ವರನ ಮಂದಿರವಿದೆ. ಸಂಕ್ರಮಣದಲ್ಲಿ ತೇರು ಎಳೆಯಲಾಗುತ್ತದೆ. ಸುತ್ತಮುತ್ತಲಿನ ಪ್ರದೇಶದಿಂದ ಭಕ್ತರು ಆಗಮಿಸುತ್ತಾರೆ.

**೬.೧.೭ ಹುಲ್ಲಪ್ಪ ಮತ್ತು ಚಂದಪ್ಪ**

ಹುಲ್ಲಪ್ಪ ಚಂದಪ್ಪ ಎಂದು ಜೋಡಿಯಾಗಿಯೇ ಗುರುತಿಸಿಕೊಳ್ಳುವ ದೇವರುಗಳ ಆರಾಧನೆ ಕುರುಬರಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಚಂದ್ರಗಿರಿ ಚಂದ್ರಪ್ಪನ ನೆಲೆಯಾದರೆ, ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲೂಕಿನ ಗಡಿಯಲ್ಲಿರುವ ಗುಡೂರು ಹುಲ್ಲಪ್ಪನ ನೆಲೆಯಾಗಿದೆ. ಈ ದೇವರುಗಳಲ್ಲಿ ಮೈಲಾರಲಿಂಗನ ಪರಂಪರೆಯ ಸಾಮ್ಯವನ್ನು ಕಾಣಬಹುದಾಗಿದೆ.

**೧. ಚಂದಪ್ಪ**

ಕುಷ್ಟಗಿ ತಾಲೂಕಿನ ಮಿಯಾಪುರ ಎಂಬ ಚಿಕ್ಕಗ್ರಾಮದಲ್ಲಿ ಗುರಸಂಗಯ್ಯನವರು ಮೌನ ವ್ರತ ಕೈಗೊಂಡಿರುತ್ತಾನೆ. ಅವರ ವ್ರತವನ್ನು ಭಂಗಗೊಳಿಸಲು ಅವನನ್ನು ಕಂಬಳಿಯಲ್ಲಿ ಸುತ್ತಿ ಬಾವಿಗೆ ಹಾಕುತ್ತಾರೆ. ಆದರೆ ಪವಾಡ ಸದೃಶವಾಗಿ ಬದುಕುಳಿಯುತ್ತಾನೆ. ನಂತರ ಮಿಯಾಪುರದಿಂದ ಮರಿಯಾಳ ಗ್ರಾಮಕ್ಕೆ ಬಂದು ಅಲ್ಲಿದ್ದ ಮಣಿಮಲ್ಲಾಸುರರನ್ನು ಸಂಹಾರ ಮಾಡಿ, ಚಂದ್ರಗಿರಿಯ ಕಲ್ಮಠದ ನೀಲಮ್ಮನೊಂದಿಗೆ ಗುರುಸಂಗಯ್ಯ ವಿವಾಹವಾಗುವನು. ತಮಗೆ ಜನಿಸಿದ ಮಗುವಿಗೆ ಶಿವರುದ್ರ ಎಂದು ನಾಮಕರಣ ಮಾಡುತ್ತಾರೆ. ಶಿವರುದ್ರ ದೊಡ್ಡವನಾದ ಮೇಲೆ ಬೀಳಗಿಯ ಎಳೆಮನಿ ಶಂಕರ ದೇಸಾಯಿಯವರ ಮಗಳಾದ ಸೂರ್ಯಮಣಿ ಅವನನ್ನು ಪ್ರೀತಿಸುತ್ತಾಳೆ. ಇದರಿಂದಾಗಿ ಕೋಪಗೊಂಡ ದೇಸಾಯಿ ಶಿವರುದ್ರನನ್ನು ಹಗೆಯಲ್ಲಿ ಮುಚ್ಚಿಸಿ ಕೊಲ್ಲಲು ಪ್ರಯತ್ನಿಸುತ್ತಾನೆ. ಆದರೆ ಹಗೆಯಲ್ಲಿ ಮುಚ್ಚಲ್ಪಟ್ಟ ಶಿವರುದ್ರ ಪಡಸಾಲೆಯಲ್ಲಿ ಪ್ರತ್ಯಕ್ಷನಾಗುತ್ತಾನೆ. ಇದರಿಂದ ದೇಸಾಯಿಯವರು ಮನ ಪರಿವರ್ತಿಸಿಕೊಂಡು ಶಿವರುದ್ರಯ್ಯನಿಗೆ ಮಗಳನ್ನು ಕೊಟ್ಟು ವಿವಾಹ ಮಾಡುತ್ತಾರೆ.[೪೯] ಇವರಿಗೆ ಜನಿಸಿದ ಮಗನನ್ನು ಲಿಂಗಯ್ಯನೆಂದು ಕರೆಯುತ್ತಾರೆ. ಬಿಸಿಲು ಬೀಳದ ಬಾವಿಯ ನೀರು, ಹೆಸರಿಲ್ಲದ ಮರದ ಪತ್ರಿ ತಂದು ಪೂಜೆ ಮಾಡುವಂತೆ ತಂದೆ ಲಿಂಗಯ್ಯನಿಗೆ ಆದೇಶಿಸುತ್ತಾನೆ. ಮುದ್ದಮ್ಮ ಎಂಬ ಮಹಿಳೆಯಿಂದ ಮಾಹಿತಿ ಪಡೆದು ಹೂವಿನ ಕೊಳ್ಳಕ್ಕೆ ಬಂದು ಪೂಜೆಸಲ್ಲಿಸುತ್ತಾ, ಅಂಗೈ ಮೇಲೆ ಲಿಂಗ ಹಿಡಿದು ಅಂದಚಂದದಿಂದ ಲಿಂಗಪೂಜೆ ಮಾಡುತ್ತಾನೆ. ಚಂದದಿಂದ ಲಿಂಗಪೂಜೆ ಮಾಡಿಕೊಳ್ಳುವ ಲಿಂಗಯ್ಯನನ್ನು ಚಂದಲಿಂಗ, ಚಂದಾಲಿಂಗ ಎಂದು ಕರೆಯುತ್ತಾರೆ. ಈ ಚಂದಾಲಿಂಗನನ್ನೇ ಇಂದು ಕುಷ್ಟಗಿ ತಾಲೂಕಿನ ಚಂದ್ರಗಿರಿಯಲ್ಲಿ ಚಂದಪ್ಪ ಎಂದು ಆರಾಧಿಸುತ್ತಾರೆ.

೨. ಹುಲ್ಲಪ್ಪ

ಗ್ವಾಗೇರಿಯ ಕುರುಬರ ಸಿದ್ಧಪ್ಪನಿಗೆ ಬೀರಣ್ಣ, ಗಂಗೆಮಾಳವ್ವ ಎಂಬ ಮಕ್ಕಳಿದ್ದರು. ಚಂದಪ್ಪ ಲಿಂಗಪೂಜೆ ಮಾಡುತ್ತಿದ್ದರಿಂದ ಗಂಗೆ ಮಾಳವ್ವ ತನಗೂ ಲಿಂಗ ಬೇಕೆಂದಾಗ ಆಡಿನ ಹಿಕ್ಕಿಯನ್ನು ಲಿಂಗವೆಂದು ಪೂಜಿಸಲು ತಿಳಿಸುತ್ತಾನೆ. ಗಂಗೆಮಾಳವ್ವ ದಿನಾಲೂ ಹಿಕ್ಕೆಯ ಪೂಜೆ ಮಾಡುತ್ತಾ ಚಂದಪ್ಪನಲ್ಲಿ ಅನುರಕ್ತಳಾಗುತ್ತಾಳೆ. ನಂತರ ಇವರಿಬ್ಬರಿಗೆ ಮದುವೆಯಾಗುತ್ತದೆ. ಈ ಸಂದರ್ಭದಲ್ಲಿ ಚಂದಪ್ಪ ಗಂಗಿ ಮಾಳವ್ವನಿಗೆ ತಾಳಿಕಟ್ಟದೆ ಕಂಕಣ ಕಟ್ಟಿದನೆಂಬ ಪ್ರತೀತಿಯಿದೆ.

ಅಂಬಿಗೇರ ಮನೆತನದಲ್ಲಿ ಮಸಣಯ್ಯ, ಗವಿಸಿದ್ಧಯ್ಯ, ಕೊಟ್ರಯ್ಯ, ಭರಮಯ್ಯ, ಗಿರಿಮಯ್ಯ, ಮಾವಿನ ಮಾರ್ತೆಪ್ಪ ಹಾಗೂ ಹೆಗ್ಗಡೆ ಪ್ರಧಾನಿ ಎಂಬ ಏಳು ಜನ ಅಣ್ಣತಮ್ಮಂದಿರಿದ್ದರು. ಅವರಿಗೆ ಗಂಗವ್ವ ಎಂಬ ತಂಗಿಯಿದ್ದಳು. ಆಡವಿಯಿಂದ ಕಟ್ಟಿಗೆ ತಂದು ಭಟ್ಟಿಯಲ್ಲಿ ಸುಟ್ಟು ಇದ್ದಲಿ ಮಾಡಿ ಮಾರಾಟ ಮಾಡುತ್ತಿದ್ದಳು. ಅಡವಿಗೆ ಹೋದ ಅಣ್ಣಂದಿರಿಗೆ ದಿನಾ ಬುತ್ತಿ ಒಯ್ಯುತ್ತಿದ್ದಳು. ಒಂದು ದಿನ ಕೊಳದಲ್ಲಿ ಅರಳಿನಿಂತ ಕಮಲದ ಹೂವು ಅವಳನ್ನು ಆಕರ್ಷಿಸಿದ್ದರಿಂದ ಹೂವನ್ನು ಕಿತ್ತು ಸೇರಗಿನಲ್ಲಿಟ್ಟುಕೊಳ್ಳುತ್ತಾಳೆ. ಪವಾಡ ಸದೃಶವಾಗಿ ಅವಳು ಗರ್ಭಧರಿಸುತ್ತಾಳೆ.[೫೦] ಇದರಿಂದ ಕ್ರೋಧಗೊಂಡ ಅಣ್ಣಂದಿರು ಅವಳನ್ನು ಇದ್ದಲಿ ಭಟ್ಟಿಯಲ್ಲಿ ಹಾಕಿ ಸುಡುತ್ತಾರೆ. ಆದರೆ ಗರ್ಭದಿಂದ ಶಿಶು ಹೊರಗೆ ಜಿಗಿದು ಕಲ್ಲುಪಡಿಯಲ್ಲಿ ಬೀಳುತ್ತದೆ. ಆ ಶಿಶು ಚಂದಾಲಿಂಗ ಮತ್ತು ಗಂಗಿ ಮಾಳವ್ವರಿಗೆ ದೊರೆಯುತ್ತದೆ. ಹುಲ್ಲಿನಲ್ಲಿ ದೊರೆತಿದ್ದರಿಂದ ಮಗುವಿಗೆ ಹುಲ್ಲಪ್ಪ ಎಂದು ಹೆಸರಿಡುತ್ತಾರೆ.

ಚಂದಪ್ಪ ಲಿಂಗಪೂಜೆಯಲ್ಲಿ ನಿರತನಾಗಿದ್ದರೆ, ಹುಲ್ಲಪ್ಪ ಬೇಟೆಯಲ್ಲಿ ಆಸಕ್ತನಾಗಿರುತ್ತಾನೆ. ಬೇಟೆಯಾಡಿದ ಪ್ರಾಣಿಗಳ ಚರ್ಮದಿಂದ ಡೊಳ್ಳು ತಯಾರಿಸಿ ನುಡಿಸುತ್ತಾನೆ. ನಂತರ ದೊಡ್ಡವನಾದ ಮೇಲೆ ತನ್ನ ತಾಯಿಯನ್ನು ಕೊಂದ ಮಾವಂದಿರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಯತ್ನಕ್ಕೆ ಮುದಾಗುತ್ತಾನೆ. ಕೆಲವು ಕಾರಣಗಳಿಂದ ಹುಲ್ಲಪ್ಪ ಮತ್ತು ಚಂದಪ್ಪ ನಡುವೆ ವಿರಸ ಉಂಟಾಗುತ್ತದೆ. ಹುಲ್ಲಪ್ಪನನ್ನು ಹಿಡಿಯಲು ಬಂದಾಗ ವೀರಭದ್ರ ಹುಲ್ಲಪ್ಪನಿಗೆ ರಕ್ಷಣೆ ನೀಡುತ್ತಾನೆ. ಇದರಿಂದಾಗಿ ಹಿಂತಿರುಗಿ ಹೋಗಬೇಕೆಂದಾಗ ಗಂಗಿ ಮಾಳವ್ವ ಬರಲು ನಿರಾಕರಿಸುತ್ತಾಳೆ. ಕೋಪಗೊಂಡ ಚಂದಪ್ಪ ಗಂಗಿ ಮಾಳವ್ವನ ಶಿರ ಕತ್ತರಿಸುತ್ತಾನೆ. ಇದರಿಂದ ಕ್ರೋಧಗೊಂಡ ಹುಲ್ಲಪ್ಪ ಚಂದಪ್ಪನೊಂದಿಗೆ ಯುದ್ಧ ಪ್ರಾರಂಭಿಸುತ್ತಾನೆ. ಆಗ ಶಿವ ಪ್ರತ್ಯಕ್ಷನಾಗಿ ಯುದ್ಧವನ್ನು ನಿಲ್ಲಿಸುತ್ತಾನೆ. ಚಂದಾಲಿಂಗ ಮಗನ ಮಾತೃಭಕ್ತಿಯನ್ನು ಕಂಡು ಭಕ್ತರು ನನ್ನನ್ನು ಪೂಜಿಸುವ ಮೊದಲು ನಿನ್ನನ್ನು ಪೂಜಿಸಲಿ, ನಿನ್ನ ಜಾತ್ರೆಯಾದ ಮೂರು ದಿವಸಕ್ಕೆ ನನ್ನ ಜಾತ್ರೆ ನಡೆಯಲ್ಲಿ ಎಂದು ಆದೇಶಿಸುತ್ತಾನೆ.[೫೧] ಇಂದಿಗೂ ಅದೇ ರೀತಿ ನಡೆಯುತ್ತಿರುವುದು ಕಂಡುಬರುತ್ತದೆ.

ಚಂದಾಲಿಂಗನ ಬಳಿಯಿರುವ ತ್ರಿಶೂಲವನ್ನು ಐಹೊಳ್ಳಿ ಕೊಂತವೆಂದು ಕರೆಯುತ್ತಾರೆ. ಈ ಐಹೊಳ್ಳಿ ಕೊಂತವು ಅಮಿತಪ್ಪ ಮುನಿಗಳು ನೀಡಿದ ಕಾಣಿಕೆ ಎಂಬ ಪ್ರತೀತಿಯಿದೆ. ಹನುಮಸಾಗರದ ಕರಿಸಿದ್ಧೇಶ್ವರ ಸ್ವಾಮಿಗಳ ತಪೋಭಂಗ ಮಾಡಿದವರನ್ನು ಐಹೊಳ್ಳಿ ಕೊಂತದಿಂದ ಸಂಹಾರ ಮಾಡಿದನೆಂಬ ಕಥೆಯಿದೆ. ಆರನೇ ವಿಕ್ರಮಾದಿತ್ಯನು ಅರಸಿಬೀಡಿನಲ್ಲಿದಾಗ ಚಂದಾಲಿಂಗನಿಗೆ ಆಶ್ರಯ ನೀಡಿದ್ದನೆಂದು ತಿಳಿದುಬರುತ್ತದೆ.[೫೨] ಇದರಿಂದ ಚಂದಪ್ಪ ೧೧ನೇ ಶತಮಾನದಲ್ಲಿದ್ದನೆಂದು ಸ್ಪಷ್ಟಪಡುತ್ತದೆ.

ಕುಷ್ಟಗಿ ತಾಲೂಕಿನ ಹನುಮಸಾಗರದಿಂದ ಪಶ್ಚಿಮ ದಿಕ್ಕಿಗೆ ಆರು ಕಿ.ಮೀ.ಅಂತರದಲ್ಲಿ ಚಂದ್ರಪ್ಪನ ದೇವಾಲಯವಿದೆ. ಐದಾರು ಎಕರೆಯ ಭೂ ಪ್ರದೇಶದಲ್ಲಿ ಕೋಟೆ ಗೋಡೆಗಳಿಂದ ಸುತ್ತುವರಿದಿದೆ. ದೇವಾಲಯದ ಪಕ್ಕದಲ್ಲಿ ಬೋಳ ಶಂಕರಲಿಂಗನ ಗುಡಿಯಿದೆ. ಬ್ರಹ್ಮಗಣಪತಿ, ನಟರಾಜ, ನಂದಿ, ಪಾರ್ವತಿ, ವಿಷ್ಣು ವಿಗ್ರಹಗಳನ್ನು ಕೆತ್ತಲಾಗಿದೆ. ಗರ್ಭಗುಡಿಯಲ್ಲಿ ಚತುರ್ಭಜ ಶಿವನ ವಿಗ್ರಹವಿದೆ. ಬಲಭಾಗದ ಎರಡು ಕೈಗಳಲ್ಲಿ ಖಡ್ಗ–ಡಮರುಗವಿದ್ದರೆ, ಎಡ ಭಾಗದ ಎರಡು ಕೈಗಳಲ್ಲಿ ಕಪಾಲ ತ್ರಿಶೂಲವಿದೆ. ದೇವಾಲಯದ ಬಲಭಾಗದಲ್ಲಿ ತುಪ್ಪದ ಮಾಳವ್ವನ ವಿಗ್ರಹವಿದೆ. ಎಡಗಡೆಗೆ ಪಾಣಿಪೀಠದ ಮೇಲೆ ಕುಳಿತ ಹುಲ್ಲಪ್ಪನ ವಿಗ್ರಹವಿದೆ. ಪಕ್ಕದಲ್ಲಿ ಹಂಪಿ ವಿರುಪಾಕ್ಷನ ದೇವಾಲಯವಿದೆ.

ಹುಲ್ಲಪ್ಪನ ದೇವಾಲಯ ಹುನಗುಂದದ ಪಶ್ಚಿಮ ದಿಕ್ಕಿಗೆ ಇಪ್ಪತ್ತು ಕಿ.ಮೀ.ಅಂತರದಲ್ಲಿರುವ ಗುಡೂರಿನಲ್ಲಿದೆ. ಊರಿನ ಮಧ್ಯದ ಗುಡಿಯಲ್ಲಿ ವೀರಭದ್ರನಿದ್ದಾನೆ. ಅದೇ ಗುಡಿಯಲ್ಲಿ ಹುಲ್ಲಪ್ಪನೂ ಇದ್ದಾನೆ. ಒಂದೇ ದೇವಾಲಯದಲ್ಲಿ ಏಕಕಾಲಕ್ಕೆ ಇಬ್ಬರೂ ಪೂಜೆಗೊಳ್ಳುತ್ತಾರೆ. ಹುಲ್ಲಪ್ಪನ ದೇವಾಲಯದ ಎಡಬದಿಯಲ್ಲಿ ತಾಯಿಯಾದ ಗಂಗಿಮಾಳವ್ವನ ಹಾಗೂ ಭರಮದೇವರ ದೇವಾಲಯವಿದೆ. ಆಗಿಹುಣ್ಣಿಮೆಯಲ್ಲಿ ಹುಲ್ಲಪ್ಪನ ಜಾತ್ರೆಯಾಗುತ್ತದೆ.

ಹುಲ್ಲಪ್ಪನ ಜಾತ್ರೆಯಾದ ಅಂದರೆ ಆಗಿಹುಣ್ಣಿಮೆಯಾದ ಮೂರನೆ ದಿನಕ್ಕೆ ಚಂದಪ್ಪನ ಜಾತ್ರೆ ನಡೆಯುತ್ತದೆ. ಹುಲ್ಲಪ್ಪನ ಜಾತ್ರೆ ನಡೆದ ಎರಡನೆ ರಾತ್ರಿಯೇ ಹುಲ್ಲಪ್ಪನ ಗುಡಿಯಲ್ಲಿರುವ ಐಹೊಳ್ಳಿ ಕೊಂತ ಹಾಗೂ ಯಲಬುರ್ಗಿ ಕೊಂತ ಚಂದ್ರಗಿರಿ ತಲುಪುತ್ತವೆ.[೫೩] ಮೆರವಣಿಗೆಯ ಮೂಲಕ ಕೊಂತಗಳೆರಡನ್ನು ಗಂಗೆ ಸ್ಥಳಕ್ಕೆ ಕೊಂಡೊಯ್ಯುತ್ತಾರೆ. ಅವರ ಹಿಂದೆ ಶಂಖ, ಜಾಗಟೆಯವರು, ಖಡ್ಗದಾರಿಗಳು, ಬಡಿಗೆದಾರರು, ಸರಪಳಿ ಹೊತ್ತವರು, ಕಬ್ಬಿಣದ ಗುಂಡು ಹೊತ್ತವರು ಹೊರಡುತ್ತಾರೆ. ಹಿಂದೆ ಪಾಲಕಿಯಿರುತ್ತದೆ. ಪಾಲಕಿಯಲ್ಲಿ ಖಡ್ಗ ಇಡಲಾಗಿರುತ್ತದೆ. ಮರಳಿ ಬಂದ ಮೇಲೆ ಕೊಂಡಗಳಿಗೆ ಚಂದ್ರ ಭಂಡಾರ ಲೇಪಿಸಲಾಗುತ್ತದೆ. ಕೊಂತಗಳಿಗೆ ಕಣಕದಾರತಿ, ಕಡಬು ಹಾಗೂ ಅನ್ನದ ಎಡೆ ಮಾಡುತ್ತಾರೆ.

ಮಳ್ಳಯ್ಯನು ತನಗೆ ಸಿದ್ದ ಮಾಡಿದ ಮಂಟಪದಲ್ಲಿ ಕಂಬಳಿ ಪೇಟ ಸುತ್ತಿಕೊಂಡು ಕಂಬಳಿಯ ಅಂಗಿ ಧರಿಸಿ, ಒಣಭಂಡಾರ ಲೇಪಿಸಿಕೊಂಡು ಸಿದ್ದನಾಗುತ್ತಾನೆ. ಕಂಬಳಿ ಗದ್ದಿಗೆಯ ಮೇಲೆ ಕುಳಿತ ಮಳ್ಳಯ್ಯ ನೀರಿನಲ್ಲಿ ಬೆರಳನ್ನು ಅದ್ದಿ ಅಂಗೈಯಲ್ಲಿ ಭಂಡಾರ ಹಾಕಿಕೊಂಡು ತಿಕ್ಕಿಕೊಳ್ಳುತ್ತಾನೆ. ಆಗ ಭಂಡಾರ ನೀರಾದರೆ ಆ ವರ್ಷ ಸಮೃದ್ಧ ಮಳೆ, ಭಂಡಾರ ಹುಡಿಯಾದರೆ ಬರಗಾಲವೆಂದು ತಿಳಿಯಲಾಗುತ್ತದೆ. ಅಂದು ನುಡಿ ಪವಾಡ, ಸರಪಳಿ ಪವಾಡ, ಕೂಗು ಬಸವಣ್ಣ, ತುಗ್ಗಿ ಗಿಡವೇರಿ ಹೇಳಿಕೆ ಕೊಡುವ ಆಚಾರಣೆಗಳು ನಡೆಯುತ್ತವೆ.

**೬.೧.೮ ಭರಮಪ್ಪ**

ಕುರುಬರ ಪ್ರಮುಖ ದೇವರುಗಳಲ್ಲಿ ಭರಮದೇವ ಅಥವಾ ಭರಮಪ್ಪನು ಪ್ರಮುಖನಾಗಿದ್ದಾನೆ. ವೈದಿಕರ ಬ್ರಹ್ಮನೇ ಭರಮಪ್ಪ ಎಂಬ ಅಭಿಪ್ರಾಯವಿದೆ. ಭರಮಪ್ಪನನ್ನು ಬೀರಪ್ಪನ ತಂದೆ ಎಂದು ಸಹ ಹೇಳಲಾಗುತ್ತದೆ. ಕುರುಬರು ಭರಮದೇವನನ್ನು ಹಟ್ಟಿಯ ಪಾಲಕನೆಂದು ಆರಾಧಿಸುತ್ತಾರೆ. ಇವನಿಗೆ ಪ್ರತ್ಯೇಕವಾದ ದೇವಾಲಯಗಳಿರುವುದು ವಿರಳ. ಮನೆ ಅಥವಾ ಮಠದ ಒಂದು ಕಂಭವನ್ನು ಭರಮದೇವರೆಂದು ಆರಾಧಿಸುವುದು ಕಂಡುಬರುತ್ತದೆ.

ಅಶ್ವಿನಿ ಮಾಸದಲ್ಲಿ ಹಟ್ಟಿಯ ಹಬ್ಬವನ್ನು ಆಚರಿಸುತ್ತಾರೆ. ಅಂದು ನೀರು ತುಂಬುವ ಹಬ್ಬವೆಂದು ಮಾಡುತ್ತಾರೆ. ನೀರಿನ ಹಂಡೆಗೆ ಸುಣ್ಣ ಬಣ್ಣ ಬಳಿದು ಹಂಡೆಯ ಕಂಠಕ್ಕೆ ಹೂ ಬಳ್ಳಿಯನ್ನು ಸುತ್ತುವರು. ದೀಪ ಬೆಳಗುವರು ಅಂದು ಭರಮಪ್ಪನ ಹಬ್ಬವೆಂದು ಸಾಯಂಕಾಲ ಮಾಡುತ್ತಾರೆ ದನಕುರಿಗಳ, ಹಟ್ಟಿಯ ಸಂರಕ್ಷನೆಂದು ನಂಬಿದ ಕುರುಬರು ಬೀರದೇವರ ಪೂಜೆ ಮಾಡಿ ನೈವೇದ್ಯಗಳನ್ನು ಸಲ್ಲಿಸುವರು. ದನಕುರಿಗಳ ಸಾಗಾಣಿಕೆದಾರರು ಕಡ್ಡಾಯವಾಗಿ ಬೀರದೇವರನ್ನು ಆರಾಧಿಸುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಒಂದು ಗುಂಡು ಕಲ್ಲನ್ನು ಭರಮಪ್ಪ ಎಂದು ಪೂಜಿಸುತ್ತಾರೆ. ಮಕ್ಕಳ ಕಿರಿಕಿರಿ ಅಧಿಕವಾದಾಗ ತಾಯಂದಿರು ಈ ಗುಂಡುಕಲ್ಲನ್ನು ೫, ೯, ೧೧ ವಾರ ಪೂಜಿಸುವರು ಎಂಬ ಅಭಿಪ್ರಾಯವಿದೆ.[೫೪] ಅದೇ ರೀತಿ ಕೊಪ್ಪಳ ಜಿಲ್ಲೆಯಲ್ಲೂ ಭರಮದೇವರ ಆರಾಧನೆ ಕಂಡುಬರುತ್ತದೆ. ಭರಮದೇವರನ್ನು ಬೀರದೇವರ ರೀತಿಯಲ್ಲಿಯೇ ಗುಂಡುಕಲ್ಲಿನ ರೂಪದಲ್ಲಿ ಪೂಜಿಸುತ್ತಾರೆ. ಆದರೆ ಕೊಪ್ಪಳ ಜಿಲ್ಲೆಯ ಕುಷ್ಟಗಿ, ಬಿಳೇಬಾವಿ, ಬಹದ್ದೂರಬಂಡಿ ಪ್ರದೇಶದಲ್ಲಿ ಭರಮದೇವರ ದೇವಾಲಯಗಳಿವೆ. ದೇವಾಲಯದಲ್ಲಿ ಮೂರ್ತಿಯಿಲ್ಲ ಗುಂಡುಕಲ್ಲನ್ನು ಪೂಜಿಸುವುದು ಕಂಡುಬರುತ್ತದೆ. ಬಹದ್ದೂರಬಂಡಿಯಲ್ಲಿ ಭರಮಪ್ಪನ ಮೂರ್ತಿಯಿರುವ ದೇವಾಲಯವಿದೆ. ಈ ಹಿನ್ನೆಲೆಯಲ್ಲಿ ಭರಮಪ್ಪ ಕುರಿಸಾಗಾಣಿಕೆದಾರರ ಆರಾಧ್ಯದೈವ ಎಂದು ತಿಳಿಯುತ್ತದೆ.

### ೭.೧.೯ ಗ್ಯಾನಪ್ಪಯ್ಯ

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಮಂಚಗೇರಿಯಲ್ಲಿ ಗ್ಯಾನಪ್ಪಯ್ಯ ಎಂಬ ಪವಾಡ ಪುರುಷನನ್ನು ಆರಾಧಿಸಲಾಗುತ್ತದೆ. ಇವರು ಮಳೆ ಬರದೆ ಬರಗಾಲ ಬಿದ್ದಾಗ ಕಂಬಳಿ ಬೀಸಿ ಮಳೆ ತಂದರೆಂಬ ಪ್ರತೀತಿಯಿದೆ. ಹಿರೇಮನ್ನಾಪುರದಲ್ಲಿರುವ ಗುಡ್ಡದ ಮೇಲೆ ನಿಂತು ಕಂಬಳಿ ಬೀಸಿದಾಗ ಮಳೆ ಬಂದಿತೆಂದು ಅಲ್ಲಿಯ ಸ್ಥಳ ಪುರಾಣ ತಿಳಿಸುತ್ತದೆ. ಕುಷ್ಟಗಿ ತಾಲೂಕಿನ ಟೆಂಗುಂಟಿ, ವಣಗೇರಿ, ಮಂಚಗೇರಿ ಮೊದಲಾದೆಡೆ ಗ್ಯಾನಪ್ಪಯ್ಯನವರ ಗುರುಮನೆಗಳಿವೆ.

ಗ್ಯಾನಪ್ಪಯ್ಯನವರ ವಂಶಸ್ಥರು ಇಂದಿಗೂ ಜನರಿಗೆ ಪೂಜ್ಯರಾಗಿದ್ದಾರೆ. ಹಿರೇಮನ್ನಾಪುರದಲ್ಲಿ ಗ್ಯಾನಪ್ಪಯ್ಯನ ಗವಿ ಮತ್ತು ಹೊಂಡವಿದೆ. ಟೆಗುಂಟಿಯಲ್ಲಿರುವ ಗ್ಯಾನಪ್ಪನ ದೇವಾಲಯದಲ್ಲಿ ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಜಾತ್ರೆ ನಡೆಸಲಾಗುತ್ತದೆ. ವಂಶಸ್ಥರು ಇಂದಿಗೂ ಕುದುರೆಯನ್ನೇ ಬಳಸುತ್ತಾರೆ. ಭಕ್ತರು ಆಗಮಿಸಿ ಪೂಜೆ ಸಲ್ಲಿಸುವುದು ಕಂಡುಬರುತ್ತದೆ. ಜನರು ಬಾವಿ ತೋಡಿಸುವಾಗ, ಬೋರ್ ಹಾಕಿಸುವಾಗ ಸ್ಥಳದ ಆಯ್ಕೆ ಮಾಡಲು ಈ ವಂಶಸ್ಥರನ್ನು ಕರೆಸುತ್ತಾರೆ. ಅವರು ಕುದುರೆ ಸಮೇತ ಬಂದು ಕುದುರೆ ನಿಂತ ಸ್ಥಳದಲ್ಲಿ ಭೂಮಿ ತೆಗೆಸುತ್ತಾರೆ. ಅಲ್ಲಿ ಸುಲಭವಾಗಿ ನೀರು ದೊರೆಯುತ್ತದೆ ಎಂಬ ನಂಬಿಕೆಯಿದೆ. ಇಂದೂ ಸಹ ಮಳೆ ಬರದಿದ್ದರೆ ಗ್ಯಾನಪ್ಪಯ್ಯನವರ ವಂಶದಲ್ಲಿ ಒಬ್ಬರು ಮಳೆಗಾಗಿ ತಪಸ್ಸು ಮಾಡುತ್ತಾರೆ. ಅನೇಕ ದಿನಗಳವರೆಗೆ ಉಪವಾಸವಿದ್ದು ಮಳೆ ತರಿಸಿರುವ ಉದಾಹರಣೆಗಳಿವೆ. ಗ್ಯಾನಪ್ಪಯ್ಯನವರ ಬಗ್ಗೆ ಅನೇಕ ಡೊಳ್ಳಿನ ಹಾಡುಗಳಿರುವುದು ಕಂಡುಬರುತ್ತವೆ. ಕುಷ್ಟಗಿ ತಾಲೂಕಿನ ವಣಗೇರಿಯಲ್ಲಿ ಗ್ಯಾನಪ್ಪಯ್ಯನ ಸಮಾಧಿಯಿದೆ. ಈ ಹಿನ್ನೆಲೆಯಲ್ಲಿ ಗ್ಯಾನಪ್ಪಯ್ಯ ಕುರುಬರಲ್ಲಿ ಒಬ್ಬ ಪವಾಡ ಪುರುಷನಾಗಿದ್ದಾನೆ.

### ೭.೧.೧೦ ಬಾಳಪ್ಪಜ್ಜ

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಗುಡದೂರ ಗ್ರಾಮದಲ್ಲಿ ಬಾಳಪ್ಪ ಜನಿಸಿದನು. ಚಿಕ್ಕವನಿರುವಾಗ ಆಡು ಮೇಯಿಸಲು

ಹೋದಾಗಲೆಲ್ಲ ದೊಡ್ಡಯ್ಯ ಮುತ್ಯಾರವರ ಬಳಿ ಕುಳಿತುಕೊಳ್ಳುತ್ತಿದ್ದನು. ಆಗಿನಿಂದಲೇ ಆದ್ಯಾತ್ಮಿಕತೆಯ ಕಡೆಗೆ ಒಲವು ಮೂಡಿಸಿಕೊಂಡನು. ಇದನ್ನು ಸಹಿಸದ ಹಿರಿಯರು ಚಿಕ್ಕವಯಸ್ಸಿನಲ್ಲಿಯೇ ವಿವಾಹ ಮಾಡಿದರು. ಆದರೂ ಸಂಸಾರದ ಕಡೆ ಒಲವು ತೋರಲಿಲ್ಲ. ಒಂದು ಬಾರಿ ಹೊಸೂರು ಹಳ್ಳಕ್ಕೆ ಕುರಿ ಮೇಯಿಸಲು ಹೋದಾಗ ಅಲ್ಲಿ ಕುರಿಕಾಯುತ್ತಿದ್ದ ಕುರಿಗಾರರಿಗೆ ತಮ್ಮಲ್ಲಿ ಒಂದು ಕನ್ಯೆಯಿರುವುದೆಂದು ಕರೆತಂದನು. ಬಾಳಪ್ಪ ತನ್ನ ಪತ್ನಿಯನ್ನು ಒತ್ತಾಯಿಸಿ ಮರುವಿವಾಹ ಮಾಡಿದನೆಂದು ತಿಳಿಯುತ್ತದೆ.

ಸನ್ಯಾಸ ಜೀವನವನ್ನು ಸ್ವೀಕರಿಸಿದ ಬಾಳಪ್ಪ ಸಂಚಾರ ಕೈಗೊಂಡನು. ಹಿರೇಮನ್ನಾಪುರದಲ್ಲಿ ಬಂದು ನೆಲೆಸಿದರು. ಅನೇಕ ಪವಾಡಗಳನ್ನು ಮಾಡಿದರು. ಸತ್ತ ವ್ಯಕ್ತಿಯನ್ನು ಬದುಕಿಸಿದರು. ಇದನ್ನು ಕಂಡ ಜನರು ಬಾಳಪ್ಪಜ್ಜನ ಭಕ್ತರಾದರು. ಬಾಳಪ್ಪಜ್ಜರು ಚಿಕ್ಕವರಾಗಲಿ, ದೊಡ್ಡವರಾಗಲಿ ಭೇದಮಾಡದೆ ಎಲ್ಲರನ್ನು ಪ್ರೀತಿಸುತ್ತಿದ್ದರು. ಯಾರಿಗೂ ಪಾದವನ್ನು ಮುಟ್ಟಲು ಬಿಡುತ್ತಿರಲಿಲ್ಲ. ಭಕ್ತರು ಒಮ್ಮೆ ನಮಸ್ಕರಿಸಿದರೆ ಇವರು ಎರಡು ಬಾರಿ ನಮಸ್ಕರಿಸುತ್ತಿದ್ದರು. ಹೀಗಾಗಿ ದಿನದಿಂದ ದಿನಕ್ಕೆ ಭಕ್ತರ ಸಂಖ್ಯೆ ಅಧಿಕಗೊಂಡಿತು. ಪುರಸಂಗನಹಾಳದ ದೇವಾಲಯದಲ್ಲಿದ್ದ ಮೂರು ಕಾಲಿನ ಮಂಚದ ಮೇಲೆ ಮಲಗುತ್ತಿದ್ದರು. ಮಂಚದ ಕೆಳಗಡೆ ಏಳು ಹೆಡೆಯ ಸರ್ಪ ಮಲಗಿರುತಿತ್ತೆಂಬ ಪ್ರತೀತಿಯಿದೆ. ಹಿರೇಮನ್ನಾಪುರದಲ್ಲಿ ಬಾಳಪ್ಪಜ್ಜನ ಒಂದು ಮಠವಿದೆ.

### ೬.೧.೧೧ ಚಿನ್ನಪ್ಪಜ್ಜ

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಬಿನ್ನಾಳ ಗ್ರಾಮದಲ್ಲಿ ಜನಸಿದ ಚಿನ್ನಪ್ಪಜ್ಜ ಒಬ್ಬ ಪವಾಡ ಪುರುಷರಾಗಿದ್ದಾರೆ. ಕೊರಡಿಕೊಪ್ಪ ವೀರಪ್ಪಜ್ಜನವರ ಶಿಷ್ಯರಾಗಿದ್ದರು. ಸುಮಾರು ಕ್ರಿ.ಶ.೧೯೩೦-೩೧ರಲ್ಲಿ ಜನಿಸಿದರು. ಹೇಳಿಕೆ ಕೊಡುವುದರಲ್ಲಿ ಪ್ರವೀಣರಾಗಿದ್ದರು. ಜನರ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದರು. ಇವರ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವದಿಲ್ಲ. ಇಂದು ಬಿನ್ನಾಳ ಗ್ರಾಮದಲ್ಲಿ ಇವರ ಸಮಾಧಿಯಿದೆ. ಪ್ರತಿ ಶ್ರಾವಣದಲ್ಲಿ ಪ್ರಸ್ತ ಮಾಡುವುದು ಕಂಡುಬರುತ್ತದೆ. ಜನರು ಶ್ರದ್ಧೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಕಾಯಿ ಒಡೆಸಿ ಎಡೆ ಮಾಡುವುದು ಕಂಡುಬರುತ್ತದೆ.

ಮಾತೃದೇವತೆಯ ಆರಾಧನೆ ಅನಾದಿ ಕಾಲದಿಂದಲೂ ರೂಢಿಯಲ್ಲಿದೆ. ಮಾತೃದೇವತೆ ಬುಡಕಟ್ಟಿನ ಆರಾಧನಾ ದೇವತೆ. ಈ ದೇವತೆಗಳ ಮೂಲ ಆರಾಧಕರು ದ್ರಾವಿಡರು. ಆದರೆ ಅವರ ಅವತಾರಗಳ ಕಲ್ಪನೆ ಮೂಡಿದ್ದು ಆರ್ಯರ ನಂತರ. ಶಿವ ಸೃಷ್ಟಿಗೆ ಬೀಜವಾದರೆ ಅವನ ಹೆಂಡತಿಯಾದ ಪಾರ್ವತಿ ಭೂಮಿತಾಯಿಯಾಗಿದ್ದಾಳೆ. ನಮ್ಮನ್ನು ಸೃಷ್ಟಿಸುವ, ಪಾಲಿಸುವ ದೇವತೆ ಪಾರ್ವತಿಯೇ ಆಗಿದ್ದಾಳಲ್ಲದೆ, ಅನೇಕ ಅವತಾರಗಳನ್ನು ಹೊಂದಿರುವಳೆಂದು ನಂಬಿದ್ದಾರೆ. ಪಾರ್ವತಿಯು ಕೋಪದಿಂದ ಕಣ್ಣು ಕೆಂಪಗೆ ಮಾಡಿದಾಗ ದ್ಯಾಮವ್ವ, ದುರಗಮ್ಮ, ಕಾಳಮ್ಮ, ಮಾರಮ್ಮ ಚೌಡಮ್ಮ ಹಾಗೂ ಶಾತರೂಪಳಾದಾಗ ಲಕ್ಷ್ಮೀ, ಸರಸ್ವತಿ ಮೊದಲಾದ ರೂಪಗಳನ್ನು ಸೃಷ್ಟಿಸಿ ದೈವತ್ವಕ್ಕೇರಿಸಿರುವುದು ಕಂಡುಬರುತ್ತದೆ. ಸ್ತ್ರೀ ದೇವತೆಗಳ ಆರಾಧನೆ ಕುರುಬರಲ್ಲಿ ಕಂಡಬರುತ್ತದೆ. ಕುರುಬರು ತುಪ್ಪದ ಮಾಳವ್ವ, ಗಂಗಿ ಮಾಳವ್ವ, ದುರುಗಮ್ಮ, ಯಲ್ಲಮ್ಮ, ಇಟಗಿ ಭೀಮವ್ವ, ಸಜ್ಜಲಗುಡ್ಡ ಶರಣಮ್ಮ ಮೊದಲಾದವರನ್ನು ಆರಾಧಿಸುತ್ತಾರೆ.

### ೬.೧.೧೨ ಗಂಗಿ ಮಾಳವ್ವ (ಮಾಳಚಿ)

ಮಾಳಚಿ ಎಂದರೆ ಮಾಳವ್ವ ಎನ್ನಲಾಗಿದೆ. ಕೆಲವರು ಮಾಳಚಿಯನ್ನು ಮಹಾಲಕ್ಷ್ಮೀ, ಪಾರ್ವತಿ ಎಂದು ನಂಬುತ್ತಾರೆ. ಕ್ರಿ.ಶ. ೧೦೬೩ರ ಹೊಸೂರದ ಶಾಸನದಲ್ಲಿ ಮಾಳವ್ವವನ್ನು ಮಾಳಜದೇವಿ ಎಂದು ಉಲ್ಲೇಖಿಸಿದೆ.[೫೫] ಸಂಸ್ಕೃತದಲ್ಲಿ ಮಾಲತಿಯೆಂದು, ಮರಾಠಿಯಲ್ಲಿ ಮ್ಹಾಳಸಯೆಂದು ಕರೆಯುತ್ತಾರೆ. ಮಾಳಚಿ ಮೈಲಾರಲಿಂಗನ ಮೊದಲನೇ ಪತ್ನಿಯೆಂದು ಡಾ. ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.

ಮಾಳಚಿದೇವಿ ಮೈಲಾರಲಿಂಗನ ಮೊದಲನೇ ಹೆಂಡತಿಯಾದ್ದರಿಂದ ಮೈಲಾರನ ದೇವಾಲಯಗಳ ಪಕ್ಕದಲ್ಲಿಯೇ ಇವಳ ದೇವಾಲಯಗಳಿರುತ್ತವೆ. ಹಾಗೆಯೇ ಮೂರ್ತಿಯ ಮುಂದೆ ಉದ್ಭವ ಲಿಂಗವಿರುತ್ತದೆ. ಗಂಗಿ ಮಾಳವ್ವಳ ದೇವಾಲಯಗಳು ೧೧ನೇ ಶತಮಾನದಲ್ಲಿದ್ದವೆಂದು ಶಾಸನಗಳಿಂದ ತಿಳಿಯುತ್ತದೆ.[೫೬] ಇವಳ ಬಲಕೈಯಲ್ಲಿ ಖಡ್ಗ, ತ್ರಿಶೂಲ ಹಾಗೂ ಎಡಕೈಯಲ್ಲಿ ಪಾನಪಾತ್ರೆ, ಡಮರುಗಳಿರುವುದು ಕಂಡುಬರುತ್ತದೆ. ಕುರುಬರು ಗಂಗಿ ಮಾಳವ್ವನನ್ನು ಶ್ರದ್ಧಾಭಕ್ತಿಯಿಂದ ಆರಾಧಿಸುವುದು ಕಂಡುಬರುತ್ತದೆ. ಕೊಪ್ಪಳ ತಾಲೂಕಿನ ಕುಷ್ಟಗಿ ತಾಲೂಕಿನ ಮನ್ನೆರಾಳದಲ್ಲಿ ಗಂಗಿ ಮಾಳವ್ವಳ ದೇವಾಲಯವಿದೆ.

### ೬.೧.೧೩ ಗುಮಗೇರಿ ದುರ್ಗಮ್ಮ

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಗುಮಗೇರಿ ಗ್ರಾಮದಲ್ಲಿ ದುರ್ಗಮ್ಮಳ ದೇವಾಲಯವಿದೆ. ಈ ದೇವಾಲಯದ ದ್ವಾರ ಪೂರ್ವಕ್ಕಿದೆ. ಕಟ್ಟಿಗೆಯ ಮೂರ್ತಿಗೆ ಬೆಳ್ಳಿಯ ಮುಖವಾಡ ಜೋಡಿಸಿದ್ದಾರೆ. ಈ ದೇವಾಲಯದ ಪೂಜಾರಿಗಳು ಕುರುಬರಾಗಿದ್ದಾರೆ. ಪ್ರತಿ ವರ್ಷ ಆಗಿ ಹುಣ್ಣಿಮೆಯ ನಂತರ ೯ ದಿನಕ್ಕೆ ಈ ದೇವಿಯ ಉತ್ಸವ ನಡೆಯುತ್ತದೆ. ಈ ಉತ್ಸವ ೫ ದಿನ ನಡೆಯುತ್ತಿತ್ತು. ಆದರೆ ಇಂದು ೨ ದಿನ ಮಾತ್ರ ನಡೆಯುತ್ತದೆ. ಪೂಜಾರಿ ಮನೆಯಿಂದ ಕಳಸ, ಕುಂಬ, ಮುಖ ಮೊದಲಾದವು ಹಲಗೆ, ಡೊಳ್ಳುಗಳೊಂದಿಗೆ ಗುಡಿಗೆ ಸೂರ್ಯೋದಯದ ಸಮಯಕ್ಕೆ ಬರುತ್ತವೆ. ದೇವಿಗೆ ಚಂದನ, ಕುಂಕುಮ, ಭಂಡಾರ ಲೇಪಿಸಿ ಸೀರೆ, ಕುಬಸ, ಬಳೆ ಹೂದಂಡಗಳಿಂದ ಸಿಂಗರಿಸುತ್ತಾರೆ. ನಂತರ ನೈವೇದ್ಯ ಅರ್ಪಿಸುತ್ತಾರೆ. ಪೂಜಾರಿಗಳು ಅಕ್ಕಿ ಪಾಯಿಸ ಮಾಡುವುದು ಹಾಗೂ ಕೆಂಡ ಹಾರುವ ಆಚರಣೆಗಳನ್ನು ನಡೆಸಿಕೊಡುತ್ತಾರೆ. ಮೊದಲಿಗೆ ಕೋಣ ಬಲಿಯಿತ್ತು. ಆದರೆ ಈಗ ಕುರಿ ಬಲಿ ನೀಡಲಾಗುತ್ತದೆ.

### ೬.೧.೧೪ ಎಲ್ಲಮ್ಮ

ಎಲ್ಲಮ್ಮ ದೇವತೆಯನ್ನು ಸರ್ವಸಮಾಜದವರು ಆರಾಧಿಸುವದು ಕಂಡುಬರುತ್ತದೆ. ಬ್ರಾಹ್ಮಣರು ರೇಣುಕಾ, ವೀರಶೈವರು ಸತ್ಯಕ್ಕ, ಜೈನರು ಪದ್ಮಾವತಿ, ಕೆಳವರ್ಗದವರು ಹುಲಿಗೆಮ್ಮ, ಸವಾರೆಮ್ಮ, ಮಾಪುರತಾಯಿಯೆಂದು ಭಿನ್ನ ಹೆಸರುಗಳಿಂದ ಆರಾಧಿಸುವುದು ಕಂಡುಬರುತ್ತದೆ.[೫೭] ಸವದತ್ತಿಯ ಎಲ್ಲಮ್ಮ, ಚಂದ್ರಗುತ್ತಿಯ ಎಲ್ಲಮ್ಮ, ಹೊನ್ನತ್ತಿಯ ಎಲ್ಲಮ್ಮರು ಮೈಲಾರಲಿಂಗನ ಸೋದರಿಯರೆಂಬ ಐತಿಹ್ಯವಿದೆ. ಈ ಮೂವರು ಸೋದರಿಯರು ಭಂಡಾರವನ್ನು ತಮ್ಮ ತವರುಮನೆಯಿಂದಲೇ ತಂದರೆಂಬ ನಂಬಿಕೆಯಿದೆ. ಕುರುಬರು ಎಲ್ಲಮ್ಮನನ್ನು ತಮ್ಮ ಮನೆಯ ಹೆಣ್ಣು ದೇವರೆಂದು ಪೂಜಿಸುತ್ತಾರೆ.

ಸವದತ್ತಿಯ ಎಲ್ಲಮ್ಮಳ ಗುಡ್ಡಕ್ಕೆ ಪ್ರತಿ ಹುಣ್ಣಿಮೆ ಅಥವಾ ಭಾರತ ಹುಣ್ಣಿಮೆಗೆ ಹೋಗುವುದು ಕಂಡುಬರುತ್ತದೆ. ಕೆಲವರು ಹುಲಿಗೆಮ್ಮಳ ದೇವಾಲಯಕ್ಕೆ ಹೋಗುತ್ತಾರೆ. ತಮ್ಮ ಹರಕೆ, ಕಾಣಿಕೆಗಳನ್ನು ಸಲ್ಲಿಸುತ್ತಾ ಉದೋ.. ಉದೋ.. ಎಂಬ ಘೋಷಣೆ ಕೂಗುತ್ತಾರೆ. ಜೋಗುತಿಯರು ಜೋಗು ಹಾಕುತ್ತಾ, ಚವಡಿಕೆ ಬಾರಿಸುತ್ತಾ ನರ್ತನ ಮಾಡುವುದು ಕಂಡುಬರುತ್ತದೆ. ಹಡಲಗಿ ತುಂಬಿಸುವ, ಹೊಳೆ ಪೂಜೆ ಮಾಡುವ, ಕುರಿ ಬಲಿ ಕೊಡುವ ಪದ್ಧತಿಯು ಕುರುಬರಲ್ಲಿ ಕಂಡುಬರುತ್ತದೆ.

### ೬.೧.೧೫ ಇಟಗಿ ಭೀಮಾಂಬಿಕೆ

ಭೀಮಾಂಬಿಕೆ ಕುರುಬ (ಹಾಲುಮತ) ಜನಾಂಗದ ಒಬ್ಬ ಅನುಭವಿ ಹೆಣ್ಣುಮಗಳು. ಗದಗ ಜಿಲ್ಲೆಯ ರೋಣ ತಾಲೂಕಿನ ಇಟಗಿ ಗ್ರಾಮದಲ್ಲಿ ಸೋಮಣ್ಣ ಹನುಮಮ್ಮ ಎಂಬ ದಂಪತಿಗಳಿಗೆ ಅರ್ಜುನಪ್ಪ, ಸಕ್ರಪ್ಪರೆಂಬ ಅಣ್ಣಂದಿರ ನಂತರ ಸುಮಾರು ೧೮ನೇ ಶತಮಾನದ ಆಧಿಭಾಗದಲ್ಲಿ ಬೀಮವ್ವ ಜನಿಸಿದಳು.[೫೮] ಬಾಲ್ಯದಲ್ಲಿ ವಿದ್ಯಾಭ್ಯಾಸ ಪಡೆಯಲಿಲ್ಲ. ತಂದೆ ತಾಯಿಯ ಒತ್ತಾಯದ ಮೇರೆಗೆ ನಿಡಗುಂದಿ ಕೊಪ್ಪದ ಬಿಲ್ಲಾರ ಮನೆತನದ ಒಗೆದಾಡೆಪ್ಪನೊಂದಿಗೆ ವಿವಾಹವಾದಳು.[೫೯] ನಂತರ ಮೂವರು ಪುತ್ರಿಯರು ಹಾಗೂ ಒಬ್ಬ ಪುತ್ರನನ್ನು ಪಡೆದಳು. ಕಾಳಿಂಗಪ್ಪನೇ ಇವಳ ಪುತ್ರನಾಗಿದ್ದನೆಂಬ ಪ್ರತೀತಿಯಿದೆ.

ಸಂಸಾರ ಬಂಧನದಲ್ಲಿದ್ದರೂ ಆದ್ಯಾತ್ಮಿಕ ಜೀವನದೆಡೆಗೆ ಒಲವು ತೋರಿಸುತ್ತಿದ್ದಳು. ನಿರುಪಾದಿ ಗುರುಗಳಿಂದ ಅನುಗ್ರಹ ಪಡೆದ ಭೀಮವ್ವ ಗುರು ಲಿಂಗಜಂಗಮದ ಪ್ರೇಮಿಯಾಗಿದ್ದಳು. ಅನೇಕ ಸಾಂಸಾರಿಕ ಸಂಕಷ್ಟಗಳ ಪರಿಹರಿಸಿ ಧರ್ಮ, ಸತ್ಯ, ನ್ಯಾಯಗಳ ಪ್ರಸಾರ ಮಾಡಿದಳು. ಅದೇ ಸಮಯದಲ್ಲಿ ಪತಿ ಮರಣ ಹೊಂದಿದನು. ನಂತರ ತವರೂರಾದ ಇಟಗಿಯಲ್ಲಿ ನೆಲೆಸತೊಡಗಿದಳು. ಪಾರಮಾರ್ಥಿಕ ಹಾಗೂ ಐಹಿಕಗಳೆರಡನ್ನು ಸಮವಾಗಿ ಕಂಡುಕೊಂಡು ಜನೋಪಕಾರಿ ಕಾರ್ಯಕ್ಕೈಗೊಂಡಳು. ಜಾತಿ ಮತ ಪಂಥ ಸಿದ್ದಾಂತಗಳೆಂಬ ಸಂಕುಚಿತ ವ್ಯಾಪ್ತಿಯಿಂದ ಹೊರಬಂದು ಧರ್ಮ ಸಮಾನತೆ ಸಾರಿದಳು.[೬೦]

ಭೀಮವ್ವನ ಮರಣದ ನಂತರ ಮಠವನ್ನು ನಿರ್ಮಿಸಲಾಯಿತು. ಪ್ರತಿ ಅಮವಾಸ್ಯೆಗೊಮ್ಮೆ ಜಾತ್ರೆಯ ರೀತಿಯಲ್ಲಿ ಜನ ಸೇರುತ್ತಾರೆ. ಭೀಮವ್ವನ ಗದ್ದುಗೆಗೆ ಕಾಯಿ ಕಟ್ಟಿದರೆ ತಮ್ಮ ಬಯಕೆಗಳು ಈಡೇರುತ್ತವೆ ಹಾಗೂ ತೊನ್ನು ರೋಗಕ್ಕೆ ದೇವಸ್ಥಾನದ ದೀಪದ ಎಣ್ಣೆಯನ್ನು ಲೇಪಿಸಿದರೆ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ. ಇಂದು ಕೊಪ್ಪಳ ಜಿಲ್ಲೆಯಾದ್ಯಂತ ಭೀಮವ್ವನ ಗದ್ದುಗೆಗಳನ್ನು ಕಾಣಬಹುದಾಗಿದೆ. ಕೊಪ್ಪಳ ಭಾಗದ ಲೇಬಗೇರಿ, ಗುಳದಳ್ಳಿ, ಕೊರಡಕೇರಿ, ಸೊಂಪುರ, ದಮ್ಮೂರು, ಯಲಬುರ್ಗಾ ಮೊದಲಾದೆಡೆ ಭೀಮವ್ವನ ಗದ್ದುಗೆಯನ್ನು ನಿರ್ಮಿಸಿ ಪೂಜಿಸಲಾಗುತ್ತಿದೆ. ಪ್ರತಿ ಅಮವಾಸ್ಯೆಗೆ ವಿಶೇಷ ಪೂಜೆ ಮಾಡಿ ಪ್ರಸಾದ ನೀಡಲಾಗುತ್ತದೆ. ಈ ಹಿನ್ನೆಲೆಯಲ್ಲಿ ಕುರುಬರ ಆರಾಧ್ಯ ದೈವಗಳಲ್ಲಿ ಭೀಮವ್ವ ಪ್ರಮುಖ ಸ್ಥಾನ ಪಡೆದು ಧರ್ಮದೇವತೆಯಾಗಿದ್ದಾಳೆ.

### ೬.೧.೧೬ ಸಜ್ಜಲ ಗುಡ್ಡದ ಶರಣಮ್ಮ

ಶರಣಮ್ಮ ಕುರುಬ ಜನಾಂಗದ ಶಿವಶರಣೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಮುದೇನೂರು ಎಂಬ ಗ್ರಾಮದಲ್ಲಿ ಒಂದು ಸಾಮಾನ್ಯ ಹಾಲುಮತ ಕುಟುಂಬವಿತ್ತು.[೬೧] ಲಿಂಗಮ್ಮ ಆ ಕುಟುಂಬದ ಒಡತಿಯಾಗಿದ್ದಳು. ಲಿಂಗಮ್ಮಳ ಪತಿ ಸಂಸಾರ

ತ್ಯಜಿಸಿ ಹೊರಟು ಹೋದನೆಂಬ ಅಭಿಪ್ರಾಯವಿದೆ. ಆತನ ಹೆಸರೂ ಸಹ ತಿಳಿಯುವುದಿಲ್ಲ. ಲಿಂಗಮ್ಮನಿಗೆ ಕ್ರಿ.ಶ.೧೮೮೦ರಲ್ಲಿ ಯಮನವ್ವ ಜನಿಸಿದಳು.[೬೨] ಗಂಡನಿಲ್ಲದ ಲಿಂಗಮ್ಮ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿನ ಹೊಣೆಹೊತ್ತಳು. ಊರಲ್ಲಿದ್ದ ಮಟ್ಟಮನೆ ಹಾಗೂ ನಾಲ್ಕೈದು ಎಕರೆ ಜಮೀನಿನಿಂದ ಜೀವನ ನಡೆಸತೊಡಗಿದಳು. ಯಮನವ್ವ ಚಿಕ್ಕವಯಸ್ಸಿನಲ್ಲಿಯೇ ತಾಯಿಯೊಂದಿಗೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದಳು. ಆದರೆ ತಾಯಿ ಹಾಗೂ ನೆರೆಹೊರೆಯವರೊಂದಿಗೆ ಎಂದೂ ಕೂಡಿ ಊಟ ಮಾಡುತ್ತಿರಲಿಲ್ಲ. ಗೆಳತಿಯರೊಂದಿಗೆ ಆಟವಾಡುತ್ತಿರಲಿಲ್ಲ. ಬನ್ನಿಯ ಅಥವಾ ಬೇವಿನ ಗಿಡದ ಕೆಳಗೆ ಕುಳಿತುಕೊಂಡು ಕಲ್ಲಿನ ಲಿಂಗವನ್ನು ಮಾಡಿ ಪೂಜಿಸುತ್ತ ಕುಳಿತಿರುತ್ತಿದ್ದಳು. ಹೀಗಾಗಿ ಯಮನವ್ವಳಿಗೆ ಬಾಲ್ಯದಿಂದಲೇ ಆಧ್ಯಾತ್ಮಿಕತೆಯ ಕಡೆಗೆ ಅಪಾರ ಒಲವಿತ್ತು.

ಮುದೇನೂರಿನಲ್ಲಿದ್ದ ಜಮೀನು ಬೇರೆಯವರ ಪಾಲಾಯಿತಲ್ಲದೆ, ಕ್ರಿ.ಶ. ೧೮೯೦ರಲ್ಲಿ ಭೀಕರ ಬರಗಾಲ ಉಂಟಾಯಿತು. ಇದರಿಂದಾಗಿ ಲಿಂಗಮ್ಮ ತನ್ನ ಎರಡು ಮಕ್ಕಳೊಂದಿಗೆ ಬಳ್ಳಾರಿ ಜಿಲ್ಲೆಯ ಕಂಪ್ಲಿಯಲ್ಲಿ ಸೂರ ಪಂಪಣ್ಣನವರ ಮನೆಯಲ್ಲಿ ಆಶ್ರಯಪಡೆದಳು. ನಂತರ ಲಿಂಗಸೂರಿಗೆ ಬಂದು ನೆಲೆಸಿದಳು. ಆದರೆ ಗಂಡು ಮಗ ಕಂಪ್ಲಿಯಲ್ಲೆಯೇ ನೆಲೆಸಿದನು. ಲಿಂಗಸೂರಿನಲ್ಲಿ ತೋಂಟದ ಶ್ರೀ ಸಿದ್ಧಲಿಂಗೇಶ್ವರ ಮಠದಲ್ಲಿ ತಾಯಿ ಮಗಳು ಆಶ್ರಯ ಪಡೆದರು. ಸ್ವಾಮಿಗಳು ಯಮನವ್ವಳಿಗೆ ರುದ್ರಾಕ್ಷಿ ನೀಡಿ ಆಶೀರ್ವದಿಸಿದರು. ನಂತರ ಲಿಂಗಸೂರಿನಿಂದ ಪಶ್ಚಿಮಕ್ಕೆ ೧೨ ಕಿ.ಮೀ. ದೂರದಲ್ಲಿರುವ ಮಾವಿನಭಾವಿ ಗ್ರಾಮಕ್ಕೆ ಬಂದು ನೆಲೆಸಿದರು.[೬೩] ಮಾವಿನಭಾವಿಯಲ್ಲಿದ್ದ ವೀರಪ್ಪ, ಶಿವಾಜಿ, ಮುಕ್ತುಂಸಾಬ್, ಗುಲಾಮಸಾಬ್ ಮೊದಲಾದ ಎಲ್ಲ ಧರ್ಮಿಯರು ಉತ್ತಮ ಹಾಡುಗಾರರಾಗಿದ್ದರು. ಇವರ ಹಾಡುಗಳನ್ನು ಯಮನವ್ವ ಕಲಿತು ಮಧುರವಾಗಿ ಹಾಡತೊಡಗಿದಳು. ಕಾಲಾನಂತರ ಗ್ರಾಮದ ಜನರು ಯಮನವ್ವಳಿಗೆ ಪ್ರಸಾದ ನೀಡಿ ಅವಳು ಹಾಡುವ ಹಾಡುಗಳನ್ನು ಕೇಳಿ ಹೋಗುತ್ತಿದ್ದರು. ಮುಕ್ತುಂಸಾಬ್, ನಿಜಗುಣರವರು ಸಾಹಿತ್ಯ ಜ್ಞಾನಸಿಂಧು ಅನುಭವ ಸಾರವನ್ನು ಓದತೊಡಗಿದಾಗ ಅದರ ಭಾವಾರ್ಥವನ್ನು ಜನರಿಗೆ ತಿಳಿಸಿ ಹೇಳುತ್ತಿದ್ದಳು.

ಮಾವಿನಭಾವಿಯಲ್ಲಿದ್ದಾಗ ಯಮನವ್ವಳ ರೂಪಕ್ಕೆ ಮನಸೋತ ಕುರಿಬಸವಣ್ಣ ಎಂಬ ಯುವಕ ಮದುವೆಯಾಗಲು ಬಯಸಿದನು. ಆದರೆ ಯಮನವ್ವ ಖಡಾಖಂಡಿತವಾಗಿ ತಿರಸ್ಕರಿಸಿ ಶರಣಮ್ಮಳಾಗಲು ನಿಶ್ಚಯಿಸಿದಳಲ್ಲದೆ ಸಜ್ಜಲಗುಡ್ಡಕ್ಕೆ ಬಂದು ನೆಲೆಸಿದಳು. ಇಲ್ಲಿ ಹವಾಲದಾರ್ ಬಸಲಿಂಗಪ್ಪ ಮತ್ತು ಭೀಮನಗೌಡರ ಆಶ್ರಯ ದೊರೆಯಿತು. ಗುಡದೂರಿನ ಶ್ರೀ ದೊಡ್ಡ ಬಸವಾಚಾರ್ಯರು ಆ ಗ್ರಾಮದ ದೈವವಾಗಿದ್ದರು. ಯಮನವ್ವ ಗುರುಗಳನ್ನು ಭೇಟಿ ಮಾಡಿ ನಾನು ಮದುವೆ ಆಗುವುದಿಲ್ಲ ಶರಣಮ್ಮನಾಗಬೇಕೆಂದಿರುವೆ ನನಗೆ ದೀಕ್ಷೆ ನೀಡಬೇಕೆಂದು ಕೇಳಿಕೊಂಡಳು. ಆದರೆ ಶರಣರು ಒಪ್ಪಲಿಲ್ಲ. ಬಹಳ ಒತ್ತಾಯದ ನಂತರ ಮೂರು ದಿನಗಳ ಕಠಿಣ ಶಿಕ್ಷೆ ನೀಡಿ ಪರೀಕ್ಷಿಸಿದ ನಂತರ ಕುರುಬಳಾಗಿದ್ದ ಯಮನವ್ವಳಿಗೆ ದೀಕ್ಷೆ ನೀಡಿರಲ್ಲದೆ, ಶಿಕ್ಷಣ ಉಪದೇಶಗಳನ್ನು ನೀಡಿದರು.[೬೪]

ದೀಕ್ಷೆಯನ್ನು ಪಡೆದ ನಂತರ ಯಮನವ್ವ ಶರಣಮ್ಮನಾಗಿ ಪರಿವರ್ತನೆಯಾದಳು. ಮೊದಲಿಗೆ ಶರಣಮ್ಮ ಲಿಂಗವನ್ನು ಜಡೆಯಲ್ಲಿ ಬಚ್ಚಿಟ್ಟುಕೊಂಡಿದ್ದಳು. ಕೆಲ ಸಮಯದ ನಂತರ ಲಿಂಗವನ್ನು ಎದೆ ಮೇಲೆ ಹಾಕಿಕೊಂಡಳು ಗುರು ವಾಕ್ಯವನ್ನು

ಎಂದೂ ಮೀರುತ್ತಿರಲಿಲ್ಲ. ಪ್ರತಿದಿನ ಐದು ಮನೆಯ ಭಿಕ್ಷೆ ಮಾಡಬೇಕಿತ್ತು. ಪ್ರತಿ ಮನೆಯಲ್ಲಿ ಅರ್ಧರೊಟ್ಟಿ ಮಾತ್ರ ಸ್ವೀಕರಿಸಬೇಕಿತ್ತು. ಕೆಲವೇಳೆ ಊಟವಿಲ್ಲದೆ ನೀರು ಕುಡಿದು ಧ್ಯಾನಾಸಕ್ತಳಾಗುತ್ತಿದ್ದಳು. ಕಾಲಾನಂತರ ಜನರಿಗೆ ಅಮ್ಮನು ಮಾತನಾಡುವ ದೇವಿಯಾದಳು. ನಾಡಿನ ಮೂಲೆಗಳಿಂದ ಜನರು ಬಂದು ತಮ್ಮ ಕಷ್ಟಗಳ ಪರಿಹಾರ ಪಡೆಯುತ್ತಿದ್ದರು.

ಶರಣಮ್ಮ ತನ್ನ ಐವತ್ತನೇ ವರ್ಷದಲ್ಲಿ ಸಜ್ಜಲಗುಡ್ಡದ ಅಮ್ಮನೆಂದು ಪ್ರಸಿದ್ಧಿಗೊಂಡಳು. ಮಠಕ್ಕೆ ಬಂದ ಭಕ್ತರಿಗೆ ಪ್ರೀತಿಯಿಂದ ಕಂಡು ಅವರ ನೋವುಗಳಿಗೆ ಪರಿಹಾರ ಸೂಚಿಸತೊಡಗಿದಳು. ಭಕ್ತರು ಏನೇ ಕೊಟ್ಟರೂ ಸಂತೋಷದಿಂದ ಸ್ವೀಕರಿಸುತ್ತಿದ್ದಳು. ನಾಡಿನ ನಾನಾ ಭಾಗಗಳಿಂದ ಜನರು ಅಮ್ಮನ ದರ್ಶನಕ್ಕೆ ಬರತೊಡಗಿದರು. ಪ್ರತಿವರ್ಷ ಜಾತ್ರೆ ನಡೆಯತೊಡಗಿತು. ನೂರು ವರ್ಷಗಳ ಕಾಲ ಬಾಳಿ ಬದುಕಿ ಜನರ ದುಃಖ ಕಷ್ಟ-ಕಾರ್ಪಣ್ಯಗಳಿಗೆ ಸ್ಪಂಧಿಸಿದ ಶರಣಮ್ಮ ಇಪ್ಪತ್ತನೇ ಶತಮಾನದ ಮಹಾಮಾನವತಾ ಮೂರ್ತಿಯಾಗಿ, ದಿವ್ಯ ಚೇತನವಾದಳೆಂದು ಕಂಡುಬರುತ್ತದೆ.[೬೫] ಇಂದು ಶರಣಮ್ಮನ ಮಠದಿಂದ ಶಿಕ್ಷಣಕ್ಕೆ ಉತ್ತಮ ವ್ಯವಸ್ಥೆ ಕಲ್ಪಿಸಲಾಗಿದೆ. ಇಂದಿಗೂ ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಆಗಮಿಸುತ್ತಾರೆ.

### ೬.೨ ಕುರುಬರ ಮೇಲೆ ಇತರೆ ಧರ್ಮಗಳ ಪ್ರಭಾವ

ಪ್ರಾಚೀನ ಕಾಲದಿಂದಲೂ ಪ್ರಕೃತಿಯ ಆರಾದಕರಾಗಿದ್ದ ಕುರುಬರ ಧಾರ್ಮಿಕ ಪರಂಪರೆ ಭವ್ಯವಾದುದಾಗಿದೆ. ಮೂಲತಃ ಶೈವಧರ್ಮದ ಅವಲಂಭಿಗಳಾದ ಕುರುಬರು ಕಾಲಾನಂತರ ಬಂದ ಧರ್ಮ ಪಂಥಗಳ ಅವಲಂಭಿಗಳಾದರು. ದ್ರಾವಿಡ ಕಾಲದಲ್ಲಿ ಶೈವ ಧರ್ಮ ಮತ್ತು ನಂತರ ಆರ್ಯರ ಕಾಲದಲ್ಲಿ ವೈಷ್ಣವ ಧರ್ಮ ಪ್ರಚಲಿತವಾಯಿತು. ಕಾಲಾನಂತರ ಬೌದ್ಧ, ಜೈನ, ವೀರಶೈವ, ಇಸ್ಲಾಂ, ಕ್ರೈಸ್ತ ಮೊದಲಾದ ಧರ್ಮಗಳು ಸೃಷ್ಟಿಗೊಂಡವು ಈ ಧರ್ಮಗಳು ಅಸ್ತಿತ್ವಕ್ಕೆ ಬಂದಾಗ ಅವುಗಳ ಅವಲಂಬಿಗಳನ್ನು ಜೊತೆಗೆ ತಂದಿರಲಿಲ್ಲ. ಕಾಲಾನಂತರ ಜನರು ಆ ಧರ್ಮಗಳಿಗೆ ಪ್ರಭಾವಿತರಾಗಿ ಅದರ ಅವಲಂಬಿಗಳಾದರು. ಅದೇ ರೀತಿ ಕುರುಬರೂ ಸಹ ಇತರೆ ಧರ್ಮಗಳಿಂದ ಪ್ರಭಾವಿತರಾದರಲ್ಲದೆ, ಧಾರ್ಮಿಕವಾಗಿ ಪರಿವರ್ತನೆಗೊಳಗಾದರು. ಹೀಗಾಗಿ ಮೂಲತಃ ಶೈವರಾಗಿದ್ದ ಕುರುಬರು ನಂತರ ವೈಷ್ಣವ, ಬೌದ್ಧ, ಜೈನ, ವೀರಶೈವ ಮೊದಲಾದ ಧರ್ಮಗಳಿಗೆ ಪರಿವರ್ತನೆಗೊಂಡರೆಂದು ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕುರುಬರ ಮೇಲೆ ಇತರೆ ಧರ್ಮಗಳ ಪ್ರಭಾವವನ್ನು ಈ ರೀತಿ ವಿವರಿಸಲಾಗಿದೆ.

### ೬.೨.೧ ಶೈವ ಧರ್ಮ

ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮವಾಗಿದೆ. ಶೈವ ಧರ್ಮದ ಇತಿಹಾಸ ವೇದಗಳ ಕಾಲಕ್ಕಿಂತಲೂ ಪುರಾತನವಾಗಿದೆ. ಶೈವಧರ್ಮ ಭಾರತ ಮತ್ತು ಏಷ್ಯಾದ ಬಹುತೇಕ ಜನಾಂಗಗಳ ಏಕೈಕ ಧರ್ಮವಾಗಿತ್ತು.[೬೬] ಅಲ್ಲದೆ ಪ್ರಾಚೀನ ಕಾಲದಿಂದ ಇಂದಿಗೂ ಭಾರತದ ಬಹುಸಂಖ್ಯಾತರ ಧರ್ಮ ಶೈವ ಧರ್ಮವಾಗಿರುವುದು ಕಂಡುಬರುತ್ತದೆ. ಶೈವಧರ್ಮದಲ್ಲಿ ಲಕುಲೀಶ, ಕಾಳಾಮುಖ, ಕಾಪಾಲಿಕ ಎಂಬ ಪಂಥಗಳಿವೆ.[೬೭] ಅವುಗಳೆಲ್ಲ ಶಿವನನ್ನು ಆರಾಧಿಸಿದರೂ, ಆರಾಧನೆಯ ಮಾರ್ಗ ಬಿನ್ನವಾಗಿದೆ. ಹೀಗಾಗಿ ಶೈವ ಧರ್ಮಕ್ಕೆ ಲಾಕುಲ ಸಮಯ ಎಂಬ ಮತ್ತೊಂದು ಹೆಸರಿದೆ. ಈ ಹೆಸರೇ ಬಹುಶಃ ಪ್ರಾಚೀನವಾದುದೆಂದು ಡಾ. ಭಂಡಾರ್ಕರ್‌ರವರು ಅಭಿಪ್ರಾಯಪಟ್ಟಿದ್ದಾರೆ. ಹೀಗಾಗಿ ಅತ್ಯಂತ ಪ್ರಾಚೀನ ಮತ್ತು ವಿಶಿಷ್ಟವಾದ ಧರ್ಮವಾಗಿದೆ.

ದ್ರಾವಿಡರು ಶೈವ ಧರ್ಮದ ಅನುಯಾಯಿಗಳಾಗಿದ್ದರು. ಅದೇ ರೀತಿ ದ್ರಾವಿಡರಾಗಿದ್ದ ಕುರುಬರು ಮೂಲತಃ ಶೈವ ಧರ್ಮದ ಅನುಯಾಯಿಗಳಾಗಿದ್ದರೆಂದು ತಿಳಿಯುತ್ತದೆ. ಇಂದಿಗೂ ಕುರುಬರು ಲಿಂಗಾಧಾರಿತ ದೇವರುಗಳಾದ ಬೀರಲಿಂಗ, ಮೈಲಾರಲಿಂಗ, ಯಲ್ಲಾಲಿಂಗ, ಮಾಳಿಂಗ, ಮೊದಲಾದ ದೇವರುಗಳನ್ನು ಮನೆದೇವರು ಅಥವಾ ಕುಲದೇವರೆಂದು ಆರಾಧಿಸುತ್ತಿರುವುದು ಇದಕ್ಕೆ ಸಾಕ್ಷಿ. ಶೈವ ಧರ್ಮದ ಪಂಥವಾದ ಕಾಳಾಮುಖ ಸಮಯವನ್ನು ಎಕ್ಕೋಟಿ ಸಮಯವೆಂದು ಕಾಳಾಮುಖ ಮಠವನ್ನು ಎಕ್ಕೋಟಿ ಮಠವೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.[೭೯] ಈ ಪಂಥದಲ್ಲಿರುವ ಮಂತ್ರಗಳು ಏಳುಕೋಟಿ ಹಾಗೂ ಮಂತ್ರೇಶ್ವರರು ಏಳುಕೋಟಿ ಹೀಗಾಗಿ ಈ ಮತಕ್ಕೆ "ಎಕ್ಕೋಟಿ ಸಮಯ"ವೆಂದು ಕರೆಯಲಾಗಿದೆ. ಇಂದಿಗೂ ಕರ್ನಾಟಕದಲ್ಲಿ ಮೈಲಾರನ ಭಕ್ತರು "ಏಳುಕೋಟಿ ಉಘೇ ಚಾಂಗು ಭಲಾ" ಎಂದು ಶಿವನ ಜಯಘೋಶ ಮಾಡುತ್ತಾರೆ. ಇವರನ್ನು ಗ್ವಾರಯ್ಯ, ಗೊರವಯ್ಯ ಎನ್ನುತ್ತಾರೆ. ಅಲ್ಲದೆ ಈ ಕಾಳಾಮುಖರನ್ನು ಶಾಸನಗಳು ಗೊರವರೆಂದು ಕರೆದಿರುವುದು ಗಮನಾರ್ಹವಾಗಿದೆ.[೮೦] ಈ ಹಿನ್ನೆಲೆಯಲ್ಲಿ ಕುರುಬರು ಶೈವಧರ್ಮದ ಅನುಯಾಯಿಗಳೆಂದು ತಿಳಿದುಬರುತ್ತದೆ.

ಶೈವ ಧರ್ಮದ ಪ್ರಮುಖ ಪಂಥವಾದ ಪಾಶುಪತ ಕಾಳಾಮುಖರು ಮೂಲತಃ ಗೊರವರು (ಕುರುಬರು). ಇವರು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದರು ಎಂದು ಡಾ.ಎಂ.ಎಚ್. ಕೃಷ್ಣರವರು ಅಭಿಪ್ರಾಯ ಪಟ್ಟಿದ್ದಾರೆ.[೮೧] ಮುಖದ ಮೇಲೆ ಕಪ್ಪುಗೆರೆಗಳನ್ನು ಹಚ್ಚಿಕೊಳ್ಳುವ ಮೂಲಕ ಕಾಳಾಮುಖರೆಂದು ಕರೆಯಲ್ಪಟ್ಟರು. ಪಾಶುಪತ, ಕಾಳಾಮುಖ, ಕಾಪಾಲಿಕರಲ್ಲಿ ಪಾಶುಪತ ಕಾಳಾಮುಖರು ತಮ್ಮ ಸಾತ್ವಿಕ ಆಚರಣೆಗಳಾದ ಶಕ್ತಿ, ಪಂಡಿತ ದೇವ ಎಂಬ ಹೆಸರಿನಿಂದ ಬೆಳಕಿಗೆ ಬಂದರು. ಶಾಸನಗಳು ಇವರನ್ನು ನೈಷ್ಠಿಕ ತಪೋದನರೆಂದು ಕರೆದಿವೆ.[೮೨] ಶಿವನು ತನ್ನ ಇಪ್ಪತ್ತೆಂಟನೇಯ ಅವತಾರದಲ್ಲಿ ಲಕುಲೀಶನಾಗಿ, ಲಾಕುಲದಾರಿಯಾಗಿ ಕಾವ್ಯಾವರೋಹನೆಂಬ ಸ್ಥಳದಲ್ಲಿ ಜನಿಸಿ ಈ ಮತವನ್ನು ಸ್ಥಾಪಿಸಿದನೆಂದು ಹೇಳಲಾಗಿದೆ.[೮೩] ಕ್ರಿ.ಪೂ. ೧ನೇ ಶತಮಾನದ ಪೂರ್ವದಲ್ಲಿದ್ದ ಲಕುಲೀಶನು ಪಾಶುಪತ ಸೂತ್ರಗಳನ್ನು ರಚಿಸಿದನು. ಇವನು ಪ್ರತಿಪಾದಿಸಿದ ಶೈವಸಿದ್ಧಾಂತ ನಾಲ್ವರು ಶಿಷ್ಯರಿಂದ ನಾಲ್ಕು ಶಾಖೆಯಾಗಿ ಒಡೆಯಿತು. ಇವರು ಎಲ್ಲೆಡೆ ಶೈವಧರ್ಮ ಪ್ರಸರಿಸಲು ಕಾರಣರಾದರು ಎಂದು ತಿಳಿಯುತ್ತದೆ.

ಲಾಕುಲ ಶೈವರು ಎಲ್ಲೆಡೆ ದೇವಾಲಯಗಳನ್ನು ಸ್ಥಾಪಿಸತೊಡಗಿದರು. ಬಾದಾಮಿಯ ಬಳಿ ಮಹಾಕೂಟೇಶ್ವರ ದೇವಾಲಯವನ್ನು ನಿರ್ಮಿಸಿದರು. ಲಿಂಗಶಿವಾಜಿಯು ಭಿಕ್ಷಾವೃತ್ತಿಯಿಂದ ದ್ರವ್ಯವನ್ನು ಸಂದಾದಿಸಿ ಇಟ್ಟಿಗೆ ದೇವಾಲಯವನ್ನು ನಾಶಪಡಿಸಿದನಲ್ಲದೆ, ಕಲ್ಲಿನ ದೇವಾಲಯಗಳನ್ನು, ಕೊಂಡಗಳನ್ನು ಕಟ್ಟಿಸಿದನೆಂದು ತಿಳಿಯುತ್ತದೆ.[೮೪] ಮಹಾವಿದ್ವಾಂಸರು, ಮಹಾತಪಸ್ವಿಗಳು, ಮಹಾ ವೈರಾಗ್ಯಪರರೂ ಆಗಿದ್ದ ಇವರು ವಿದ್ಯಾಪ್ರೇಮಿಗಳಾಗಿದ್ದರು. ದೇವಸ್ಥಾನ, ಮಠಗಳಲ್ಲಿಯ ತಪೋಧನರು ಮತ್ತು ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಏರ್ಪಾಟು ಮಾಡಿದ್ದರು. ಜನರ ಹಿತಕ್ಕಾಗಿ ಕೆರೆಗಳನ್ನು ಕಟ್ಟಿಸುತ್ತಿದ್ದರಲ್ಲದೆ, ಊರಿನ ರಕ್ಷಣೆಗಾಗಿ ಹೋರಾಡಿ ಸತ್ತವರ ಸಂಸಾರದ ನಿರ್ವಹಣೆಗಾಗಿ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ದೇವಾಲಯ ನಿರ್ಮಿಸುವುದು, ದಾನ ದತ್ತಿಗಳನ್ನು ಸ್ವೀಕರಿಸುವುದು, ಸಂರಕ್ಷಿಸುವುದು ಇವರ ಕಾರ್ಯವಾಗಿತ್ತೆಂದು ಡಾ. ಎಂ.ಎಂ ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.[೮೫]

ಕಾಳಾಮುಖ ಗುರುಗಳು ರಾಜಪೂಜಿತರಾಗಿದ್ದರು. ಅನೇಕ ಮನೆತನಗಳಿಗೆ ರಾಜಗುರುಗಳಾಗಿ ಕಾರ್ಯ ನಿರ್ವಹಿಸಿದ್ದರು.

ಚಕ್ರವರ್ತಿ ಪೆರ್ಮಾಡಿರಾಯನಿಗೆ ಇಂದ್ರಶಿವ ದೇವಚಾರ್ಯ ಪ್ರಮುಖ ರಾಜಗುರುಗಳಾಗಿದ್ದರು. ಅದೇ ರೀತಿ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಹಾಗೂ ಕಲಚೂರಿಗಳ ಕಾಲದ ವರೆಗೂ ಕಾಳಾಮುಖರ ಸ್ಥಾನ ಉನ್ನತ ಹಂತದಲ್ಲಿತ್ತೆಂದು ತಿಳಿಯುತ್ತದೆ. ಈ ಅರಸು ಮನೆತನದವರೆಲ್ಲ ಶೈವ ಧರ್ಮದ ಅವಲಂಬಿಗಳಾಗಲು ಇವರ ಪಾತ್ರ ಮಹತ್ವದ್ದಾಗಿತ್ತು. ಅರಸರು ಕಾಳಾಮುಖರಿಗೆ ಅನೇಕ ದಾನ-ದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ.

ವಿಜಯನಗರ ಸಾಮ್ರಾಜ್ಯದ ಸಂಗಮ ಅರಸರು ಶೈವಧರ್ಮಿಗಳಾಗಿದ್ದರು. ಸಂಗಮ ಕಾಲದಲ್ಲಿ ಹೆಚ್ಚಿನ ಮಟ್ಟಿಗೆ ಶೈವ ಪಂಥ ಹಾಗೂ ಅದರ ತಾತ್ವಿಕ ವಿಚಾರಗಳ ಪಾಲನೆಗೆ ಪ್ರಾಮುಖ್ಯತೆ ನೀಡಲಾಗಿತ್ತು. ಕೊಪ್ಪಳ ಜಿಲ್ಲೆಯ ಕಲ್ಲೂರ ಶಾಸನ ಕುಲದೇವರು, ತಪೋಧನರು, ಕಾಳಾಮುಖಯತಿ, ಶಿವಶಕ್ತಿ ಪಂಡಿತರ ಉಲ್ಲೇಖ ನೀಡುತ್ತದೆ. ಕುಕನೂರಿನ ಶಾಸನ ಕಳೇಶ್ವರ ಮುನಿಯನ್ನು ಉಲ್ಲೇಖಿಸುತ್ತದೆ. ಆಚಾರ್ಯ ಮಲ್ಲಯ್ಯ, ಆಚಾರ್ಯ ದೇವದಾಸಿ ಪಂಡಿತ, ಬಳಗೇರಿ ಸೋಬನರಸಾಚಾರ್ಯ, ತಳಕಲ್ಲಿನ ಸಿದ್ಧೇಶ್ವರ, ಸಂಕರಾಶಿಭವಾರನ ಶಿಷ್ಯ ಅಮೃತ ರಾಶಿಮುನಿ ಮೊದಲಾದವರು ಕಾಳಾಮುಖ ಪಂಥವರಾಗಿದ್ದು ಶೈವಧರ್ಮದ ಅಭಿವೃದ್ಧಿಗೆ ಶ್ರಮಸಿದರೆಂದು ತಿಳಿಯುತ್ತದೆ.

ಕೊಪ್ಪಳ ಜಿಲ್ಲೆಯಾದ್ಯಂತ ವಿಜಯನಗರ ಕಾಲದಲ್ಲಿ ಮುಂಡರಗಿಯ ಈಶ್ವರ, ಕನಕಗಿರಿಯ ಮಲ್ಲಿಕಾರ್ಜುನ, ಬಸವೇಶ್ವರ ನೀಲಕಂಠೇಶ್ವರ, ಈಶ್ವರ ದೇವಾಲಯಗಳು, ಅಲ್ಲದೆ ವಿಜಯ ನಗರೋತ್ತರ ಕಾಲದಲ್ಲಿ ಚಳಗೇರಾದ ವೀರಭದ್ರೇಶ್ವರನ ದೇವಾಲಯ, ಅಳವಂಡಿಯ ವೀರಭದ್ರ ದೇವಾಲಯ, ಬಹದ್ದೂರಬಂಡಿಯ ಈಶ್ವರ ದೇವಾಲಯ ಮೊದಲಾದವು ನಿರ್ಮಾಣಗೊಂಡವು. ಹೀಗಾಗಿ ಶೈವಧರ್ಮ ತನ್ನದೇ ಆದ ಸ್ಥಾನ ಪಡೆದುಕೊಂಡಿತ್ತೆಂದು ತಿಳಿಯುತ್ತದೆ.

### ೬.೨.೨ ಜೈನ ಧರ್ಮ

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಜೈನ ಧರ್ಮವು ಬೌದ್ಧಧರ್ಮದ ಒಂದು ಪ್ರಬೇಧವೆಂದು ಭಾವಿಸಿದ್ದರು. ಆದರೆ ನಂತರದಲ್ಲಿ ಜೈನಧರ್ಮವು ಬೌದ್ಧಧರ್ಮಕ್ಕಿಂತ ಪ್ರಾಚೀನವಾದುದೆಂದು ಸ್ಥಿರಪಟ್ಟಿತು.[೭೬] ಜೈನಧರ್ಮವು ಇಪ್ಪತ್ತುನಾಲ್ಕು ತೀರ್ಥಂಕರುಗಳನ್ನು ಹೊಂದಿದೆ. ಅದರಲ್ಲೂ ಮಹಾವೀರನ ಕಾಲದಲ್ಲಿ ಜೈನಧರ್ಮ ಅವಿಭಕ್ತವಾಗಿತ್ತು. ಕಾಲಾನಂತರ ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪಂಗಡಗಳಾಗಿ ಒಡೆದು ಹೋಯಿತು. ಶ್ವೇತಾಂಬರ ಸಂಪ್ರದಾಯವು ಉತ್ತರ ಭಾರತದಲ್ಲಿ, ದಿಗಂಬರ ಸಂಪ್ರದಾಯವು ದಕ್ಷಿಣ ಭಾರತದಲ್ಲಿ ಪ್ರಚಲಿತವಾಯಿತು.[೭೭]

ಕ್ರಿ.ಶ. ೧ನೇ ಶತಮಾನದಲ್ಲಿ ಮಾನ್ಯಖೇಟದ ಸುತ್ತಮುತ್ತ ಜೈನರಿದ್ದರೆಂದು ತಿಳಿಯುತ್ತದೆ. ಕದಂಬರ ಕಾಲದಲ್ಲಿ ಜೈನಧರ್ಮ ಕರ್ನಾಟಕದಲ್ಲಿ ನೆಲೆಸಿತ್ತೆಂಬುದಕ್ಕೆ ಆಧಾರಗಳಿವೆ. ಕರ್ನಾಟಕದಲ್ಲಿ ದಿಗಂಬರ ಸಂಪ್ರದಾಯದವರು ಅಧಿಕವಾಗಿದ್ದರು. ಇವರು ಆರಂಭದಲ್ಲಿ ಬೆಟ್ಟ-ಗುಡ್ಡಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಅಲ್ಲಿಂದ ಧರ್ಮ ಪ್ರಚಾರವನ್ನು ಪ್ರಾರಂಭಿಸಿದರು. ಅವರು ಆಯ್ದುಕೊಂಡ ಸ್ಥಳಗಳೆಂದರೆ ಉತ್ತರ ಕರ್ನಾಟಕದಲ್ಲಿ ಕೊಪ್ಪಳ, ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳ.[೭೮] ಕೊಪ್ಪಳದಲ್ಲಿ ಏಳನೇ ಶತಮಾನದ ಜೈನಧರ್ಮ ಶಾಸನ ದೊರೆತಿದೆ. ಇದರಿಂದಾಗಿ ಏಳನೇ ಶತಮಾನದಲ್ಲಿಯೇ ಜೈನಧರ್ಮ ಆಸ್ತಿತ್ವದಲ್ಲಿತ್ತೆಂದು

ತಿಳಿಯುತ್ತದೆ.[೪೯] ಮುದೋಳ ಗ್ರಾಮದಲ್ಲಿ ಪಾರ್ಶ್ವನಾಥನ ವಿಗ್ರಹವಿದೆ. ಆಡೂರಿನಲ್ಲಿ ಕೆಲವು ಜೈನ ಶಿಲ್ಪಗಳಿವೆ. ರಾಜೂರಿನಲ್ಲಿ ದೊರೆತ ಶಾಸನದಿಂದ ಅಲ್ಲಿ ಒಂದು ಜಿನ ಬಸದಿ ಇತ್ತೆಂದು ತಿಳಿಯುತ್ತದೆ. ಹೀಗೆ ಎಲ್ಲ ರೀತಿಯಿಂದಲೂ ಜೈನಧರ್ಮಕ್ಕೆ ಪ್ರಮುಖ ಸ್ಥಳವಾದ ಕೊಪ್ಪಳದಲ್ಲಿ ಜೈನಧರ್ಮ ಪ್ರಬಲವಾಗಿ ಬೆಳೆಯಿತು.

ಪ್ರಾಚೀನ ಕಾಲದಲ್ಲಿ ಒಂದು ಕುಟುಂಬದ ಒಬ್ಬ ವ್ಯಕ್ತಿ ಒಂದು ಧರ್ಮಕ್ಕೆ ಇನ್ನೊಬ್ಬ ವ್ಯಕ್ತಿ ಇನ್ನೊಂದು ಧರ್ಮಕ್ಕೆ ಮತಾಂತರವಾಗಬಹುದಲ್ಲದೆ, ಒಬ್ಬ ತನ್ನ ಜೀವಮಾನದಲ್ಲಿ ಇಚ್ಛೆ ಬಂದಂತೆ ಅನೇಕ ಸಲ ಮತವನ್ನು ಬದಲಿಸಬಹುದಿತ್ತು. ವೈದಿಕರು ಅಬ್ರಾಹ್ಮಣರನ್ನು ಮತಾಂತರ ಮಾಡಿಕೊಳ್ಳುತ್ತಿರಲಿಲ್ಲ. ಆದರೆ ಜೈನರು ಅಬ್ರಾಹ್ಮಣರಿಗೆ ಮಂತ್ರ ದೀಕ್ಷೆ ನೀಡಿ ಮತಾಂತರಗೊಳಿಸುತಿದ್ದರು. ಇದು ಕೆಳವರ್ಗದವರಿಗೆ ಒಂದು ರೀತಿಯಲ್ಲಿ ಮಾನಸಿಕ ನೆಮ್ಮದಿಯನ್ನು ಸಾಮಾಜಿಕ ಪ್ರತಿಷ್ಠೆಯನ್ನು ನೀಡಿತು. ಇದರಿಂದಾಗಿ ಜನರು ಮತಾಂತರಕ್ಕೆ ಮುಂದಾದರು.

ಜೈನಧರ್ಮದ ಪ್ರಾಬಲ್ಯಕ್ಕೆ ಬರುವ ವೇಳೆಗೆ ಕುರುಬ ಸಮುದಾಯ ಐತಿಹಾಸಿಕವಾಗಿ ಬಹಳ ಮುಂದುವರೆದಿತ್ತು. ಪ್ರಾಚೀನಕಾಲದಲ್ಲಿದ್ದ ತಮಿಳು ಕುರುಬರು ಜೈನ ಧರ್ಮಕ್ಕೆ ಪ್ರಭಾವಿತರಾಗಿದ್ದರೆಂದು ಮೆಕೆಂಜಿಯವರ ಸಂಗ್ರಹದಿಂದ ತಿಳಿಯುತ್ತದೆ.[೫೦] ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನು ಭದ್ರಭಾಹುವಿನೊಂದಿಗೆ ಕೂಡಿಕೊಂಡು ಜೈನಧರ್ಮ ಸ್ವೀಕರಿಸಿ ಶ್ರವಣಬೆಳಗೊಳದಲ್ಲಿ ಮರಣ ಹೊಂದಿದನು. ಕ್ರಿ .ಶ ೯೬೪ರಲ್ಲಿ ಯಾದವ ವಂಶದ ಶಂಕರಗೌಡನು ತನ್ನ ಹೆಸರಿನಲ್ಲಿ ಜಯಧೀರ ಜಿನಾಲಯವನ್ನು ಕೂಪಣದಲ್ಲಿ ನಿರ್ಮಿಸಿದನು.[೫೧] ಕ್ರಿ.ಶ. ೧೨೦೪ರಲ್ಲಿ ಯಾದವ ಸಿಂಗಣ ಒಂದು ಬಸದಿಯನ್ನು ನಿರ್ಮಿಸಿದನೆಂದು ಶಾಸನಗಳು ಉಲ್ಲೇಖಿಸುತ್ತವೆ.[೫೨]

ವಿಜಯನಗರ ಅರಸರು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರು. ಇವರ ಮಾಂಡಲಿಕರಾಗಿದ್ದ ಜಾಟರು, ಅಬೆಲರು, ಬೈರರು ಜೈನಧರ್ಮಕ್ಕೆ ಆಶ್ರಯದಾತರಾಗಿದ್ದರು. ಬಸದಿಗಳ ನಿರ್ಮಾಣ, ಯತಿಗಳಿಗೆ ಗೌರವ, ಸನ್ಮಾನ ದಾನ ದತ್ತಿಗಳನ್ನು ನೀಡುತ್ತಿದ್ದರು. ಅವರಲ್ಲಿ ಪ್ರೌಢದೇವರಾಯನಿಗೆ ಲಕ್ಕಣದಂಡನಾಥನು ಮುಖ್ಯಸೇನಾನಿಯಾಗಿದ್ದನು.[೫೩] ಇರುಗಪ್ಪ ದಂಡನಾಥ, ಮದುರ ನೇಮಿಚಂದ್ರ ವಿದ್ಯಾನಂದ ಮೊದಲಾದ ಜೈನಕವಿಗಳು ವಿಜಯನಗರ ಅರಸರಿಂದ ಪ್ರೋತ್ಸಾಹಿತರಾಗಿದ್ದರು.

ಕ್ರಿ.ಶ. ೧೩೪೨ರಲ್ಲಿ ಸಂಗಮ ಅರಸ ಮೊದಲನೇ ಹರಿಹರನ ದಂಡನಾಯಕ ಆನೆಗೊಂದಿಯಲ್ಲಿ ಒಂದು ಚೈತ್ಯಾಲಯವನ್ನು ನಿರ್ಮಿಸಿದನು.[೫೪] ಬುಕ್ಕರಾಯನ ಆಡಳಿತದ ಕಾಲದಲ್ಲಿ ಮೇಲು ಕೋಟೆಯಲ್ಲಿ ಜೈನರ ಮೇಲೆ ವೈಷ್ಣವರು ಹಲ್ಲೆ ಮಾಡಿದರು. ಇದರಿಂದಾಗಿ ಬುಕ್ಕರಾಯ ಮಧ್ಯಸ್ತಿಕೆ ವಹಿಸಿ ವೈಷ್ಣವರಿಂದ ಜೈನರನ್ನು ರಕ್ಷಿಸಿದನೆಂದು ತಿಳಿಯುತ್ತದೆ.[೫೫] ಹೀಗಾಗಿ ವಿಜಯನಗರದಲ್ಲಿ ಜೈನ ಧರ್ಮ ಉತ್ತಮ ಸ್ಥಾನ ಪಡೆದಿತ್ತು ಎಂಬುದು ಸ್ಪಷ್ಟ.

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಎಂಬ ಗ್ರಾಮದಲ್ಲಿ ರೇವಣಸಿದ್ಧೇಶ್ವರ ದೇವಾಲಯವಿದೆ. ಇದನ್ನು ಕುರುಬರ ಮೂಲ ಗುರು ಪೀಠ ಎನ್ನಲಾಗಿದೆ. ಇಲ್ಲಿ ಜೈನ ಧರ್ಮದ ಒಡೆದ ಮೂರ್ತಿಗಳಿವೆ ಹಾಗೂ ಇಲ್ಲಿಯ ಒಡೆಯರ ಆಚಾರ–ವಿಚಾರ, ಸಂಸ್ಕೃತಿ, ಸಂಸ್ಕಾರಗಳನ್ನು ನೋಡಿದಾಗ ಇವರು ಮೂಲತಃ ಜೈನ ಶ್ವೇತಾಂಬರ ಪಂಗಡವರಾಗಿದ್ದರು. ಕಾಲಾಂತರ ವೀರಶೈವ ಧರ್ಮದ ಪ್ರಭಾವಕ್ಕೊಳಗಾದರೆಂದು ತಿಳಿಯುತ್ತದೆ.[೫೬] ಈ ದೇವಾಲಯದಲ್ಲಿ ದೊರೆತ ಒಂದು ಶಾಸನ

ಇದಕ್ಕೆ ಆಧಾರವಾಗಿದೆ. ಕೊಪ್ಪಳದಲ್ಲಿ ಜೈನ ಧರ್ಮದ ೧೨ ಬಸದಿಗಳಿದ್ದವೆಂದು ಶಾಸನಗಳು ಉಲ್ಲೇಖಿಸುತ್ತವೆ.[೮೮] ಅವುಗಳಲ್ಲಿ ಚಂದ್ರನಾಥ ಬಸದಿ, ಶಾಂತಿನಾಥ ಬಸದಿ, ಕುಶಜಿನಾಲಯ, ತೀರ್ಥದ ಬಸದಿ ಪ್ರಮುಖವಾಗಿದ್ದವು. ಮುಧೋಳ, ಯಲಬುರ್ಗಾ, ಮಂಡಲಗಿರಿ, ರಾಜೂರು, ಆನೆಗೊಂದಿ ಮೊದಲಾದ ಸ್ಥಳಗಳಲ್ಲಿ ಅನೇಕ ಜೈನ ಅವಶೇಷಗಳಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕುರುಬರು ಜೈನ ಧರ್ಮಕ್ಕೆ ಮತಾಂತರಗೊಂಡು ಜೈನರಾಗಿದ್ದರೆಂದು ಸ್ಪಷ್ಟಪಡುತ್ತದೆ.

### ೬.೨.೩. ಬೌದ್ಧಧರ್ಮ

ಗೌತಮನಿಂದ ಸೃಷ್ಟಿಗೊಂಡ ಬೌದ್ಧ ಧರ್ಮ ತನ್ನ ಉತ್ತಮ ತತ್ವಗಳಿಂದ ಜನರ ಮನಸ್ಸನ್ನು ಸೂರೆಗೊಂಡಿತು. ಮೌರ್ಯ ಚಕ್ರವರ್ತಿ ಅಶೋಕನಿಂದ ಈ ಧರ್ಮ ಪ್ರಪಂಚದಾದ್ಯಂತ ಹರಡಿತು. ಬುದ್ಧನು ಮಹಾಧರ್ಮವೊಂದರ ಪ್ರತಿಷ್ಠಾಪಕ ಎಂಬ ಗೌರವಕ್ಕೆ ಪಾತ್ರನಾಗಬಲ್ಲ ಏಕೈಕ ಆರ್ಯನೆಂದು ರೈಸ್ ಡೇವಿಡ್ಸ್ ಅಭಿಪ್ರಾಯ ಪಟ್ಟಿದ್ದಾರೆ.[೮೯] ಕಾಲಾನಂತರ ಬೌದ್ಧಧರ್ಮದಲ್ಲಿ ಹೀನಯಾನ ಮತ್ತು ಮಹಾಯಾನ ಎಂಬ ಎರಡು ಪಂಗಡಗಳಾದವು. ನಂತರ ಭಾರತದಲ್ಲಿ ತನ್ನ ಪ್ರಾಬಲ್ಯ ಕಳೆದುಕೊಂಡ ಧರ್ಮ ವಿದೇಶದಲ್ಲಿ ಪ್ರಬಲವಾಗಿ ಬೆಳೆಯಿತು.

ಉತ್ತರ ಭಾರತದಲ್ಲಿ ಹುಟ್ಟಿದ ಬೌದ್ಧಧರ್ಮ ಕರ್ನಾಟಕಕ್ಕೆ ಕಾಲಿರಿಸಿದ್ದುದು ಬೌದ್ಧಧರ್ಮದ ಆಶ್ರಯದಾತನಾದ ಅಶೋಕನ ಆಳ್ವಿಕೆಯ ಕಾಲದಲ್ಲಿ. ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಸಿದ್ದಾಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿ, ಉತ್ತರ ಕರ್ನಾಟಕದ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಅಶೋಕನಿಂದ ಬೌದ್ಧಧರ್ಮ ಪ್ರಸಾರಗೊಂಡಿತೆಂಬುದಕ್ಕೆ ಶಾಸನಗಳು ಆಧಾರಗಳಾಗಿವೆ. ಅಶೋಕನ ಕಾಲಕ್ಕೆ ಕರ್ನಾಟಕಕ್ಕೆ ಬಂದ ಬೌದ್ಧಧರ್ಮ ಶಾತವಾಹನರ ಕಾಲದಲ್ಲಿ ರಾಜಧರ್ಮವಾಗಿ ಬೆಳೆಯಿತು. ಚೀನಿ ಪ್ರವಾಸಿ ಹ್ಯೂ-ಯನ್-ತ್ಸಾಂಗ್ ಕೊಪ್ಪಳವನ್ನು "ಕೊಂಕಿನ ಪೋಲೆ" ಎಂದು ಕರೆದಿದ್ದಾನೆ. ಅಲ್ಲದೆ ಅಶೋಕ ನಿರ್ಮಿಸಿದ ಸ್ತೂಪಗಳಿರುವುದಾಗಿ ಇದೊಂದು ಬೌದ್ಧ ಕೇಂದ್ರ ಸ್ಥಾನವೆಂದು ತಿಳಿಸಿದ್ದಾನೆ.[೯೦] ಕದಂಬರು, ಬಾದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳ ಕಾಲದಲ್ಲೂ ಬೌದ್ಧಧರ್ಮ ಅಸ್ತಿತ್ವದಲ್ಲಿತ್ತು. ಆದರೆ ನಂತರದಲ್ಲಿ ಅದರ ಪ್ರಭಾವ ಕಡಿಮೆಯಾಗತೊಡಗಿತು.

ವಿಜಯನಗರದ ಅರಸರು ಬೌದ್ಧಧರ್ಮಕ್ಕೆ ಪ್ರಾಮುಖ್ಯತೆ ನೀಡಿದ್ದರು. ಆದರೆ ಜೈನಧರ್ಮದಷ್ಟು ಪ್ರಾಬಲ್ಯ ಪಡೆದಿರಲಿಲ್ಲ. ಈ ಕಾಲದಲ್ಲಿ ಕಾಂಚಿಪುರಂ, ನಾಗಪಟ್ಟಣಂ, ಕಲಾವತಿಗಳಲ್ಲಿ ವಿಶೇಷವಾದ ಸ್ಮಾರಕಗಳನ್ನು ಕಾಣಬಹುದಾಗಿದೆ. ಕೃಷ್ಣದೇವರಾಯ ತನ್ನ ಅಮುಕ್ತ ಮೌಲ್ಯದ ಕೃತಿಯಲ್ಲಿ  ಬುದ್ಧನನ್ನು ವಿಷ್ಣುಮತದ ಅವತಾರ ಎಂದು ಚಿತ್ರಿಸಿದ್ದಾನೆ.[೯೧] ಹೀಗಾಗಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಜನರಿಗೆ ಬೌದ್ಧಧರ್ಮ ಸ್ವೀಕರಿಸಲು ಅವಕಾಶವಿತ್ತೆಂದು ತಿಳಿದುಬರುತ್ತದೆ.

ಬೌದ್ಧಧರ್ಮ ಸಾಮಾನ್ಯ ಜನರಿಗೆ ಮತಾಂತರಗೊಳ್ಳಲು ಅವಕಾಶ ನೀಡಿತು. ಕೆಳವರ್ಗದವರಿಗೆ ಉನ್ನತ ಸ್ಥಾನವನ್ನು ನೀಡಲು ಮುಂದಾಯಿತು. ಹಿಂದೂ ಧರ್ಮದಲ್ಲಿಯ ತೊಡಕುಗಳನ್ನು ಕಂಡು ಬೇಸತ್ತ ಜನರು ಈ ಧರ್ಮವನ್ನು ಸ್ವೀಕರಿಸಿದರೆನ್ನಲಾಗಿದೆ. ಆಧುನಿಕ ಕಾಲದಲ್ಲಿ ಅನೇಕರು ಬೌದ್ಧಧರ್ಮಕ್ಕೆ ಮತಾಂತರಗೊಂಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಭಾಗದ ಕುರುಬರು ಸಹ ಬೌದ್ಧಧರ್ಮದ ಪ್ರಭಾವಕ್ಕೊಳಗಾಗಿ ಬೌದ್ಧಧರ್ಮಿಗಳಾದರೆಂದು ತಿಳಿಯುತ್ತದೆ.

## ೨.೨.೪ ವೈಷ್ಣವ ಧರ್ಮ

ದ್ರಾವಿಡರು ಮೂಲತಃ ಶೈವರಾಗಿದ್ದರು. ದ್ರಾವಿಡರ ಮೇಲೆ ಆರ್ಯರು ಆಕ್ರಮಣ ಮಾಡಿ ಅವರನ್ನು ಸೋಲಿಸಿದರು. ಸೋತ ದ್ರಾವಿಡರು ಆರ್ಯರಾಗಿ ಪರಿವರ್ತನೆಗೊಂಡರು. ಆರ್ಯರು ವೈಷ್ಣವ ಧರ್ಮದ ಅವಲಂಬಿಗಳಾಗಿದ್ದರು. ಶೈವ ಧರ್ಮದ ಅವಲಂಬಿಗಳಾಗಿದ್ದ ದ್ರಾವಿಡರು ಆರ್ಯರಾಗಿ ಪರಿವರ್ತನೆಗೊಂಡ ಮೇಲೆ ವೈಷ್ಣವ ಧರ್ಮವನ್ನು ಅವಲಂಬಿಸಿದರು. ಹೀಗಾಗಿ ಮೂಲತಃ ದ್ರಾವಿಡರಾಗಿದ್ದ ಕುರುಬರು ನಂತರ ಆರ್ಯರಾಗಿ ವೈಷ್ಣವ ಧರ್ಮಿಗಳಾದರೆಂದು ಹೇಳಬಹುದು.

ಕ್ರಿ.ಪೂ. ದಲ್ಲಿಯೇ ಕರ್ನಾಟಕವನ್ನು ವೈಷ್ಣವಧರ್ಮ ಪ್ರವೇಶಿಸಿತು. ಕ್ರಿ.ಶ. ನಾಲ್ಕನೇ ಶತಮಾನದಲ್ಲಿ ಕರ್ನಾಟಕದಾದ್ಯಂತ ಜನಪ್ರಿಯವಾಗಿತ್ತು. ಕೆಲವು ಶಾಸನಗಳು ಶಿವ ಮತ್ತು ವಿಷ್ಣುಪರವಾದ ಸೂತ್ರಗಳನ್ನು ಹೊಂದಿರುವುದು ಕಂಡುಬರುತ್ತದೆ. ಇದರಿಂದಾಗಿ ಈ ಎರಡು ಧರ್ಮಗಳು ಒಂದನ್ನೊಂದು ಹೊಂದಿಕೊಂಡು ಬೆಳೆಯುತ್ತಿದ್ದ ಸೂಚನೆ ನೀಡುತ್ತದೆ. ವೈಷ್ಣವ ಧರ್ಮವನ್ನು ಭಾಗವತಪಂಥ, ಶ್ರೀವೈಷ್ಣವಪಂಥ ಹಾಗೂ ದ್ವೈತಪಂಥ ಎಂಬ ಮೂರು ಶಾಖೆಗಳಲ್ಲಿ ಗುರುತಿಸಲಾಗುತ್ತಿದೆ.[೨]

ವೈಷ್ಣವ ಧರ್ಮದ ಬ್ರಾಹ್ಮಣರು ಅಗ್ರಹಾರದ ಮಹಾರಾಜರೆನಿಸಿ ಅಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದರು, ಅಲ್ಲದೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನಪ್ರತಿಗ್ರಹ ಎಂಬ ಷಟ್ಕರ್ಮಗಳಲ್ಲಿ ನಿರತರಾಗಿದ್ದರು. ಬ್ರಾಹಣರಲ್ಲಿ ಕೆಲವರು ರಾಜಮನ್ನಣೆಯೊಂದಿಗೆ ರಾಜಗುರು ಪಟ್ಟವನ್ನು ಪಡೆದಿದ್ದರು. ಪ್ರಾಚೀನ ಸಮಾಜ ವ್ಯವಸ್ಥೆಯಲ್ಲಿ ವರ್ಣಾಶ್ರಮ ಧರ್ಮವನ್ನು ಚಾಚೂ ತಪ್ಪದೆ ಅನೂಸರಿಸಿಕೊಂಡು ಬಂದ ಇವರು ರಾಜಕೀಯದಲ್ಲಿ ಪ್ರಮುಖ ಸ್ಥಾನ ವಹಿಸಿದ್ದರು. ಚಾಲುಕ್ಯರು, ಹೊಯ್ಸಳರು ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಬ್ರಾಹಣರು ಇವರಿಗೆ ರಾಜಗುರುಗಳಾಗಿದ್ದರು.

ವಿಜಯನಗರ ಅರಸರು ಮೂಲತಃ ಶೈವರಾಗಿದ್ದರು ಆದರೂ ವೈಷ್ಣವ ಧರ್ಮದ ಪ್ರೋತ್ಸಾಹಕರಾಗಿದ್ದರು. ಬುಕ್ಕರಾಯನ ಕಾಲದಲ್ಲಿ ಮೇಲುಕೋಟೆಯ ಜೈನರು ಮತ್ತು ವೈಷ್ಣವರ ಮಧ್ಯೆ ಕಲಹವಾಯಿತು. ಈ ಕಲಹ ಬುಕ್ಕರಾಯನ ಸಮ್ಮುಖದಲ್ಲಿ ತೀರ್ಮಾನಗೊಂಡಿತು. ಜೈನರು ದೇವಾಲಯಗಳ ಉಸ್ತವಾರಿಯನ್ನು ನೋಡಿಕೊಳ್ಳಬೇಕೆಂಬ ತಿರ್ಮಾನವನ್ನು ಬುಕ್ಕರಾಯ ನೀಡಿದ್ದನೆಂದು ಶಾಸನ ಉಲ್ಲೇಖಿಸುತ್ತದೆ. ಇದು ವೈಷ್ಣವ ಧರ್ಮಕ್ಕೆ ಸಂಗಮ ಅರಸರು ನೀಡಿದ್ದ ಪ್ರಾಮುಖ್ಯತೆಯೆಂದು ತಿಳಿಯುತ್ತದೆ. ತುಳು ವಂಶದ ಕೃಷ್ಣದೇವರಾಯ ಸಂಪೂರ್ಣವಾಗಿ ವೈಷ್ಣವ ಧರ್ಮದ ಅವಲಂಬಿಯಾಗಿದ್ದನು. ತಿರುಪತಿ ದೇವಾಲಯಕ್ಕೆ ಅನೇಕ ದಾನದತ್ತಿಗಳನ್ನು ನೀಡಿದ್ದನು. ಅನೇಕ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದರೆಂದು ತಿಳಿಯುತ್ತದೆ.

ಕೊಪ್ಪಳ ಜಿಲ್ಲೆಯಾದ್ಯಂತ ಅನೇಕ ವೈಷ್ಣವ ದೇವಾಲಯಗಳು ನಿರ್ಮಾಣಗೊಂಡವು. ಅವುಗಳಲ್ಲಿ ಕನಕಗಿರಿಯ ಕನಕಾಚಲಪತಿ ದೇವಾಲಯ, ಅಷ್ಟಮಹಿಷಿ, ಕೃಷ್ಣ ದೇವಾಲಯ ಪ್ರಮುಖವಾಗಿವೆ. ಅದೇ ರೀತಿ ಕರೆಹಳ್ಳಿಯ ತಿಮ್ಮಪ್ಪ, ಕೊಪ್ಪಳದ ಪಾಂಡುರಂಗ, ಕುಷ್ಟಗಿಯ ರಾಮಲಿಂಗೇಶ್ವರ, ಆನೆಗೂಂದಿಯ ಲಕ್ಷ್ಮಿನರಸಿಂಹ, ಬಂಕಾಮರದ ವಿಷ್ಣು ದೇವಾಲಯ, ಕಲ್ಲೂರಿನ ವೆಂಕಟರಮಣ ಮೊದಲಾದ ದೇವಾಲಯಗಳು ನಿರ್ಮಾಣಗೊಂಡವು.

ಮಧ್ಯಕಾಲದಲ್ಲಿ ವೈಷ್ಣವಧರ್ಮ ಕೆಳವರ್ಗದ ಜನರನ್ನು ಹತ್ತಿರಕ್ಕೆ ಸೇರಿಸಿಕೊಂಡಿತು. ಇದರಿಂದಾಗಿ ಜನರು ವೈಷ್ಣವ ಧರ್ಮದ

ಅವಲಂಬಿಗಳಾದರು. ಕುರುಬರು ಶೈವ ಧರ್ಮದಿಂದ ವೈಷ್ಣವ ಧರ್ಮಕ್ಕೆ ಮತಾಂತರಗೊಳ್ಳಲು ಪ್ರಮುಖವಾಗಿ ಕನಕದಾಸರು ಕಾರಣ ಎಂದು ಹೇಳಲಾಗಿದೆ. ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ಕುರುಬರಲ್ಲಿ ವೈಷ್ಣವ ಧರ್ಮದ ಅವಲಂಬಿಗಳಿದ್ದಾರೆ. ಅವರು ಇಂದಿಗೂ ವೆಂಕಟರಮಣ, ಕನಕದಾಸ, ಕನಕಾಚಲಪತಿ, ಆಂಜನೇಯ ಮೊದಲಾದ ವೈಷ್ಣವ ದೇವರನ್ನು ಆರಾಧಿಸುವುದು ಕಂಡುಬರುತ್ತದೆ. ಹೀಗಾಗಿ ಕುರುಬರು ವೈಷ್ಣವ ಧರ್ಮವನ್ನು ಅವಲಂಬಿಸಿರುವುದು ಸ್ಪಷ್ಟ.

**೬.೨.೫ ವೀರಶೈವಧರ್ಮ**

ಶೈವ ಧರ್ಮದ ಬೆಳವಣಿಗೆಯಲ್ಲಿ ಬಹುಶಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆ ಎಂದರೆ ವೀರಶೈವ ಧರ್ಮವೆನ್ನಬಹುದಾಗಿದೆ. ಎಲ್ಲ ಶೈವ ಸಿದ್ಧಾಂತಗಳ ಒಳ್ಳೆಯ ಅಂಶಗಳನ್ನು ತನ್ನಲ್ಲೆ ಸಮಾವೇಶಗೊಳಿಕೊಂಡು ವ್ಯಾಪಕವಾದ ಒಂದು ತತ್ವಸಿದ್ಧಾಂತವನ್ನು, ಆಚರಣೆಯ ಮಾರ್ಗವನ್ನು ಇದು ರೂಪಿಸಿಕೊಂಡಿತೆಂದು ಕಂಡುಬರುತ್ತದೆ. ಇದು ೧೨ನೇ ಶತಮಾನದಲ್ಲಿ ಬಸವಣ್ಣನವರ ಕಾಲದಲ್ಲಿ ಒಂದು ನಿರ್ದಿಷ್ಟವಾದ ಸ್ವರೂಪವನ್ನು ಪಡೆಯಿತು. ಹೀಗಾಗಿ ೧೨ನೇ ಶತಮಾನಕ್ಕಿಂತಲೂ ಪೂರ್ವದಲ್ಲಿ ಈ ಧರ್ಮ ಅಸ್ತಿತ್ವದಲ್ಲಿತೆಂಬುದು ಸ್ಪಷ್ಟ.

ಅಂದಿನ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ಪರಿಸರದ ಹಿನ್ನೆಲೆಯಲ್ಲಿ ಹೊಸ ತಾತ್ವಿಕ ಹಾಗೂ ಸಾಮಾಜಿಕ ದೃಷ್ಟಿಕೋನವನ್ನು ರೂಪಿಸಿಕೊಂಡಿದೆ. ೧೨ನೇ ಶತಮಾನದಲ್ಲಿ ಕಲ್ಯಾಣ ಕ್ರಾಂತಿ ನಡೆದು ಶರಣರು ಮತ್ತು ಅವರ ವಂಶಜರು ಕಲಚೂರಿ ಸಾಮ್ರಾಜ್ಯದ ಗಡಿದಾಟಿ ದಕ್ಷಿಣಕ್ಕೆ ಹೋದರು. ಮಾರ್ಗದಲ್ಲಿ ತಮಗೆ ಅನುಕೂಲವಾದ ಸ್ಥಳಗಳಲ್ಲಿ ದೇವಾಲಯ ಮತ್ತು ಮಠಗಳನ್ನು ನಿರ್ಮಿಸಿಕೊಂಡರು. ಬಸವಣ್ಣನವರು ವಚನ ಸಾಹಿತ್ಯ ಕಾಲದಲ್ಲಿ ಶರಣರ ಹೊಸ ವಿಚಾರಗಳು ಒಬ್ಬರಿಂದೊಬ್ಬರಿಗೆ ಹರಡಿ ಕಲ್ಯಾಣದ ಎಲ್ಲೆಡೆ ಹಬ್ಬಿತು. ವಚನ ಸಾಹಿತ್ಯ ಹಾಗೂ ಸಾಮಾಜಿಕ ಸಮಾನ ತತ್ವಕ್ಕೆ ಪ್ರಭಾವಿತರಾದ ಸಾಮಾನ್ಯ ಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು.

ಪ್ರಾಚೀನವಾದ ಪಾಶುಪತ ಪಂಥದೊಂದಿಗೆ ವೀರಶೈವಧರ್ಮ ಬೆರೆತು ಮುಂದುವರಿಯಿತು. ಲಕುಲೀಶ ಪಾಶುಪತರು, ಕಾಳಾಮುಖ ಪಾಶುಪತರು (ಗೊರವರು) ದಾನದತ್ತಿ ದೇವಾಲಯಗಳ ಜೀರ್ಣೋದ್ಧಾರ, ಶೈವದೇವಾಲಯಗಳನ್ನು ಕಟ್ಟಿಸುವುದು ನೋಡಿದರೆ ವೀರಶೈವರೊಂದಿಗಿನ ಅವರ ಸಂಬಂಧ ನಿಕಟಗೊಳ್ಳುತ್ತದೆ.

೧೨ನೇ ಶತಮಾನದಲ್ಲಿದ್ದ ರೇವಣಸಿದ್ಧರು ಕುರುಬರ ಕುಲಗುರುಗಳಾಗಿದ್ದರು. ಇವರು ಮೂಲತಃ ಶೈವರಾಗಿದ್ದು ನಂತರದ ಕಾಲದಲ್ಲಿ ವೀರಶೈವ ಧರ್ಮಿಗಳಾದರು. ಅಲ್ಲದೆ ಕುರುಬರನ್ನು ಸೇರಿಸಿ ಶಾಂತಮುತ್ತಯ್ಯರನ್ನು ಗುರುಗಳನ್ನಾಗಿ ನೇಮಿಸಿದರು. ಕುರುಬರಿಗೆ ಗುರು ಮಠಗಳನ್ನು ಸೃಷ್ಟಿಸಿಕೊಟ್ಟರು. ಹೀಗಾಗಿ ಕುರುಬರು ಅಂದಿನ ವೀರಶೈವ ಧರ್ಮದ ಕಡೆಗೆ ವಾಲಿದರು. ಅಂದಿನಿಂದ ಇಂದಿನವರೆಗೂ ಕುರುಬರ ಸಂಸ್ಕಾರ, ಸಂಪ್ರದಾಯ, ಆಚರಣೆಗಳು ವೀರಶೈವ ಧರ್ಮದಿಂದ ಪ್ರಭಾವಿತರಾಗಿರುವುದು ಕಂಡುಬರುತ್ತದೆ. ಇಂದಿಗೂ ಕುರುಬರ ಕುಲಗುರುಗಳು ವೀರಶೈವ ಧರ್ಮದ ಸಂಪ್ರದಾಯಗಳನ್ನು ನೆರವೇರಿಸುವುದು ಕಂಡುಬರುತ್ತದೆ.

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಅನೇಕ ವರ್ತಕರು ರಾಜರು ಅಧಿಕಾರಿಗಳು ವೀರಶೈವ ಧರ್ಮವನ್ನು ಸ್ವೀಕರಿಸಿದ್ದರೆಂಬುದಕ್ಕೆ ಆಧಾರಗಳಿವೆ. ಕವಲೂರು, ಅಳವಂಡಿ, ಮಾದಿನೂರು, ಹುಲಿಗಿ, ಕೊಪ್ಪಳ, ಕೊಲ್ಲೂರು, ಬಳಗೇರಿ, ಕುಕನೂರು, ಸಂಕನೂರು, ಮುಧೋಳ, ತಳಕಲ್ಲು, ಇಟಗಿ, ಹೀರೆಜಂತಕಲ್ಲು, ಆನೆಗೊಂದಿ ಶಾಸನಗಳು ಶೈವ ಧರ್ಮದ ದೇವಾಲಯಗಳ ಬಗ್ಗೆ ಉಲ್ಲೇಖಿಸುತ್ತವೆ.

೧೨ನೇ ಶತಮಾನದಲ್ಲಿ ವೀರಶೈವ ಧರ್ಮಕ್ಕೆ ಮತಾಂತರಗೊಂಡ ಕುರುಬರು ಇಂದಿಗೂ ಆ ಧರ್ಮದ ಆಚರಣೆಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಕುರುಬರಲ್ಲಿ ಹಾಲುಮತದವರು, ಹಂಡೆಕುರುಬರು, ಒಡೆಯರು ವೀರಶೈವ ಧರ್ಮದ ಅವಲಂಬಿಗಳಾಗಿದ್ದಾರೆ.

## ೬.೩. ಧಾರ್ಮಿಕ ಆಚರಣೆಗಳು

ಮನುಷ್ಯ ಏನು ಮಾಡುತ್ತಾನೆಂಬುದನ್ನು ತಿಳಿಸುವುದು ಸಂಪ್ರದಾಯವಾದರೆ, ಅದನ್ನು ಹೇಗೆ ಮಾಡುತ್ತಾನೆಂದು ತಿಳಿಸುವುದೇ ಆಚರಣೆಯಾಗಿದೆ. ಈ ಆಚರಣೆಗಳು ಪ್ರತಿಯೊಂದು ಧರ್ಮ, ಜಾತಿ, ಪಂಗಡಗಳಲ್ಲಿ ಕಂಡುಬರುತ್ತವೆ. ಈ ಅನುರೂಪ ಧಾರ್ಮಿಕ ವಿಧಿಗಳು ಮತ್ತು ವಾರ್ಷಿಕಾಚರಣೆಗಳ ಪಾರ್ಶ್ವ ರೂಪವೇ ಈ ಧಾರ್ಮಿಕ ಆಚರಣೆಗಳಾಗಿವೆ.[೯೩] ಯುಗಾದಿ, ನಾಗರಪಂಚಮಿ, ನವರಾತ್ರಿ, ದೀಪಾವಳಿ, ಶಿವರಾತ್ರಿ ಮೊದಲಾದ ಹಬ್ಬಗಳನ್ನು ಶ್ರದ್ಧೆಭಕ್ತಿಯಿಂದ ಆಚರಿಸುತ್ತಾರೆ. ಕೆಲವು ವಿಶೇಷ ಧಾರ್ಮಿಕ ಆಚರಣೆಗಳನ್ನು ಆಚರಿಸುವುದು ಕುರುಬರಲ್ಲಿ ಕಂಡುಬರುತ್ತದೆ.

### ೬.೩.೧ ಹಿರಿಯ ಆರಾಧನೆ

ಕುಟುಂಬದಲ್ಲಿ ತೀರಿಹೋದ ಹಿರಿಯರ ತಿಥಿ ಆಚರಣೆಯನ್ನು ಹಿರಿಯರ ಹಬ್ಬ ಅಥವಾ ಹಿರಿಯರ ಆರಾಧನೆ ಎಂದು ಕರೆಯಲಾಗಿದೆ. ಮರಣ ಹೊಂದಿರುವ ಹಿರಿಯರು ತಮ್ಮ ವಂಶಜರ ಸುಖ ಆರಾಗ್ಯದ ಬಗ್ಗೆ ವಿಶೇಷ ಆಸಕ್ತಿ ಹೊಂದಿರುತ್ತಾರಲ್ಲದೆ, ಅವರನ್ನು ಶಾಂತಿಗೊಳಿಸಿದರೆ ನಮಗೆ ಒಳ್ಳೆಯದಾಗುವದೆಂಬ ನಂಬಿಕೆ ಕುರುಬರಲ್ಲಿದೆ. ಇದರಿಂದಾಗಿ ಹಿರಿಯರ ಆರಾಧನೆ ಪ್ರಮುಖವಾಗಿದೆ. ಹಿರಿಯರ ಹಬ್ಬವನ್ನು ಯುಗಾದಿಹಬ್ಬದಂದು ಆಚರಿಸುತ್ತಾರೆ. ಕೆಲವೇಳೆ ಬೇರೆ ದಿನಗಳಂದು ಆಚರಿಸುವುದು ಕಂಡುಬರುತ್ತದೆ. ಈ ಹಬ್ಬದ ಆಚರಣೆಯ ಪೂರ್ವದಿನ ಮನೆಯನ್ನು ಶುಚಿಗೊಳಿಸಲಾಗುತ್ತದೆ. ಪ್ರತಿಯೊಬ್ಬರೂ ಎಣ್ಣೆನೀರಿನ ಸ್ನಾನ ಮಾಡಿ ಶುದ್ಧವಾಗುತ್ತಾರೆ. ಪಿತೃಗಳ ಸಂಕೇತವಾಗಿ ಎರಡು ತಾಮ್ರದ ತಂಬಿಗೆಗಳನಿಟ್ಟು, ಅದರಲ್ಲಿ ಮಡಿ ನೀರು ತುಂಬಿ ಅದರ ಮೇಲೆ ತೆಂಗಿನಕಾಯಿ ಇಡಲಾಗುತ್ತದೆ.[೯೪] ಗಂಡು–ಹೆಣ್ಣು ಎಂದು ಎರಡು ಭಾಗ ಮಾಡುತ್ತಾರೆ. ಎರಡು ಕಡೆಗೆ ಹೊಸ ಬಟ್ಟೆ ಆಭರಣಗಳನ್ನು ಇಡುತ್ತಾರೆ. ಗಂಡಿಗೆ ಹೊಸ ಪಂಚೆ, ಅಂಗಿ, ಟೋಪಿ, ಹೆಣ್ಣಿಗೆ ಸೀರೆ, ಕುಪ್ಪಸ, ಮೊದಲಾದ ವಸ್ತ್ರಗಳನ್ನು ಇಡುತ್ತಾರೆ. ವಸ್ತ್ರಗಳಿಗೆ ಭಂಡಾರ ಹಚ್ಚಿ, ಅಲಂಕಾರ ಮಾಡುತ್ತಾರೆ. ಮೃತರಿಗೆ ಪ್ರಿಯವಾಗಿದ್ದ ತಿನಿಸು–ಪಾನೀಯಗಳು, ಬೀಡಿ, ಸಿಗರೇಟ್, ತಂಬಾಕು ಎಲೆ ಅಡಿಕೆ ಮೊದಲಾದ ವಸ್ತುಗಳನ್ನಿಡಲಾಗುತ್ತದೆ. ನಂತರ ಆರತಿ ಬೆಳಗಿ ಲೋಬಾನದಿಂದ ದೂಪ ಹಾಕುತ್ತಾರೆ. ಅಂದು ಮಾಡಿದ ಸಿಹಿ ಅಡಿಗೆಯನ್ನು ಸ್ವೀಕರಿಸಲು ಹಿರಿಯರು ಬರುವರಲ್ಲದೆ, ಒಂದು ದಿನ ಕುಟುಂಬದ ಸದಸ್ಯರೊಂದಿಗೆ ನೆಲೆಸಿರುತ್ತಾರೆ ಎಂಬ ನಂಬಿಕೆಯಿದೆ. ಹೀಗಾಗಿ ಹಿರಿಯರ ಕೃಪೆಯನ್ನು ಸದಾ ಪಡೆದುಕೊಳ್ಳಲು ಹಿರಿಯರ ಆರಾಧನೆ ಮಾಡುವುದು ಕಂಡುಬರುತ್ತದೆ.

## ೬.೩.೨ ದೋಣಿ ಸೇವೆ

ದೋಣಿ ಎಂದರೆ ಚೌಕಾಕಾರದ ಬಟ್ಟಲು. ಇದಕ್ಕೆ ದೋಣಿ, ಕೊಟಮಿ, ಕೊಟಂಬಿ ಇತ್ಯಾದಿ ಹೆಸರುಗಳು ರೂಢಿಯಲ್ಲಿವೆ.[೫] ಮೈಲಾರಲಿಂಗನ ಸಂಕೇತವಾದ ದೋಣಿಯನ್ನು ಮಲ್ಲಾಸುರನ ಶಿರಸ್ಸು ಎಂದು ನಂಬಿದ್ದಾರೆ. ದೋಣಿಯಲ್ಲಿ ಆಹಾರ ನೀಡಿದರೆ ಅದು ಮೈಲಾರಲಿಂಗನಿಗೆ ಸೇರುತ್ತದೆಂಬ ನಂಬಿಕೆಯಿದೆ. ದೋಣಿ ಸೇವೆಯನ್ನು ಮೈಲಾರಲಿಂಗನ ಭಕ್ತರು ಕೈಕೊಳ್ಳುತ್ತಾರೆ. ಗೊರವರು ದೀಕ್ಷೆ ಪಡೆದುಕೊಳ್ಳುವಾಗ ದೋಣಿಯನ್ನು ನೀಡುತ್ತಾರೆ. ಗೊರವರು ಸದಾ ದೋಣಿಯನ್ನು ಜೊತೆಯಲ್ಲಿಟ್ಟುಕೊಂಡಿರಬೇಕಲ್ಲದೆ, ಅದನ್ನು ಎಂದೂ ಬೋರಲಾಗಿಡಬಾರದೆಂಬ ನಿಯಮವಿದೆ.

ಹಬ್ಬ, ಜಾತ್ರೆ ಮೊದಲಾದ ದಿನಗಳಂದು ದೋಣಿ ಸೇವೆ ಅಥವಾ ದೋಣಿ ತುಂಬಿಸುವುದು ರೂಢಿಯಲ್ಲಿದೆ. ದೋಣಿ ತುಂಬಲು ಕನಿಷ್ಠ ಎರಡು ದೋಣಿಗಳಾದರೂ ಬೇಕಾಗುತ್ತವೆ. ಮೊದಲು ದೋಣಿಗಳನ್ನು ತೊಳೆದು ಸ್ವಚ್ಛಗೊಳಿಸುತ್ತಾರೆ. ಅದರ ಮೇಲೆ ವಿಭೂತಿ, ಭಂಡಾರ, ಕುಂಕುಮ, ಲೇಪಿಸಿ ಕಂಬಳಿಯ ಮೇಲೆ ಇಡುತ್ತಾರೆ. ಪ್ರತಿಯೊಂದು ದೋಣಿಯ ಮುಂದೆ ಎರಡು ಎಲೆ, ಅಡಿಕೆ, ಬಾಳೆಹಣ್ಣು, ಕೊಬ್ಬರಿ, ಅರಿಶಿಣಕೊಂಬು ಹಾಗೂ ದಕ್ಷಿಣೆ ಇಡುತ್ತಾರೆ. ದೋಣಿಗಳೊಂದಿಗೆ ತ್ರಿಶೂಲ, ಡಮರು, ಭಂಡಾರ ಚೀಲಗಳನ್ನಿಟ್ಟು ಪೂಜಿಸುತ್ತಾರೆ.

ದೋಣಿಗೆ ಬಾಳೆಹಣ್ಣು, ತುಪ್ಪ, ಸಕ್ಕರೆ, ಮಿಶ್ರಣದ ಹಣ್ಣುಪ್ಪವನ್ನು ಮೊದಲು ನೀಡಲಾಗುತ್ತದೆ. ನಂತರ ನೈವೇದ್ಯವನ್ನು ಪ್ರತಿಯೊಂದು ದೋಣಿಗೂ ನೀಡಲಾಗುತ್ತದೆ. ನೈವೇದ್ಯಕ್ಕಾಗಿ ಹೋಳಿಗೆ, ಕಡಬು, ಗೋಧಿಹುಗ್ಗಿ, ಪಾಯಸ, ಬದನೆಕಾಯಿ ಪಲ್ಲೆ, ಅನ್ನ ಮಾಡಲಾಗುತ್ತದೆ. ಆದರೆ ಮಾಂಸಹಾರ ನೈವೇದ್ಯ ಮಾಡುವಂತಿಲ್ಲ. ದೋಣಿ ತುಂಬಿದ ಮೇಲೆ ದೀಪದ ಆರುತಿ ಬೆಳಗುತ್ತಾರೆ. ಗೊರವರು ಗೊರವಟಿಗೆಯಾಡುವದು, ಕುದುರೆಕಾರರು ಕುದುರೆಕುಣಿಯುವುದು ಕಂಡುಬರುತ್ತದೆ. "ಏಳು ಕೋಟಿಗೊ ಚಾಂಗ್‌ಮಲೊ" ಎಂದು ಕೂಗುತ್ತಾರೆ. ನಂತರ ಗೊರವರು ಉಗ್ಗಡಿಸುತ್ತ ದೋಣಿಯನ್ನು ನಾಯಿಯ ರೀತಿಯಲ್ಲಿ ಬಾಯಿಯಿಂದ ಕಚ್ಚಿಕೊಂಡು ಎತ್ತಿಕೊಳ್ಳುತ್ತಾರೆ. ಎಲ್ಲರಿಗೂ ಪ್ರಸಾದ ನೀಡಿ ನೈವೇದ್ಯವನ್ನು ಊಟ ಮಾಡುತ್ತಾರೆ.

## ೬.೩.೩ ಹೆಗ್ಗಪ್ಪನನ್ನು ಕಳಿಸುವುದು

ಪ್ರತಿ ವರ್ಷಕ್ಕೊಮ್ಮೆ ಭಾರತ ಹುಣ್ಣಿಮೆಯೆಂದು ನಡೆಯುವ ಕಾರ್ಣಿಕೋತ್ಸವದಲ್ಲಿ ಅಸಂಖ್ಯಾತ ಭಕ್ತರು ಸೇರುತ್ತಾರೆ. ಸಾರಿಗೆ ಸೌಲಭ್ಯಗಳು ಇಲ್ಲದ ಸಮಯದಲ್ಲಿ ಜಾತ್ರೆಗೆ ಹೋಗಿ ಬರಲು ತೊಂದರೆಗಳಿದ್ದವು. ಆ ತೊಂದರೆಗಳನ್ನೆಲ್ಲ ಕ್ಷೇತ್ರಪಾಲಕ ದೇವರಾದ ಹೆಗ್ಗಪ್ಪನು ನಿವಾರಿಸುವನೆಂಬ ನಂಬಿಕೆಯಿತ್ತು. ಇದರಿಂದಾಗಿ ತಮ್ಮ ರಕ್ಷಣೆಗೆ ಬಂದ ಹೆಗ್ಗಪ್ಪನನ್ನು ಜಾತ್ರೆ ಮುಗಿದ ಬಳಿಕ ಪೂಜಿಸಿ ಬಿಳ್ಕೊಡುವ ಪದ್ಧತಿ ಇಂದಿಗೂ ಇದೆ.

ಹೆಗ್ಗಪ್ಪ ಮೈಲಾರಲಿಂಗನ ದೇವಾಲಯಗಳಲ್ಲಿ ಕ್ಷೇತ್ರಪಾಲಕ ದೇವರಾಗಿದ್ದಾನೆ. ಇವನನ್ನು ಹೆಗ್ಗಣ್ಣ, ಹೆಗ್ಗಡೆ, ಪ್ರಧಾನಿ, ಪರುದಾನಿ ಎಂದು ಕರೆಯಲಾಗುತ್ತದೆ.[೬] ಮೈಲಾರಲಿಂಗನ ಜಾತ್ರೆಯಿಂದ ತಂಡ ಪ್ರಸಾದ (ಪಳಾರ)ವನ್ನು ಒಂದು ಗಂಟಿನಲ್ಲಿ ಕಟ್ಟಿರುತ್ತಾರೆ. ಮನೆಗೆ ಬಂದ ಮೇಲೆ ಮನೆದೇವರನ್ನು ಪೂಜಿಸಿ ತಂದ ಪಳಾರದ ಗಂಟನ್ನು ಪೂಜಿಸುತ್ತಾರೆ. ಕೆಲವಡೆ ಗೊರಪ್ಪರನ್ನು ಆಮಂತ್ರಿಸಿ ಪೂಜಿಸುತ್ತಾರೆ. ಸಿಹಿ ಅಡಿಗೆ ಮಾಡಿ ದೋಣಿ ತುಂಬಿಸಿ ದೀವಟಿಗೆ ಬೆಳಗುತ್ತಾರೆ. ಕೊಪ್ಪಳ ಜಿಲ್ಲೆಯ ಹಲಗೇರಿ

ಗ್ರಾಮದ ಜನರು ಮೈಲಾರಲಿಂಗನ ಜಾತ್ರೆಗೆ ಹೋಗಿ ಬಂದ ಮೇಲೆ ಪಳಾರದ ಗಂಟನ್ನು ತಲೆಯ ಮೇಲೆ ಹೊತ್ತು ಮೆರವಣಿಗೆ ಮಾಡುತ್ತಾ ಮೈಲಾರಲಿಂಗನ ದೇವಾಲಯಕ್ಕೆ ಬಂದು ಪೂಜೆ ಸಲ್ಲಿಸುತ್ತಾರೆ. ನಂತರ ಮನೆಯಲ್ಲಿ ಹೆಗ್ಗಪ್ಪನನ್ನು ಪೂಜಿಸಿ ಪಳಾರವನ್ನು ಹಂಚುತ್ತಾರೆ. ಹೆಗ್ಗಪ್ಪನನ್ನು ಕಳಿಸದ ಹೊರತು ಯಾರೂ ಆ ಪಳಾರವನ್ನು ಮುಟ್ಟುವಂತಿಲ್ಲ. ಒಟ್ಟಾರೆ ಹೆಗ್ಗಪ್ಪ ತಾವು ಜಾತ್ರೆಗೆ ಹೋಗಿ ಬರುವರೆಗೂ ಜೊತೆಯಲ್ಲಿಯೇ ಇರುತ್ತಾನೆಂಬ ನಂಬಿಕೆಯಿದೆ.

### ೬.೩.೪ ದೀವಟಗೆ ಸೇವೆ

ಮೈಲಾರಲಿಂಗನ ಭಕ್ತರಾದ ಕುರುಬರು ಈ ಆಚರಣೆಯನು ಮಾಡುತ್ತಾರೆ. ದೀವಟಗೆಯು ಎರಡು ಸಲಕರಣೆಗಳ ಒಂದು ಜೋಡು. ಒಂದು ಚಿಕ್ಕ ನಂದಿ ಕೋಲಿನಂತ ದೀವಟಗೆಯಿರುತ್ತದೆ. ಇದು ಒಂದು-ಒಂದುವರೆ ಅಡಿಯಿಂದ ನಾಲ್ಕು ಅಡಿಯಷ್ಟು ಉದ್ದವಾಗಿಯು, ಒಂದು ಕಿಲೋದಿಂದ ಮೂರು ಕಿಲೋಗಳಷ್ಟು ಭಾರವಾಗಿರುತ್ತದೆ.[೯೭] ಒಂದು ಬದಿಗೆ ಕಳಸದಂತಿದ್ದರೆ ಇನ್ನೊಂದು ಬದಿಗೆ ಅಗಲವಾಗಿ ಪೊಳ್ಳಾಗಿರುತ್ತದೆ. ಬೆಳಕು ಮಾಡುವಾಗ ಕೆಳಭಾಗದ ಪೊಳ್ಳಿನಲ್ಲಿ ಪಂಜು ಉರಿಸುವ ಎಕ್ಕೆ ಕಟ್ಟಿಗೆಯ ತುಂಡನ್ನು ಸಿಕ್ಕಿಸುತ್ತಾರೆ. ಅದರ ಬದಿಯಲ್ಲಿ ಚಿಕ್ಕಸಲಾಕೆ ಜೋಡಿಸುವರು. ಅದಕ್ಕೆ ಮಡಿ ಬಟ್ಟೆಯ ತುಂಡುಗಳನ್ನು ಒಳ್ಳೆಣ್ಣೆಯಲ್ಲಿ ಅದ್ದಿ ಸುತ್ತುತ್ತಾರೆ. ದೀವಟಗೆಗೆ ಎಣ್ಣೆ ಸುರಿಯಲು ಒಂದು ತಳದಲ್ಲಿ ದುಂಡಗಿರುವ ಗಿಂಡಿಯಿರುತ್ತದೆ. ಅದರ ತುದಿ ಚೂಪಾಗಿರುತ್ತದೆ. ಹಿತ್ತಾಳೆ ಅಥವಾ ಕಂಚಿನಿಂದ ಮಾಡಿದ ಈ ಕಾಯ್‌ಕೋಲು ಎಣ್ಣೆಸುರಿಯಲು ಸಹಾಯಕವಾಗುವಂತೆ ತಯಾರಿಸಿರುತ್ತಾರೆ.

ಧಾರ್ಮಿಕ ವಿಧಿಗಳ ಸಂದರ್ಭಗಳಲ್ಲಿ, ಮಂಗಳ ಕಾರ್ಯದಲ್ಲಿ, ದೋಣಿ ಸೇವೆ ಮಾಡುವಾಗ ಈ ದೀವಟಗೆ ಸೇವೆ ಮಾಡುತ್ತಾರೆ. ಮೈಲಾರಲಿಂಗನ ಜಾತ್ರೆಯಲ್ಲಿ ಗುಡಿಯ ಎದುರಿಗೆ ಅನೇಕ ಸಂಖ್ಯೆಯಲ್ಲಿ ದೀವಟಗೆಗಳ ಹಿಡಿದು ನಿಂತಿರುವ ಭಕ್ತರನ್ನು ಕಾಣಬಹುದಾಗಿದೆ. ಇದಕ್ಕೆ ಜನರು ಎಣ್ಣೆಯನ್ನು ಸುರಿಯುವುದು ಕಂಡುಬರುತ್ತದೆ.

### ೬.೩.೫ ಹಡಲಗಿ ತುಂಬಿಸುವ ಆಚರಣೆ

ಮೈಲಾರಲಿಂಗನಿಗೆ ದೋಣಿ ತುಂಬಿಸುವ ಆಚರಣೆ ಮಾಡಿದರೆ, ಸವದತ್ತಿ ಎಲ್ಲಮ್ಮ, ಹುಲಿಗೆಮ್ಮ ಮೊದಲಾದ ಸ್ತ್ರೀ ದೇವತೆಗಳಿಗೆ ಹಡಲಗಿ ತುಂಬಿಸುವ ಆಚರಣೆ ಮಾಡುವರು. ಈ ಆಚರಣೆಯನ್ನು ಭಾರತ ಹುಣ್ಣಿಮೆಯೆಂದು ಮಾಡುವುದು ಕಂಡುಬರುತ್ತದೆ.[೯೮] ಅಂದು ಜೋಗಮ್ಮನನ್ನು ಆಮಂತ್ರಿಸುತ್ತಾರೆ. ಜೋಗಮ್ಮ ಎರಡು ಬಿದಿರಿನ ಬುಟ್ಟಿಯನ್ನು ತಂದಿರುತ್ತಾಳೆ. ಕರಿಯ ಕಂಬಳಿಯನ್ನು ಹಾಸಿ ಅದರ ಮೇಲೆ ಅಕ್ಕಿ ಹಾಕಿ ಬುಟ್ಟಿಗಳನ್ನಿಡುವಳು. ಬಿದಿರಿನ ಬುಟ್ಟಿಯಲ್ಲಿ ಉಳ್ಳಾಗಡ್ಡೆ, ಬದನೆಕಾಯಿ, ಗಜ್ಜರಿ ಹಾಗೂ ಮಾಡಿದ ಸಿಹಿ ಪದಾರ್ಥಗಳನ್ನು ನೈವೇದ್ಯ ಮಾಡುವರು. ಜೋಗಮ್ಮರು ಎಲ್ಲಮ್ಮನನ್ನು ಕುರಿತು ಭಕ್ತಿ ಪ್ರಧಾನವಾದ ಹಾಡುಗಳನ್ನು ಹಾಡುವರು. ಉದೋ ಉದೋ ಎಂಬ ಘೋಷಣೆ ಕೂಗುತ್ತಾರೆ. ಪೂಜೆ ಮುಗಿದ ಬಳಿಕ ಜೋಗಮ್ಮರಿಗೆ ಭೋಜನ ಮಾಡಿಸಿ ದಕ್ಷಿಣೆ ಕೊಟ್ಟು ಕಳಿಸುತ್ತಾರೆ.

### ೬.೩.೬ ಬೀರದೇವರ ಗಂಗಾಸ್ನಾನ

ಪ್ರತಿ ವರ್ಷಕ್ಕೊಮ್ಮೆ ಬೀರದೇವರನ್ನು ಗಂಗಾಸ್ನಾನಕ್ಕೆಂದು ಹತ್ತಿರದ ನದಿಗಳಿಗೆ ಹೋಗುವುದು ಕಂಡುಬರುತ್ತದೆ. ಬೀರದೇವರ ಮೂರ್ತಿ, ಪಲ್ಲಕ್ಕಿ ಹಾಗೂ ಛತ್ರಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಬೀರದೇವರ ಭಕ್ತರೆಲ್ಲ ಪವಿತ್ರ ನದಿ ಪ್ರವೇಶಕ್ಕೆ ತೆರಳುವರಲ್ಲದೆ, ಅಲ್ಲಿ ಮಡಿಯಿಂದ ನೈವೇದ್ಯ ತಯಾರಿಸುತ್ತಾರೆ. ನೈವೇದ್ಯದಲ್ಲಿ ಹೋಳಿಗೆ ಅಥವಾ ಕಡುಬು, ಅನ್ನ, ಸಾರು, ಪಲ್ಲೆ, ಅಂಬಲಿ ತಯಾರಿಸುತ್ತಾರೆ. ಬೀರದೇವರ ಮೂರ್ತಿ, ಪಲ್ಲಕ್ಕಿ ಛತ್ರಿಗಳನ್ನು ನದಿಯಲ್ಲಿ ತೊಳೆಯುತ್ತಾರೆ. ನಂತರ ದಡದಲ್ಲಿಟ್ಟು ಪೂಜೆ ಮಾಡುತ್ತಾರೆ. ಡೊಳ್ಳು ಬಾರಿಸುವುದು ಕಂಡುಬರುತ್ತದೆ. ನೈವೇದ್ಯವನ್ನು ಎಡೆ ಮಾಡುತ್ತಾರೆ. ನಂತರ ಮೆರವಣಿಗೆ ಮೂಲಕ ಮೂಲಕ ತಮ್ಮ ಸ್ಥಳಕ್ಕೆ ಬರುತ್ತಾರೆ. ಅಲ್ಲಿ ಎಲ್ಲರಿಗೂ ಊಟ ಮಾಡಿಸುತ್ತಾರೆ. ಈ ಆಚರಣೆಯನ್ನು ಪ್ರತಿವರ್ಷ ತಪ್ಪದೆ ನಡೆಸಿಕೊಂಡು ಬರುತ್ತಾರೆ. ಕೊಪ್ಪಳ ಜಿಲ್ಲೆಯ ಸಂಗನಹಾಳ, ಯಲಬುರ್ಗಾ, ಕುಷ್ಟಗಿ ಮೊದಲಾದ ಭಾಗಗಳಲ್ಲಿಯ ಬೀರದೇವರ ಭಕ್ತರು ಈ ಆಚರಣೆಯನ್ನು ಆಚರಿಸುವುದು ಕಂಡುಬರುತ್ತದೆ.

### ೬.೩.೭ ಕುರಿಹಟ್ಟಿ ಪೂಜೆ

ಕುರುಬರು ಪ್ರತಿ ಅಮವಾಸೆಗೆ ಕುರಿಹಟ್ಟಿಗಳಲ್ಲಿ ಪೂಜೆ ಸಲ್ಲಿಸುತ್ತಾರೆ. ದೀಪಾವಳಿ ಅಮವಾಸೆಗೆ ವಿಶೇಷವಾದ ಪೂಜೆ ಸಲ್ಲಿಸುವರು. ಅಂದು ಹಟ್ಟೆವ್ವನನ್ನು ಪೂಜಿಸುವ ಪದ್ಧತಿಯಿದೆ.[೯೯] ಕುರಿಗಳಿಗೆ ರಕ್ಷಣೆ ನೀಡಲು ಅವುಗಳ ಸುತ್ತಲೂ ಮುಳ್ಳಿನ ಬೇಲಿ ಹಾಕಿಕೊಂಡು ಹಟ್ಟಿ ನಿರ್ಮಿಸುತ್ತಿದ್ದರು. ಇಂದೂ ಸಹ ಆ ಹಟ್ಟಿಗಳನ್ನು ಕಾಣಬಹುದಾಗಿದೆ. ಹಟ್ಟೆವ್ವನ ಹಬ್ಬದಂದು ಮುದ್ದೆಯಲ್ಲಿ ಕುರಿ ಹಾಲು ಸೇರಿಸಿ ಕುರಿಗಳಿಗೆ ಉಗ್ಗುವರು. ಹಟ್ಟಿಯ ಹೊಸ್ತಿಲಲ್ಲಿ ಗಂಡು–ಹೆಣ್ಣು ಕುರಿಗಳನ್ನು ಪೂಜಿಸಿ ಕಾಯಿ ಒಡೆದು ಚರಗವನ್ನು ಚೆಲ್ಲುತ್ತಾರೆ. ದೀಪಾವಳಿಯ ಅಮವಾಸೆಯಂದು ಆಗತಾನೆ ಹುಟ್ಟಿದ ಮರಿಗಳ ಬಾಲ, ಕಿವಿಯ ತುದಿಯನ್ನು ಕತ್ತರಿಸಿ ಕಂಬಳಿಯೊಳಗೆ ಹಾಕಿಕೊಂಡು ಮೂರು ಬೋಗಸೆ ಕುರಿ ಹಿಕ್ಕಿ ಹಾಕಿ ಕುರಿಹಾಲನ್ನು ಕಂಬಳಿಗೆ ಹಿಂಡುತ್ತಾರೆ. ನಂತರ ಅದನ್ನು ಹುತ್ತಕ್ಕೆ ತಂದು ಸುರಿಯುವರು. ಕುರಿಯ ಸುರಕ್ಷತೆ, ಸಮೃದ್ಧಿ, ಪಲಶಕ್ತಿ ಹೆಚ್ಚಿಸುವ ಉದ್ದೇಶದಿಂದ ಈ ರೀತಿ ಮಾಡುವುದು ಕಂಡುಬರುತ್ತದೆ. ಅಂದು ಸಿಹಿ ಅಡಿಗೆಯನ್ನು ನೈವೇದ್ಯ ಮಾಡಲಾಗುತ್ತದೆ. ಭರಮಪ್ಪನನ್ನು ಕುರಿಯ ಪಾಲಕನೆಂಬ ಹೆಸರಿನಿಂದ ಪೂಜೆ ಸಲ್ಲಿಸುತ್ತಾರೆ. ಈ ರೀತಿಯ ಹಟ್ಟಿ ಪೂಜೆ ಪ್ರತಿಯೊಬ್ಬ ಕುರಿಗಾರರಲ್ಲೂ ಕಂಡುಬರುತ್ತದೆ.

### ೬.೩.೮ ಕರಿಯ ಕಂತೆ

ಶುಭ ದಿನದಂದು ಒಂದು ಕುರಿ ಮರಿಯನ್ನು ಕಂತೆಗೆ ಬಿಡುತ್ತಾರೆ. ಕೆಲವು ದಿನಗಳ ನಂತರ ನಾಲ್ಕೈದು ಜನ ಒಡೆಯರ ಮನೆತನದವರು ಕುರಿಯ ಉಣ್ಣೆ ತೆಗೆದು ಕೈಯಲ್ಲಿಯೇ ಹಿಂಜುತ್ತಾರೆ. ಕೈಯಿಂದಲೇ ಎಳೆ ಹೊಸೆದು ಅಣಿ ಮಾಡಿ ವಸ್ತ್ರ ನೇಯುವರು. ಒಂದೂವರೆ ಗೇಣು ಉದ್ದ ಹಾಗೂ ಒಂದು ಗೇಣು ಅಗಲವಾದ ವಸ್ತ್ರವನ್ನು ತಯಾರಿಸಿ ಭಕ್ತಿ, ಮಡಿಯಿಂದ ರೇವಣಸಿದ್ಧನಿಗೆ ಅರ್ಪಿಸುತ್ತಾರೆ. ಒಂದು ಶುಭದಿನದಂದು ರೇವಣಸಿದ್ಧೇಶ್ವರನಿಗೆ ಹೊದಿಸುವ ಪವಿತ್ರ ಆಚರಣೆ ನಡೆಯುತ್ತದೆ. ಮದುವೆ ಮೊದಲಾದ ಸಂದರ್ಭಗಳಲ್ಲಿ ಗುರುಗಳಿಗೆ ಪೀಠವಾಗಿ ಹಾಸುವುದು ಇಂದಿಗೂ ಕಂಡುಬರುತ್ತದೆ.

### ೬.೩.೯ ಅಕ್ಕಿ ಪಾಯಸದ ಆಚರಣೆ

ಆಚರಣೆಯನ್ನು ದೇವತೆಗಳಿಗೆ ಪೂಜಾರರು ನೆರವೇರಿಸುತ್ತಾರೆ. ಪೂಜಾರಿಗಳು ಮಡಿಯಿಂದ ಶುಭ್ರವಾದ ಮೂರು ಕಲ್ಲುಗಳನ್ನಿಟ್ಟು ಒಲೆಯ ಮಾಡುತ್ತಾರೆ. ಆ ಕಲ್ಲುಗಳ ಮೇಲೆ ಬಿಳಿಯ ವಸ್ತ್ರವನ್ನು ದುಂಡಗೆ ಸುತ್ತಿಡುತ್ತಾರೆ. ಅದರ ಮೇಲೆ ಒಂದು ಗಡಿಗೆಯನ್ನಿಡಲಾಗುತ್ತದೆ. ಗಡಿಗೆಯಲ್ಲಿ ಅಕ್ಕಿ ನೀರನ್ನು ಹಾಕಲಾಗುತ್ತದೆ. ಸ್ವಲ್ಪ ಸಮಯದ ಬಳಿಕ ಕುದಿಯುತ್ತಿರುವ ಗಡಿಗೆಯ ಒಳಗಡೆ ಮೂರು ಸಲ ಕೈ ಹಾಕಿ ಅಕ್ಕಿಯನ್ನು ತಿರುವುತ್ತಾರೆ. ಜೊತೆಗೆ ಭಕ್ತರಿಗೆ ಅಕ್ಕಿಯನ್ನು ಕೈಯಿಂದ ಹೊರ ತೆಗೆದು ತೋರಿಸುತ್ತಾರೆ. ಪೂಜಾರಿಗಳಿಗೆ ಕೈಸುಡುವುದಿಲ್ಲ. ಈ ಆಚರಣೆಯನ್ನು ಅಕ್ಕಿ ಪಾಯಸ ಮಾಡುವುದು ಎಂದು ಕರೆಯಲಾಗುತ್ತದೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಗುಮಗೇರಿ ಗ್ರಾಮದ ದುರ್ಗಮ್ಮ ದೇವಿಯ ಪೂಜಾರಿಗಳಾದ ವೀರಪ್ಪ ಪೂಜಾರಿಗಳು ನೆರವೇರಿಸುತ್ತಾರೆ.

ಕುರುಬರಲ್ಲಿ ಕೆಲವು ಉಗ್ರನಿಷ್ಠೆಯಿಂದ ಕೈಗೊಳ್ಳುವ ಆಚರಣೆಗಳಿವೆ. ಅವುಗಳಲ್ಲಿ ಬೆರಳುಗಳನ್ನು ಕತ್ತರಿಸಿ ಅರ್ಪಿಸುವುದು, ಕೈಯ ಬೆರಳುಗಳಿಗೆ ಬತ್ತಿಯನ್ನು ಅಂಟಿಸುವದಲ್ಲದೆ, ಅವುಗಳಿಗೆ ಬೆಂಕಿ ಹಚ್ಚಿ ಆರತಿ ಬೆಳಗುವುದು, ಚಾಟಿಯಿಂದ ಕಾಲಿಗೆ ಬಡಿದುಕೊಳ್ಳುವುದು, ಮುಂಗುರುಗಳನ್ನು ಕತ್ತರಿಸಿ ದೈವಕ್ಕೆ ಅರ್ಪಿಸುವುದು. ಸರಪಳಿ ಹರಿಯುವುದು, ಮೊದಲಾದ ಆಚರಣೆಗಳಿವೆ. ಇವುಗಳನ್ನು ವಚನಕಾರರು ತಮ್ಮ ವಚನಗಳಲ್ಲಿ ಟೀಕಿಸಿದ್ದಾರೆ. ಈ ರೀತಿಯ ಆಚರಣೆಗಳನ್ನು ಅಧಿಕವಾಗಿ ಮೈಲಾರಲಿಂಗನ ಭಕ್ತರಲ್ಲಿ ಕಾಣಬಹುದಾಗಿದೆ.

### ೬.೩.೧೦ ಕಾಲು ಪವಾಡ

ಮೈಲಾರಲಿಂಗನ ಭಕ್ತರಾದ ಗೊರವರು ಕಾಲು ಪವಾಡ ನಡೆಸುತ್ತಾರೆ. ಅವರು ಸದಾ ತಮ್ಮ ಬಳಿ ಎರಡು ಬಗನಿಯ ಗೂಟಗಳು, ಕೊಡಲಿ, ಜಾಲಿ ಮುಳ್ಳಿನ ಎರಡು ಗೊನೆಗಳು, ಒಂದು ಕಬ್ಬಿಣದ ಸರಳು, ಹಾಗೂ ಸುಮಾರು ಹತ್ತು ಅಡಿ ಉದ್ದದ ಜಿಂಕೆ ಚರ್ಮದ ಮಿಣಿಯನ್ನು ಕಾಲು ಪವಾಡದ ಸಾಧನಗಳನ್ನಾಗಿ ಇಟ್ಟು ಕೊಂಡಿರುತ್ತಾರೆ.[೨೦೦] ಮೈಲಾರಲಿಂಗನ ಜಾತ್ರೆಯ ಸಂದರ್ಭದಲ್ಲಿ ಕಾಲು ಪವಾಡ ಮಾಡುತ್ತಾರೆ. ಈ ಪವಾಡ ಮಾಡುವಾಗ ಕೆಳಗೆ ಕುಳಿತು ತಮ್ಮ ಎಡಗಾಲಿನ ಮೀನ ಖಂಡಕ್ಕೆ ಕಬ್ಬಿಣದ ಸರಳನ್ನು ಚುಚ್ಚಿ ಒಂದೆಡೆಯಿಂದ ಇನ್ನೊಂದೆಡೆಗೆ ಹೊರ ತೆಗೆಯುತ್ತಾರೆ. ಬಗನಿಯ ಗೂಟವನ್ನು ಮೀನಖಂಡದ ಮೇಲಿಟ್ಟು ಸಣ್ಣ ಸುತ್ತಿಗೆಯಿಂದ ತಾವೇ ಹೊಡೆದುಕೊಳ್ಳುತ್ತಾರೆ. ಬಗನಿ ಗೂಟವು ಮೇಲಿನಿಂದ ಕೆಳಗೆ ಹೊರಬರುತ್ತದೆ. ಮೀನಖಂಡದಲ್ಲಾದ ತೂತಿಗೆ ಜಿಂಕೆ ಚರ್ಮದ ಮಿಣಿಯನ್ನು ಒಂದು ತುದಿಯಿಂದ ಪೋಣಿಸಿ ಮತ್ತೊಂದು ತುದಿಯಿಂದ ಹೊರ ತೆಗೆಯುತ್ತಾರೆ. ಕಾಲಿನ ಆ ಭಾಗಕ್ಕೆ ಭಂಡಾರವನ್ನು ಲೇಪಿಸಿ ವಸ್ತ್ರವನ್ನು ಸುತ್ತುತ್ತಾರೆ. ಯಾವುದೇ ರೀತಿಯ ಔಷದಿಯನ್ನು ಬಳಸದಿರುವುದು ವಿಶೇಷ.

### ೬.೩.೧೧ ಕೈ ಪವಾಡ

ಕೈಪವಾಡವನ್ನು ಮುಂಗೈ ಪವಾಡ ಎಂದೂ ಕರೆಯಲಾಗುತ್ತದೆ. ಈ ಪವಾಡ ಮಾಡುವವರು ತಮ್ಮ ಹತ್ತಿರ ಬತ್ತಿಯ

ಆರತಿಯನ್ನಿಟ್ಟು ಕೊಂಡಿರುತ್ತಾರೆ. ಇದನ್ನು ಹನ್ನೊಂದು ಬತ್ತಿಗಳನ್ನುಳ್ಳ ಕಕ್ಕಡಾರತಿ ಎನ್ನಲಾಗಿದೆ.[೧೦೦] ಕೆಳಭಾಗದಲ್ಲಿ ಚೂಪಾದ ಕಬ್ಬಿಣದ ಸಣ್ಣ ಗಾತ್ರದ ಸಲಾಕೆಯಿರುತ್ತದೆ. ಈ ಸಲಾಕೆಯನ್ನು ತಮ್ಮ ಎಡಗೈ ಮಣಿಕಟ್ಟಿಗೆ ಚುಚ್ಚಿಕೊಳ್ಳುತ್ತಾರೆ. ಸಲಾಕೆಯು ಕೈಯ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಹೊರಬರುತ್ತದೆ. ನಂತರ ಹನ್ನೊಂದು ಬತ್ತಿಗಳನ್ನು ಹೊತ್ತಿಸುತ್ತಾರೆ. ದೀಪ ಹಚ್ಚಿದ ಕಕ್ಕಡಾರತಿಯಿಂದ ಮೈಲಾರಲಿಂಗ, ಗಂಗಿಮಾಳಮ್ಮ ಮೊದಲಾದ ದೇವರಿಗೆ ಆರತಿ ಬೆಳಗುತ್ತಾರೆ. ಕಂಚಾವೀರರು "ಆ ಹಾಹಾ ಹಾಹಾ" ಎಂದು ಗರ್ಜಿಸುತ್ತಾರೆ.[೧೦೨] ಆರತಿ ಎತ್ತುವಾಗ ಕೈಯನ್ನು ಒತ್ತಿ ದೇವರ ಮೇಲೆ ರಕ್ತದ ಹನಿಗಳನ್ನು ಸಿಂಪಡಿಸುತ್ತಾರೆ. ಕೈಗಾದ ಗಾಯಗಳಿಗೆ ಭಂಡಾರವನ್ನು ತುಂಬಿ ಬಟ್ಟೆ ಕಟ್ಟುತ್ತಾರೆ. ಕಡಿಮೆ ರಕ್ತಸ್ರಾವವಾದರೆ ಕಂಚಾ ವೀರ ಸತ್ಯ ನಿಷ್ಠೆಯುಳ್ಳವನೆಂದು, ಒಂದು ವೇಳೆ ರಕ್ತಸ್ರಾವ ಅಧಿಕವಾದರೆ ಕಂಚಾವೀರ ಸತ್ಯನಿಷ್ಠೆಯಿಂದಿಲ್ಲವೆಂದು ಸಂಶಯ ಪಡುವುದು ಕಂಡುಬರುತ್ತದೆ. ಈ ಪವಾಡವನ್ನು ಮೈಲಾರಲಿಂಗನ ಭಕ್ತರು ಆಚರಿಸುತ್ತಾರೆ.

### ೬.೩.೧೨ ಸರಪಳಿ ಪವಾಡ

ಮೈಲಾರನ ಭಕ್ತರು ಸರಪಣಿ ಪವಾಡ ಮಾಡುವುದು ಕಂಡುಬರುತ್ತದೆ. ಇದನ್ನು ಸರಪಳಿ ಹರಿಯುವುದು ಎಂದೂ ಕರೆಯಲಾಗುತ್ತದೆ. ಒಂದು ಶಿಲಾಸ್ಥಂಭಕ್ಕೆ ಸರಪಳಿಯ ಒಂದು ತುದಿಯನ್ನು ಬಲವಾಗಿ ಕಟ್ಟುತ್ತಾರೆ. ಮತ್ತೊಂದು ತುದಿಯನ್ನು ತಮ್ಮ ಕೊರಳಿಗೆ ಹಾಕಿಕೊಳ್ಳುತ್ತಾರೆ. ನಂತರ ಆ ಸರಪಳಿಯನ್ನು ಎರಡೂ ಕೈಗಳಿಂದ ಹಿಡಿದು ಎಳೆಯುತ್ತಾರೆ. ಅನೇಕ ಬಾರಿ ಸರಪಳಿಯನ್ನು ಎಳೆಯುತ್ತಾರೆ. ಕೊನೆಗೆ ಸರಪಳಿ ತುಂಡಾಗುತ್ತದೆ. ಸರಪಳಿ ಬೇಗ ತುಂಡಾದರೆ ಗೊರವಯ್ಯ ನಿಷ್ಟನೆಂದು, ಬೇಗ ತುಂಡಾಗದಿದ್ದರೆ ನಿಷ್ಟನಲ್ಲನೆಂದು ತಿಳಿಯಲಾಗುತ್ತದೆ. ಕೆಲವೆಡೆ ಸರಪಳಿಯು ಎಷ್ಟು ಸಂಖ್ಯೆಯಲ್ಲಿ ತುಂಡಾಗಿದೆ ಎಂದು ನೋಡುತ್ತಾರೆ. ಬೆಸ ಸಂಖ್ಯೆಯಲ್ಲಿ ತುಂಡಾದರೆ ಅಶುಭವೆಂದು, ಸಮ ಸಂಖ್ಯೆಯಲ್ಲಿ ತುಂಡಾದರೆ ಶುಭವೆಂದು ತೀಮಾನಿಸಲಾಗುತ್ತದೆ.

ಹಿರೇಮೈಲಾರ, ದೇವರಗುಡ್ಡ, ಬೆಳಗಾವಿಯ ಮಂಗಸೂಳಿ, ಯಾದಗಿರಿ ಮಲ್ಲಯ್ಯ, ಸವದತ್ತಿ ಹತ್ತಿರದ ಕಾರೀಮನಿ, ಬೀದರನ ಮಲ್ಲಯ್ಯ, ಕೊಪ್ಪಳದ ಚಂದಾಪುರ ಚಂದಾಲಿಂಗೇಶ್ವರನ ಕ್ಷೇತ್ರಗಳಲ್ಲಿ ಸರಪಳಿ ಪವಾಡ ನಡೆಯುತ್ತದೆ. ಈ ಕ್ಷೇತ್ರಗಳೆಲ್ಲ ಸರಪಳಿ ಶಿಲಾಸ್ತಂಭಗಳಿವೆ. ಭಾರತ ಹುಣ್ಣಿಮೆ, ಶ್ರಾವಣ ಮಾಸ, ದಸರಾ ಮೊದಲಾದ ಹಬ್ಬ, ಉತ್ಸವಗಳಲ್ಲಿ ಸರಪಳಿ ಪವಾಡ ಮಾಡುತ್ತಾರೆ. ಸರಪಳಿಗಳನ್ನು ಹರಿದ ಸಂಖ್ಯೆ ಮತ್ತು ತುಂಡಾದ ಕಳಿಗೆಗಳ ಮೇಲೆ ವರ್ಷ ಭವಿಷ್ಯವನ್ನು ನಿರ್ಧರಿಸುವುದು ವಿಶೇಷ.

### ೬.೩.೧೩ ಕುದುರೆ ಕುಣಿತ

ಮೈಲಾರನ ಭಕ್ತರಲ್ಲಿ ಕುದುರೆಕಾರರು ಪ್ರಮುಖರಾಗಿದ್ದಾರೆ. ಮೈಲಾರಲಿಂಗನ ವಾಹನ ಕುದುರೆ. ಆದ್ದರಿಂದ ಅವನ ಭಕ್ತರಾದ ತಾವೂ ಸಹ ದೇವರ ವಾಹನಗಳೆಂದು ಕುದುರೆಕಾರರು ನಂಬಿದ್ದಾರೆ. ಭಕ್ತರು ತಮ್ಮ ಸಮಸ್ಯೆ ಪರಿಹಾರವಾದರೆ ತಮ್ಮವರಲ್ಲಿ ಒಬ್ಬರನ್ನು ಕುದುರೆಕಾರನನ್ನಾಗಿ ಮಾಡುವೆವೆಂದು ಹರಕೆ ಸಲ್ಲಿಸುತ್ತಾರೆ. ಸಮಸ್ಯೆ ಪರಿಹಾರವಾದಾಗ ಮಾತಿನಂತೆ ಕುದುರೆಕಾರನನ್ನಾಗಿ ಮಾಡುತ್ತಾರೆ. ಒಡೆಯರು ಒಂದು ಶುಭದಿನದಂದು ಕುದುರೆಕಾರರಿಗೆ ಕುದುರೆಯ ಹೊರೆ ಹೊರಿಸುತ್ತಾರೆ.

ಅಂದಿನಿಂದ ಒಂದು ಹಗ್ಗದ ಛಡಿ, ಭಂಡಾರ ಬಟ್ಟಲು, ಜೋಳಿಗಿ ಹಾಗೂ ಗೆಜ್ಜೆ ಸರವನ್ನು ತಮ್ಮ ಬಳಿ ಹೊಂದಿರಬೇಕು. ದೇವರ ಎದುರು ಕುದುರೆ ಕುಣಿತದ ಸೇವೆ ಸಲ್ಲಿಸುತ್ತಾರೆ. ಸೇವೆ ಸಲ್ಲಿಸುವಾಗ ಕೈಯಲ್ಲಿ ಹಿಡಿದ ಛಡಿಯಿಂದ ಕಾಲುಗಳಿಗೆ ಹೊಡೆದುಕೊಳ್ಳುತ್ತಾರೆ. ಛಡಿಯ ಹಿಡಿಕೆಗಳು ಹಾವಿನ ಹೆಡೆಯನ್ನು ಹೋಲುತ್ತಿರುತ್ತವೆ. ಕುಣಿತದ ಸೇವೆ ಸಲ್ಲಿಸುತ್ತಿರುವಾಗ ಭಕ್ತಾದಿಗಳು ಮಂಡಕ್ಕಿ, ಹುರಿಗಡಲೆ ಮೊದಲಾದವುಗಳನ್ನು ಬೆರೆಸಿ ಬಿಳಿಯ ವಸ್ತ್ರದಲ್ಲಿಟ್ಟು ಕುದುರೆಕಾರರ ಬಾಯಿ ಬಳಿ ಹಿಡಿಯುತ್ತಾರೆ. ಕುದುರೆಕಾರರು ಕುದುರೆಯಂತೆ ಜಿಗಿದು ಬಾಯಿಯಿಂದ ಅದನ್ನು ತಿನ್ನಬೇಕಾಗುತ್ತದೆ. ಇದನ್ನು ದಾಣಿ ಎಂದು ಕರೆಯುತ್ತಾರೆ.

ಕುದುರೆ ಕುಣಿತಕ್ಕೆ ಇಂಥದೇ ಸಮಯವೆಂದು ನಿಗಧಿಯಾಗಿರುವುದಿಲ್ಲ. ಪ್ರತಿ ವರ್ಷ ಭಾರತ ಹುಣ್ಣಿಮೆಯ ಜಾತ್ರೆಯಲ್ಲಿ ಅಸಂಖ್ಯಾತ ಕುದುರೆಕಾರರು ಕುದುರೆ ಕುಣಿತ ಮಾಡುವನ್ನು ಕಾಣಬಹುದಾಗಿದೆ. ಪ್ರತಿ ರವಿವಾರ, ಹುಣ್ಣಿಮೆ ಹಾಗೂ ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಕುದುರೆ ಕುಣಿತ ಕುಣಿಯಬಹುದಾಗಿದೆ. ಕುದುರೆಕಾರರು ಬಹಳ ಮಡಿಯಿಂದ ಇರಬೇಕಾಗುತ್ತದೆ. ಯಾರಾದರೂ ತೀರಿಕೊಂಡಾಗ ಉಪವಾಸವಿರಬೇಕು, ಅಲ್ಲದೆ ಮಣ್ಣು ಮಾಡಿದ ಮೇಲೆ ಸ್ನಾನ ಮಾಡಿ ಪೂಜೆ ಸಲ್ಲಿಸಬೇಕು. ಯಾವಾಗಲೂ ಹಣೆಯ ಮೇಲೆ ಭಂಡಾರ ಹಚ್ಚಿಕೊಂಡಿರಬೇಕು. ಸುಳ್ಳು ಹೇಳಬಾರದೆಂಬ ನಿಯಮವಿದೆ. ಕುದುರೆಕಾರರು ತಾವು ಮೈಲಾರನ ವಾಹನವೆಂದೇ ಭಾವಿಸುತ್ತಾರಲ್ಲದೆ, ಕುದುರೆಯನ್ನು ಹತ್ತುವುದಿಲ್ಲ. ಹೀಗಾಗಿ ಕುರುಬರಲ್ಲಿ ಕುದುರೆ ಕುಣಿತ ಪ್ರಮುಖವಾದ ಆಚರಣೆಯಾಗಿ ಕಂಡು ಬರುತ್ತದೆ.

**೬.೩.೧೪ ಅಲುಗು ಹಾಕೊಳ್ಳುವ ಆಚರಣೆ**

ಬೀರದೇವರ ಭಕ್ತರಲ್ಲಿ ಕಂಡು ಬರುವ ಉಗ್ರವಾದ ಆಚರಣೆಯಾಗಿದೆ. ಬೀರದೇವರ ಪೂಜಾರಿಗಳು ಹೆಚ್ಚಾಗಿ ಈ ಆಚರಣೆಯನ್ನು ನೆರವೇರಿಸುತ್ತಾರೆ. ಒಂದು ಕಬ್ಬಿಣದ ಸಲಾಕೆಯನ್ನು ಪೂಜೆಯ ನಂತರ ಮೈದುಂಬಿದಾಗ ಹೊಟ್ಟೆಗೆ ಚುಚ್ಚಿಕೊಳ್ಳುತ್ತಾರೆ. ಪೂಜಾರಿ ಮಡಿವಂತನಾಗಿದ್ದು, ಭಕ್ತಿಯಿಂದ ಮಾಡಿದರೆ ಮಾತ್ರ ಅಲುಗು ಹಾಕಿಕೊಳ್ಳಲು ಸಾಧ್ಯವಾಗುತ್ತದೆ. ಕಬ್ಬಿಣದ ಅಲುಗನ್ನು ಚುಚ್ಚಿಕೊಂಡಾಗ ಆ ಜಾಗಕ್ಕೆ ಭಕ್ತರು ಭಂಡಾರವನ್ನು ಉಗ್ಗುತ್ತಾರೆ. ಬೆಂಗಳೂರು ಭಾಗಗಳಲ್ಲಿ ತಲೆಗೆ ತೆಂಗಿನಕಾಯಿ ಒಡೆದುಕೊಳ್ಳುವ ಆಚರಣೆಯಿದೆ. ಅದೇ ರೀತಿ ಕೊಪ್ಪಳದ ಭಾಗದ ಕುರುಬರಲ್ಲಿ ಅಲುಗು ಹಾಕಿಕೊಳ್ಳುವ ಆಚರಣೆಯಿದೆ. ಯಲಬುರ್ಗಾ ತಾಲೂಕಿನ ಸಂಗನಹಾಳ ಗ್ರಾಮದ ಬೀರದೇವರ ಪೂಜಾರಿ ವಿಶೇಷ ಪೂಜಾ ಸಂದರ್ಭಗಳಲ್ಲಿ ಹೊಟ್ಟೆಗೆ ಅಲುಗು ಹಾಕಿಕೊಳ್ಳುತ್ತಾನೆ. ಕೆಲವೊಮ್ಮೆ ದಪ್ಪನೆಯ ಕಬ್ಬಿಣದ ಗುಂಡುಳ್ಳ ಸರಪಣಿಯಿಂದ ಬೆನ್ನಿಗೆ ಹೊಡೆದುಕೊಳ್ಳುತ್ತಾನೆ. ಕೊಪ್ಪಳ ತಾಲೂಕಿನ ಹಿರೇಸಿಂದೋಗಿ ಗ್ರಾಮದ ಬೀರದೇವರ ಜಾತ್ರೆಯಲ್ಲಿ ಭಕ್ತರು ಕೈಗೆ, ನಾಲಿಗೆಗೆ ಅಲುಗು ಹಾಕಿಕೊಳ್ಳುವುದು ಕಂಡುಬರುತ್ತದೆ.

ಒಟ್ಟಾರೆ ಕುರುಬರಲ್ಲಿ ಧಾರ್ಮಿಕ ಆಚರಣೆಗಳು ಶಾಂತ ಹಾಗೂ ಉಗ್ರವಾದವುಗಳಾಗಿವೆ. ಮೈಲಾರಲಿಂಗ, ಬೀರದೇವನ ಭಕ್ತರಲ್ಲಿ ಅಧಿಕವಾಗಿ ಉಗ್ರರೂಪದ ಆಚರಣೆಗಳು ಕಂಡುಬರುತ್ತವೆ. ಪ್ರತಿಯೊಂದು ಆಚರಣೆಗಳು ಇಂದಿಗೂ ತಮ್ಮದೇ ಆದ ಮಹತ್ವವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ.

## ೬.೪ ಹರಕೆಗಳು ಮತ್ತು ನಂಬಿಕೆಗಳು

ಮಾನವನಲ್ಲಿ ಆರಾಧನಾ ಸ್ವರೂಪ ಬೆಳೆಂದತೆಲ್ಲ ಅದೃಶ್ಯವಾದ ಶಕ್ತಿಗೆ ಧಾರ್ಮಿಕ ವ್ಯವಸ್ಥೆಯ ರೂಪ ನೀಡಿದನು. ಅದರ ಮೂಲಕ ತನ್ನ ಸಮಸ್ಯೆಗಳ ನಿವಾರಣೆಗೆ ಹಾಗೂ ನೀಡಿಕೆಗಳ ಪೂರೈಕೆಗೆ ಹರಕೆಗಳನ್ನು ಸೃಷ್ಟಿಸಿಕೊಂಡನು. ಈ ಹರಕೆಯು ಒಂದು ರೀತಿಯಲ್ಲಿ ಭಕ್ತ ಮತ್ತು ದೈವದ ನಡುವೆ ನಡೆಯುವ ಒಂದು ಆಂತರಿಕ ಒಡಂಬಡಿಕೆ ಎಂಬ ಅಭಿಪ್ರಾಯವಿದೆ. ಜನಪದರಲ್ಲಿ ಹರಕೆಗಳು ಸ್ವಲ್ಪ ಹೆಚ್ಚು ಕಡಿಮೆ ಸರ್ವ ಸಾಮಾನ್ಯ ಸ್ವರೂಪ ಪಡೆದಿರುವುದು ಕಂಡುಬರುತ್ತದೆ. ಈ ರೀತಿಯ ಹರಕೆಗಳು ಕುರುಬರಲ್ಲೂ ಕಂಡುಬರುತ್ತವೆ. ಕುರುಬರು ತಮ್ಮ ಇಷ್ಟಾರ್ದಗಳನ್ನು ಪೂರೈಸಿಕೊಳ್ಳಲು, ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ತಮ್ಮ ಆರಾಧ್ಯ ದೈವಗಳಿಗೆ ಹರಕೆಗಳನ್ನು ಹೊರುತ್ತಾರೆ. ಕುರುಬರಲ್ಲಿ ಬೀರದೇವ, ಮೈಲಾರಲಿಂಗ, ಗಂಗೆ ಮಾಳಮ್ಮ, ಎಲ್ಲಮ್ಮ ಮೊದಲಾದ ದೇವ-ದೇವತೆಗಳಿಗೆ ಹರಕೆ ಹೊರುವುದು ಕಂಡುಬರುತ್ತದೆ. ಅಂಥ ಹರಕೆಗಳು ಈ ರೀತಿಯಾಗಿವೆ.

### ೬.೪.೧ ಮೀಸಲು ತುಪ್ಪದ ಹರಕೆ

ಮನೆಯಲ್ಲಿಯ ಹಾಲಿನಿಂದ ಬೆಣ್ಣೆ ತೆಗೆದು ತುಪ್ಪ ಕಾಸುತ್ತಾರೆ. ಆ ತುಪ್ಪವನ್ನು ನೆಲದ ಮೇಲಿಡದೆ ನೆಲುವಿನ ಮೇಲಿಡುತ್ತಾರೆ. ಅದನ್ನು ಯಾರೂ ಮುಟ್ಟುವಂತಿಲ್ಲ. ವಿಶೇಷ ಸಂದರ್ಭಗಳಲ್ಲಿ ಈ ಮೀಸಲುತುಪ್ಪದಿಂದ ದೀಪ ಹಚ್ಚುತ್ತಾರೆ. ಮೈಲಾರಲಿಂಗನ ಭಕ್ತರು ತುಪ್ಪದ ಮಾಳಮ್ಮನಿಗೆ ತಲೆಯಿಂದ ಪಾದದವರೆಗೆ ಮೀಸಲು ತುಪ್ಪ ಹರಕೆ ಸಲ್ಲಿಸುತ್ತಾರೆ.

### ೬.೪.೨ ಉಡುಗೊರೆಯ ಹರಕೆ

ದೇವರ ಅಂಗಾಂಗಗಳು, ಕೈಯಲ್ಲಿ ಆಯುಧಗಳು ಅಥವಾ ಇತರ ವಸ್ತುಗಳನ್ನು ಉಡುಗೊರೆಯಾಗಿ ಕೊಡುವ ಹರಕೆ ಹೊರುತ್ತಾರೆ. ದೇವರ ಅಂಗಾಂಗಗಳಿಗೆ ಸಂಬಂಧಿಸಿದ ಮುಖ, ಹಸ್ತ, ಕಣ್ಣು, ಮೀಸೆ, ಅಲ್ಲದೆ ಲಿಂಗ, ಚವರ, ಪಾಲಕಿ, ಕುದುರೆ, ಗಂಟೆ, ಕೊಡ, ಕಳಸ ಮೊದಲಾದ ವಸ್ತುಗಳನ್ನು ಬಂಗಾರ ಬೆಳ್ಳಿ ಹಾಗೂ ಪಂಚಲೋಹಗಳಿಂದ ಮಾಡಿಸಿ ಹರಕೆ ತೀರಿಸುತ್ತಾರೆ.[೧೦೩] ಮೈಲಾರಲಿಂಗನ ಭಕ್ತರು ಗೊರವರಿಗೆ ಕೋರಿ ಅಂಗಿ, ದೋಣಿ, ಗಂಟೆ ಮೊದಲಾದ ವಸ್ತುಗಳನ್ನು ಉಡುಗೊರೆಯ ಹರಕೆ ರೂಪದಲ್ಲಿ ನೀಡುವುದು ಇಂದಿಗೂ ಕಂಡುಬರುತ್ತದೆ.

### ೬.೪.೩ ಜನಗಿ ಹರಕೆ

ಮನೆಯಲ್ಲಿ ಹೈನು ಸಮೃದ್ಧಿಯಾಗಲೆಂದು ಹೊರುವ ಹರಕೆಯಾಗಿದೆ. ದನಕರು ಕುರಿಗಳನ್ನು ದೇವರ ಹೆಸರಿನಲ್ಲಿ ಗರ್ಭದಲ್ಲಿಯೇ ಬಿಡುತ್ತಾರೆ. ಹೀಗೆ ಹರಕೆ ಬಿಟ್ಟ ಪ್ರಾಣಿಯನ್ನು ಮಾರಾಟ ಮಾಡುವುದಾಗಲಿ, ಹೊಡೆಯುದಾಗಲಿ, ತಿನ್ನುವುದಾಗಲಿ ಮಾಡುವಂತಿಲ್ಲ. ಅದರ ಉತ್ಪನ್ನಗಳಾದ ಹಾಲು, ಮೊಸರು, ಬೆಣ್ಣೆ, ತುಪ್ಪ ಇತ್ಯಾದಿಗಳನ್ನು ಬೇರೆಯವರಿಗೆ ನೀಡುವಂತಿಲ್ಲ. ಹರಕೆ ಬಿಟ್ಟ ಪ್ರಾಣಿ ಸ್ವಲ್ಪ ಬೆಳೆದ ನಂತರ ದೇವರಿಗೆ ಅರ್ಪಿಸುತ್ತಾರೆ. ಕೆಲವರು ಹೋರಿ, ಆಕಳು, ಎಮ್ಮೆ, ಕುರಿಯನ್ನು ಹರಕೆಗೆ ಬಿಡುತ್ತಾರೆ. ಕೆಲವಡೆ ಬೆಳ್ಳಿಯ ಕುದುರೆ ಕಟ್ಟಿಗೆಯ ಕುದುರೆ ಹಾಗೂ ಮಣ್ಣಿನಿಂದ ಮಾಡಿದ ಕುರಿಯನ್ನು ಅರ್ಪಿಸುವುದು ಕಂಡುಬರುತ್ತದೆ.

**೬.೪.೪ ದೇವರ ಹೊರೆ ಹೊರುವುದು**

ಬಹಳ ವರ್ಷಗಳಾದರೂ ಮಕ್ಕಳಾಗದಿದ್ದರೆ, ಮಕ್ಕಳಾದರೂ ಬದುಕಿ ಉಳಿಯದಿದ್ದರೆ, ಗಂಡು ಸಂತಾನವಿಲ್ಲದಿದ್ದರೆ, ಮಕ್ಕಳಿಗೆ ಯಾವುದೋ ರೋಗ ಉಂಟಾಗಿದ್ದರೆ ಮೊದಲಾದ ಸಮಸ್ಯೆಗಳಿದ್ದಾಗ ತಮ್ಮ ಮಕ್ಕಳಿಗೆ ದೇವರ ಹೊರೆ ಹೊರಿಸುವೆವೆಂದು ಬೇಡಿಕೊಳ್ಳುತ್ತಾರೆ.[೧೦೪] ಮೈಲಾರಲಿಂಗನ ಭಕ್ತರು ತಮ್ಮ ಮಕ್ಕಳನ್ನು ಗೊರವ ಅಥವಾ ಗೊರವಿ ಹಾಗೂ ಕುದುರೆಕಾರನನ್ನಾಗಿ ಮಾಡುವವೆಂದು ಹರಕೆ ಹೊತ್ತರೆ ಎಲ್ಲಮ್ಮ ಅಥವಾ ಹುಲಿಗೆಮ್ಮ ದೇವಿಯ ಭಕ್ತರು ಜೋಗಮ್ಮ ಅಥವಾ ಜೋಗಪ್ಪರನ್ನಾಗಿ ಮಾಡುವೆವೆಂದು ಹರಕೆಯನ್ನು ಹೊರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

**೬.೪.೫ ಉಪ್ಪು ಗಂಟಿನ ಹರಕೆ**

ಹೊಸ ವಸ್ತ್ರದ ತುಂಡಿನಲ್ಲಿ ಉಪ್ಪನ್ನು ಒಯ್ಯುತ್ತಾರೆ. ಉಪ್ಪನ್ನು ಹಾಕಲು ನಿಗದಿ ಪಡಿಸಿರುವ ಸ್ಥಳದ ಸುತ್ತಲೂ ಐದು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ನಂತರ ಆ ಸ್ಥಳದ ಒಂದು ಭಾಗದಲ್ಲಿ ಉಪ್ಪನ್ನು ಸುರಿಯುತ್ತಾರೆ. ಮೈಲಾರದಲ್ಲಿ ಮೈಲಾರಲಿಂಗನ ದೇವಾಲಯದ ಮುಂದಿರುವ ಕಟ್ಟೆಯ ಮೇಲೆ ಉಪ್ಪು ಹಾಕುತ್ತಾರೆ. ಕೊಪ್ಪಳ ಜಿಲ್ಲೆಯ ಹುಲಿಗಿ ಕ್ಷೇತ್ರದಲ್ಲಿರುವ ಹುಲಿಗೆಮ್ಮನ ದೇವಾಲಯದ ಎದುರಿಗೆ ಉಪ್ಪನ್ನು ಸುರಿಯುವ ಸಂಪ್ರದಾಯವಿರುವುದು ಕಂಡುಬರುತ್ತದೆ.

**೬.೪.೬ ಮುಡುಪಿನ ಹರಕೆ**

ಮುಡುಪು ಎಂದರೆ ದೇವರ ಹೆಸರಿನಿಂದ ಹಣ ಸಂಗ್ರಹಿಸಿ ಅದನ್ನು ದೇವರ ಹುಂಡಿಗೆ ಹಾಕುವುದು ಎಂದರ್ಥವಾಗುತ್ತದೆ. ತಮ್ಮ ಸಮಸ್ಯೆ ನಿವಾರಣೆಯಾಗಲೆಂದು ಬೇಡಿಕೊಂಡು ದೇವರ ಹೆಸರಿನಲ್ಲಿ ಹಣವನ್ನು ಒಂದು ವಸ್ತ್ರದ ಗಂಟಿನಲ್ಲಿ ಕಟ್ಟಿಡುತ್ತಾರೆ. ಪ್ರತಿವಾರವೂ ಇಂತಿಷ್ಟೆಂದು ಮುಡುಪು ಹಾಕುತ್ತಾರೆ. ಆ ದೇವರ ಜಾತ್ರೆ ಅಥವಾ ವಿಶೇಷ ದಿನದಂದು ಹಣವನ್ನು ದೇವರಿಗೆ ಅರ್ಪಿಸುವ ಸಂಪ್ರದಾಯವಿರುವುದು ಕಂಡುಬರುತ್ತದೆ. ಮುಡುಪನ್ನು ಕಟ್ಟಿಡುವುದು ರವಿವಾರ, ಶುಕ್ರವಾರ, ಮಂಗಳವಾರ ದಿನದಂದು ಸಾಮಾನ್ಯವಾಗಿ ಕಂಡುಬರುತ್ತದೆ.

**೬.೪.೭ ಮೀಸಲು ಬುತ್ತಿಯ ಹರಕೆ**

ಕುರುಬರು ತಮ್ಮ ಮನೆದೇವರ ಅಥವಾ ಕುಲದೇವರ ಜಾತ್ರೆ ಅಥವಾ ಹಬ್ಬಗಳಂದು ಮೀಸಲು ಬುತ್ತಿಯನ್ನು ತಯಾರಿಸುತ್ತಾರೆ. ಕಡುಬು, ಚಪಾತಿ, ಪಲ್ಲೆ, ಅನ್ನ ಮೊದಲಾದವುಗಳನ್ನು ಒಂದು ಬಿಳೀ ವಸ್ತ್ರದಲ್ಲಿಟ್ಟು ಬುತ್ತಿ ಕಟ್ಟುತ್ತಾರೆ. ಇದು ಆ ದೇವರ ಹೆಸರಿನಲ್ಲಿ ಕಟ್ಟಿದ ಬುತ್ತಿಯಾಗಿರುತ್ತದೆ. ಈ ರೀತಿಯ ಬುತ್ತಿಯನ್ನು ಮೈಲಾರಲಿಂಗನ ಭಕ್ತರು ಗೊರವಯ್ಯಗಳ ದೋಣಿಗೆ ನೀಡುತ್ತಾರೆ. ಕನಿಷ್ಟ ಐದು ದೋಣಿಗೆ ನೀಡಬೇಕೆನ್ನುವ ಪದ್ಧತಿಯಿದೆ.

**೬.೪.೮ ಉರುಳು ಸೇವೆಯ ಹರಕೆ**

ತಮ್ಮ ಸಮಸ್ಯೆಗಳು ಬಗೆ ಹರಿಯಲೆಂದು ಅಥವಾ ಬೇಡಿಕೆಗಳು ನೆರವೇರಲೆಂದು ಸ್ತ್ರೀ ಪುರುಷರು ಉರುಳು ಸೇವೆಯ

ಹರಕೆ ಹೊರುತ್ತಾರೆ. ನದಿಯಲ್ಲಿ ಸ್ನಾನ ಮಾಡಿ ಒದ್ದೆ ಮೈಯಲ್ಲಿ ಗುಡಿಯ ಸುತ್ತಲೂ ಉರುಳು ಸೇವೆ ಮಾಡುತ್ತಾರೆ. ಕೆಲವಡೆ ನದಿಯಲ್ಲಿ ಸ್ನಾನ ಮಾಡಿ ಕೈಯಲ್ಲಿ ಒಂದು ಚಿಕ್ಕ ಕೋಲನ್ನು ಹಿಡಿದು ಉದ್ದವಾಗಿ ಮಲಗುತ್ತ ದಾರಿಯುದ್ದಕ್ಕೂ ಅಥವಾ ದೇವಸ್ಥಾನದ ಸುತ್ತಲೂ ದೀಣ ನಮಸ್ಕಾರ ಹಾಕುವ ಹರಕೆಯನ್ನು ಸಲ್ಲಿಸುತ್ತಾರೆ. ಹಿರಿಯರು, ಸಂಬಂಧಿಕರು ಇವರಿಗೆ ಹೊಸ ವಸ್ತ್ರಗಳನ್ನು ನೀಡುವ ಪದ್ಧತಿಯಿದೆ. ಈ ಪದ್ಧತಿಯು ಮೈಲಾರಲಿಂಗ, ಬೀರಪ್ಪ, ಎಲ್ಲಮ್ಮ, ಹುಲಿಗೆಮ್ಮ ಭಕ್ತರಲ್ಲಿ ಕಾಣಬಹುದಾಗಿದೆ.

### ೬.೪.೯ ಇಡಿಗಾಯಿ ಹರಕೆ

ಕೆಲವರು ದೇವರಿಗೆ ಇಡಿಗಾಯಿ ಹೊಡೆಯುವ ಹರಕೆ ಹೊರುತ್ತಾರೆ. ಈ ಇಡಿಗಾಯಿಗಳ ಸಂಖ್ಯೆ ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಹಾಗೂ ದೇವರಿಂದ ದೇವರಿಗೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕೆಲವು ವ್ಯಕ್ತಿಗಳು ೨, ೧೧, ೫೧, ೧೦೧ ಇಂಡಿಗಾಯಿಗಳನ್ನು ಹರಕೆ ರೂಪದಲ್ಲಿ ಸಲ್ಲಿಸುತ್ತಾರೆ. ಇಟಗಿ ಭೀಮಮ್ಮನ ಭಕ್ತರು ಒಂದು ಕಾಯಿಯನ್ನು ಹೊಸ ಬಟ್ಟೆಯಲ್ಲಿಟ್ಟು ದೇವಾಲಯದಲ್ಲಿ ಕಟ್ಟಿಬರುವುದು ಕಂಡುಬರುತ್ತದೆ. ಹಾಗೆಯೇ ಬೆಂಗಳೂರಿನ ಬೀರದೇವರ ದೇವಾಲಯಗಳಲ್ಲಿ ತೆಂಗಿನಕಾಯಿಯನ್ನು ತಲೆಗೆ ಒಡೆದುಕೊಳ್ಳುವ ಹರಕೆ ಸಲ್ಲಿಸುತ್ತಾರೆ. ಇಡಿಗಾಯಿ ಹರಕೆ ಪ್ರತಿಯೊಬ್ಬ ದೇವರಲ್ಲೂ ಕಂಡುಬರುತ್ತದೆ.

### ೬.೪.೧೦ ಮುಡಿಕೊಡುವುದು

ದೇವರಿಗೆ ತಮ್ಮ ತಲೆಗೂದಲು (ಮುಡಿ)ನ್ನು ಕೊಡುವ ಹರಕೆ ಹೊರುತ್ತಾರೆ. ಈ ಪದ್ಧತಿಯು ಎಲ್ಲೆಡೆ ಸಾಮಾನ್ಯವಾಗಿದೆ. ವೈಷ್ಣವ ಧರ್ಮದ ಅನುಯಾಯಿಗಳಲ್ಲಿ ಅಧಿಕವಾಗಿ ಕಂಡುಬಂದರೂ ಮೈಲಾರಲಿಂಗ, ಹುಲಿಗೆಮ್ಮನ ಭಕ್ತರಲ್ಲೂ ಈ ಹರಕೆ ಸಲ್ಲಿಸುವುದನ್ನು ಕಾಣಬಹುದಾಗಿದೆ.

ಕುರುಬರಲ್ಲಿ ತಾವು ಹೊತ್ತ ಹರಕೆಗಳನ್ನು ತೀರಿಸದಿದ್ದರೆ ಕೆಡಕು ಉಂಟಾಗುತ್ತದೆ ಎಂಬ ನಂಬಿಕೆಯಿದೆ. ಹೀಗಾಗಿ ಹರಕೆಗಳು ಕಡ್ಡಾಯವಾಗಿ ತೀರಿಸಲ್ಪಡುತ್ತವೆ. ಆದರೆ ಈ ಹರಕೆಗಳನ್ನು ಸ್ವಲ್ಪ ಬದಲಾಯಿಸುವ ಸಂದರ್ಭಗಳೂ ಕಂಡುಬರುತ್ತವೆ. ತಾವು ಬೇಡಿಕೊಂಡ ವಸ್ತು ನೀಡಲು ಸಾಧ್ಯವಾಗದಿದ್ದಾಗ ಅದರ ಪ್ರಮಾಣವನ್ನು ಕಡಿಮೆ ಮಾಡುವ ಸಾಧ್ಯತೆಯಿದೆ. ಉದಾ: ಬೆಳ್ಳಿಯ ಮುಖ ಅಥವಾ ಬೆಳ್ಳಿಯ ಕುದುರೆ ಕೊಡುವೆನೆಂದು ಬೇಡಿಕೊಂಡಿದ್ದರೆ, ಅದರ ಬದಲಿಗೆ ತಗಡಿನ ಅಥವಾ ಪಂಚಲೋಹದ ಮುಖ ಅಥವಾ ಕುದುರೆ ಮಾಡಿಸಿಕೊಡಬಹುದಾಗಿದೆ. ಒಟ್ಟಾರೆ ದೈವದ ಮುಂದೆ ಹೇಳಿಕೊಂಡು ತಮ್ಮ ಸಮಸ್ಯೆಗಳಿಗೆ ಪರಿಹಾರ ಪಡೆದುಕೊಳ್ಳಬಹುದು ಎನ್ನುವ ಆಂತರಿಕ ವಿಶ್ವಾಸವೇ ಈ ಹರಕೆಗಳಿಗೆ ಪ್ರಮುಖ ಕಾರಣವಾಗಿದೆ ಎಂಬುದು ಸ್ಪಷ್ಟ.

### ೬.೪.೧೧ ನಂಬಿಕೆಗಳು

ಮಾನವನ ಭಯ ಮತ್ತು ಮಾನಸಿಕ ಅಸ್ಥಿರತೆ ಧಾರ್ಮಿಕ ನಂಬಿಕೆಗಳ ಹುಟ್ಟಿಗೆ ಕಾರಣವಾಗಿದೆ. ಜನಪದ ನಂಬಿಕೆಗಳು ಒಂದು ರೀತಿಯ ಅಲಿಖಿತ ಹೃದಯಾಂತರ್ಗತ ಕರಾರು ಪತ್ರವಾಗಿದೆ. ಅಸಂಖ್ಯಾತ ಮೂಢನಂಬಿಕೆಗಳಿದ್ದರೂ, ಅವುಗಳಿಗೆ ಒಂದು ವಿಶೇಷವಾದ ಅರ್ಥವಿದೆ. ಈ ನಂಬಿಕೆಗಳ ಪ್ರಮುಖ ಉದ್ದೇಶವೆಂದರೆ ಜನರನ್ನು ಸೂಕ್ತ ರೀತಿಯಲ್ಲಿ ನಡೆದುಕೊಳ್ಳುವಂತೆ

ಮಾಡುವುದಾಗಿದೆ. ಹೀಗಾಗಿ ಈ ನಂಬಿಕೆಗಳು ಜನಪದ ಧರ್ಮದ ಮೂಲ ಎನ್ನಬಹುದಾಗಿದೆ. ಇಂತಹ ಅನೇಕ ನಂಬಿಕೆಗಳು ಕುರುಬರಲ್ಲೂ ಕಂಡುಬರುತ್ತವೆ.

ವಿಜಯನಗರ ಸಾಮ್ರಾಜ್ಯ ಕಾಲದ ಸಮಾಜದಲ್ಲಿ ಕೆಲವು ಕುರುಡು ನಂಬಿಕೆಗಳಿದ್ದವೆಂದು ಅಂದಿನ ಚಂಪು ಕಾವ್ಯದ ನಾಯಕ ಮನೋವೇಗ ತನ್ನ ಕೃತಿಯಲ್ಲಿ ತಿಳಿಸಿದ್ದಾನೆ.[೧೦೫] ಇದರಿಂದ ಅಂದು ಸಮಾಜದಲ್ಲಿ ಜನರು ಕೆಲವು ನಂಬಿಕೆಗಳನ್ನು ಬೆಳೆಸಿಕೊಂಡಿದ್ದರೆಂದು ತಿಳಿಯುತ್ತದೆ. ಅಂದಿನ ನಂಬಿಕೆಗಳಲ್ಲಿ ಕೆಲವು ಈ ರೀತಿಯಾಗಿವೆ.[೧೦೬] ಅವುಗಳಲ್ಲಿ

೧. ಗಂಗಾನದಿಯು ಪವಿತ್ರವೆಂದು ತಿಳಿದು, ವ್ಯಕ್ತಿಯ ಮರಣಾನಂತರ ಅವನ ಅಸ್ಥಿಪಂಜರಗಳನ್ನು ಗಂಗಾನದಿಯಲ್ಲಿ ಬಿಟ್ಟರೆ ಅವನಿಗೆ ಸದ್ಗತಿ ದೊರೆಯುವುದು.
೨. ಸತಿ ಆಚರಣೆ ಪವಿತ್ರವಾದುದು.
೩. ಗ್ರಹಗಳ ದುಷ್ಪರಿಣಾಮಗಳಿಂದ ರಕ್ಷಿಸಲು ಮಕ್ಕಳಿಗೆ ತಾಯಿತ ಕಟ್ಟುವುದು
೪. ಧರ್ಮದ ಹೆಸರಿನಲ್ಲಿ ಜಟೆ ಬೆಳೆಸುವುದು.
೫. ದೇವರ ಹೆಸರಿನಲ್ಲಿ ಛತ್ರ, ಛಾಮರ, ದೇವಾಲಯಗಳನ್ನು ನಿರ್ಮಿಸುವುದು.
೬. ಅನ್ನ ಆಯುಧ, ಮರ, ಗ್ರಹಗಳು, ಅಗ್ನಿ, ಬಾವಿ, ಕೆರೆ, ಮನೆಯ ಹೊಸ್ತಿಲು, ಒನಕೆ ಮೊದಲಾದವುಗಳನ್ನು ಪೂಜಿಸುವುದು.

ಈ ರೀತಿಯ ನಂಬಿಕೆಗಳನ್ನು ಅಂದಿನ ಜನರು ಪಾಲಿಸುತ್ತಿದ್ದರೆಂದು ಜೈನನಾಗಿದ್ದ ಮನೋವೇಗನು ಟೀಕಿಸಿದ್ದಾನೆ. ಆದರೆ ನಂಬಿಕೆಗಳು ಹಿಂದೂಗಳಿಗೆ ಪವಿತ್ರವಾಗಿದ್ದವು. ಅವುಗಳನ್ನು ಭಕ್ತಿಭಾವದಿಂದ ಪಾಲಿಸುತ್ತಿದ್ದರು. ಅಂದಿನ ನಂಬಿಕೆಗಳು ಇಂದಿಗೂ ಸಮಾಜದಲ್ಲಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಅದರಲ್ಲೂ ಮುಗ್ಧರು, ಸಾತ್ವಿಕರು, ಅನಕ್ಷರಸ್ಥರೇ ಅಧಿಕವಾಗಿರುವ ಕುರುಬರಂತಹ ಸಮುದಾಯಗಳ ಬದುಕನ್ನು, ಸಾಮಾಜಿಕ ಸ್ಥಿತಿಗತಿಗಳನ್ನು ರೂಢಿಯಲ್ಲಿರುವ ನಂಬಿಕೆಗಳು ನಿಯಂತ್ರಿಸುತ್ತಾ ಬಂದಿರುವುದನ್ನು ಇಂದಿಗೂ ಕಾಣಬುದಾಗಿದೆ. ಕುರುಬರಲ್ಲಿ ಪ್ರಚಲಿತದಲ್ಲಿರುವ ಕೆಲವು ನಂಬಿಕೆಗಳು ಈ ರೀತಿಯಾಗಿವೆ.[೧೦೭]

೧. ಭೂಲೋಕದಲ್ಲಿ ಮೊದಲು ಹುಟ್ಟಿದ್ದು ಭಂಡಾರ.
೨. ಭಾರತ ಹುಣ್ಣಿಮೆ ಮ್ಹೊಳಸಾದೇವಿಯ ಜನ್ಮದಿನ.
೩. ದೇವರಗುಡ್ಡದ ವಾಸದ ಮಲ್ಲಪ್ಪ ಮೈಲಾರಲಿಂಗನ ಮಗ.
೪. ಎಲ್ಲಮ್ಮ ಮೈಲಾರಲಿಂಗನ ತಂಗಿ
೫. ಮೈಲಾರದವ ಅಣ್ಣ ದೇವರಗುಡ್ಡದವ ತಮ್ಮ
೬. ಕುದುರೆ ಮೈಲಾರಲಿಂಗನ ವಾಹನ ಅದರ ಮೇಲೆ ಹತ್ತಕೂಡದು.
೭. ಕರಿಯಾಲ ಮೈಲಾರಲಿಂಗನ ವಾಸಸ್ಥಳ
೮. ಕುದುರೆ ಕನಸಿನಲ್ಲಿ ಬಂದರೆ ಹರಕೆ ಬಾಕಿ.
೯. ರವಿವಾರ ದೇವರ ವಾರ.

೧೦. ಕನಸಿನಲ್ಲಿ ಕರಿಕಂಬಳಿ ಕಂಡರೆ ಶುಭ

೧೧. ವರ್ಷದಲ್ಲಿ ೫ ಪ್ರಮುಖ ಹುಣ್ಣಿಮೆಗಳಲ್ಲಿ ದೀಪ ಬೆಳಗಬೇಕು

೧೨. ಮೈಲಾರಲಿಂಗನಿಗೆ ಜಾತಿಯಿಲ್ಲ.

೧೩. ರವಿವಾರ ದೇವರಗುಡ್ಡ ಬಿಡಕೂಡದು.

೧೪. ಕನಸಿನಲ್ಲಿ ನಾಯಿ ಕಾಣಿಸಿದರೆ ದೇವರ ಸಂಕೇತ

೧೫. ತುಪ್ಪದ ಮಾಳಮ್ಮನಿಗೆ ಮೀಸಲು ತುಪ್ಪದ ಅಭಿಷೇಕ ಮಾಡಿದರೆ ಹೈನು ಸಮೃದ್ಧಿ.

೧೬. ವೇಷ ಧರಿಸಿದ ಗೊರವರ ಜೊತೆ ಜಗಳವಾಡಕೂಡದು.

೧೭. ಏಳುಕೋಟಿ ಅನ್ನುವುದು ತಿರುಪತಿ ತಿಮ್ಮಪ್ಪನ ಸಾಲ.

೧೮. ಬದನೆಕಾಯಿ ಉಳ್ಳಾಗಡ್ಡಿ, ಬೆಳ್ಳುಳ್ಳಿ ದೇವರಿಗೆ ಅರ್ಪಿಸದೆ ತಿಂದರೆ ದೋಷ.

೧೯. ಹೆಗ್ಗಪ್ಪ ಮಾಟ ಪರಿಹಾರ ದೇವರು.

೨೦. ದೋಣಿಯನ್ನು ಎಂದಿಗೂ ಬೋರಲಾಗಿಡಕೂಡದು.

೨೧. ಗೊರವರು, ಕುದುರೆಕಾರರು, ಪೂಜಾರರು ಕಂಡಕಂಡಲ್ಲಿ ನೀರು ಆಹಾರ ಸೇವಿಸಕೂಡದು.

**೬.೫ ಗುರುಮಠಗಳು**

ಧಾರ್ಮಿಕ ಸಾಂಸ್ಕೃತಿಕ ಸಂಸ್ಥೆಗಳಾದ ಮಠಮಾನ್ಯಗಳಿಗೂ ಸಮಾಜಕ್ಕೂ ಅವಿನಾಭವ ಸಂಬಂಧವಿದೆ. ಒಂದು ಕಾಲಕ್ಕೆ ಸಮಾಜದ ಬದುಕನ್ನು ನಿಯಂತ್ರಿಸಬಲ್ಲ, ರೂಪಿಸಬಲ್ಲ ಮಹತ್ತರವಾದ ಸಂಸ್ಥೆಗಳಾಗಿ ಮಠಮಾನ್ಯಗಳು ಬೆಳೆದಿದ್ದವು. ಸಂಚಾರ ಮಾಡುವ ಸ್ವಾಮಿಗಳಿಂದ ಆಶ್ರಮಗಳು ಹುಟ್ಟಿ ಮಠವೆಂದು ಬೆಳಕಿಗೆ ಬಂದವು. ಮಠ ಎಂದರೆ ಸನ್ಯಾಸಿಗಳು ವಾಸಿಸುವ ಯೋಗ್ಯ ಸ್ಥಳವೆಂದೂ, ಅಮರಕೋಶಗಳಿಗೆ ಛಾತ್ರಾದಿ ನಿಲಯ ಎಂಬ ಅರ್ಥವಿದೆ.[೧೦೮]

ಮಠ ಪದವು ಮೂಲತಃ ಸಂಸ್ಕೃತದಲ್ಲಿ ಬಳಕೆಯಾಗಿದೆ. ಮಠ ಎಂದು ಪರ್ಯಾಯ ಕನ್ನಡಕ್ಕೆ ಬಳಸಿಕೊಳ್ಳಲಾಗಿದೆ. ಸನ್ಯಾಸಿಗಳ ವಾಸಸ್ಥಳ ಆಶ್ರಯಗಳಿಗೆ ವಿದ್ಯಾಲಯವೆನ್ನುವ ಅರ್ಥದಲ್ಲಿ ಬಳಕೆಯಾಯಿತೆಂದು ಅಭಿಪ್ರಾಯವಿದೆ.[೧೦೯]

೮ನೇ ಶತಮಾನದ ಕೊನೆಯವರೆಗೂ ಜೈನಧರ್ಮ ಸನ್ಯಾಸಿಗಳಲ್ಲದೆ, ಕಾಳಾಮುಖ, ಕಾಪಾಲಿಕ, ಪಾಶುಪತರು ಮೊದಲಾದ ವಿವಿಧ ಪಂಥಗಳಿಗೆ ಸೇರಿದ ಸನ್ಯಾಸಿಗಳಿದ್ದರು. ಕಾಪಾಲಿಕರು, ಪಾಶುಪತರು, ಶಿವಾಲಯಗಳಲ್ಲಿ ವಾಸಿಸುತ್ತಿದ್ದರು. ನಂತರ ಮಠಗಳ ಅಗತ್ಯವನ್ನು ಗ್ರಹಿಸಿ ಭಾರತ ದೇಶದ ನಾಲ್ಕು ದಿಕ್ಕುಗಳಲ್ಲಿ ಮಠಗಳನ್ನು ಸ್ಥಾಪಿಸಿದ ಕೀರ್ತಿ ಶಂಕರಾಚಾರ್ಯರಿಗೆ ಸಲ್ಲುತ್ತದೆ. ಈ ಮಠಗಳ ಮುಖ್ಯಸ್ಥರಿಗೆ ಸ್ವಾಮಿ ಅಥವಾ ಮಹಾಂತ ಎಂದು ಕರೆಯುತ್ತಿದ್ದರು.[೧೧೦] ನಂತರ ೧೨ನೇ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿ ಮಠಗಳಿಗೆ ಹೊಸ ರೂಪ ನೀಡಿತು. ಈ ಕಾಲದಲ್ಲಿ ಅನೇಕ ಗುರುಮಠಗಳು ಸೃಷ್ಟಿಗೊಂಡಿದ್ದು ಕಂಡುಬರುತ್ತದೆ. ಅವುಗಳಲ್ಲಿ ಕುರುಬರ ಗುರುಮಠಗಳು ಪ್ರಮುಖವಾಗಿವೆ.

ರೇವಣಸಿದ್ಧೇಶ್ವರರು ಕುರುಬರನ್ನು ಒಂದು ಗೂಡಿಸಲು ಒಬ್ಬ ಗುರುವನ್ನು ನೇಮಿಸಿ ಒಂದು ಗುರುಮಠವನ್ನು ನಿರ್ಮಿಸಿದರು.

ಶಾಂತಮುತ್ತಯ್ಯನಿಗೆ ದೀಕ್ಷೆ ನೀಡಿ ಕುರುಬರ ಪ್ರಥಮ ಕುಲಗುರುವಾಗಿ ನೇಮಿಸಿದರು. ಗುರುಗಳನ್ನು ಒಡೆಯರು ಅಥವಾ ಪೂಜ್ಯರೆಂದು ಕರೆಯಲಾಯಿತು. ಕುರುಬರ ಸಮುದಾಯಕ್ಕೆ ಒಡೆಯರು ಗುರುಗಳಾಗಿ ಅನೇಕ ಗುರುಮಠಗಳನ್ನು ನಿರ್ಮಿಸಿದರು. ಅವುಗಳಲ್ಲಿ ಸರೂರ ಮಠವು ಕುರುಬರ ಮುಲ ಮಠವಾಗಿದೆ. ಇದನ್ನು ರೇವಣಸಿದ್ಧೇಶ್ವರ ಪೀಠ ಎಂದು ಕರೆಯಲಾಯಿತು. ನಂತರ ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ ಉಪಮಠಗಳು ಪ್ರಾರಂಭಗೊಂಡವು.

ಕರ್ನಾಟಕದ ಸರೂರ, ಹಿರೇಕುಮ್ಮಿ, ಹೂವಿನಹಡಗಲಿ, ಡಂಬಳ, ಸಂಗ್ರೇಶ, ಕೊಪ್ಪ, ಕಾಮದೇನು, ಹಿರೇನಶಿಬಿ, ಹುಲ್ಲೂರು, ಬಂಕಾಪುರ, ಚಿತ್ರದುರ್ಗ, ಚಿಕ್ಕನಾಯಕನಹಳ್ಳಿ, ತುಮಕೂರು, ಕೊಪ್ಪಳ ಭಾಗಗಳಲ್ಲಿ ಮಠಗಳನ್ನು ಕಾಣಬಹುದಾಗಿದೆ.[೧೧೧] ಅದರಲ್ಲೂ ಕೊಪ್ಪಳ ಜಿಲ್ಲೆಯಾದ್ಯಂತವಿರುವ ಗುರುಮಠಗಳಲ್ಲಿ ಕೊಪ್ಪಳದ ಕೆಂಡದ ಮಠ, ಕುಕನೂರಿನ ಅಮೋಘಸಿದ್ಧ ಮಠ, ಬಸವಪಟ್ಟಣ ನಂಜುಂಡೇಶ್ವರ ಮಠ, ಬಿಸರಳ್ಳಿಯ ಅಮೋಘಸಿದ್ಧಮಠ, ಟೆಂಗುಂಟಿಯ ಗ್ಯಾನಪ್ಪಮಠ, ಕೊರಡಕೇರಿಯ ಅಮೋಘಸಿದ್ಧಮಠ, ಸಂಕನೂರು ಮಠ ಪ್ರಮುಖವಾಗಿವೆ.

### ೬.೫.೧ ಕೊರಡಕೇರಿ ಅಮೋಘಸಿದ್ಧ ಮಠ

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಕೊರಡಕೇರಿ ಗ್ರಾಮದಲ್ಲಿ ಅಮೋಘಸಿದ್ಧನ ಮಠವಿದೆ. ಇದು ಕೊಪ್ಪಳ ಜಿಲ್ಲೆಯಲ್ಲಿಯೇ ಪ್ರಮುಖವಾದ ಮಠವಾಗಿದೆ. ಈ ಮಠದ ಗುರುಗಳು ಸುಮಾರು ೨೦೦–೪೦೦ ವರ್ಷಗಳ ಹಿಂದೆ ಬಿಜಾಪುರ ಜಿಲ್ಲೆಯಿಂದ ವಲಸೆ ಬಂದರು. ಮೂಲ ಗುರುಗಳ ಬಗ್ಗೆ ಯಾವುದೇ ಆಧಾರಗಳಿಲ್ಲ. ಅಂದಿನಿಂದ ಕುರುಬ ಸಮಾಜದ ಒಳಿತವಾಗಿ ಶ್ರಮಿಸುತ್ತಾ ಬಂದಿದ್ದಾರೆ. ಅನೇಕ ಭಾಗಗಳಲ್ಲಿ ಗುರುಮಠಗಳನ್ನು ನಿರ್ಮಿಸಿಕೊಂಡರು. ಬಾಲಯ್ಯ ಸ್ವಾಮಿಗುರುವಿನವರು ಭಕ್ತರ ಶ್ರೇಯಸ್ಸಿಗಾಗಿ ದುಡಿದರು. ಕುರುಬರ ಎಲ್ಲ ಸಂಸ್ಕಾರಗಳಿಗೂ ಗುರುಗಳು ಅವಶ್ಯಕವಾಗಿದ್ದರು. ಗುರುವಿನವರು ಜನರಿಗೆ ಉತ್ತಮ ಮಾರ್ಗದರ್ಶನ ನೀಡುತ್ತ ಒಂದು ಸಂಘಟನೆ ಉಂಟುಮಾಡಿದರು.

ಗುರುವಿನರವರ ಸಂತತಿ ಬೆಳೆದಂತೆಲ್ಲ ಉಪಗುರುಮಠಗಳು ಸೃಷ್ಟಿಗೊಂಡವು. ಈ ಮಠಗಳಲ್ಲಿ ಪ್ರಮುಖವಾಗಿ ರೇವಣಸಿದ್ಧೇಶ್ವರನನ್ನು ಆರಾಧಿಸುತ್ತಾರೆ. ನಂತರ ಅಮೋಘಸಿದ್ಧರನನ್ನು ಕುಲಗುರುವಾಗಿ ಆರಾಧಿಸುತ್ತಾರೆ. ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಅಮೋಘಸಿದ್ಧೇಶ್ವರ ಜಾತ್ರೆ ನಡೆಸುತ್ತಾರೆ. ಈ ಗುರುಮಠದಲ್ಲಿ ದೊರಕಿರುವ ಮಾಹಿತಿ ಪ್ರಕಾರ ಕೊಪ್ಪಳ ಜಿಲ್ಲೆಯಲ್ಲಿ ಗುರುಮಠಗಳಿಗೆ ಬುನಾದಿ ಹಾಕಿದ ಕೀರ್ತಿ ಈ ಮಠಕ್ಕೆ ಸಲ್ಲುತ್ತದೆ. ಈ ಮಠದ ಸ್ವಾಮಿಗಳು ಈ ಕೆಳಗಿನಂತಿದ್ದಾರೆ.[೧೧೨]

೧. ಬಸಯ್ಯಸ್ವಾಮಿ ಗುರುವಿನ್

೨. ಬಾಲಯ್ಯಸ್ವಾಮಿ ಗುರುವಿನ್

೩. ಬಸಯ್ಯಸ್ವಾಮಿ ಗುರುವಿನ್

ಇಂದು ಈ ಮಠ ಅಸಂಖ್ಯಾತ ಗ್ರಾಮಗಳ ಜನರಿಗೆ ಗುರುಮಠವಾಗಿದೆ. ಅವುಗಳಲ್ಲಿ ಕುಷ್ಟಗಿ ಕೊರಡಕೇರಿ, ಹನುಮಸಾಗರ, ಹನುಮನಾಳ, ಚಳಗೇರಿ, ಬೇವೂರು, ಯಲಬುರ್ಗಾ, ಸಂಗನಾಳ, ಮುಧೋಳ, ಮುರಡಿ, ಗುಮಗೇರಿ, ಚಿಕ್ಕವಂಕಲಕುಂಟಿ,

ಇಟಗಿ, ಹಿರೇಅರಳಿಹಳ್ಳಿ, ಮ್ಯಾಗೇರಿ ಮೊದಲಾದ ಗ್ರಾಮಗಳ ಜನರು ಗುರುಮಠದ ಭಕ್ತರಾಗಿದ್ದಾರೆ. ಭಕ್ತರು ವರ್ಷಕ್ಕೆ ಕಾಣಿಕೆಯನ್ನು ನೀಡುವರು. ಗುರುಗಳು ಭಕ್ತರ ಪ್ರತಿಯೊಂದು ಶುಭ ಅಶುಭ ಕಾರ್ಯಗಳಲ್ಲಿ ಭಾಗವಹಿಸುವುದು ಕಂಡುಬರುತ್ತದೆ.

### ೬.೫.೨ ಕೆಂಡದ ಸ್ವಾಮಿ ಮಠ

ಕೊಪ್ಪಳದಲ್ಲಿರುವ ಕೆಂಡದ ಸ್ವಾಮಿಮಠ ಪುರಾತನ ಮಠವಾಗಿದೆ. ಸುಮಾರು ೨೦೦-೩೦೦ ವರ್ಷಗಳ ಹಿನ್ನೆಲೆ ಹೊಂದಿದೆ. ಮೂಲ ಗುರುಗಳ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಈ ಮಠದ ಹೆಸರು ಕೆಂಡದ ಮಠ ಎಂದು ಕರೆಯಲು ಒಂದು ಹಿನ್ನೆಲೆಯಿದೆ. ಅದರ ಪ್ರಕಾರ ಒಂದು ಬಾರಿ ಮಳೆಬಾರದೆ ಬರಗಾಲ ಉಂಟಾಯಿತು. ಜನರೆಲ್ಲ ಕೂಡಿಕೊಂಡು ಸ್ವಾಮಿಗಳ ಹತ್ತಿರ ಬಂದು ವಿನಂತಿಸಿಕೊಂಡರು. ಜನರ ಸಮಸ್ಯೆಯನ್ನು ನೀಗಿಸಲು ಸ್ವಾಮಿಗಳು ಒಂದು ಕೆಂಡವನ್ನು ನುಂಗಿದರು. ತಕ್ಷಣ ಮೋಡ ಕಪ್ಪಾಯಿತು. ನಂತರ ಮತ್ತೊಂದು ಕೆಂಡವನ್ನು ನುಂಗಲು ಮಳೆಸುರಿಯತೊಡಗಿತು. ಇದರಿಂದಾಗಿ ಜನರು ಆ ಸ್ವಾಮಿಗಳಿಗೆ ಕೆಂಡದ ಸ್ವಾಮಿಗಳೆಂದು ಕರೆದರು. ಆ ಸ್ವಾಮಿಗಳು ಸ್ಥಾಪಿಸಿದ ಮಠಕ್ಕೆ ಕೆಂಡದ ಮಠ ಎಂಬ ಹೆಸರುಂಟಾಯಿತು. ಕೆಂಡದ ಮಠದ ಸ್ವಾಮಿಗಳು ಈ ರೀತಿಯಾಗಿದ್ದಾರೆ.[೧೧೩]

೧. ಕೆಂಡದಯ್ಯಸ್ವಾಮಿ ಗುರುವಿನ್

೨. ಅಯ್ಯಪ್ಪಸ್ವಾಮಿ ಗುರುವಿನ್

೩. ಸಿದ್ಧಯ್ಯಸ್ವಾಮಿ ಗುರುವಿನ್

೪. ಬೂದಯ್ಯಸ್ವಾಮಿ ಗುರುವಿನ್

೫. ಪಂಚಯ್ಯಸ್ವಾಮಿ ಗುರುವಿನ್

ಸ್ವಾಮಿಗಳ ಮಾರ್ಗದರ್ಶನ ಮೇರೆಗೆ ಭಕ್ತರು ತಮ್ಮ ಕೆಲಸ ಕಾರ್ಯಗಳನು ನೆರವೇರಿಸುತ್ತಾರೆ. ಈ ಮಠಕ್ಕೆ ಕುರಹಟ್ಟಿ, ಲಿಂಗದಾಳ ಹುಲಿಗೋಳ, ಕಿನ್ನಾಳ, ತಿಮ್ಮಾಪುರ, ಲಕ್ಕುಂಡಿ, ಹಲಗೇರಿ, ಹಮಲಾಪುರ, ಕೋಳೂರು, ಮಂಗಳಾಪುರ, ವರ್ತಟ್ನಿನಾಳ, ಗುನ್ನಾಳ, ಕದ್ರಳ್ಳಿ, ಅರಕೇರಿ, ಮುತ್ನಾಳ, ಗಳಗೇರಿ, ಬುಡಸೆಟ್ಟನಾಳ, ಕಲಕೇರಿ, ಬೀಡನಾಳ, ಗಿಣಗೇರಿ, ಬಸಾಪುರ, ಕಿಡದಾಳ, ಬೂದಗುಂಪ, ಬಿಳೀಬಾವಿ, ಹೊಸೂರು, ಇಂದರಗಿ, ಹಿಟ್ನಾಳ, ಅಗಳಕೇರಿ, ಚಿಕ್ಕಬಗನಾಳ, ಅಲ್ಲಾನಗರ, ಕುಣಿಕೇರಿ, ಹ್ಯಾಟಿ, ಮುಂಡರಗಿ, ಗೊಂಡಬಾಳ, ಹಾಲವರ್ತಿ ಮೊದಲಾದ ಗ್ರಾಮಗಳ ಜನರು ಮಠದ ಭಕ್ತರಾಗಿದ್ದಾರೆ.

ವಿಜಯದಶಮಿಯಲ್ಲಿ ಹತ್ತು ದಿನ ಪುರಾಣ ಪ್ರವಚನ ಮಾಡಲಾಗುತ್ತದೆ. ಎಳ್ಳಮವಾಸ್ಯೆ, ಯುಗಾದಿ, ದೀಪಾವಳಿ ಮೊದಲಾದ ಹಬ್ಬದ ದಿನಗಳಂದು ವಿಶೇಷ ಪೂಜೆ ಸಲ್ಲಿಸಲಾಗುತ್ತದೆ. ಭಕ್ತರು ಪ್ರತಿಯೊಂದು ವಿಶೇಷ ದಿನಗಳಂದು ಮಠಕ್ಕೆ ಭೇಟಿ ನೀಡಿ ಗುರುಗಳಿಗೆ ಕಾಣಿಕೆ ಸಲ್ಲಿಸುತ್ತಾರೆ. ಭಕ್ತರಿಗೆ ದಾಸೋಹದ ವ್ಯವಸ್ಥೆ ಮಾಡಲಾಗುತ್ತದೆ. ಒಟ್ಟಾರೆ ಭಕ್ತ ಸಮೂಹದ ಒಳಿತಿಗೆ ಶ್ರಮಿಸುವಂತಹ ಮಠವಾಗಿದೆ ಎಂದು ತಿಳಿಯುತ್ತದೆ.

### ೬.೫.೩ ಕುಕನೂರಿನ ಅಮೋಘಸಿದ್ಧ ಮಠ

ಅಮೋಘಸಿದ್ಧೇಶ್ವರ ಮಠ ಯಲಬುರ್ಗಾ ತಾಲೂಕಿನ ಕುಕನೂರು ಗ್ರಾಮದಲ್ಲಿದೆ. ಈ ಮಠದ ಪ್ರಾಚೀನತೆಯ ಬಗ್ಗೆ

ಮಾಹಿತಿ ದೊರೆಯುವುದಿಲ್ಲ. ಈ ಮಠಕ್ಕೆ ಸುಮಾರು ೨೦೦ ವರ್ಷಗಳ ಇತಿಹಾಸವಿದೆ ಎಂದು ಹೇಳಲಾಗುತ್ತದೆ. ಈ ಮಠದ ಗುರುಗಳು ಈ ರೀತಿಯಾಗಿದ್ದಾರೆ.[೧೧೪]

೧. ಸಿದ್ಧಯ್ಯಸ್ವಾಮಿ ಗುರುವಿನ್

೨. ಗಂಗಯ್ಯಸ್ವಾಮಿ ಗುರುವಿನ್

೩. ಭೂತಾಳಯ್ಯಸ್ವಾಮಿ ಗುರುವಿನ್

೪. ಗಂಗಯ್ಯಸ್ವಾಮಿ ಗುರುವಿನ್

೫. ಅಮ್ಮಯ್ಯಸ್ವಾಮಿ ಗುರುವಿನ್

೬. ವಿರುಪಾಕ್ಷಯ್ಯಸ್ವಾಮಿ ಗುರುವಿನ್

೭. ಮಹಾದೇವಯ್ಯಸ್ವಾಮಿ ಗುರುವಿನ್

ಅಮೋಘಸಿದ್ಧೇಶ್ವರನ ಮಠದಲ್ಲಿ ಪ್ರತಿ ಬಾದಮಿ ಅಮವಾಸೆಯಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಭಕ್ತರು ಗುರುಮಠಗಳಿಗೆ ಆಗಮಿಸಿ ಕಾಣಿಕೆ ಸಲ್ಲಿಸುತ್ತಾರೆ. ಪ್ರತಿಯೊಂದು ಶುಭ ಮತ್ತು ಅಶುಭ ಕಾರ್ಯಗಳಲ್ಲಿ ಗುರುಗಳು ಕಡ್ಡಾಯವಾಗಿ ಭಾಗವಹಿಸುತ್ತಾರೆ. ಕುಕನೂರು ಗ್ರಾಮದ ಸುತ್ತಮುತ್ತಲಿನ ಇಟಗಿ, ರಾಜೂರು, ಕುಕನೂರು, ಆಡೂರು ಮೊದಲಾದ ಗ್ರಾಮಗಳಿಂದ ಭಕ್ತರು ಮಠಕ್ಕೆ ಆಗಮಿಸುತ್ತಾರೆ. ಮಠ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿಲ್ಲದಿರುವುದು ಮಠದ ಅಭಿವೃದ್ಧಿಗೆ ಮಾರಕವಾಗಿದೆ. ಆದರೂ ಗುರುಗಳು ಭಕ್ತರ ಕಾಣಿಕೆಯಿಂದ ಮಠವನ್ನು ಮುನ್ನಡೆಸುತ್ತಿರುವುದು ಕಂಡುಬರುತ್ತದೆ.

### ೭.೫.೪ ಬಸವಪಟ್ಟಣದ ನಂಜುಂಡೇಶ್ವರ ಮಠ

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಬಸಾಪಟ್ಟಣ ಗ್ರಾಮದಲ್ಲಿ ನಂಜುಂಡೇಶ್ವರ ಮಠವಿದೆ. ಹೊಸಪೇಟೆ ಈ ಮಠದ ಮೂಲ ಸ್ಥಳವಾಗಿದೆ. ನಂಜುಂಡಯ್ಯ ಮುತ್ಯಾ ಎಂಬ ಗುರುಗಳು ಗಂಗಾವತಿಯ ಹತ್ತಿರದ ಬಸವಪಟ್ಟಣದಲ್ಲಿ ಬಂದು ನೆಲೆಸಿದರು. ನಂಜುಂಡಯ್ಯನವರು ಅನೇಕ ಪವಾಡಗಳನ್ನು ಮಾಡಿ ಕುರುಬರ ಸಮಾಜದ ಒಳಿತಿಗಾಗಿ ಶ್ರಮಿಸತೊಡಗಿದರು. ದಿನದಿಂದ ದಿನಕ್ಕೆ ಭಕ್ತರ ಸಂಖ್ಯೆ ಅಧಿಕವಾಗತೊಡಗಿದ್ದರಿಂದ, ಒಂದು ಮಠವನ್ನು ಸ್ಥಾಪಿಸಿದರು. ನಂಜುಂಡಯ್ಯನವರ ಮೂರ್ತಿಯನ್ನು ಪ್ರತಿಸ್ಥಾಪಿಸಿ ಮಂದಿರ ನಿರ್ಮಿಸಲಾಯಿತು. ಈ ಮಠಕ್ಕೆ ನಂಜುಂಡೇಶ್ವರ ಮಠವೆಂದು ಕರೆಯತೊಡಗಿದರು.

ನಂಜುಂಡಯ್ಯನವರ ನಂತರ ಅನೇಕ ಗುರುಗಳು ಮಠವನ್ನು ಮುನ್ನಡೆಸಿದರು. ಅನೇಕ ಭಾಗಗಳಲ್ಲಿ ಗುರುಮಠಗಳು ಸ್ಥಾಪನೆಯಾದವು. ಈ ಮಠದ ಗುರುಗಳು ಈ ರೀತಿಯಾಗಿದ್ದಾರೆ.[೧೧೫]

೧. ನಂಜುಂಡಯ್ಯಸ್ವಾಮಿ

೨. ಸಿದ್ಧಯ್ಯಸ್ವಾಮಿ

೩. ನಂಜುಂಡಯ್ಯಸ್ವಾಮಿ

೪. ಸಿದ್ಧರಾಮಯ್ಯಸ್ವಾಮಿ

ಈ ಗುರುಗಳ ಮಾರ್ಗದರ್ಶನದಲ್ಲಿ ಭಕ್ತರು ತಮ್ಮ ಧಾರ್ಮಿಕ ಆಚರಣೆಗಳನ್ನು ನೇರವೇರಿಸಿಕೊಳ್ಳುತ್ತಾರೆ. ಮುದಗಲ್, ಸಿಂಧನೂರು, ಬೂದಗುಂಪಾ, ಕಂಪ್ಲಿ, ಬಸವಪಟ್ಟಣ, ಗಂಗಾವತಿ, ಕನಕಗಿರಿ, ಹೊಸಪೇಟೆ ಮೊದಲಾದ ಪ್ರದೇಶಗಳ ಜನರನ್ನು ಭಕ್ತರನ್ನಾಗಿ ಹೊಂದಿವೆ. ಪ್ರತಿ ವರ್ಷ ಶಿವರಾತ್ರಿಗೆ ಪುರಾಣ ಪ್ರವಚನ ಹಾಗೂ ಸಾಮೂಹಿಕ ವಿವಾಹ ನಡೆಸುತ್ತಾರೆ. ಶ್ರಾವಣಮಾಸದಲ್ಲಿ ಭಜನೆ ಪದಗಳ ಕಾರ್ಯಕ್ರಮ ನಡೆಯುತ್ತದೆ. ಈ ಮಠದಿಂದ ಶಿಕ್ಷಣದ ವ್ಯವಸ್ಥೆಗಾಗಿ ರಾಜರಾಜೇಶ್ವರಿ ವಿದ್ಯಾ ಸಂಸ್ಥೆಯನ್ನು ೧೯೯೨–೯೩ರಲ್ಲಿ ಸ್ಥಾಪಿಸಲಾಯಿತು. ೧ನೇ ತರಗತಿಯಿಂದ ೧೦ನೇ ತರಗತಿಯವರೆಗಿನ ಶಾಲೆಯನ್ನು ಸ್ಥಾಪಿಸಿದರು. ಸುಮಾರು ೪೦೦ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡಲಾಗುತ್ತಿದೆ. ೨೦೦೪–೦೫ರಲ್ಲಿ ರೇವಣಸಿದ್ಧೇಶ್ವರ ಉಚಿತ ಪ್ರಸಾದ ನಿಲಯವನ್ನು ಸ್ಥಾಪಿಸಲಾಗಿದ್ದು, ಸುಮಾರು ೪೦ ವಿದ್ಯಾರ್ಥಿಗಳಿಗೆ ಅವಕಾಶ ನೀಡಲಾಗಿದೆ. ಈ ಹಿನ್ನೆಲೆಯಲ್ಲಿ ಗುರು ಮಠವು ಶೈಕ್ಷಣಿಕವಾಗಿ ಉತ್ತಮ ವ್ಯವಸ್ಥೆ ನೀಡಿ ಕುರುಬರ ಅಭಿವೃದ್ಧಿಗೆ ಶ್ರಮಿಸುತ್ತಿದೆ ಎಂದು ಹೇಳಬಹುದಾಗಿದೆ.

ಈ ಮೇಲಿನ ಮಠಗಳಲ್ಲದೆ ಅನೇಕ ಮಠಗಳು ಕಂಡುಬರುತ್ತವೆ. ಆದರೆ ಮಠಗಳು ತಮ್ಮ ತಮ್ಮಲ್ಲೆ ಶ್ರೇಷ್ಠ ಮನೋಭಾವನೆಯನ್ನು ಬೆಳಸಿಕೊಂಡು ಮುನ್ನಡೆದಿದ್ದವು. ಹೀಗಾಗಿ ಮಠಗಳ ನಡುವೆ ಏಕತೆ ಮೂಡಿರಲಿಲ್ಲ. ಕುರುಬರಲ್ಲಿ ಸಂಘಟನೆಯನ್ನು ಮೂಡಿಸುವುದು ಕಷ್ಟವಾಗಿತ್ತು. ಅಲ್ಲದೆ ಮಠಗಳ ಗುರುಗಳು ಸಂಸಾರಿಗಳಾಗಿದ್ದರು. ಈ ಹಿನ್ನೆಲೆಯಲ್ಲಿ ಕುರುಬ ಸಮಾಜದ ಧುರೀಣರು ಹಾಗೂ ಸಿದ್ಧರಾಮಯ್ಯನವರು ಕೂಡಿ ಶ್ರೀ ಕನಕಗುರು ಪೀಠವನ್ನು ಸ್ಥಾಪಿಸಿದರು. ಕನಕಗುರು ಪೀಠವು ಕನಕದಾಸರ ಐಕ್ಯಸ್ಥಳವಾದ ಧಾರವಾಡ ಜಿಲ್ಲೆಯ ಬ್ಯಾಡಗಿ ತಾಲೂಕಿನ ಕಾಗಿನೆಲೆಯಲ್ಲಿ ಸ್ಥಾಪಿಸಿಲ್ಲಪಟ್ಟಿತು.[೧೧೬] ಅಲ್ಲದೆ ಶ್ರೀ ಬೀರೇಂದ್ರಕೇಶವತಾರಕನಂದ ಪುರಿ ಸ್ವಾಮಿಗಳು ಪೀಠಾಧಿಕಾರಿಗಳಾದರು. ಫೆಬ್ರುವರಿ ೮, ೧೯೯೨ರಲ್ಲಿ ಪ್ರಾರಂಭಗೊಂಡ ಈ ಮಠ ಅನೇಕ ಉಪಮಠಗಳನ್ನು ಸ್ಥಾಪಿಸಿಕೊಂಡಿತು.[೧೧೭] ಪ್ರತಿಯೊಂದು ಉಪಪೀಠಕ್ಕೆ ಒಬ್ಬೊಬ್ಬ ಸ್ವಾಮಿಗಳನ್ನು ನೇಮಿಸಿದರು. ಈ ಸ್ವಾಮಿಗಳು ವಿರಕ್ತರಾಗಿರುವುದು ವಿಶೇಷ. ಈ ಪೀಠಗಳ ಮೂಲಕ ಕುರುಬ ಸಮಾಜದ ಅಭಿವೃದ್ಧಿ, ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಅಭಿವೃದ್ಧಿಗಾಗಿ ಶ್ರಮಿಸಲು ಮುಂದಾದರು. ಇಂದಿಗೂ ಈ ಪೀಠಗಳು ಎಲ್ಲೆಡೆ ಸ್ಥಾಪನೆಗೊಂಡು ಜನರಿಗೆ ಉತ್ತಮ ಮಾರ್ಗದರ್ಶನ ನೀಡುತ್ತ ಅವರ ಸಂಘಟನೆಗೆ, ಅಭಿವೃದ್ಧಿಗೆ ಶ್ರಮಿಸುತ್ತಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಜಾನಪದ ಸಾಹಿತ್ಯ ದರ್ಶನ, ಭಾಗ–೯, ಪ್ರಸಂ: ಡಾ.ಎಸ್.ಎಂ.ವೃಷಬೇಂದ್ರಸ್ವಾಮಿ, ಪ್ರ: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೮೮. ಪುಟ–೧೬

೨. ಅದೇ, ಪು–೧೬

೩. ಅದೇ, ಪು–೧೭

೪. ಅದೇ, ಪು–೧೭

೫. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ–೧೯೯೩. ಪುಟ–೫೦

೬. ಅದೇ, ಪು-೫೧

೭. ಅದೇ, ಪು-೫೧

೮. ಅದೇ, ಪು-೫೨

೯. ಅದೇ, ಪು-೫೨

೧೦. ಜಾನಪದ ಹಾಲುಮತ ಮಹಾಕಾವ್ಯದಲ್ಲಿ ಉಲ್ಲೇಖಿತ ಸ್ಥಳಗಳ ಪರೀವೀಕ್ಷಣೆ, ಎಂ.ಫಿಲ್ ಪ್ರಬಂಧ(ಅಪ್ರಕಟಿತ), ಸಂಶೋ: ನಾಗೇಂದ್ರಪ್ಪ ಎಸ್. ಪೂಜಾರಿ, ಮಾರ್ಗ: ಡಾ.ವೀರಣ್ಣ ದಂಡೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೨೦೦೪. ಪುಟ-೩೩

೧೧. ಅದೇ, ಪು-೩೩

೧೨. ಜಾನಪದ ಸಾಹಿತ್ಯ ದರ್ಶನ, ಭಾಗ-೯ ಸಂ: ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ,ಪ್ರ: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೮. ಪುಟ-೩೩

೧೩. ಅದೇ, ಪು-೧೮

೧೪. ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಒಂದು ಪಿಎಚ್.ಡಿ ಪ್ರಬಂಧ (ಅಪ್ರಕಟಿತ),ಸಂಶೋ: ಭಾರತಿ ಬಿ.ಆರ್, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೦. ಪುಟ-೩೦೫

೧೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೧ ಬಳ್ಳಾರಿ ಜಿಲ್ಲೆ, ಸಂ: ದೇವರಕೊಂಡಾರೆಡ್ಡಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪುಟ-೭೭

೧೬. ಅದೇ, ಪು-೧೬೫

೧೭. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪುಟ-೫೨

೧೮. ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ ಸಂ: ಡಾ.ಕೆ.ಎಂ.ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೧, ಪುಟ -೭೪

೧೯ ಕುರುಬರ ಚರಿತ್ರೆ, ಸಂ: ಸುದಾಕರ ಲೇ: ಎ.ಆರ್.ಹನುಮಂತಯ್ಯ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೯. ಪುಟ -೧೦೯

೨೦. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ,ಧಾರವಾಡ-೧೯೯೩. ಪುಟ -೪೮

೨೧. ಹಾಲಕೆನೆ. ಪ್ರ.ಸಂ: ಡಾ.ಶ್ರೀರಾಮ ಇಟ್ಟಣ್ಣವರ, ಪ್ರ: ಕಾಳಿದಾಸ ಶಿಕ್ಷಣ ಸಂಸ್ಥೆ,ವಿಜಾಪುರ-೨೦೦೨. ಪುಟ-೭೧

೨೨. ಕುರುಬರ ಚರಿತ್ರೆ. ಲೇ:ಪಿ.ಆರ್.ಹನುಮಂತಯ್ಯ, ಸಂ: ಸುಧಾಕರ ಪ್ರ: ಪ್ರತಿಭಾ ಪ್ರಕಾಶನ. ಮೈಸೂರು-೧೯೯೬. ಪುಟ-೧೧೦

೨೩. ಅದೇ. ಪು-೧೧೧

೨೪. ಅದೇ. ಪು-೧೧೨

೨೫. ಹಾಲಕೆನೆ. ಪ್ರ.ಸಂ: ಡಾ ಶ್ರೀರಾಮ್ ಇಟ್ಟಣ್ಣನವರ, ಪ್ರ: ಕಾಳಿದಾಸ ಶಿಕ್ಷಣ ಸಂಸ್ಥೆ. ವಿಜಾಪುರ-೨೦೦೨. ಪುಟ-೭೬

೨೬. ಅದೇ. ಪು-೭೬

೨೭. ಅದೇ. ಪು-೭೭

೨೮. ಮಾರ್ಗ- ೪,ಸಂ: ಡಾ.ಎಂ.ಎಂ.ಕಲಬುರ್ಗಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೪. ಪುಟ-೨೪೬

೨೯. ಅದೇ. ಪು-೨೪೬

೩೦. ಗೊರವರ ಸಂಸ್ಕೃತಿ. ಸಂ: ಚಕ್ಕರೆ ಶಿವಶಂಕರ್, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪುಟ-೯

೩೧. ಅದೇ, ಪು-೭

೩೨. ಅದೇ, ಪು-೯

೩೩. ನೇಗಿನಹಾಳ ಪ್ರಬಂಧಗಳು, ಲೇ: ಡಾ.ಎಂ.ಬಿ.ನೇಗಿನಹಾಳ, ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯. ಪುಟ -೧೦೮

೩೪. ಮೈಲಾರ ಮತ್ತು ಖಂಡೋಬ, ಲೇ:ಎಂ.ಬಿ.ನೇಗಿನಹಾಳ, ಪ್ರ : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೨. ಪುಟ-೬೦

೩೫. ಕರ್ನಾಟಕ ದೇವಾಲಯ ಕೋಶ (ಬಳ್ಳಾರಿ ಜಿಲ್ಲೆ), ಸಂ:ಡಾ.ಕೆ.ಎಂ.ಸುರೇಶ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯. ಪುಟ-೨೨೧

೩೬. ದ್ವಾದಶ ಖಂಡೋಬಾ ದರ್ಶನ, ಲೇ: ರಾಜಕುಮಾರ ಕಾಂತಿಲಾಲ ಲೋಡಾ. ಪ್ರ: ಅನುಮೋಲ್ ಪ್ರಕಾಶನ, ಪುಣೆ-೨೦೦೩. ಪುಟ-೩

೩೭. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪುಟ-೫೫

೩೮. ಹಾಲಕೆನೆ, ಪ್ರ.ಸಂ.: ಡಾ.ಶ್ರೀರಾಮ ಇಟ್ಟಣ್ಣವರ್, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ-೨೦೦೨. ಪುಟ-೮೯

೩೯. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ್, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪುಟ-೫೫

೪೦. ಹಾಲಕೆನೆ, ಪ್ರ.ಸಂ.: ಡಾ.ಶ್ರೀರಾಮ ಇಟ್ಟಣ್ಣವರ್, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ-೨೦೦೨. ಪುಟ-೬೦

೪೧. ಕುರುಬರ ಚರಿತ್ರೆ, ಸಂ: ಸುಧಾಕರ, ಲೇ:ವಿ.ಆರ್.ಹನುಮಂತಯ್ಯ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೬. ಪುಟ -೧೩೫

೪೨. ಅದೇ, ಪು-೧೩೫

೪೩. ಅದೇ, ಪು-೧೩೬

೪೪. ಅದೇ, ಪು-೧೩೬

೪೫. ಅದೇ, ಪು-೧೩೭

೪೬. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ, ರಜತ ಮಹೋತ್ಸವ ಸಮಿತಿ, ಗದಗ-೨೦೦೨, ಪುಟ-೩೪೨

೪೭ ಹಾಲತೊರೆ, ಸಂ: ಎಂ. ಕರಿಯಪ್ಪ ಪ್ರ ನಾರ ಕುರುಬರ ಸಂಘ ದಾವಣಗೆರೆ-೨೦೦೩. ಪುಟ-೮೮

೪೮. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ, ರಜತ ಮಹೋತ್ಸವ ಸಮಿತಿ, ಗದಗ-೨೦೦೨. ಪುಟ-೩೪೭

೪೯. ಹಾಲಕೆನೆ, ಪ್ರ.ಸಂ.: ಡಾ.ಶ್ರೀರಾಮ ಇಟ್ಟಣ್ಣವರ್, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ-೨೦೦೨. ಪುಟ-೧೧೨

೫೦. ಅದೇ, ಪು-೧೧೪

೫೧. ಅದೇ, ಪು-೧೧೬

೫೨. ಅದೇ, ಪು-೧೧೬

೫೩. ಅದೇ, ಪು-೧೨೧

೫೪. ಹಬ್ಬಗಳು, ಲೇ:ಎಸ್.ಎನ್.ಹಿರೇಮಠ, ಪ್ರ: ಸಮತಾ ಪ್ರಕಾಶನ, ಹರಪನಹಳ್ಳಿ-೧೯೯೨. ಪುಟ-೧೨೫

೫೫. ನೇಗಿನಹಾಳ ಪ್ರಬಂಧಗಳು, ಲೇ: ಎಸ್.ಎನ್.ಹಿರೇಮಠ, ಪ್ರ: ಸಮತಾ ಪ್ರಕಾಶನ, ಹರಪನಹಳ್ಳಿ-೧೯೯೨. ಪುಟ-೩೪೭

೫೬. ಅದೇ, ಪು–೧೧೨

೫೭. ಹೈದರಾಬಾದ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ಲೇ: ಚನ್ನಣ್ಣ ವಾಲಿಕಾರ, ಪ್ರ: ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ–೧೯೯೮. ಪುಟ–೯೪

೫೮. ಕುರುಬರ ಚರಿತ್ರೆ, ಲೇ: ಟಿ.ಆರ್.ಹನುಮಂತಯ್ಯ, ಸಂ: ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು–೧೯೯೯. ಪುಟ–೧೨೩

೫೯. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ, ರಜತ ಮಹೋತ್ಸವ ಸಮಿತಿ, ಗದಗ–೨೦೦೨. ಪುಟ–೧೪೫

೬೦. ಅದೇ, ಪುಟ–೩೪೫

೬೧. ಸಜ್ಜಲಗುಡ್ಡದ ಶರಣಮ್ಮನವರು, ಲೇ: ಎಸ್.ಜಿ.ಹಿರೇಮಠ, ಪ್ರ: ಶ್ರೀ ಚನ್ನವೀರ ಸ್ವಾಮೀಜಿ ಪ್ರತಿಷ್ಠಾನ, ಸಾರಂಗ ಮಠ, ಸಿಂದಗಿ–೨೦೦೨. ಪುಟ–೩

೬೨. ಹಾಲತೊರೆ, ಸಂ.:ಎಂ.ಕರಿಯಪ್ಪ, ಲೇ: ಬಸವರಾಜ ಆಕಳವಾಡಿ, ಪ್ರ: ನಗರ ಕುರುಬರ ಸಂಘ, ದಾವಣಗೆರೆ–೨೦೦೨. ಪುಟ–೬೮

೬೩. ಕಾಯಕಯೋಗಿ, ಪ್ರ.ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ, ರಜತ ಮಹೋತ್ಸವ ಸಮಿತಿ, ಗದಗ–೨೦೦೨. ಪುಟ–೩೪೫

೬೪. ಸಜ್ಜಲಗುಡ್ಡದ ಶರಣಮ್ಮನವರು, ಲೇ: ಎಸ್.ಜಿ.ಹಿರೇಮಠ, ಪ್ರ: ಶ್ರೀ ಚನ್ನವೀರ ಸ್ವಾಮೀಜಿ ಪ್ರತಿಷ್ಠಾನ, ಸಜ್ಜಲಗುಡ್ಡ–೨೦೦೨. ಪುಟ–೬

೬೫. ಅದೇ, ಪುಟ–೧೯

೬೬. ರೇವಣಸಿದ್ಧೇಶ್ವರ : ಒಂದು ಅಧ್ಯಯನ, ಎಂ.ಫಿಲ್ ಪ್ರಬಂಧ (ಅಪ್ರಕಟಿತ), ಸಂಶೋ: ಶ್ರೀಮತಿ ಸರಸ್ವತಿ ನವಣಿ, ಮಾರ್ಗ: ಡಾ. ಸಂಗವೇಶ್ವರ ಸವದತ್ತಿಮಠ, ಪ್ರ: ಗುಲಬರ್ಗಾ– ೧೯೮೮. ಪುಟ–೨

೬೭. ಅದೇ, ಪುಟ–೩

೬೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ಚಿದಾನಂದಮೂರ್ತಿ ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು–೧೯೯೯. ಪುಟ–೧೪೧

೬೯. ಅದೇ, ಪುಟ–೧೪೯

೨೦. ಅದೇ, ಪುಟ-೧೫೦

೨೧. ಅದೇ, ಪುಟ-೧೫೨

೨೨. ಅದೇ, ಪುಟ-೧೫೫

೨೩. ರೇವಣಸಿದ್ಧೇಶ್ವರ ಒಂದು ಅಧ್ಯಯನ, ಎಂ.ಫಿಲ್ ಪ್ರಬಂಧ (ಅಪ್ರಕಟಿತ), ಸಂಶೋ: ಶ್ರೀಮತಿ ಸರಸ್ವತಿ ನವಣಿ, ಪ್ರ: ಗುಲಬುರ್ಗಾ ವಿಶ್ವವಿದ್ಯಾಲಯ, ಗುಲಬುರ್ಗಾ-೧೯೮೮, ಪುಟ-೫

೨೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೧೯೯೯, ಪುಟ-೧೫೫

೨೫. ಶೈವ-ವೀರಶೈವ ದರ್ಮ ವಿಕಾಸ ಒಂದು ಅಧ್ಯಯನ, ಲೇ: ಡಿ.ಎಸ್.ಮಲ್ಲಪ್ಪ ಪ್ರ: ಶಂಬಾಜೋಶಿಯವರ ಅಭಿನಂದನಾ ಗ್ರಂಥ, ಬೆಂಗಳೂರು-೧೯೮೨. ಪುಟ-೬೨೪

೨೬. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಚಿದಾನಂದಮೂರ್ತಿ ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೧೯೯೯. ಪುಟ-೨೫

೨೭. ಅದೇ, ಪುಟ-೨೬

೨೮. ಅದೇ, ಪುಟ-೮೪

೨೯. ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಜೈನಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ಸಂಶೋ: ಎ.ವ್ಹಿ.ನಾಗನೂರು, ಮಾರ್ಗ :ಎಂ.ಟಿ.ಶಾಂಬಳೆ ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೧. ಪುಟ-೧೨೫

೩೦. ಮಾರ್ಗ-೪, ಸಂ: ಎಂ.ಎಂ.ಕಲಬುರ್ಗಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೪. ಪುಟ-೧೧೯

೩೧. ಅದೇ, ಪುಟ-೧೦೪

೩೨. ಅದೇ, ಪುಟ-೧೦೪

೩೩. ಕಾಗಿನೆಲೆ, ಪ್ರ.ಸಂ.: ಕಾ.ತಿ.ಚಿಕ್ಕಣ್ಣ, ಪ್ರ: ಕಾಗಿನೆಲೆ ಮಹಾಸಂಸ್ಥಾನ ಕನಕಗುರು ಪೀಠ, ಕಾಗಿನೆಲೆ-೨೦೦೨. ಪುಟ-೧೧೯

೩೪. ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಜೈನಧರ್ಮ ಒಂದು ಸಾಂಸ್ಕೃತಿ ಅಧ್ಯಯನ, ಪಿಎಚ್.ಡಿ ಪ್ರಬಂಧ (ಅಪ್ರಕಟಿತ), ಸಂಶೋ: ಎ.ವ್ಹಿ.ನಾಗನೂರು, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೧. ಪುಟ-೧೩೬

೮೫. ಕರ್ನಾಟಕ ಚರಿತ್ರೆ, ಸಂಪುಟ-೩ ಪ್ರ.ಸಂ: ಪ್ರೊ. ಬಿ.ಷೇಕಅಲಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪುಟ-೩೫೧

೮೬. ಅದೇ, ಪುಟ-೩೫೧

೮೭. ಅದೇ, ಪುಟ-೩೫೧

೮೮. ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಜೈನಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಪ್ರಬಂಧ (ಅಪ್ರಕಟಿತ), ಸಂಶೋ: ಎ.ವ್ಹಿ.ನಾಗನೂರು, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೧, ಪುಟ-೧೩೭

೮೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಚಿದಾನಂದಮೂರ್ತಿ, ಪ್ರಸಪ್ನ ಬುಕ್ ಹೌಸ್, ಬೆಂಗಳೂರು-೧೯೯೯. ಪುಟ-೧೨೪

೯೦. ಅದೇ, ಪು-೧೨೭

೯೧. ಕರ್ನಾಟಕ ಚರಿತ್ರೆ, ಸಂಪುಟ – ೩, ಪ್ರ.ಸಂ: ಪ್ರೋ.ಬಿ.ಷೇಕ್ ಅಲಿ, ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪುಟ-೩೫೧

೯೨. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ: ಡಾ.ಚನ್ನಬಸಯ್ಯ ಹಿರೇಮಠ, ಪ್ರ: ಸಂಗಣ್ಣನವರು, ಅಗಡಿ ಸಾಂಸ್ಕೃತಿಕ ಪ್ರತಿಷ್ಠಾನ, ಕೊಪ್ಪಳ-೧೯೯೫. ಪುಟ-೨೪೭

೯೩. ಗೊರವರ ಸಂಸ್ಕೃತಿ, ಸಂ : ಚಕ್ಕೆರೆ ಶಿವಶಂಕರ್, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪುಟ-೮೧

೯೪. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪುಟ-೬೫

೯೫. ಗೊರವರ ಸಂಸ್ಕೃತಿ, ಸಂ: ಚಕ್ಕೆರೆ ಶಿವಶಂಕರ್, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪುಟ-೯೩

೯೬. ಅದೇ, ಪು-೯೩

೯೭. ಅದೇ, ಪು-೯೮

೯೮. ಹಬ್ಬಗಳು, ಲೇ:ಎಸ್.ಎನ್.ಹಿರೇಮಠ, ಪ್ರ: ಸಮತಾ ಪ್ರಕಾಶನ, ಹರಪನಹಳ್ಳಿ-೧೯೯೨, ಪುಟ-೧೪

೯೯. ಅದೇ, ಪು-೧೪

೧೦೦. ಗೊರವರ ಸಂಸ್ಕೃತಿ, ಸಂ : ಚಕ್ಕೆರೆ ಶಿವಶಂಕರ್, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪುಟ-೯೯

೧೦೧. ಅದೇ, ಪು-೧೦೨

೧೦೨. ಹಬ್ಬಗಳು, ಲೇ:ಎಸ್.ಎನ್.ಹಿರೇಮಠ, ಪ್ರ: ಸಮತಾ ಪ್ರಕಾಶನ, ಹರಪನಹಳ್ಳಿ-೧೯೯೨.ಪುಟ-೧೦೪

೧೦೩. ಜಾನಪದ ಸಾಹಿತ್ಯ ದರ್ಶನ, ಭಾಗ-೧೧, ಪ್ರ.ಸಂ: ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, ಪ್ರ: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೮. ಪುಟ-೯೬

೧೦೪. ಜಾನಪದ ಸಾಹಿತ್ಯ ದರ್ಶನ, ಭಾಗ-೧೩, ಪ್ರ.ಸಂ: ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, ಪ್ರ: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೮.ಪುಟ-೪೭

೧೦೫. ಕರ್ನಾಟಕ ಚರಿತ್ರೆ, ಸಂಪುಟ-೩, ಪ್ರ.ಸಂ: ಪ್ರೋ. ಬಿ.ಷೇಕ್‌ಅಲಿ, ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪುಟ-೨೫೫

೧೦೬. ಅದೇ, ಪು-೨೫೫

೧೦೭. ಗೊರವರ ಸಂಸ್ಕೃತಿ, ಸಂ: ಚಕ್ಕೆರೆ ಶಿವಶಂಕರ್, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪುಟ-೧೦೬

೧೦೮. ಕರ್ನಾಟಕ ವೀರಶೈವ ಮಠಗಳು, ಲೇ: ಚಂದ್ರಶೇಖರ ನಾರಣಾಪುರ, ಪ್ರ: ಗೆಳೆಯ ಪ್ರಕಾಶನ, ಚಿಕ್ಕಮಗಳೂರು-೨೦೦೨ ಪುಟ -XVII

೧೦೯. ಹೈದರಾಬಾದ ಕರ್ನಾಟಕದ ವೀರಶೈವ ಮಠಗಳು ಒಂದು ಅಧ್ಯಯನ, ಸಂಶೋ: ರಮೇಶ ಮೂಲಗೆ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೨, ಪುಟ-೪೨

೧೧೦. ಅದೇ, ಪು-೪೫

೧೧೧. ಕುರುಬರ ಚರಿತ್ರೆ, ಲೇ: ಡಿ.ಆರ್.ಹನುಮಂತಯ್ಯ, ಸಂ: ಸುಧಾಕರ, ಪ್ರ: ಪ್ರತಿಭಾ ಪ್ರಕಾಶನ, ಮೈಸೂರು-೧೯೯೯. ಪುಟ-೨೭

೧೧೨. ಕೊರಡಕೇರಿ ಮಠದ ಗುರುಗಳಾದ ಬಸಯ್ಯಸ್ವಾಮಿಗಳ ಹೇಳಿಕೆ ಪ್ರಕಾರ

೧೧೩. ಕೆಂಡದ ಮಠ ಕೊಪ್ಪಳದ ಪಂಚಯ್ಯ ಸ್ವಾಮಿಗಳ ಪ್ರಕಾರ

೧೧೪. ಕುಕನೂರಿನ ಅಮೋಘಸಿದ್ಧೇಶ್ವರ ಮಠದ ಮಹದೇವಯ್ಯನ ಸ್ವಾಮಿಗಳು ಹೇಳಿದ ಪ್ರಕಾರ

೧೧೫. ಬಸವಪಟ್ಟಣದ ನಂಜುಂಡೇಶ್ವರ ಮಠದ ಸ್ವಾಮಿಗಳ ಪ್ರಕಾರ

೧೧೬. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ ಪ್ರ:ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೬೦

೧೧೭. ಅದೇ, ಪು-೯೦

# ಅಧ್ಯಾಯ ೭

## ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿ

೭.೧ ಕುರಿ ಸಾಕಾಣಿಕೆ, ಕೃಷಿ, ಕಂಬಳಿನೇಯ್ಗೆ, ವ್ಯಾಪಾರ ಹಾಗೂ ಇತರೆ ವೃತ್ತಿಗಳು.

೭.೨ ಶೈಕ್ಷಣಿಕ ಸ್ಥಿತಿ

ಪ್ರಾಚೀನ ಕಾಲದಲ್ಲಿ ಮಾನವ ಬೇಟೆ ಮತ್ತು ಆಹಾರ ಸಂಗ್ರಹಣೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದನು. ದಿನವಿಡೀ ಪ್ರಾಣಿಗಳ ಹಿಂದೆ ಅಲೆಯುತ್ತ ಬೇಟೆಯಾಡಿ ಹಸಿಮಾಂಸವನ್ನು ಸೇವಿಸುತ್ತಿದ್ದನು. ಅದರಿಂದ ಬೇಸತ್ತ ಮಾನವ ಪ್ರಾಣಿಗಳನ್ನು ಸಾಕಲಾರಂಭಿಸಿದನು. ಬೇಟೆ ವೃತ್ತಿಯಿಂದ ಕವಲೊಡೆದು ಪಶುಪಾಲಕನಾದನು. ಕಾಲಾನಂತರ ಕೃಷಿಯನ್ನು ಅವಲಂಬಿಸಿದನು. ಕೃಷಿಯನ್ನು ಅವಲಂಬಿಸಿದ ಮೇಲೆ ಒಂದೆಡೆ ನಿಲ್ಲುವುದು ಸಾಧ್ಯವಾಯಿತು. ಒಂದೆಡೆ ನೆಲೆನಿಂತ ಮೇಲೆ ಗ್ರಾಮಗಳು ಸೃಷ್ಟಿಗೊಂಡವು. ಅದರೊಂದಿಗೆ ಅನೇಕ ಬಗೆಯ ವೃತ್ತಿಗಳು ಹುಟ್ಟಿಕೊಂಡವು. ಕಾಲ ಬದಲಾದಂತೆ ಮಾನವನ ಆರ್ಥಿಕ ಜೀವನದಲ್ಲಿ ಸಾಕಷ್ಟು ಬದಲಾವಣೆಗಳಾದವು. ಈ ರೀತಿಯ ಆರ್ಥಿಕ ಚಟುವಟಿಕೆಗಳು ಕುರುಬ ಸಮುದಾಯದಲ್ಲೂ ಕಂಡು ಬರುತ್ತವೆ. ಕುರುಬರು ಪಶುಪಾಲನೆ, ವ್ಯವಸಾಯ, ಕಂಬಳಿನೇಯ್ಗೆ ಹಾಗೂ ವ್ಯಾಪಾರವನ್ನು ವೃತ್ತಿಯನ್ನಾಗಿ ಅವಲಂಬಸಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಕುರುಬರ ಆರ್ಥಿಕ ಸ್ಥಿತಿಯ ಬಗ್ಗೆ ವಿವರಿಸಲಾಗಿದೆ.

### ೭.೧ ಕುರಿ ಸಾಕಾಣಿಕೆ

ಆದಿಕಾಲದಲ್ಲಿ ಬೇಟೆ ಪ್ರಮುಖ ವೃತ್ತಿಯಾಗಿತ್ತು. ಕುರುಬರು ಬೇಟೆಯಾಡುತ್ತಿದ್ದರೆಂಬುದಕ್ಕೆ ಅವರಲ್ಲಿರುವ ಕಾಡು ಕುರುಬರು ಮತ್ತು ಜೇನುಕುರುಬರು ಎಂಬ ಪಂಗಡಗಳು ಸಾಕ್ಷಿಯಾಗಿವೆ. ದಿನವಿಡೀ ಬೇಟೆಯಾಡಿದರೂ ಜೀವನ ಸುಗಮವಾಗಿ ಸಾಗುವುದು ಕಷ್ಟಕರವಾಗಿತ್ತು. ಇದರಿಂದಾಗಿ ಸಾಧುಪ್ರಾಣಿಗಳಾದ ಹಸು, ಎಮ್ಮೆ, ನಾಯಿ, ಕುರಿ, ಆಡು, ಹಂದಿ, ಕುದುರೆ, ಕತ್ತೆ ಮೊದಲಾದ ಪ್ರಾಣಿಗಳನ್ನು ಸಾಕಲಾರಂಭಿಸಿದನು. ಕಾಲಾನಂತರ ಪ್ರಾಣಿಗಳ ಸಾಕಾಣಿಕೆಯ ಆಧಾರದ ಮೇಲೆ ಗುರುತಿಸಲಾರಂಭಿಸಿದರು. ಹೀಗಾಗಿ ಕುರಿಗಳ ಪಾಲಕರು ಕುರುಬರೆಂದು ಕರೆಯಲ್ಪಟ್ಟರು. ಕುರಿಗಳ ಪಾಲನೆಯಿಂದ ಕುರುಬರಿಗೆ ಕುರಿಮಾಂಸ, ಹಾಲು ಹಾಗೂ ಉಣ್ಣೆ ದೊರೆಯಲಾರಂಭಿಸಿತು. ಬಹಳ ಲಾಭದಾಯಕ ವೃತ್ತಿಯೆಂದು ಮನಗಂಡ ಕುರುಬರು ಇದನ್ನೇ ಮುಂದುವರೆಸಿಕೊಂಡು ಬಂದರು. ಇಂದಿಗೂ ಕುರಿಸಾಕಾಣಿಕೆ ಪ್ರಮುಖವಾಗಿ ಕುರುಬರ ವೃತ್ತಿಯಾಗಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಕುರುಬರ ಕುರಿ ಸಾಕಾಣಿಕೆ ವೃತ್ತಿ ಸೃಷ್ಟಿಯ ಬಗ್ಗೆ ರಸ್ತಾಪುರ ಭೀಮಕವಿ ಬರೆದ 'ಶ್ರೀ ರೇವಣಸಿದ್ಧ ಸಂಯುಕ್ತ ಲೀಲಾ ಹಾಲುಮತೋತ್ತೇಜಕ' ಪುರಾಣದಲ್ಲಿ ಈ ರೀತಿ ವಿವರಿಸಲಾಗಿದೆ.

ಒಂದು ದಿನ ಶಿವನ ಒಡ್ಡೋಲಗಕ್ಕೆ ಆಗಮಿಸುವ ಭೃಂಗಿ ಒಂದೇ ಕೈಯಿಂದ ನಮಸ್ಕರಿಸುತ್ತಾನೆ. ಇದನ್ನು ಕಂಡ ಪಾರ್ವತಿ ಕ್ರೋದಗೊಂಡು ಭೃಂಗಿಗೆ ಶಾಪ ನೀಡುತ್ತಾಳೆ. ಆದರೆ ಭೃಂಗಿಯನ್ನು ಶಿವ ರಕ್ಷಿಸುತ್ತಾನೆ. ಇದರಿಂದ ದೇವತೆಗಳೆಲ್ಲ ಪಾರ್ವತಿಯನ್ನು ಕಂಡು ಅಪಹಾಸ್ಯ ಮಾಡುತ್ತಾರೆ. ಇದರಿಂದ ಅವಮಾನಿತಳಾದ ಪಾರ್ವತಿ ನನ್ನ ಹಿಂದೆ ನಕ್ಕವರೆಲ್ಲ ಮೇಕೆಗಳಾಗಿ, ಮುಂದೆ

ನಕ್ಷವರೆಲ್ಲ ಕುರಿಗಳಾಗಿ ಹುಟ್ಟಿ ಭೂಮಿಯಲ್ಲಿ ಕೊರಳು ಕೊಯ್ಯಿಸಿಕೊಳ್ಳಿರೆಂದು ಶಾಪ ನೀಡುತ್ತಾಳೆ. ಶಾಪಗ್ರಸ್ತ ದೇವತೆಗಳು ಕುರಿ ಮೇಕೆಗಳಾಗಿ ಭೂಮಿಗೆ ಬರುತ್ತಾರೆ. ಕುರಿಗಳನ್ನು ದೇವತೆಗಳು ಹಾಗೂ ಪಾರ್ವತಿ-ಪರಮೇಶ್ವರ ಪಾಲನೆ ಮಾಡುತ್ತಾರೆ.

ಶಿವ-ಪಾರ್ವತಿಯರು ಕುರಿಗಳನ್ನು ಕಾಯುವುದರಿಂದ ಬೇಸತ್ತು ಅವುಗಳನ್ನೆಲ್ಲ ಒಂದು ಗವಿಯಲ್ಲಿ ಮುಚ್ಚಿಡುತ್ತಾರೆ. ಆ ಗವಿಯ ಬಾಗಿಲಿಗೆ ಪಾರ್ವತಿ ತನ್ನ ಮೂಗುತಿಯನ್ನಿಟ್ಟು ಕೈಲಾಸಕ್ಕೆ ಹಿಂದಿರುಗುತ್ತಾಳೆ. ಆ ಮೂಗುತಿಯು ಮುತ್ತಲ ಮರವಾಗಿ ಬೆಳೆಯುತ್ತದೆ. ಕಾಲಾನಂತರ ಆದಿಗೊಂಡನ ಮಗ ಶಿವಪದ್ಮನು ಹೊಲದಲ್ಲಿ ಬೆಳೆದ ಮುತ್ತಲ ಮರವನ್ನು ಕಡಿಯುತ್ತಾನೆ. ಅದರಿಂದ ಸಾವಿರಾರು ಕುರಿಗಳು ಹೊರಬರುತ್ತವೆ. ಆಗ ಶಿವ ಪ್ರತ್ಯಕ್ಷಗೊಂಡು ಈ ಕುರಿಗಳ್ನು ಸಾಕುವಂತೆ ಶಿವಪದ್ಮನಿಗೆ ಆದೇಶ ನೀಡುತ್ತಾನೆ.[೧] ಹೀಗಾಗಿ ಅಂದಿನಿಂದ ಕುರಿಗಳ ಪಾಲನೆ ಪ್ರಾರಂಭಗೊಂಡಿತೆಂದು ಪೌರಾಣಿಕವಾಗಿ ಹಾಲುಮತ ಪುರಾಣ ತಿಳಿಸುತ್ತದೆ.

ಆದಿ ಮಾನವನ ಕಾಲದಿಂದಲೂ ಕುರಿಗಳು ಮಧ್ಯ ಏಷ್ಯಾದಿಂದ ಐರ್ಲೆಂಡಿನವರೆಗೆ ವ್ಯಾಪಿಸಿದ್ದವೆಂದು ಪಳೆಯುಳಿಕೆಯಿಂದ ತಿಳಿಯುತ್ತದೆ.[೨] ಸುಮಾರು ನಿಯೋಲಿಥಿಕ್ ಕಾಲದ ವೇಳೆಗೆ ಮಾನವ ಕುರಿಗಳನ್ನು ಪಳಗಿಸಿ ಸಾಕಲಾರಂಭಿಸಿದನೆಂದು ತಿಳಿದುಬರುತ್ತದೆ. ಕುರಿಗಳನ್ನು ಮೊದಲು ಏಷ್ಯಾ ಖಂಡದಲ್ಲಿ ಪಳಗಿಸಲಾಯಿತು. ನಂತರ ಎಲ್ಲೆಡೆ ಕುರಿಗಳ ಪಾಲನೆ ಹರಡಿಕೊಂಡಿತು. ತಾಮ್ರ ಯುಗದ ಹೊತ್ತಿಗೆ ಯುರೋಪಿನಲ್ಲಿ ಕುರಿಗಳ ನೂತನ ಪೀಳಿಗೆಯೊಂದು ಅಸ್ತಿತ್ವಕ್ಕೆ ಬಂದಿತೆನ್ನುವ ಅಭಿಪ್ರಾಯವಿದೆ.[೩]

ಅತ್ಯಂತ ಸಭ್ಯ ಪ್ರಾಣಿಯೆನಿಸಿದ ಕುರಿ ಸಾವಿರಾರು ವರ್ಷಗಳಿಂದ ಮಾನವನೊಂದಿಗೆ ಬೆಳೆದು ಬಂದಿದೆ. ಕುರಿ ಚರ್ಮದಿಂದ ಹೊದಿಕೆ, ಆಹಾರಕ್ಕಾಗಿ ಮಾಂಸ ಮತ್ತು ಹಾಲುಗಳನ್ನು ಪಡೆದುಕೊಳ್ಳುತ್ತಿದ್ದನು. ಭೂಮಿಯ ಮೇಲೆ ವಸತಿಗೆ ಯೋಗ್ಯವಾದ ಎಲ್ಲ ಪ್ರದೇಶಗಳಲ್ಲೂ ಕುರಿ ಸಾಕಾಣಿಕೆ ಕಂಡು ಬರುತ್ತದೆ. ಆರ್ಥಿಕ ದೃಷ್ಟಿಯಿಂದ ಕುರಿ ಸಾಕಾಣಿಕೆ ಉತ್ತಮವಾದ ವೃತ್ತಿಯಾಗಿರುವುದು ಇಂದಿಗೂ ಕಂಡುಬರುತ್ತದೆ.

ಕುರಿ ಸಾಕಾಣಿಕೆ ವೃತ್ತಿ ಪ್ರಾಚೀನ ಕಾಲದಿಂದಲೂ ತನ್ನದೇ ಆದ ವೈಶಿಷ್ಟತೆಯನ್ನು ಪಡೆದುಕೊಂಡಿದೆ. ವಿಶ್ವದಾದ್ಯಂತ ಸುಮಾರು ೨೦೦ ಬೇರೆ ಬೇರೆ ತಳಿಗಳಿವೆಯೆಂದು ಅಂದಾಜು ಮಾಡಲಾಗಿದೆ. ಆಯಾ ವಿಭಾಗಗಳ ಭೂಗುಣ, ಹವೆ ಮುಂತಾದ ಲಕ್ಷಣಗಳಿಗೆ ಒಳಪಡುವ ಮತ್ತು ಹಾಲು, ಮಾಂಸ, ಉಣ್ಣೆ ಕೊಡುವಂತಹ ವೈವಿಧ್ಯಪೂರ್ಣ ಕುರಿಗಳನ್ನು ಕಾಣಬಹುದಾಗಿದೆ. ವಿಶ್ವದಲ್ಲಿರುವ ಕುರಿ ತಳಿಗಳನ್ನು ನಾಲ್ಕು ಗುಂಪುಗಳಲ್ಲಿ ವಿಂಗಡಿಸಬಹುದಾಗಿದೆ.[೪] ಅವುಗಳೆಂದರೆ

೧. ಉತ್ತಮ ಉಣ್ಣೆಯನ್ನು ಕೊಡುವ ಮರಿನೋ ಜಾತಿಯ ಕುರಿಗಳು ಹಾಗೂ ಮರಿನೋ ಮೂಲದಿಂದ ಹುಟ್ಟಿದ ಮಿಶ್ರತಳಿಗಳು.

೨. ಮಧ್ಯಮ ತರಗತಿಯ ಉಣ್ಣೆಯನ್ನು ಕೊಡುವ ಯುರೋಪ ಮತ್ತು ಬ್ರಿಟನ್ನಿನ ಕುರಿಗಳು

೩. ಉದ್ದ ಹಾಗೂ ಹೊಳಪುಳ್ಳ ಉಣ್ಣೆಯನ್ನು ಕೊಡುವ ಬ್ರಿಟನ್ನಿನ ಕುರಿಗಳು.

೪. ಕಂಬಳಿ ಮತ್ತು ಕಾರ್ಪೆಟ್ ಮಾಡಬಹುದಾದ ಕೆಳದರ್ಜೆಯ ಉಣ್ಣೆ ಕೊಡುವ ಏಷ್ಯಾ ಖಂಡದ ಕುರಿಗಳು.

ಭಾರತದಲ್ಲಿ ಸುಮಾರು ನಾಲ್ಕು ಕೋಟಿ ಕುರಿಗಳಿದ್ದು, ಸಂಖ್ಯಾದೃಷ್ಟಿಯಿಂದ ಪ್ರಪಂಚದಲ್ಲಿ ಭಾರತಕ್ಕೆ ಐದನೇ ಸ್ಥಾನವಿದೆ. ಭಾರತದ ಕುರಿ ಸಂಗೋಪನೆಯ ಪ್ರದೇಶಗಳನ್ನು ಭೌಗೋಳಿಕ ದೃಷ್ಟಿಯಿಂದ ೩ ವಲಯಗಳಾಗಿ ವಿಂಗಡಿಸಬಹುದಾಗಿದೆ.[೫]

೧. ಕಾಶ್ಮೀರ, ಹಿಮಾಚಲ ಪ್ರದೇಶ, ಪಂಜಾಬ ಮತ್ತು ಉತ್ತರ ಪ್ರದೇಶಗಳನ್ನೊಳಗೊಂಡ ಸಮಶೀತೋಷ್ಣ ಹವೆಯ ಹಿಮಾಲಯ ವಲಯದಲ್ಲಿ ಕಾರ್ನಾ, ಗುರೇಜ, ಹಿಸ್ಸಾರಡೇಲ, ಭಾಕರ್‌ವಾಲಾ ಹಾಗೂ ಚೌತಾನಿ ಜಾತಿಯ ಕುರಿಗಳು ಉನ್ನತ ಮಟ್ಟದ ಉಣ್ಣೆಯನ್ನು ಕೊಡುತ್ತವೆ.

೨. ರಾಜಸ್ಥಾನದ ಸರಸ್ವತಿ ನದಿಯ ನೆರೆಯ ಪ್ರದೇಶ, ಉತ್ತರ ಗುಜರಾತ, ಕಚ್ಛ ಮೊದಲಾದ ಪ್ರದೇಶಗಳಲ್ಲಿ ಶುಷ್ಕ ಹವಾಮಾನದ ಪಶ್ಚಿಮ ವಲಯದಲ್ಲಿ ಲೋಹಿ, ಬಿಕನೀರ್, ಮಾರವಾಡಿ, ಚೋಕಲಾ, ಕಾಠಿಯಾವಾಡ ಮೊದಲಾದ ವಿವಿಧ ರೀತಿಯ ಕುರಿಗಳಿವೆ. ಅವುಗಳ ಉಣ್ಣೆಯಿಂದ ಉತ್ತಮ ತರಗತಿಯ ಉಣ್ಣೆ ದೊರೆಯುತ್ತದೆ. ಇದು ಜೋಗಾ ಉಣ್ಣೆಯೆಂದು ಪ್ರಸಿದ್ಧಿ ಪಡೆದಿದೆ.

೩. ಉತ್ತರದ ಮಧ್ಯ ಪರ್ವತಗಳಿಂದ ದಕ್ಷಿಣದ ನೀಲಗಿರಿ ಪರ್ವತಗಳವರೆಗೆ ಹಬ್ಬಿದ ದಕ್ಷಿಣ ವಲಯದಲ್ಲಿ ಡೆಕ್ಕನಿ, ನೆಲ್ಲೂರ, ಮಂಡ್ಯ, ಹಾಸನ, ಬಳ್ಳಾರಿ ಪ್ರದೇಶಗಳಲ್ಲಿ ಐದು ಜಾತಿಯ ಕುರಿಗಳನ್ನು ಕಾಣಬಹುದಾಗಿದೆ.

ಉತ್ತಮ ದರ್ಜೆಯ ಉಣ್ಣೆ, ಮಾಂಸ ಮತ್ತು ಹಾಲು ಪಡೆಯಲು ಸ್ವದೇಶ ತಳಿಗಳ ಕುರಿಗಳೊಂದಿಗೆ ಅನ್ಯದೇಶಿಯ ತಳಿಗಳ ಟಗರುಗಳನ್ನು ಅಡ್ಡಹಾಯಿಸುವ ಪದ್ಧತಿಯು ಭಾರತದಲ್ಲಿ ಕಂಡುಬರುತ್ತದೆ.[೬] ಈ ಹಿನ್ನೆಲೆಯಲ್ಲಿ ಭಾರತದಾದ್ಯಂತ ಕುರಿ ಸಾಕಾಣಿಕೆ ಉನ್ನತ ಸ್ಥಾನ ಪಡೆದುಕೊಂಡಿದೆ ಎಂದು ತಿಳಿಯುತ್ತದೆ.

ಕರ್ನಾಟಕದಾದ್ಯಂತ ಪ್ರಾಚೀನ ಕಾಲದಿಂದಲೂ ಕುರಿ ಸಂಗೋಪನೆಯಿತ್ತೆಂದು ತಿಳಿಯುವುದಕ್ಕೆ ಆಧಾರಗಳಿವೆ. ಅನೇಕ ಗುಡ್ಡ-ಬೆಟ್ಟಗಳ ಪ್ರದೇಶಗಳಲ್ಲಿ ಕಲ್ಲುಗಳ ಮೇಲೆ ಕೆತ್ತಿದ ವಿವಿಧ ಪ್ರಾಣಿಗಳ ರೇಖಾ ಚಿತ್ರಗಳಿವೆ. ಅಂದಿನ ಮಾನವರು ಆ ಪ್ರಾಣಿಗಳ ಪಾಲನೆ ಮಾಡುತ್ತಿದ್ದರೆಂದು ತಿಳಿಯುತ್ತದೆ. ಕೊಪ್ಪಳದ ಗವಿಮಠದಲ್ಲಿ ದೊರೆತಿರುವ ರೇಖಾ ಚಿತ್ರಗಳಲ್ಲಿ ಅನೇಕ ಪ್ರಾಣಿಗಳೊಂದಿಗೆ ಟಗರಿನ ಚಿತ್ರವಿದೆ.[೭] ಹೀಗಾಗಿ ಅಂದು ಪಶುಪಾಲನೆ ವೃತ್ತಿ ಪ್ರಬಲವಾಗಿತ್ತಲ್ಲದೇ, ಕುರಿಗಳ ಪಾಲನೆ ಪ್ರಮುಖ ವೃತ್ತಿಯಾಗಿತ್ತೆಂದು ಕಂಡುಬರುತ್ತದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಪಶುಗಳನ್ನು ಅಪಹರಿಸುತ್ತಿದ್ದರು. ತಮ್ಮ ದನ-ಕುರಿಗಳನ್ನು ಅಪಹರಿಸುವವರ ವಿರುದ್ಧ ಹೋರಾಡಿ ಅನೇಕರು ತಮ್ಮ ಪ್ರಾಣವನ್ನು ಬಿಟ್ಟಿರುವುದು ಕಂಡುಬರುತ್ತದೆ. ತಮ್ಮ ಕುರಿಗಳ ಸಂರಕ್ಷಣೆಗಾಗಿ ಪ್ರಾಣಬಿಟ್ಟ ವ್ಯಕ್ತಿಗಳ ಹೆಸರಿನಲ್ಲಿ ವೀರಗಲ್ಲುಗಳನ್ನು ನಿಲ್ಲಿಸಿರುವುದು ಇದಕ್ಕೆ ಸಾಕ್ಷಿ. ಕುಷ್ಟಗಿ ತಾಲೂಕಿನ ಪುರ ಗ್ರಾಮದ ದೇವಾಲಯದಲ್ಲಿ ಕುರಿಗಳ ಸಂರಕ್ಷಣೆಗಾಗಿ ಪ್ರಾಣ ಬಿಟ್ಟ ವ್ಯಕ್ತಿಯ ವೀರಗಲ್ಲಿದೆ. ಇದರಿಂದ ಕುರಿಗಳ ಸಾಕಾಣಿಕೆ ಪ್ರಮುಖವಾಗಿತ್ತೆಂದು ತಿಳಿಯುತ್ತದೆ.

ಮಧ್ಯಕಾಲದಲ್ಲಿ ಅನೇಕ ಅರಸರು, ಮಾಂಡಲಿಕರು, ಊರ ಪ್ರಮುಖರು ಕುರಿ ತೆರಿಗೆ ವಿಧಿಸುತ್ತಿದ್ದರು. ಈ ತೆರಿಗೆಯಿಂದ ಬಂದ ಹಣವನ್ನು ದೇವಸ್ಥಾನದ ಅಥವಾ ಸಮಾಜದ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರೆಂದು ಶಾಸನಗಳು

ಉಲ್ಲೇಖಿಸುತ್ತವೆ. ಕೆಲವು ಅರಸರು ಕುರಿ ತೆರಿಗೆ ಬಿಟ್ಟ ಬಗ್ಗೆ ಶಾಸನಗಳಲ್ಲಿ ಮಾಹಿತಿಗಳಿವೆ. ಕ್ರಿ.ಶ.೧೫೮೦ರ ಶಾಸನ ರಾಜರಾಮಯ್ಯನ ಮಗನಾದ ತಿಮ್ಮರಾಜ ಅರಸನು ಆನೆಗೊಂದಿಯಲ್ಲಿ ರಾಜ್ಯವಾಳುತ್ತಿದ್ದನು. ರಾಜನ ಕಾರ್ಯಕರ್ತನಾದ ಬಾಗಳಿಯ ಮಾಚಿನಾಯಕನ ಮಗನಾದ ಮಾದಿನಾಯಕನು ತನ್ನ ಗುರು-ತಂದೆ ತಾಯಿಗಳಿಗೆ ಒಳ್ಳೆಯದಾಗಲೆಂದು ಕೊಟ್ಟೂರು ಸೀಮೆಯ ಕುರುಬರಿಗೆ ಹಾಕುವ ಕುರಿ ತೆರಿಗೆಯನ್ನು ಬಾಗಳಿಯ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ದಾನಬಿಟ್ಟ ಬಗ್ಗೆ ಉಲ್ಲೇಖಿಸುತ್ತದೆ.[೮] ಅದೇ ರೀತಿ ಕ್ರಿ.ಶ. ೧೫೫೧ರಲ್ಲಿ ಸದಾಶಿವಯರಾಯನು ವಿದ್ಯಾನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಬಾಗಳಿಯ ಚಾಮಿನಾಯಕನ ಮಗ ಹಳವಿನಾಯಕನು ಬಾಗಳಿ ಮತ್ತು ಅದರ ಉಪ ಗ್ರಾಮಗಳ ಕುರುಬರಿಗೆ ಕುರಿ ತೆರಿಗೆಯನ್ನು ಮನ್ನಾ ಮಾಡಿದ ಬಗ್ಗೆ ಉಲ್ಲೇಖವಿದೆ.[೯] ಕೆಲವು ಅರಸರು ಕುರಿ ಪಾಲನೆಗೆ ಅನೇಕ ರೀತಿಯ ಸೌಲಭ್ಯಗಳನ್ನು ನೀಡುತ್ತಿದ್ದರೆಂದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಮಧ್ಯಕಾಲದಲ್ಲಿ ಕುರಿ ಪಾಲನೆ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದಿತ್ತೆಂದು ಅಧ್ಯಯನದ ಮೂಲಕ ಹೇಳಬಹುದಾಗಿದೆ.

ಉತ್ತರ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರದ ಭಾಗಗಳಲ್ಲಿ ಗೇಣಿ ಪದ್ಧತಿಯು ಜಾರಿಯಲ್ಲಿದೆ. ಇದು ಬಹಳ ಹಿಂದಿನಿಂದಲೂ ಪಾರಂಪರಿಕವಾಗಿ ಬೆಳೆದು ಬಂದ ಪದ್ಧತಿಯಾಗಿದೆ. ಕುರಿ ಪಾಲಕರಿಗೆ ನಿರ್ದಿಷ್ಟ ಸಂಖ್ಯೆಯ ಐದು, ಹತ್ತು, ಐವತ್ತು, ನೂರು, ಇನ್ನೂರು ಕುರಿಮರಿಗಳನ್ನು ಮೇಯಿಸಿ ಬೆಳೆಸಲು ಕೊಡುವರು. ಕುರಿ ಪಾಲಕರು ಒಂದು ನಿರ್ದಿಷ್ಟ ಅವಧಿಗೆ ಕುರಿಗಳನ್ನು ಪಡೆದು ಅವುಗಳ ಸಂಖ್ಯೆಯ ೧/೩ ಅಥವಜ ೧/೨ರಷ್ಟು ಭಾಗವು ಕುರಿ ಪಾಲಕನಿಗೆ ಹಾಗೂ ಉಳಿದ ಭಾಗವನ್ನು ಮಾಲಿಕನಿಗೆ ಕೊಡಲಾಗುತ್ತದೆ.[೧೦] ಇದನ್ನು ಗೇಣಿ ಪದ್ದತಿ ಎಂದು ಕರೆಯುವುದು ಕಂಡು ಬರುತ್ತದೆ. ಇಂದಿಗೂ ಕೆಲವು ಭಾಗಗಳಲ್ಲಿ ಈ ಪದ್ಧತಿ ಜಾರಿಯಲ್ಲಿರುವುದು ವಿಶೇಷ.

ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ಕುರುಬರು ಇಂದಿಗೂ ಕುರಿ ಸಾಕಾಣಿಕೆಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿರುವುದು ಕಂಡು ಬರುತ್ತದೆ. ಕುರಿ ಪಾಲಕರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕುರಿಗಳ ಪಾಲನೆಗಾಗಿ ವಲಸೆ ಹೋಗುವುದು ಕಂಡು ಬರುತ್ತದೆ. ಅಲ್ಲಲ್ಲಿ ಕುರಿಹಟ್ಟಿಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಇವರ ಬಳಿ ಸುಮಾರು ೧೦೦ ರಿಂದ ೨೦೦ ಕುರಿ, ಆಡುಗಳಿರುತ್ತವೆ. ಕುರಿಗಳಿಗೆ ಜಾಜಿ, ಊಡಿಗೆ ಕಡ್ಡಿಗಳಿಂದ ಕುರಿದೊಡ್ಡಿ ನಿರ್ಮಿಸುತ್ತಾರೆ. ಕುರಿದೊಡ್ಡಿಯನ್ನು ಕುರಿಕೊಪ್ಪ, ಕುರಿಹಟ್ಟಿ ಎಂದೂ ಕರೆಯಲಾಗಿದೆ.[೧೧] ಹಲವಾರು ಗ್ರಾಮಗಳಿಗೆ ತೆರಳಿ ಅಲ್ಲಿಯ ಹೊಲದಲ್ಲಿ ಕುರಿಗಳನ್ನು ನಿಲ್ಲಿಸುತ್ತಾರೆ. ರಾತ್ರಿಯಿಡಿ ಕುರಿಗಳು ಹೊಲದಲ್ಲಿ ಹಿಕ್ಕೆಗಳ ಹಾಕುತ್ತವೆ. ಇದು ಉತ್ತಮ ಗೊಬ್ಬರ ಎಂಬ ಅಭಿಪ್ರಾಯವಿದೆ. ಇದರ ಪ್ರತಿಯಾಗಿ ಮಾಲಿಕರು ವಸ್ತು ಅಥವಾ ಹಣದ ರೂಪದಲ್ಲಿ ಸಂಭಾವನೆ ನೀಡುತ್ತಾರೆ. ಮಳೆ, ಚಳಿ, ಗಾಳಿ ಎನ್ನದೇ ಕುರಿಗಳ ಪಾಲನೆಗಾಗಿ ಅಲೆದಾಡುತ್ತಾರೆ. ಕುರಿಸಾಕಾಣಿಕೆ ಆರ್ಥಿಕವಾಗಿ ಲಾಭದಾಯಕ ವೃತ್ತಿಯಾಗಿ ಕಂಡುಬಂದರೂ ಅನೇಕ ಸಮಸ್ಯೆಗಳಿರುವುದು ಕಂಡುಬರುತ್ತದೆ. ಕುರಿಗಳಿಗೆ ನೆಗಡಿ, ಚಪ್ಪೆರೋಗ, ಅತ್ಯುಗ್ರಊತ, ಬ್ಯಾಕ್ಸಿ, ಕಪ್ಪುರೋಗ, ಕುರಿಮರಿಗಳ ಬೇಧಿ, ಕರುಳಿನ ವಿಕ್ಷಬೇನೆ, ಧನುರ್ವಾಯು, ಕ್ಷಯ, ಕೆಚ್ಚಲಬಾವು, ಸಂದಿವಾತ ಮೊದಲಾದ ಸಾಂಕ್ರಾಮಿಕ ರೋಗಗಳುಂಟಾಗಿ ಸಾಮೂಹಿಕವಾಗಿ ಸಾಯುವ ಸಾಧ್ಯತೆಯಿರುತ್ತದೆ.[೧೨] ಹಾಗೆಯೇ ತೋಳ ಹಾಗೂ ಕಳ್ಳರ ಬೀತಿಯಿರುತ್ತದೆ. ಈ ಸಮಸ್ಯೆಗಳನ್ನು ನಿವಾರಿಸಲು ಸರಕಾರದಿಂದ ಅನೇಕ ಸೌಲಭ್ಯಗಳನ್ನು ನೀಡಿರುವುದು ಕಂಡುಬರುತ್ತದೆ.

ಕುರುಬರಲ್ಲಿ ಕೃಷಿಗೆ ಇಂದು ಪ್ರಾಮುಖ್ಯತೆ ಹೆಚ್ಚಾಗಿ ಕುರಿಸಾಕಾಣಿಕೆ ಪ್ರಮಾಣ ಕಡಿಮೆಯಾಗುತ್ತಿದೆ. ಕೊಪ್ಪಳ ಜಿಲ್ಲೆಯ ಕೂಕನಪಳ್ಳಿಯಲ್ಲಿ ಪ್ರತಿ ಶುಕ್ರವಾರ ಕುರಿ ಮಾರುಕಟ್ಟೆ ನಡೆಯುತ್ತದೆ. ಸಾವಿರಾರು ಕುರಿಗಳ ವ್ಯಾಪಾರ ನಡೆಯುತ್ತದೆ. ಜಿಲ್ಲೆಯಲ್ಲಿ ಕಾಣುವ ಈ ಕುರಿ ಮಾರುಕಟ್ಟೆ ಕರ್ನಾಟಕದಲ್ಲಿ ಮೊದಲ ಸ್ಥಾನದಲ್ಲಿರುವುದು ವಿಶೇಷವಾಗಿದೆ. ಕುರಿಗಳಿಗೆ ವಿಮಾ ಸೌಲಭ್ಯ ನೀಡಲಾಗಿದೆ. ಸರಕಾರ ಕುರಿಗಾರರಿಗೆ ಬಂದೂಕು ನೀಡುವ ವ್ಯವಸ್ಥೆ ಕೈಗೊಳ್ಳುವ ಯೋಜನೆಯಲ್ಲಿದೆ. ಕಷ್ಟಕರವೂ, ಲಾಭದಾಯಕವೂ ಆದ ಕುರಿ ಸಾಕಾಣಿಕೆ ಇಂದಿಗೂ ಕುರುಬರ ವೃತ್ತಿಯಾಗಿರುವುದು ಕಂಡುಬರುತ್ತದೆ.

### ೭.೧.೧ ವ್ಯವಸಾಯ

ಇತಿಹಾಸ ಪೂರ್ವ ಕಾಲದಿಂದಲೂ ಭಾರತದಲ್ಲಿ ವ್ಯವಸಾಯವು ಅನೂಚಾನವಾಗಿ ಬೆಳೆದುಬಂದಿತು. ತನ್ನ ಗರ್ಭದಿಂದ ಹೊರಬಂದ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇದರಿಂದ ಮನುಷ್ಯನು ಕೈಗೊಳ್ಳುವ ಅನೇಕ ವೃತ್ತಿಗಳಲ್ಲಿ ಕೃಷಿಯೇ ಅತ್ಯಂತ ಪ್ರಮುಖವಾದುದೆಂದು ತಿಳಿಯುತ್ತದೆ. ಹೀಗಾಗಿ ವ್ಯವಸಾಯದ ಅಭಿವೃದ್ಧಿ ಎಂದರೆ ಒಂದು ನಾಡಿನ ಅಭಿವೃದ್ಧಿ ಎಂಬ ನಂಬಿಕೆ ಇಂದಿಗೂ ಪ್ರಚಲಿತದಲ್ಲಿದೆ.

ಪಶುಪಾಲನೆಯ ನಂತರ ವ್ಯವಸಾಯವು ಪ್ರಾಮುಖ್ಯತೆ ಪಡೆದುಕೊಂಡಿತು. ಕೆಲವು ಸಮುದಾಯಗಳು ಪಶುಪಾಲನೆಯ ಜೊತೆಗೆ ಕೃಷಿಯನ್ನು ಅವಲಂಬಿಸಿದವು. ಅಂಥವುಗಳಲ್ಲಿ ಕುರುಬ ಸಮುದಾಯವೂ ಒಂದು. ಮೂಲತ ದ್ರಾವಿಡರಾಗಿದ್ದ ಕುರುಬರು ಪಶುಪಾಲಕರಾಗಿದ್ದರು. ಆರ್ಯರ ಆಕ್ರಮಣದ ನಂತರ ಕುರುಬರು ಆರ್ಯರಾಗಿ ಪರಿವರ್ತನೆಗೊಂಡರಲ್ಲದೇ, ವ್ಯವಸಾಯವನ್ನು ಅವಲಂಭಿಸಿದರು. ಕೃಷಿಯನ್ನು ಅವಲಂಭಿಸಿದ ಮೇಲೆ ಒಂದೆಡೆ ಸ್ಥಿರವಾಗಿ ನೆಲೆ ನಿಂತರು. ರಾಜ್ಯಗಳನ್ನು ನಿರ್ಮಿಸಿ ರಾಜ್ಯಭಾರ ಮಾಡಿದರು. ಚೋಳರು, ಪಲ್ಲವರ (ಕುರುಬರ) ಮೇಲೆ ಆಕ್ರಮಣ ಮಾಡಿ ಸೋಲಿಸಿದರು. ಸೋತ ಪಲ್ಲವರು ಪಲಾಯನ ಮಾಡಿ ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿದರು. ಅವರಲ್ಲಿ ಕೆಲವರು ಗ್ರಾಮಗಳಲ್ಲಿ ವಾಸಿಸತೊಡಗಿದರು. ಈ ಮೊದಲೇ ಗ್ರಾಮಗಳಲ್ಲಿದ್ದ ಜನರು ಉತ್ತಮವಾದ ಫಲವತ್ತತೆಯುಳ್ಳ ಜಮೀನುಗಳನ್ನು ವಶಪಡಿಸಿಕೊಂಡಿದ್ದರು. ನಂತರದಲ್ಲಿ ಬಂದು ನೆಲೆಸಿದ ಕುರುಬರು ಪಾಳು ಬಿದ್ದಿದ್ದ ಭೂಮಿಗಳನ್ನು ಕೃಷಿಗೆ ಯೋಗ್ಯವನ್ನಾಗಿಸಿಕೊಂಡು ವ್ಯವಸಾಯ ಮಾಡತೊಡಗಿದರೆಂಬ ಅಭಿಪ್ರಾಯವಿದೆ. ಕಾಲಾನಂತರ ಪುನಃಶ್ಚೇತನಗೊಂಡು ಅನೇಕ ರಾಜವಂಶಗಳನ್ನು ನಿರ್ಮಿಸಿ ಆಳ್ವಿಕೆ ನಡೆಸಿದ್ದರಲ್ಲದೆ, ಉತ್ತಮ ಫಲವತ್ತತೆಯುಳ್ಳ ಜಮೀನುಗಳನ್ನು ಪಡೆದುಕೊಂಡು ಜೀವನ ನಡೆಸತೊಡಗಿದರು.

ಸಾಗುವಳಿಯ ಜಮೀನನ್ನು ದೇವಮಾತೃಕ ಮತ್ತು ನದೀಮಾತೃಕಗಳೆಂದು ವಿಂಗಡಿಸಲಾಗಿದೆ. ಕೇವಲ ಮಳೆಯ ನೀರನ್ನೇ ಆಶ್ರಯಿಸಿ ಬೆಳೆಯುವ ಹೊಲಗಳು ದೇವಮಾತೃಕಗಳೆಂದು, ನದಿ, ಕೆರೆ ಮೊದಲಾದವುಗಳನ್ನು ಆಶ್ರಯಿಸಿರುವ ಹೊಲಗಳು ನದೀ ಮಾತೃಕಗಳೆಂದು ಕರೆಯಲಾಗಿದೆ.[೧೩] ಈ ಎರಡು ರೀತಿಯ ಜಮೀನುಗಳನ್ನು ಇಂದು ಎರೆಭೂಮಿ, ನೀರಾವರಿ ಭೂಮಿ ಎಂದು ಕರೆಯಲಾಗುತ್ತದೆ. ಕುರುಬರು ಎರಡೂ ರೀತಿಯ ಜಮೀನನ್ನು ಹೊಂದಿರುವುದು ಕಂಡುಬರುತ್ತದೆ.

ವ್ಯವಸಾಯದ ಬಗ್ಗೆ ಶಾಸನಗಳಲ್ಲಿ ಹೆಚ್ಚಿನ ಉಲ್ಲೇಖಗಳು ದೊರೆಯುವುದಿಲ್ಲ. ಕೊಪ್ಪಳ ಜಿಲ್ಲೆಯಲ್ಲಿ ಎರೆಭೂಮಿ, ಎರೆಗದ್ದೆ,

ಕೆಂಪುಭೂಮಿ, ಕೆಯ್‌ಭೂಮಿ, ತೋಟ, ಹೂವಿನತೋಟ, ಕಲ್ಲುಭೂಮಿ, ಸವಳುಭೂಮಿ, ಮೊದಲಾದ ರೀತಿಯ ಭೂಮಿಗಳಿದ್ದವೆಂದು ಕೊಪ್ಪಳದ ಶಾಸನ ಉಲ್ಲೇಖಿಸುತ್ತದೆ.[೧೪] ವಿಜಯನಗರ ಕಾಲದ ಶಾಸನಗಳಲ್ಲಿ ಕೃಷಿ ವರ್ಷವು ಎರಡು ಕಾಲಾವಧಿಗಳಾಗಿ ವಿಭಾಗವಾಗಿತ್ತು. ಅವುಗಳಲ್ಲಿ ೧. ಜೂನ್‌ನಿಂದ ಅಕ್ಟೋಬರ್‌ವರೆಗೆ ನೈಋತ್ಯ ಮುಂಗಾರು ಮಳೆಗೆ ಹೊಂದಿಕೊಳ್ಳುವ ಅವಧಿ. ೨.ಜನವರಿ–ಫೆಬ್ರುವರಿ ತಿಂಗಳ ಚಳಿ ಹವೆಯ ಫಸಲು.[೧೫] ನೈಋತ್ಯ ದಿಕ್ಕಿನಿಂದ ಬರುವ ಮುಂಗಾರು ಮೊದಲ ಮಳೆಯೊಂದಿಗೆ ಕಾರ್ತಿಕ ಬೆಳೆಯ ಬಿತ್ತುವಿಕೆ ಪ್ರಾರಂಭ. ಅದು ಮುಂಗಾರು ಎಂದು ಕರೆಯಲ್ಪಡುತ್ತದೆ. ವೈಶಾಖ ಬೆಳೆಯ ಬಿತ್ತುವಿಕೆ ಮಾನ್‌ಸೂನ್ ಕೊನೆಯ ವೇಳೆಗೆ ಪ್ರಾರಂಭ. ಅದು ಹಿಂಗಾರು ಎಂದು ಕರೆಯಲ್ಪಡುತ್ತದೆ. ಇದರಿಂದ ಆಗ ರೈತರಿಗೆ ವರ್ಷದಲ್ಲಿ ಎರಡು ಬೆಳೆ ತೆಗೆಯುವುದು ತಿಳಿದಿತ್ತೆಂಬುದು ಸ್ಪಷ್ಟ.

ಕೊಪ್ಪಳ ಜಿಲ್ಲೆಯ ಕಲ್ಲೂರ ಶಾಸನ ಹೊಲಗಳಲ್ಲಿ ಬೆಳೆಯುವ ಜೋಳ, ನವಣೆ, ಸಜ್ಜೆ, ಗದ್ದೆಗಳಲ್ಲಿ ಬೆಳೆಯುವ ಕಬ್ಬು, ತೆಂಗು, ಅಡಿಕೆ, ಭತ್ತ ಹಾಗೂ ತೋಟಗಳಲ್ಲಿ ಬೆಳೆಯುವ ಹೂ–ಹಣ್ಣುಗಳು, ಎಲೆ, ಮೆಣಸು, ಶುಂಠಿ, ಬಾಳೆ, ಹಲಸು ಮೊದಲಾದವುಗಳ ಕುರಿತು ಉಲ್ಲೇಖಿಸುತ್ತದೆ. ಅಲ್ಲದೆ ಕುಕನೂರ ಶಾಸನ ಎಲೆ ತೋಟವನ್ನು, ಇಟಗಿ ಶಾಸನ ಮಾವು, ನೇರಲ, ಕಾಯಿ, ಹತ್ತಿ ಮೊದಲಾದವುಗಳ ಬಗ್ಗೆ ತಿಳಿಸುತ್ತದೆ.[೧೬] ಅದೇ ರೀತಿ ವಿಜಯನಗರ ಕಾಲದ ಪ್ರವಾಸಿಗಳಾದ ನ್ಯೂನಿಜ್, ಅಬ್ದುಲ್ ರಜಾಕ್, ಪೇಸ್ ಮೊದಲಾದವರು ಗೋಧಿ, ಕಾಳು, ಬತ್ತ, ಜೋಳ, ವೀಳ್ಯೆದೆಲೆ, ಕಬ್ಬು ಮೊದಲಾದವುಗಳಿಗೆ ಬಾರಿ ಬೇಡಿಕೆಯಿತ್ತೆಂದು ತಿಳಿಸುತ್ತಾರೆ.[೧೭] ಇಂದಿಗೂ ಈ ಬೆಳೆಗಳನ್ನು ಬೆಳೆಯುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

ಎರೆಭೂಮಿಗಳಲ್ಲಿ ಬೀಜಗಳ ಬಿತ್ತನೆಗೆ ಮಳೆಯನ್ನೇ ಆಶ್ರಯಿಸಿದ್ದರು. ಈ ಭೂಮಿಯಲ್ಲಿ ಬಿತ್ತನೆ ಮಾಡಲು ಜ್ಯೋತಿಷ್ಯ, ಖಗೋಳಶಾಸ್ತ್ರ ಹಾಗೂ ನಕ್ಷತ್ರಗಳ ಸ್ಥಾನವನು ನೋಡುವುದು ಅವಶ್ಯಕ ಎಂಬ ಅಭಿಪ್ರಾಯವಿತ್ತು. ಕುರುಬರ ರಟ್ಟಮತಶಾಸ್ತ್ರದಲ್ಲಿ ಬಿತ್ತನೆಯ ವಿಧಾನಗಳನ್ನು ಹೇಳಲಾಗಿದೆ. ಆರಿದ್ರಾ, ಮಖಾ, ಪುಬ್ಬಾ ಮತ್ತು ಉತ್ತರಾ ಇವು ಯಾವುದೇ ಬೀಜಗಳ ಬಿತ್ತನೆಗೆ ಅತ್ಯಂತ ಪ್ರಶಸ್ತವಾದ ಕಾಲವೆಂದು ಪರಿಗಣಿಸಿದ್ದರು. ಆದರೆ ಕೆಲವು ಸಮಯದಲ್ಲಿ ಅತಿವೃಷ್ಟಿ ಹಾಗೂ ಅನಾವೃಷ್ಟಿಗಳಿಂದ ಬೆಳೆಗಳು ನಾಶವಾಗುವ ಸಂಭವಗಳಿದ್ದವು. ಹೀಗಾಗಿ ಈ ಭೂಮಿ ಹೊಂದಿರುವವರು ಆರ್ಥಿಕವಾಗಿ ಸದೃಢರಾಗಿರುವುದು ಅಧಿಕ ಪ್ರಮಾಣದಲ್ಲಿ ಕಂಡುಬರುವುದಿಲ್ಲ.

ಕೊಪ್ಪಳ ಪ್ರದೇಶವು ಕೃಷಿ ಪ್ರಧಾನವಾಗಿದೆ. ಕೃಷಿಯ ಮೇಲೆ ೭೨.೭೫ರಷ್ಟು ಜನರು ಅವಲಂಬಿತರಾಗಿದ್ದಾರೆ. ಕೃಷಿಯಲ್ಲಿ ನೀರಾವರಿ ಮತ್ತು ಒಣಭೂಮಿ ಬೇಸಾಯ ಎಂದು ವರ್ಗಿಕರಿಸಲಾಗಿದೆ. ಕುರುಬರು ಎರಡು ರೀತಿಯ ಜಮೀನನ್ನು ಹೊಂದಿದ್ದಾರೆ. ಒಣಭೂಮಿಯೆಂದರೆ ಮಳೆ ಆಶ್ರಿತ ಭೂಮಿಯಾಗಿದ್ದು, ಕೊಪ್ಪಳದಲ್ಲಿ ಅಧಿಕ ಪ್ರಮಾಣದಲ್ಲಿದೆ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಶೇಕಡಾ ೩೧.೪೭, ಕೊಪ್ಪಳ ಶೇಕಡಾ ೮೧.೧೭, ಕುಷ್ಟಗಿ ಶೇಕಡಾ ೮೯.೦೮, ಯಲಬುರ್ಗಾ ಶೇಕಡಾ ೮೦.೨೩ರಷ್ಟು ಒಣಭೂಮಿಯನ್ನು ಹೊಂದಿದೆ.[೧೮] ಈ ಪ್ರದೇಶವು ಪ್ರಾಕೃತಿಕ ಅನಾನುಕೂಲತೆಗಳಿಂದ ಕೂಡಿದ್ದು ಅತಿವೃಷ್ಟಿ, ಅನಾವೃಷ್ಟಿಗಳಿಗೆ ತುತ್ತಾಗುವುದು ಸಾಮಾನ್ಯವಾಗಿರುತ್ತದೆ.

ಈ ಪ್ರದೇಶದಲ್ಲಿ ನೆಲೆಸಿದ ಕುರುಬರು ಹತ್ತಿ, ಶೇಂಗಾ, ಕಡ್ಲೆ, ಜೋಳ, ಗೋಧಿ, ನವಣೆ, ಸಜ್ಜೆ, ಹೆಸರುಕಾಳು, ಗುರೆಳ್ಳು,

ಸೂರ್ಯಕಾಂತಿ, ಅಗಸಿ ಮೊದಲಾದ ಧಾನ್ಯಗಳ ಜೊತೆಗೆ ಅನೇಕ ಕಾಯಿಪಲ್ಲೆಗಳನ್ನು ಬೆಳೆಯುತ್ತಾರೆ. ಹತ್ತಿ, ಸೂರ್ಯಕಾಂತಿ, ಶೇಂಗಾ, ತಂಬಾಕು, ಜೋಳ, ಗೋಧಿ ಪ್ರಮುಖ ವಾಣಿಜ್ಯ ಬೆಳೆಗಳಾಗಿವೆ. ಮುಂಗಾರಿ, ಹಿಂಗಾರಿ ಎಂಬ ಎರಡು ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಪ್ರದೇಶದ ಕುರುಬರಲ್ಲಿ ಕನಿಷ್ಟವೆಂದರೆ ೧ ಎಕರೆ ಭೂಮಿಯನ್ನು ಹೊಂದಿದ್ದಾರೆ. ಭೂಮಿ ಇದ್ದು ಬೆಳೆ ಹಾನಿಗೊಳಗಾದಾಗ ಬೇರೆ ಊರಿಗೆ ಗುಳೆ ಹೋಗುವುದು ಕಂಡು ಬರುತ್ತದೆ. ಸರ್ಕಾರದಿಂದ ಅನೇಕ ರೀತಿಯ ಸಾಲ ಸೌಲಭ್ಯವನ್ನು ಪಡೆದವರಿದ್ದಾರೆ.

೭.೧.೨ ನೀರಾವರಿ

ಮಳೆಯ ಆಶ್ರಯವಿಲ್ಲದೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ ಸಂಪನ್ಮೂಲಗಳು ಅತ್ಯವಶ್ಯಕ. ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಆಶ್ರಯಿಸಿತ್ತು. ಇಂಥ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವುದು ಪುಣ್ಯ, ಶ್ರೇಯಸ್ಕರವೆಂದು ನಂಬಿದ್ದರಿಂದ ಈ ನಾಡಿನಲ್ಲೆಡೆ ಅನೇಕ ಕೆರೆ, ಕಾಲುವೆ, ಬಾವಿ, ಹಳ್ಳ ಹೊಂಡಗಳನ್ನು ಕಾಣಬಹುದಾಗಿದೆ. ಕೆರೆ, ಕಾಲುವೆಗಳನ್ನು ನಿರ್ಮಿಸುವುದಲ್ಲದೆ, ಅವುಗಳನ್ನು ನಾಶಪಡಿಸುವುದು ಅತ್ಯಂತ ಪಾಪಕರವೆಂಬ ಭಾವನೆಯಿದ್ದಿತೆಂದು ಶಾಸನಗಳು ಉಲ್ಲೇಖಿಸುತ್ತವೆ.

ವಿಜಯನಗರ ಕಾಲದಲ್ಲಿ ನೀರಾವರಿ ವ್ಯವಸ್ಥೆಗೆ ಪ್ರಾಮುಖ್ಯತೆ ನೀಡಿದ್ದರು. ೨ನೇ ಬುಕ್ಕರಾಯನು ಇಂದಿನ ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸಿರುವುದನ್ನು ನ್ಯೂನಿಜ್ ತನ್ನ ವರದಿಯಲ್ಲಿ ವರ್ಣಿಸಿದ್ದಾನೆ.[೯] ಈ ಅಣೆಕಟ್ಟಲ್ಲದೆ ನದಿಯಿಂದ ಹದಿನೈದು ಮೈಲಿ ಉದ್ದದ ಒಂದು ಮೆಲು ಕಾಲುವೆಯನ್ನು ಕಲ್ಲಿನಿಂದ ಕಟ್ಟಿಸಿದನು. ಈ ನದಿಯ ನೀರನ್ನು ಬಳಸಿಕೊಂಡು ನಗರದ ಸುತ್ತ ತೋಟ, ಹಣ್ಣಿನ ತೋಟ, ಮರದ ತೋಪುಗಳು, ದ್ರಾಕ್ಷಿತೋಟಗಳು ಮೊದಲಾದವುಗಳನ್ನು ಬೆಳೆಸಿದರು. ಈ ನದಿಯ ನೀರನ್ನು ಸಂಗ್ರಹಿಸಿ ಅಣೆಕಟ್ಟು ನಿರ್ಮಿಸಲು ೨ನೇ ಬುಕ್ಕರಾಯನು ತನ್ನ ತಂದೆಯಿಂದ ಬಂದಿದ್ದ ಸಮಸ್ತ ಐಶ್ವರ್ಯವನ್ನು ವೆಚ್ಚ ಮಾಡಿದನು ಎಂದು ತಿಳಿಯುತ್ತದೆ.[೨೦] ಇದರಿಂದ ಅಂದು ಅಣೆಕಟ್ಟು ಅಥವಾ ಕೆರೆ, ಕಾಲುವೆ ನಿರ್ಮಿಸುವುದು ಕಷ್ಟಕರವಾಗಿತ್ತೆಂದು ಕಾಣುತ್ತದೆ. ಆದರೂ ಶ್ರೀಮಂತರು, ವರ್ತಕರು, ಗೌಡರು ಮೊದಲಾದವರು ಅನೇಕ ಕೆರೆ, ಬಾವಿಗಳನ್ನು ನಿರ್ಮಿಸಿದರೆಂದು ಕಂಡುಬರುತ್ತದೆ. ಅರಸರು ನೀರಾವರಿ ಕಾರ್ಯಗಳನ್ನು ನಡೆಸಿದ ವ್ಯಕ್ತಿಗಳನ್ನು ಪುರಸ್ಕರಿಸುತ್ತಿದ್ದರಿಂದ ಅಂದು ನೀರಾವರಿ ವ್ಯವಸ್ಥೆ ಉತ್ತಮವಾಗಿತ್ತೆಂದು ಸ್ಪಷ್ಟವಾಗುತ್ತದೆ.

ತುಂಗಭದ್ರ ನದಿಯಿಂದ ನೀರಾವರಿ ವ್ಯವಸ್ಥೆಯನ್ನು ಕೊಪ್ಪಳವೂ ಪಡೆದುಕೊಂಡಿತು. ಕೊಪ್ಪಳ ಜಿಲ್ಲೆಯ ಹುಲಿಗಿ ಶಾಸನ ತುಂಗಭದ್ರ ನದಿಯ ನೀರನ್ನು ಬಳಸಿಕೊಂಡ ಬಗ್ಗೆ ಉಲ್ಲೇಖಿಸುತ್ತದೆ.[೨೧] ಅಳವಂಡಿ, ಕವಲೂರು, ಮುಧೋಳ, ಯಲಬುರ್ಗಾ, ಕುಕನೂರು, ಇಟಗಿ, ಪುರ, ಆನೆಗೊಂದಿ, ಮಾದಿನೂರು, ಅಂಟೂರಠಾಣಾ, ಹನುಮನಾಳ, ಬಳಗೇರಿ, ಸಂಕನೂರು ಶಾಸನಗಳಲ್ಲಿ ಭಾವಿಗಳ ಉಲ್ಲೇಖವಿದ್ದು, ಇದರಿಂದ ಅಂದು ಬಾವಿಗಳಿಂದ ನೀರಾವರಿ ಸೌಲಭ್ಯ ಹೊಂದಿದ್ದರೆಂದು ತಿಳಿಯುತ್ತದೆ. ಅಳವಂಡಿ ಗ್ರಾಮದ ಕುರುವರ ಗುಲ್ಗಿಮಯ್ಯ ಊರ ಪಶ್ಚಿಮಕ್ಕೆ ತೋಟ, ಪೂರ್ವಕ್ಕೆ ಬಾವಿ, ಕಲ್ಲದೇಗುಲ ಕಟ್ಟಿಸಿ ಅವುಗಳಿಗೆ ದಾನದತ್ತಿಗಳನ್ನು ಬಿಟ್ಟು, ತೀರ್ಥ ಕೆರೆಯಲ್ಲಿ ಸ್ನಾನಮಾಡಿ ಮೋಕ್ಷ ಪಡೆದುದಾಗಿ ಶಾಸನ ವಿವರಿಸುತ್ತದೆ.[೨೨] ಇದು ಗೌಡರು, ಶ್ರೀಮಂತರಾಗಿದ್ದ ಕುರುಬರು ಕೆರೆ, ಬಾವಿಗಳನ್ನು ಕಟ್ಟಿಸುತ್ತಿದ್ದರೆಂದು ಸ್ಪಷ್ಟಪಡಿಸುತ್ತದೆ.

ಕೊಪ್ಪಳದಲ್ಲಿ ಒಣಭೂಮಿ ಬೇಸಾಯ ಪ್ರಧಾನವಾಗಿದ್ದರೂ, ನೀರಾವರಿ ಬೇಸಾಯವು ಉತ್ತಮವಾಗಿರುವುದು ಕಂಡುಬರುತ್ತದೆ. ರಾಜ್ಯ ಮಟ್ಟದಲ್ಲಿ ನೀರಾವರಿ ಪ್ರಮಾಣ ಶೇಕಡಾ ೨೩.೭೬ರಷ್ಟಿದ್ದರೆ, ಕೊಪ್ಪಳ ಜಿಲ್ಲೆಯಲ್ಲಿ ೨೭.೧೮ರಷ್ಟಿದೆ. ಹೀಗಾಗಿ ಕೊಪ್ಪಳ ಅಧಿಕ ಪ್ರಮಾಣದಲ್ಲಿ ನೀರಾವರಿ ವ್ಯವಸ್ಥೆ ಹೊಂದಿದೆ. ಕೊಪ್ಪಳ ಶೇಕಡಾ ೧೮.೮೩, ಗಂಗಾವತಿ ಶೇಕಡಾ ೬೮.೫೫, ಕುಷ್ಟಗಿ ಶೇಕಡಾ ೧೦.೯೨, ಯಲಬುರ್ಗಾ ಶೇಕಡಾ ೦೯.೭೭ರಷ್ಟು ನೀರಾವರಿ ಸೌಲಭ್ಯ ಹೊಂದಿದೆ.[೨೩]

ನೀರಾವರಿ ಪ್ರದೇಶದಲ್ಲಿ ವಾಸಿಸುವ ಕುರುಬರು ಅಧಿಕ ಪ್ರಮಾಣದಲ್ಲಿ ಭತ್ತವನ್ನು ಬೆಳೆಯುತ್ತಾರೆ ಜೊತೆಗೆ ಗೋಧಿ, ಜೋಳ, ಕಬ್ಬು, ಹತ್ತಿ, ಸೂರ್ಯಕಾಂತಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ಗಂಗಾವತಿ ಹಾಗೂ ಕೊಪ್ಪಳ ಪ್ರದೇಶಗಳಲ್ಲಿ ಕಾಲುವೆಗಳ ಮೂಲಕ ನೀರಾವರಿ ಸೌಲಭ್ಯವಿದ್ದರೆ, ಕುಷ್ಟಗಿ, ಯಲಬುರ್ಗಾ ಪ್ರದೇಶಗಳಲ್ಲಿ ಕೆರೆ, ಭಾವಿ, ಬೋರು ಮೊದಲಾದುವುಗಳ ಮೂಲಕ ನೀರಾವರಿ ಸೌಲಭ್ಯವಿದೆ. ಈ ವ್ಯವಸ್ಥೆಯಿಂದ ತೋಟಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ತೋಟಗಳಲ್ಲಿ ತೆಂಗು, ಬಾಳೆ, ವೀಳ್ಯದೆಲೆ, ಅಡಿಕೆ, ವಿವಿಧ ಹಣ್ಣುಗಳಾದ ಮಾವು, ಹಲಸು, ಕಿತ್ತಳೆ, ಅರಳಿ, ನೇರಳೆ, ಪಾಪು, ನಿಂಬೆ, ಮಲ್ಲಿಗೆ, ಕೇದಿಗೆ, ನೈದಿಲೆ, ಸಂಪಿಗೆ, ಸೇವಂತಿಗೆ, ಜಾಜಿ, ಕಣಗಿಲೆ, ಕಾಯಿಪಲ್ಲೆಗಳನ್ನು ಬೆಳೆಯಲಾಗುತ್ತದೆ. ಕೊಪ್ಪಳದ ಯಲಬುರ್ಗಾ ತಾಲೂಕಿನಾದ್ಯಂತ ನೀರಾವರಿ ಸೌಲಭ್ಯ, ನದಿ, ಕಾಲುವೆಯಿಂದ ಕೂಡಿದೆ. ಸುಮಾರು ೫೫.೫೬ರಷ್ಟು ಪ್ರದೇಶಕ್ಕೆ ನೀರಾವರಿ ಸೌಲಭ್ಯವಿದೆ. ಈ ಜಮೀನುಗಳಲ್ಲಿ ಭತ್ತವನ್ನು ಅಧಿಕ ಪ್ರಮಾಣದಲ್ಲಿ ಬೆಳೆಯಲಾಗುತ್ತದೆ. ಹೀಗಾಗಿ ಈ ಭಾಗದಲ್ಲಿ ಜಮೀನನ್ನು ಹೊಂದಿರುವಂತಹ ಕುರುಬರು ಆರ್ಥಿಕವಾಗಿ ಸಬಲರಾಗಿರುವುದು ಕಂಡು ಬರುತ್ತದೆ.

ಒಟ್ಟಾರೆ ಕೊಪ್ಪಳ ಜಿಲ್ಲೆಯಾದ್ಯಂತ ಎರಡೂ ರೀತಿಯ ಕೃಷಿ ವ್ಯವಸ್ಥೆಯನ್ನು ಕುರುಬರು ಅವಲಂಬಿಸಿರುವುದು ಕಂಡುಬರುತ್ತದೆ. ಇದರೊಂದಿಗೆ ದನ, ಕರು, ಎತ್ತು, ಆಡು, ಕುರಿಗಳನ್ನು ಸಾಕುವುದು ಕಂಡುಬರುತ್ತದೆ. ಕಡಿಮೆ ಭೂಮಿ ಉಳ್ಳವರು ಅದರಲ್ಲೂ ಎರೆಭೂಮಿ ಹೊಂದಿರುವ ಕುರುಬರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಎರೆಭೂಮಿಯವರ ಹತ್ತಿರ ಎತ್ತಿನ ಬಂಡಿ, ಕುಂಟೆ ಮೊದಲಾದ ಕೃಷಿ ಉಪಕರಣಗಳಿದ್ದರೆ, ನೀರಾವರಿ ಜಮೀನುಳ್ಳವರ ಹತ್ತಿರ ಟ್ರಾಕ್ಟರ್ ಹಾಗೂ ಆಧುನಿಕ ಉಪಕರಣಗಳಿರುತ್ತವೆ. ಹೀಗಾಗಿ ಮಳೆ ಆಧಾರಿತ ಜಮೀನುಗಳನ್ನು ಹೊಂದಿದ ಕುರುಬರು ಆರ್ಥಿಕ, ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕ ಜೀವನ ಪದ್ಧತಿಯು ನೀರಾವರಿ ಜಮೀನು ಹೊಂದಿದ ಕುರುಬರ ಜೀವನ ಪದ್ಧತಿಗಿಂತ ಸ್ವಲ್ಪ ಕೆಳ ಹಂತದಲ್ಲಿರುವುದು ಕಂಡುಬರುತ್ತದೆ.

### ೭.೧.೩ ಕಂಬಳಿ ನೇಯ್ಗೆ

ಪ್ರಾಚೀನ ಕಾಲದಲ್ಲಿ ಹತ್ತಿಯ ಪರಿಚಯವಾಗುವುದಕ್ಕಿಂತ ಪೂರ್ವದಲ್ಲಿ ಉಣ್ಣೆ ಬಟ್ಟೆಯು ಪ್ರಚಲಿತದಲ್ಲಿತ್ತು. ಋಗ್ವೇದ ಕಾಲದ ಪೂರ್ವದಿಂದಲೂ ಉಣ್ಣೆಯ ವಸ್ತ್ರ ಬಳಕೆಯಲ್ಲಿತ್ತೆಂಬುದಕ್ಕೆ ಆಧಾರಗಳಿವೆ. ಊರ್ಣಾವತೀ ಯುವತಿಶೀಲಮಾವತಿ ಊರ್ಣಾನಂತರ ಊರ್ಣವಸತಿ ಶೃಂಧ್ಯವ ಮೊದಲಾದ ಋಗ್ವೇದೋಕ್ತಿಗಳನ್ನು ಗಮನಿಸಬಹುದಾಗಿದೆ.[೨೪] ಉಣ್ಣೆ, ನಾರು, ರೇಷ್ಮೆ ಮೊದಲಾದವುಗಳಿಂದ ನೇಯ್ದ ಬಟ್ಟೆಗಳು ದೇವತಾಕಾರ್ಯಗಳಲ್ಲಿ ಉಪಯೋಗಿಸಬಹುದಾದ ಮಡಿವಸ್ತ್ರಗಳಾಗಿದ್ದವೆಂದು ಹೇಳಲಾಗಿದೆ. ಇದರಿಂದ ಉಣ್ಣೆ ವಸ್ತ್ರದ ಸಂಪ್ರದಾಯವು ವೈದಿಕ ಕಾಲದಿಂದಲೇ ಪ್ರಾಮುಖ್ಯತೆ ಪಡೆದುಕೊಂಡಿತ್ತೆಂಬುದು ಸ್ಪಷ್ಟಪಡುವುದಲ್ಲದೆ, ಕಂಬಳಿ ನೇಯ್ಗೆಯ ಪ್ರಾಚೀನತೆಯು ತಿಳಿದುಬರುತ್ತದೆ.

ಕಂಬಳಿಯ ಸೃಷ್ಟಿಯ ಬಗ್ಗೆ ಹಾಲುಮತ ಕೃತಿಯಲ್ಲಿ ಈ ರೀತಿ ವಿವರಿಸಲಾಗಿದೆ. ಹಾಲುಮತದ ಮೂಲಪುರುಷನಾದ ಶಿವಪದ್ಮನು ಪರಶಿವನ ನಿರ್ದೇಶನದಂತೆ ಕುರಿಕಾಯುವ ವೃತ್ತಿಯನ್ನು ಕೈಗೊಂಡನು. ಕುರಿಗಳ ಹಾಲನ್ನು ಹಿಂಡಿ ಹೈನ ಮಾಡಲು ಬೇಕಾದ ಅಗ್ನಿಯನ್ನು ಹುಡುಕುತ್ತ ಹೊರಟನು. ಅಲ್ಲಿ ರಾಕ್ಷಸ ಕನ್ಯೆಯ ಪರಿಚಯವಾಗಿ ನಂತರ ಇಬ್ಬರ ನಡುವೆ ಪ್ರಣಯ ಪ್ರಾರಂಭವಾಯಿತು. ಆಗ ರೇವಣಸಿದ್ಧರು ಇವರಿಬ್ಬರಿಗೆ ವಿವಾಹ ಮಾಡಿಸಿ ಅವರ ಉಪಜೀವನಕ್ಕೊಂದು ಆಧಾರಬೇಕೆಂದು ತಿಳಿದು ತನ್ನ ಕಂಚೆಡೆಯಲ್ಲಿಯ ಬೆವರ ಹನಿಯನ್ನು ನೆಲಕ್ಕೆ ಹಾಕಲು ಅದರಿಂದ ಒಬ್ಬ ಕಂಬಾರನು ಜನಿಸಿದನು.[೨೫] ರೇವಣಸಿದ್ಧರು ತನ್ನ ತ್ರಿಶೂಲದ ಸ್ವಲ್ಪ ಕುಂಬಿಯನ್ನು ಮುರಿದು ಅದನ್ನು ಕತ್ತರಿಯನ್ನಾಗಿ ಕಂಬಾರನಿಂದ ಮಾಡಿಸಿದನು. ಆ ಕತ್ತರಿಯನ್ನು ನೀಡಿ ಅದರಿಂದ ಕುರಿ ಉಣ್ಣೆ ಕತ್ತರಿಸುವ ಬಗೆಯನ್ನು ಶಿವಪದ್ಮನಿಗೆ ತಿಳಿಸುತ್ತಾನೆ. ಉಣ್ಣೆಯನ್ನು ಹಿಂಜುವ ಮತ್ತು ಅದರಿಂದ ನೂಲುವ ರೀತಿಯನ್ನು ತಿಳಿಸಿಕೊಡುತ್ತಾನೆ. ನಂತರ ಬೆಲ್ಲ ಬೀಜದ ಸರಿ ಸಿದ್ದಪಡಿಸಿ ಅದಕ್ಕೆ ಹಚ್ಚಿ ತನ್ನ ಕಿಡಿಗಣ್ಣಿನಿಂದ ಉಂಕೆಯನ್ನು ಮಾಡಿ, ಎಕ್ಕೆಯ ಗಿಡದ ಬಳಿಯಲ್ಲಿ ಮಗ್ಗಹೂಡಿ ನೇಯುವ ಕ್ರಮವನ್ನು ತಿಳಿಸುತ್ತಾನೆ. ಕಂಬಳಿ ತಯಾರಿಸಿ ಮಾರಿ ಜೀವನ ಸಾಗಿಸಬೇಕೆಂದು ತಿಳಿಹೇಳುತ್ತಾನೆ. ಹೀಗಾಗಿ ಅಂದಿನಿಂದ ಕುರಿಸಾಕಾಣಿಕೆಯ ಜೊತೆಗೆ ಕಂಬಳಿನೇಯ್ಗೆಯನ್ನು ವೃತ್ತಿಯನ್ನಾಗಿ ಅನುಸರಿಸಿಕೊಂಡರೆಂದು ತಿಳಿಯುತ್ತದೆ. ಕುಲಗುರುಗಳಾದ ರೇವಣಸಿದ್ಧರು ಕಂಬಳಿನೇಯ್ಗೆಯನ್ನು ತಿಳಿಸಿಕೊಟ್ಟಿದ್ದರಿಂದ ಕಂಬಳಿ ಪವಿತ್ರ ಎಂಬ ಭಾವನೆಯಿದೆ. ಇಂದಿಗೂ ಕಂಬಳಿ ನೇಯ್ಗೆಯನ್ನು ಕುರುಬರು ಮಾಡುವುದು ಕಂಡುಬರುತ್ತದೆ.

ಋಗ್ವೇದದ ಕಾಲದಿಂದಲೂ ಉಣ್ಣೆಯ ವಸ್ತ್ರ ಬಳಕೆಯಲ್ಲಿತ್ತೆಂಬುದಕ್ಕೆ ಆಧಾರಗಳಿವೆ. ಮಧ್ಯ ಏಷ್ಯಾದ ಅಲೆಮಾರಿ ಜನ ಮೊದಲು ಕುರಿಗಳನ್ನು ಸಾಕಿ ಉಣ್ಣೆಯಿಂದ ನೂಲನ್ನು ತೆಗೆದು ನೇಯುವುದನ್ನು ಕಲಿತರೆಂದು ಅನೇಕ ಆಧಾರಗಳಿಂದ ತಿಳಿಯುತ್ತದೆ.[೨೬] ಇವರೇ ನಂತರ ಯುರೋಪ ಹಾಗೂ ಭಾರತದ ಭಾಗಗಳಿಗೆ ವಲಸೆ ಹೋಗಿ ಉಣ್ಣೆಯ ಕುಶಲ ಕೈಗಾರಿಕೆಗಳನ್ನು ಎಲ್ಲೆಡೆ ಪ್ರಚಾರಗೊಳಿಸಿದರು.[೨೭]

ಕ್ರಿ.ಪೂ. ೩೦೦೦ ವರ್ಷಗಳಷ್ಟು ಪ್ರಾಚೀನವಾದ ಒಂದು ಯುಗ ಮತ್ತು ಅದರಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರನ್ನು ಈಜಿಪ್ಟ್‌ನ ಭಿತ್ತಿಚಿತ್ರವೊಂದರಲ್ಲಿ ಚಿತ್ರಿಸಲಾಗಿದೆ.[೨೮] ಇದರಿಂದ ಈಜಿಪ್ಟಿನ ಜನಾಂಗಕ್ಕೆ ನೇಯುವ ಕಲೆ ತಿಳಿದಿತ್ತೆಂದು ಸ್ಪಷ್ಟವಾಗುತ್ತದೆ. ಕ್ರಿ.ಪೂ.೫೦೦೦ ವರ್ಷಗಳಿಗಿಂತ ಮೊದಲೇ ಬ್ಯಾಬಿಲೋನ್ ಅಥವಾ ನಿನೆವಾದಲ್ಲಿ ಉಣ್ಣೆಯ ಜಮಖಾನೆ ನೇಯುತ್ತಿದ್ದರೆಂದು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೯] ನೆಲಕ್ಕೆ ಹಾಸುವ ನೇಯ್ಗೆಯ ಕಂಬಳಿಗಳು ಭಾರತ, ಚೀನ, ಅರೇಬಿಯ, ಪರ್ಶಿಯ ಮತ್ತು ಅಸ್ಸೀರಿಯ ದೇಶಗಳ ಜನರಲ್ಲಿ ಬಳಕೆಯಲ್ಲಿದ್ದವು.

ಕ್ರಿ.ಪೂ. ೫೩೮ರಲ್ಲಿ ಪರ್ಶಿಯನ್ನರು ಬ್ಯಾಬಿಲೋನನ್ನು ಗೆದ್ದ ಮೇಲೆ ಪರ್ಶಿಯಾದ ಕಂಬಳಿ ತಯಾರಿಕೆ ಏಳ್ಗೆ ಪಡೆಯಿತು.[೩೦] ಈ ಕಂಬಳಿಗಳನ್ನು ಆ ಕಾಲದ ಅತ್ಯಂತ ಐಶ್ವರ್ಯಯುತ ಸಾಧನೆಗಳೆಂದು ಪರಿಗಣಿಸಲಾಗಿತ್ತು. ಅಲೆಕ್ಸಾಂಡರನ ಸೈನಿಕರು ತಮ್ಮ ಪೂರ್ವ ದೇಶದ ಯುದ್ಧಗಳಿಂದ ಹಿಂತಿರುವಾಗ ಜೊತೆಯಲ್ಲಿ ಉತ್ತಮ ಜಮಖಾನೆಗಳನ್ನು ತಂದರೆಂದು ಹೇಳಲಾಗಿದೆ.[೩೧] ರಿಚರ್ಡ ಹ್ಯಾಕ್ಲೂಟನು ತನ್ನ "ಪ್ರಿನ್ಸಿಪಲ್ ನೇವಿಗೇಶನ್ಸ್ ಅಂಡ್ ಡಿಸ್ಕವರಿ ಆಫ್ ಇಂಗ್ಲೀಷ್‌ನೇಶನ್" ಕೃತಿಯಲ್ಲಿ ಈ ರೀತಿ ಹೇಳಿದ್ದಾನೆ.[೩೨] ' ಪ್ರಪಂಚದಲ್ಲಿ ಅತ್ಯುತ್ತಮವಾದ ಉಣ್ಣೆಯ ಜುಂಗು ಜುಂಗಿನ ಬಣ್ಣದ ಜಮಖಾನೆಗಳು ಅಲ್ಲಿ ದೊರೆಯುತ್ತವೆ. ಆ ಜುಂಗು ಕಂಬಳಿಗೆ ಬಣ್ಣ ಹಾಕುವ ಕಲೆಯನ್ನು ನೀವು ಕಲಿಯಬೇಕಾದರೆ ನಿಮ್ಮ ಎಲ್ಲ ಶಕ್ತಿ ಸಾಮರ್ಥ್ಯಗಳನ್ನು

ಉಪಯೋಗಿಸಬೇಕಾಗುತ್ತದೆ. ಅವುಗಳಿಗೆ ಹೇಗೆ ಬಣ್ಣ ಹಾಕಲಾಗಿದೆಯೆಂದರೆ ಮಳೆ, ಮಧ್ಯ ಅಥವಾ ಅನಿಲ ಅದನ್ನು ಅಳಿಸಲಾರವು. ಇದರಿಂದ ಅಂದು ಕಂಬಳಿನೇಯ್ಗೆ ಉತ್ತಮ ಸ್ವರೂಪದಲ್ಲಿತ್ತೆಂದು ತಿಳಿಯುತ್ತದೆ.

ಮಧ್ಯಯುಗದ ಯುದ್ಧಗಳಲ್ಲಿ ಜಯಶಾಲಿಗಳಾದವರು ಪರಾಜಿತಗೊಂಡ ರಾಷ್ಟ್ರಗಳಿಂದ ಕಂಬಳಿ, ಜಮಖಾನೆ ಮೊದಲಾದ ಅಮೂಲ್ಯ ಕಲಾವಸ್ತುಗಳನ್ನು ಕೊಳ್ಳೆ ಹೊಡೆದು ಕೊಂಡೊಯ್ದುದಕ್ಕೆ ದಾಖಲೆಗಳಿವೆ.[೨] ೧೨ನೇ ಶತಮಾನದ ವಚನ ಸಾಹಿತ್ಯದಲ್ಲಿ ಕಂಬಳಿ ದಾನದ ಬಗ್ಗೆ ಹೇಳಿಕೆಗಳಿವೆ. ವಿಜಯನಗರದ ಅಕ್ಕಪಕ್ಕದ ಗ್ರಾಮಗಳಲ್ಲಿ ಹುಡುಗರು ಕುರಿಗಳ ಮೇಲೆ ಸವಾರಿ ಮಾಡುತ್ತಿದ್ದರೆಂದು ಪೋರ್ತುಗೀಸ್ ಯಾತ್ರಿಕ ಪೇಯಜ್ ತಿಳಿಸಿದ್ದಾನೆ.[೩] ಹೀಗಾಗಿ ಆ ಕಾಲದಲ್ಲಿ ಕುರಿಗಳ ಪಾಲನೆ, ಕಂಬಳಿ ನೇಯ್ಗೆಯು ಪ್ರಮುಖವಾಗಿತ್ತೆಂದು ತಿಳಿಯುತ್ತದೆ.

### ೭.೧.೪ ಕಂಬಳಿನೇಯ್ಗೆ ವಿಧಾನ

ಕಂಬಳಿನೇಯ್ಗಯ ಮೊದಲಹಂತ ತುಪ್ಪಟ ಕತ್ತರಿಸುವುದಾಗಿದೆ. ವರ್ಷಕ್ಕೆ ಎರಡು ಬಾರಿ ತುಪ್ಪಟ ಕತ್ತರಿಸುತ್ತಾರೆ. ತುಪ್ಪಟವನ್ನು ನೀರಿನಲ್ಲಿ ತೊಳೆದು ಹಿಂಜುತ್ತಾರೆ. ಹಿಂಜ ತೆಗೆದ ನೂಲನ್ನು ಕಂಡಿಕೆಯಾಗಿ ಮಾಡಿಕೊಳ್ಳುತ್ತಾರೆ. ನೂಲಿನಲ್ಲಿ ೧)ಹರಿಗಂಬಳಿನೂಲು ೨)ಉಜ್ಜುಗಂಬಳಿನೂಲು ೩)ಸಣ್ಣ ಕಂಬಳಿನೂಲು ಎಂಬ ಅನೇಕ ವಿಧಗಳಿವೆ.[೪]

ಹುಣಸೆ ಬೀಜದಿಂದ ತಯಾರಿಸಿದ ಹಿಟ್ಟನ್ನು ಗಂಜಿಯಂತೆ ತಯಾರಿಸುತ್ತಾರೆ. ಇದನ್ನು ಕಂಬಳಿ ತಯಾರಿಕೆಯಲ್ಲಿ ಬಳಸುತ್ತಾರೆ. ಏಳು ಗೂಟಗಳ ಅರುಗಣಿ ಎಂಬ ಹಲಗೆಯಂಥ ಸಾಧನದಲ್ಲಿ ಉಣ್ಣೆಯ ನೂಲನ್ನು ಹಾಸು ಹೊಯ್ಯಲಾಗುತ್ತದೆ. ಹಾಸು ಹೊಯ್ದ ನೂಲನ್ನು ತಿಳಿಯಾದ ಹುಣಸೆ ಸರಿಯಲ್ಲಿ ಅದ್ದಿ ಬಿಸಿಲಿನಲ್ಲಿಟ್ಟು ಕುಂಚಿಗೆ ಎಂಬ ಉಪಕರಣದ ಸಹಾಯದಿಂದ ನೂಲನ್ನು ನಯಗೊಳಿಸಲಾಗುತ್ತದೆ.

ಹೋಳು ಎನ್ನುವ ಸಾಧನದಲ್ಲಿ ನೂಲನ್ನು ಜೋಡಿಸಿ ಮಗ್ಗದಲ್ಲಿಟ್ಟು ನೇಯಲಾಗುತ್ತದೆ. ನೇಯ್ದು ಸಿದ್ಧವಾದ ಕಂಬಳಿಯ ಹೋಳುಗಳಿಗೆ ಪುನಃ ಹುಣಸೆ ಸವರಿ ಬಿಸಲಿನಲ್ಲಿ ನೇತು ಹಾಕಿ ಒಣಗಿಸಲಾಗುತ್ತದೆ. ಈ ರೀತಿಯಾಗಿ ಕಂಬಳಿಯನ್ನು ನೇಯಲಾಗುತ್ತದೆ. ನೇಯ್ದ ಕಂಬಳಿಗಳನ್ನು ಆರು ರೀತಿಯಲ್ಲಿ ವರ್ಗೀಕರಿಸಲಾಗುತ್ತದೆ.[೫]

#### ೧) ಹುರಿಗಂಬಳ

ಮೃದುವಲ್ಲದ ತುಪ್ಪಟ ಹಾಗೂ ಸ್ವಲ್ಪ ದಪ್ಪನೆಯ ನೂಲಿನಿಂದ ಇದನ್ನು ನೇಯಲಾಗುತ್ತದೆ. ನೂಲು ಹುರಿಯ ಗಾತ್ರದಲ್ಲಿರುವುದರಿಂದ ಇದನ್ನು ಹುರಿಗಂಬಳಿ ಎನ್ನಲಾಗಿದೆ. ಹಳ್ಳಿಗಾಡುಗಳಲ್ಲಿ ವಾಸಿಸುವ ರೈತರು ಇದನ್ನು ಖರೀದಿಸುತ್ತಾರೆ.

#### ೨) ಉಜ್ಜುಗಂಬಳಿ

ಉಜ್ಜುಗಂಬಳಿಯನ್ನು ಸಾಮಾನ್ಯ ಬಂಡದಿಂದ ಮಾಡಲು ಬರುವುದಿಲ್ಲ. ನೇಕಾರರು ತರುವ ರಾಶಿ ಬಂಡದಲ್ಲಿ ಮೃದುವಾದುದನ್ನು ಆರಿಸಬೇಕು. ಸಾಮಾನ್ಯವಾಗಿ ಈ ತುಪ್ಪಟ ಕುರಿಯ ಮೊದಲನೆ ಕತ್ತರಿಯದಾಗಿರಬೇಕು. ಕುರಿಯ ಕತ್ತಿನ

ಭಾಗ ಅಥವಾ ಬೆನ್ನಿನ ಮೇಲಿನ ತುಪ್ಪಟ ಇದಕ್ಕೆ ಉತ್ತಮವಾಗಿರುತ್ತದೆ. ತುಪ್ಪಟವನ್ನು ಹಿಂಜುತ್ತಾರೆ. ಹಿಂಜಿದ ಹಂಜಿಯಿಂದ ನೂಲು ತೆಗೆಯುತ್ತಾರೆ. ಎಷ್ಟರಮಟ್ಟಿಗೆ ನೂಲು ಬರುತ್ತದೆಯೋ ಅಷ್ಟರಮಟ್ಟಿಗೆ ಕಂಬಳಿ ಉತ್ತಮವಾಗಿರುತ್ತದೆ. ಈ ಕಂಬಳಿಗಳಿಗೆ ಕೃತಕ ಬಣ್ಣ ಹಾಕುವುದಿಲ್ಲ.

**೩) ಸಣ್ಣ ಕಂಬಳಿ**

ಇದು ಶಾಲಿನ ರೀತಿಯ ಒರಟು ಹೊದೆಯುವ ವಸ್ತ್ರವಾಗಿದೆ. ಇದನ್ನು ತೊಳೆಗಂಬಳಿ ಎಂದೂ ಕರೆಯುತ್ತಾರೆ. ಕಾರಣ ಕೊಳೆಯಾದಾಗ ಇದನ್ನು ತೊಳೆದು ಶುಭ್ರಗೊಳಿಸಬಹುದಾಗಿದೆ. ಕೋಲಾರ, ದಾವಣಗೆರೆ, ರಾಣೆಬೆನ್ನೂರ ಮೊದಲಾದ ಕಡೆ ಇದನ್ನು ತಯಾರಿಸುತ್ತಾರೆ.

**೪) ಶಾಲು ಕಂಬಳಿ**

ಉತ್ತಮವಾದ ಉಣ್ಣೆಯಿಂದ ಸಣ್ಣದಾಗಿ ನೂಲು ತೆಗೆದು ಈ ವಸ್ತ್ರಗಳನ್ನು ನೇಯುತ್ತಾರೆ. ಶಾಲು ಕಂಬಳಿ ಅತ್ಯುತ್ತಮವಾದ ಹೊದೆಯುವ ವಸ್ತ್ರಗಳಾಗಿವೆ. ಇದನ್ನು ಮೇಲ್ದರ್ಜೆಯ ಜನ ಬಳಸುತ್ತಾರೆ.

**೫) ಗದ್ದುಗೆ ದಾವಳಿ**

ದಾವಳಿ ಎಂದರೆ ದವಳ ಅಥವಾ ಬಿಳಿ ಎಂದರ್ಥ. ಗದ್ದುಗೆ ಎಂದರೆ ಕೂರುವ ಸ್ಥಳ. ಆದ್ದರಿಂದ ಗದ್ದುಗೆ ದಾವಳೆ ಎಂದರೆ ಕೂಡಲು ಉಪಯೋಗಿಸುವ ಅಚ್ಚಬಿಳಿಯ ಕಂಬಳಿಯಾಗಿದೆ. ಈ ಕಂಬಳಿ ಧಾರ್ಮಿಕ ಗುರುಗಳ ಗದ್ದುಗೆಗೆ ಉಪಯೋಗಿಸುತ್ತಾರೆ. ಪೂಜಾ ವಸ್ತುಗಳನ್ನಿಡುವ ಚೀಲಗಳನ್ನು ಇದರಿಂದ ತಯಾರಿಸುತ್ತಾರೆ.

**೬) ಕರಿಯ ಕಂತೆ**

ಕುರುಬರ ಗುರು ರೇವಣಸಿದ್ಧೇಶ್ವರ ಕುರಿಕಾಯುತ್ತಿದ್ದನೆಂಬ ನಂಬಿಕೆಯಿದೆ. ರೇವಣಸಿದ್ಧನಿಗೆ ಉಣ್ಣೆಯ ವಸ್ತ್ರ ಬಹಳ ಪ್ರಿಯವಾಗಿತ್ತು. ಕುರುಬರ ಗುರುಮಠಗಳಲ್ಲಿ ಉಣ್ಣೆಯ ಕರಿಯ ವಸ್ತ್ರಗಳನ್ನು ಬಳಸುತ್ತಾರೆ. ಕರಿಯ ಕಂತೆಯನ್ನು ಮಾಡುವವರು ಒಡೆಯರ ಮನೆತನದವರು. ನಾಲ್ಕೈದು ಜನ ಮಡಿಯಿಂದ ಉಪವಾಸವಿದ್ದು ಅಚ್ಚಕರಿಯ ತುಪ್ಪಟವನ್ನು ಕೈಯಲ್ಲಿಯೇ ಹಿಂಜುತ್ತಾರೆ, ಅಲ್ಲದೆ ಕೈಯಲ್ಲಿಯೇ ಉಳಿ ಹೊಸೆದು ಅಣಿಮಾಡಿ ವಸ್ತ್ರ ನೇಯುತ್ತಾರೆ. ಇದನ್ನು ರೇವಣಸಿದ್ಧೇಶ್ವರನ ಗರ್ಭಗುಡಿಯಲ್ಲಿ ನಡೆಸುತ್ತಾರೆ.

ಕುರುಬರಲ್ಲಿ ಇಂದಿಗೂ ಕಂಬಳಿನೇಯ್ಗೆ ರೂಢಿಯಲ್ಲಿದೆ. ಕಂಬಳಿಗಳಿಗೆ ಬಹಳ ಬೆಲೆ ನೀಡಲಾಗುತ್ತದೆ. ಕಂಬಳಿಯ ಮೇಲೆ ಕೂಡುವುದು, ಕೂಡಿಸುವುದು ಶ್ರೇಷ್ಠ ಎಂಬ ಮನೋಭಾವವಿದೆ. ಗೊರವಯ್ಯಗಳು ನಿಲುವಂಗಿ ಆಕಾರದಲ್ಲಿ ಕಂಬಳಿಯನ್ನು ನೇಯ್ದು ಅದಕ್ಕೆ ಬಣ್ಣದ ಪಟ್ಟಿಗಳಿಂದ ಅಲಂಕರಿಸಿರುತ್ತಾರೆ. ಡೊಳ್ಳು ಬಾರಿಸುವಾಗ ಕುರುಬರು ಕುತ್ತಿಗೆಗೆ ಕಂಬಳಿಯನ್ನು

ಹಾಕಿಕೊಳ್ಳುತ್ತಾರೆ. ಪಲ್ಲಕ್ಕಿ ಹೊತ್ತವರ ಹೆಗಲ ಮೇಲೆ ಹಾಗೂ ಆರತಿ ಹಿಡಿದು ಬರುವ ಸುಮಂಗಲೆಯರ ತಲೆ ಮೇಲೆ ಕಂಬಳಿ ಇರಲೇಬೇಕೆಂಬ ಸಂಪ್ರದಾಯವಿದೆ. ಪ್ರತಿಯೊಂದು ಸಮುದಾಯದವರೂ ಕಂಬಳಿಯನ್ನು ಪೂಜೆಯ ಸಮಯದಲ್ಲಿ ನೆಲಕ್ಕೆ ಹಾಸಲು ಬಳಸುವುದು ಕಂಡುಬರುತ್ತದೆ. ಹೀಗಾಗಿ ಕಂಬಳಿ ಬಹುಜನರ ಉಪಯೋಗಿ ವಸ್ತ್ರವಾಗಿರುವುದರಿಂದ ಇಂದಿಗೂ ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡಿದೆ ಎಂದು ಹೇಳಬಹುದಾಗಿದೆ.

ಆಧುನಿಕ ಯುಗದಲ್ಲಿ ಹತ್ತಿ, ರೇಷ್ಮೆ ವಸ್ತ್ರಗಳ ಪೈಪೋಟಿಯಿಂದಾಗಿ ಕಂಬಳಿ ವಸ್ತ್ರದ ಬೇಡಿಕೆ ಕಡಿಮೆಯಾಗಿದೆ. ಆದರೂ ಉತ್ತರ ಕರ್ನಾಟಕದ ಬೆಳಗಾವಿ, ಬಿಜಾಪುರ, ಬೀದರ, ರಾಯಚೂರು, ಕೊಪ್ಪಳ, ಗುಲಬರ್ಗಾ ಮೊದಲಾದ ಜಿಲ್ಲೆಗಳಲ್ಲಿ ಕಂಬಳಿನೇಯ್ಗೆಯ ಕೇಂದ್ರಗಳಿವೆ. ಕಿನ್ನಾಳದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಐದರಿಂದ ಆರು ರೂಪಾಯಿಗಳಿಗೆ ಕಂಬಳಿ ಮಾರಾಟ ಮಾಡುತ್ತಿದ್ದರು. ಇಂದು ಅನೇಕ ಕೇಂದ್ರಗಳು ಮುಚ್ಚಲ್ಪಟ್ಟಿವೆ. ಇಂದಿಗೂ ಕೈಮಗ್ಗಗಳ ಮೂಲಕ ಕಂಬಳಿನೇಯ್ಗೆ ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಕುರುಬರಲ್ಲಿ ಕುರಿಸಾಕಾಣಿಕೆ ಪ್ರಮುಖವಾಗಿದೆ. ಕುರಿಸಾಕಾಣಿಕೆ ಮಾಡುವ ಕುರುಬರಲ್ಲಿ ಮಾತ್ರ ಕಂಬಳಿನೇಯ್ಗೆ ಕಂಡುಬರುತ್ತದೆ. ಸಂಗನಹಾಳ, ಯಲಬುರ್ಗಾ, ಕೊಪ್ಪಳ, ಬಿಸರಳ್ಳಿ, ಹಿರೇಸಿಂದೋಗಿ, ಕುಷ್ಟಗಿ, ಮುಧೋಳ, ಸಂಕನೂರು, ಆಡೂರು, ಕುಕನೂರು, ಗಂಗಾವತಿ, ಸಿದ್ಧಾಪುರ, ಇರಕಲ್‌ಗಡ, ಕುದುರೆಮೋತಿ, ಮಂಗಳೂರು, ಕಿನ್ನಾಳ, ಗೊಂಡಬಾಳ ಮೊದಲಾದ ಗ್ರಾಮಗಳಲ್ಲಿ ಕಂಬಳಿನೇಯ್ಗೆಯಿದೆ. ಬಿಸರಳ್ಳಿಯಲ್ಲಿ ಕಂಬಳಿ ನೇಯ್ಗೆಯ ಕೇಂದ್ರವಿದೆ. ಕಂಬಳಿ ನೇಯ್ಗೆಗೆ ಬ್ಯಾಂಕುಗಳು ವಿವಿಧ ರೀತಿಯ ಸಾಲ ಸೌಲಭ್ಯ ನೀಡಿರುವುದು ಕಂಡುಬರುತ್ತದೆ. ಸಾಧಾರಣ ಮಟ್ಟದಲ್ಲಿ ಗೃಹ ಕೈಗಾರಿಕೆಯಾಗಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಒಟ್ಟಾರೆ ಕುರಿ ಸಾಕಾಣಿಕೆಯ ಜೊತೆಗೆ ಕಂಬಳಿನೇಯ್ಗೆಯು ಕುರುಬರ ಆರ್ಥಿಕ ಸ್ಥಿತಿಯಲ್ಲಿ ಪ್ರಮುಖ ಪಾತ್ರವಹಿಸುತ್ತಿರುವುದು ಕಾಣಬಹುದು.

### ೭.೧.೫ ವ್ಯಾಪಾರ

ಮಾನವನ ಆರ್ಥಿಕ ಜೀವನವನ್ನು ರೂಪಿಸಿದ ಅನೇಕ ಅಂಶಗಳಲ್ಲಿ ವ್ಯಾಪಾರವೂ ಒಂದಾಗಿದೆ. ವ್ಯಾಪಾರ ವೃತ್ತಿಯಿಂದ ಸಮಾಜದ ಸ್ಥಿತಿ, ಆರ್ಥಿಕ ಸ್ಥಿತಿಗಳು ಒಂದು ಆಕಾರವನ್ನು ಪಡೆಯುತ್ತವೆ. ಇದರಿಂದಾಗಿ ಪ್ರಾಚೀನ ಕಾಲದಿಂದಲೂ ವ್ಯಾಪಾರ ಪ್ರಮುಖ ಸ್ಥಾನ ಪಡೆದುಕೊಂಡಿತ್ತೆಂದು ತಿಳಿಯುತ್ತದೆ. ರಾಜಧಾನಿ, ಉಪವಿಭಾಗಗಳ ಮುಖ್ಯ ಸ್ಥಳಗಳು, ಪಟ್ಟಣಗಳು ಅಂದಿನ ಪ್ರಮುಖವಾದ ವ್ಯಾಪಾರಿ ಕೇಂದ್ರಗಳಾಗಿದ್ದವು.[೩೭] ಈ ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡಿದ್ದ ವರ್ತಕರಿದ್ದರು. ವರ್ತಕರಲ್ಲಿ ವಡ್ಡ, ವ್ಯವಹಾರಿ, ಮುಮ್ಮರಿದಂಡ, ಪೇಳಾವಿಗಶೆಟ್ಟಿ, ಶೆಟ್ಟಿ, ಬಣಂಜಿತ, ಸೆಟ್ಟಿಗುತ್ತ, ಗವಣೆ, ಗಾತ್ರಿಗ, ನಾನಾದೇಶಿ, ಉಭಯ ನಾನಾದೇಶಿ ಮೊದಲಾದವರು ಪ್ರಮುಖರಾಗಿದ್ದರು.[೩೭]

ವರ್ತಕರಲ್ಲಿ ವಿನಿಯಮ ವೃತ್ತಿಯವರು ಹಾಗೂ ಉತ್ಪಾದನಾ–ವಿನಿಮಯ ವೃತ್ತಿಯವರೆಂದು ಎರಡು ಭಾಗಗಳಿವೆ.[೩೮] ಉತ್ಪಾದಕರಿಂದ ಉತ್ಪಾದಿಸಲ್ಪಟ್ಟ ವಸ್ತುಗಳನ್ನು ಜನರಿಗೆ ಪೂರೈಕೆ ಮಾಡುವ ಕಾರ್ಯ ವಿನಿಮಯ ವೃತ್ತಿಗಳದ್ದಾದರೆ, ಉತ್ಪಾದನೆ ಹಾಗೂ ಪೂರೈಕೆ ಎರಡೂ ಕಾರ್ಯಗಳನ್ನು ಜೊತೆಯಾಗಿ ನಿರ್ವಹಿಸುವ ಕಾರ್ಯ ಉತ್ಪಾದನಾ ವಿನಿಮಯ ವೃತ್ತಿಗಳದ್ದಾಗಿದೆ. ಇವರು ತಮ್ಮ ವೃತ್ತಿಯ ಅನುಕೂಲಕ್ಕಾಗಿ ಸಹಕಾರ ಸಂಘ (ಶ್ರೇಣಿ)ಗಳನ್ನು ಸ್ಥಾಪಿಸಿಕೊಂಡರು. ಆದರೆ ಎಲ್ಲ ವೃತ್ತಿಯವರೂ

ಸಂಘಗಳನ್ನು ನಿರ್ಮಿಸಿಕೊಳ್ಳಲಿಲ್ಲ. ಕೆಲವು ಪ್ರಮುಖ ವೃತ್ತಿಯವರು ಮಾತ್ರ ಸಂಘಗಳನ್ನು ನಿರ್ಮಿಸಿಕೊಂಡರು. ಸಮಾನ ವೃತ್ತಿಯವರು ತಮ್ಮ ಸಮಾಜದ ಅಥವಾ ಸಮುದಾಯದ ಜನರೊಂದಿಗೆ ಸೇರಿ ಕಟ್ಟಿದ ಶ್ರೇಣಿಗಳೇ ಸಂಘಗಳೆಂದು ಕರೆಯಲ್ಪಟ್ಟವು.[೩೯] ಸಹಕಾರ ತತ್ವಕ್ಕಿರುವ ಮಹತ್ವವನ್ನು ಮನಗಂಡು ಈ ಸಂಘಗಳನ್ನು ಸ್ಥಾಪಿಸದರೆಂದು ತಿಳಿಯುತ್ತದೆ.

ವೇದಕಾಲದಲ್ಲಿ ಗುಂಪು ಅಥವಾ ಸಮೂಹ ಎಂದು ಗುರುತಿಸಲ್ಪಡುತ್ತಿದ್ದ ಸಂಘಗಳು ಕ್ರಮೇಣ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟವು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಶ್ರೇಣಿ, ಗಣ, ವ್ರಾತ ಮೊದಲಾದ ಪರ್ಯಾಯ ಪದಗಳನ್ನು ಬಳಸಿದ್ದಾರೆ.[೪೦] ಹಾಗೆಯೇ ಮಧ್ಯಕಾಲದ ಶಾಸನಗಳು ಕೊತ್ತಳಿ, ಒಕ್ಕಲು, ಹಿಟ್ಟು, ಸಮಯ, ಸೇಣಿ, ಸಂಖ್ಯೆ ಮೊದಲಾದ ಹೆಸರುಗಳನ್ನು ಉಲ್ಲೇಖಿಸುತ್ತದೆ. [೪೧] ಈ ಸಂಘ ಸೂಚಿ ಪದಗಳ ಪೂರ್ವದಲ್ಲಿ ಹೆಚ್ಚಾಗಿ ವೃತ್ತಿ ಸೂಚಿ ಪದಗಳಿರುವುದು ಕಂಡುಬರುತ್ತದೆ.

ಪ್ರಾಚೀನ ಕಾಲದ ಸಂಘಗಳು ಒಂದು ವರ್ಣದ ವೃತ್ತಿಗಾರರ ಅಥವಾ ಸಣ್ಣ ವ್ಯಾಪಾರಿಗಳ ಸಂಘಟನೆಯನ್ನು ಸೂಚಿಸುತ್ತಿದ್ದರೆ, ಮಧ್ಯಕಾಲದಲ್ಲಿ ಒಂದು ಜಾತಿಯ ಪರ್ಯಾಯ ಪದಗಳಂತೆ ಬಳಕೆಯಾಗತೊಡಗಿದವು.[೪೨] ಅದರಲ್ಲೂ ಈ ಉತ್ಪಾದಕ – ವಿನಿಮಯ ವೃತ್ತಿಗಳೆರಡನ್ನೂ ಅವಲಂಭಿಸಿದ್ದ ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಮೇದಾರ, ಕುರುಬ ಮೊದಲಾದ ಸಮುದಾಯದವರು ತಮ್ಮದೇ ಆದ ಸಂಘಗಳನ್ನು ರಚಿಸಿಕೊಂಡಿದ್ದರು. ಅದೇ ರೀತಿ ಕುರುಬರು ಸ್ಥಾಪಿಸಿಕೊಂಡ ಸಂಘಕ್ಕೆ ಕುರುಬಸೇಣಿ ಎಂದು ಗುರುತಿಸಲಾಗಿದೆ.[೪೩]

ಕುರುಬರು ತಮ್ಮ ವ್ಯಾಪಾರ ವೃತ್ತಿಗೆ ಸಂಬಂಧಿಸಿದಂತೆ ಮಾಡಿಕೊಂಡ ಸಂಘಕ್ಕೆ ಕುರುಬಸೇಣಿ ಎನ್ನಲಾಗಿದೆ. ತಮ್ಮ ಸ್ವಹಿತ ರಕ್ಷಣೆ, ವೃತ್ತಿಸೌಕರ್ಯ, ಸಾಮಾಜಿಕ ಸ್ಥಾನಮಾನಗಳಿಗಾಗಿ ಈ ಸಂಘವನ್ನು ಸ್ಥಾಪಿಸಿಕೊಂಡರು. ಇದರ ಸದಸ್ಯರು ವೈಯಕ್ತಿಕವಾಗಿ ಸಾಂಘಿಕವಾಗಿ ಉತ್ಪಾದನೆ, ಮಾರಾಟಗಳೆರಡನ್ನೂ ನಿರ್ವಹಿಸುತ್ತಿದ್ದರಿಂದ ಇವರನ್ನು ಉತ್ಪಾದನಾ–ವಿನಿಮಯ ವೃತ್ತಿಗಾರರೆಂದು ಗುರುತಿಸಲಾಗಿದೆ. ಕುರಿಯ ಉಣ್ಣೆಯಿಂದ ಕಂಬಳಿ ತಯಾರಿಸುವುದಲ್ಲದೆ, ಮಾರಾಟ ಮಾಡಲು ಕುರುಬಸೇಣಿ ಪ್ರಮುಖ ಮಾರ್ಗವಾಗಿತ್ತೆಂದು  ಹೇಳಬಹುದಾಗಿದೆ.

ಕುರುಬಸೇಣಿಯಲ್ಲಿ ಒಬ್ಬ ಮುಖ್ಯಸ್ಥನಿರುತ್ತಿದ್ದನು. ವರ್ತಕರೆಲ್ಲ ಸೇರಿ ಚರ್ಚಿಸಿ ಸೂಚಿಸಿದ ವ್ಯಕ್ತಿಯನ್ನು ಮುಖ್ಯಸ್ಥನೆಂದು ಅರಸ ನೇಮಿಸುತ್ತಿದ್ದನು. ಪಟ್ಟಣಸ್ವಾಮಿ, ಮಂಡಳಸ್ವಾಮಿ, ನಾಡಸ್ವಾಮಿಗಳೆಂಬ ಸ್ಥಾನಗಳಿಗೆ ನೇಮಿಸಲಾಗುತ್ತಿತ್ತು. ಕೆಲವೆಡೆ ಪಟ್ಟಣದ ರಾಜನು ತನಗೆ ವಿವೇಕಿಯೆಂದು ಕಂಡು ಬಂದ ವ್ಯಕ್ತಿಗೆ ಪಟ್ಟಣಸ್ವಾಮಿ ಪಟ್ಟ ನೀಡುತ್ತಿದ್ದನು. ಉದಾ: ಪಲ್ಲವಾದಿತ್ಯನು ಕರವಯ್ಯ ಎಂಬುವವನಿಗೆ 'ಮುಮ್ಮಡಿಗವರಿ ಪಲ್ಲವಾದಿತ್ಯ ನೊರಿಂಬ ಸೆಟ್ಟಿ' ಎಂಬ ಹೆಸರನ್ನು ನೀಡಿ ಪಟ್ಟವನ್ನು ಕಟ್ಟಿದನಲ್ಲದೆ, ಕುದುರೆ, ಕೊಡೆ, ಕುಂಚ, ತಳಿಗೆ, ಗದ್ದಿಗೆ ಮೊದಲಾದವುಗಳನ್ನು ನೀಡಿದನೆಂದು ಒಂದು ಶಾಸನ ಉಲ್ಲೇಖಿಸುತ್ತದೆ.[೪೪] ಇದರಿಂದ ರಾಜನು ವರ್ತಕ ಶ್ರೇಣಿಗಳಲ್ಲಿ ಆಸಕ್ತಿ ಹೊಂದಿದ್ದನೆಂದು ತಿಳಿಯುತ್ತದೆ. ಯಾವುದೇ ತೀರ್ಮಾನವನ್ನು ಕೈಗೊಳ್ಳಲು ಎಲ್ಲ ವರ್ತಕರು ಪಟ್ಟಣಸ್ವಾಮಿಯ ನೇತೃತ್ವದಲ್ಲಿ ಸಭೆ ಸೇರಿ ಚರ್ಚಿಸುತ್ತಿದ್ದರಲ್ಲದೇ, ಪಟ್ಟಣ ಸ್ವಾಮಿಯ ತೀರ್ಮಾನವೇ ಅಂತಿಮವಾಗಿತ್ತು.

ಕುರುಬಸೇಣಿಯು ತನ್ನ ಸದಸ್ಯರಿಂದ ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರವನ್ನು ಪಡೆದುಕೊಂಡಿತ್ತು. ಬೇರೆ ಪ್ರದೇಶಗಳಿಂದ ಅಥವಾ ದೇಶಗಳಿಂದ ಬಂದ ವರ್ತಕರಿಗೆ ವಸತಿ, ಊಟ ಮೊದಲಾದ ಸೌಕರ್ಯಗಳ ಏರ್ಪಾಟು ಮಾಡುತ್ತಿತ್ತು.[೪೫] ಹಾಗೆಯೇ

ನ್ಯಾಯಾ ತೀರ್ಮಾನ ಮಾಡುವ ಕಾರ್ಯವನ್ನು ಕೈಗೆತ್ತಿಕೊಳ್ಳುತ್ತಿತ್ತು. ಪಟ್ಟಣದ ಹೊರ ವಲಯದಲ್ಲಿ ಸಂತೆ ನಿರ್ಮಿಸಿ ವ್ಯಾಪಾರ ನಡೆಸುತ್ತಿದ್ದರು. ಕಟ್ಟಡ ಅಂಗಡಿ, ಬಯಲು ಅಂಗಡಿ, ಧರ್ಮದಂಗಡಿ, ದೇವರಂಗಡಿ ಎಂಬುವುಗಳನ್ನು ನಿರ್ಮಿಸುತ್ತಿದ್ದರು. ಸಂತೆದಿನ ಹೊರಪೇಟೆಯಲ್ಲಿ ಉಳಿದ ದಿನಗಳದಂದು ಒಳಪೇಟೆಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು.[೪೬] ವರ್ತಕರು ಪಾದಮಾರ್ಗ, ಜಲಮಾರ್ಗಗಳ ಮೂಲಕ ಒಂಟಿಯಾಗಿ ಅಥವಾ ಗುಂಪಾಗಿ ಬೇರೆ ಬೇರೆ ಸ್ಥಳಗಳಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ತಮ್ಮ ಸರಕುಗಳನ್ನು ಗಂಟು ಮೂಟೆಗಳಲ್ಲಿ ಕಟ್ಟಿ ಎತ್ತು, ಕತ್ತೆ, ಕೋಣ, ಕುದುರೆ, ಬಂಡಿಗಳು ಅಥವಾ ತಲೆ, ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ.[೪೭] ಒಂದು ವಸ್ತುವಿನ ಉತ್ಪಾದನೆ ಮತ್ತು ಮಾರಾಟ ಮಾಡುವ ಕಾರ್ಯವನ್ನು ನಿರ್ವಹಿಸುತ್ತಿದ್ದರಿಂದ ಕುರುಬಸೇಣಿಗೆ ಅಧಿಕ ಲಾಭವಾಗುವ ಸಾಧ್ಯತೆಯಿತ್ತೆಂದು ಹೇಳಬಹುದಾಗಿದೆ.

ವರ್ತಕರು ವ್ಯಾಪಾರಕ್ಕಾಗಿ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಆದರೆ ಮಾರ್ಗ ಮಧ್ಯದಲ್ಲಿ ದಾರಿಗಳ್ಳರ ದಾಳಿಗೆ ತುತ್ತಾಗುತ್ತಿದ್ದರು. ಈ ದಾರಿಗಳ್ಳರ ಉಪಟಳದಿಂದ ಸರಕು, ಹಣ, ಪ್ರಾಣರಕ್ಷಣೆ ಮಾಡಿಕೊಳ್ಳಲು ವರ್ತಕರು ಯೋಧ ಪಡೆಯನ್ನು ಹೊಂದಿದ್ದರೆಂದು ತಿಳಿಯುತ್ತದೆ. ಆದರೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಮೇವುಂಡಿ ಶಾಸನದಲ್ಲಿ ಜಗತೀತಳ ವಿಖ್ಯಾತ, ಭುವನ ಪರಾಕ್ರಮನ್ಯತರು, ಕಾಡಾನೆ ಮಲ್ಲರು, ಅಡಕಂದರ್ಪರು, ದೋಂಟವಿಳಾಸರು, ಮರೆವುಗೆ ಕಾವರು, ಚಲದಂತ ರಾಮರು, ಸಾಹಸ ಶೌರ್ಯರು, ರಣರಂಗ ಭೀಮರು, ನುಡಿದಂತೆ ಗಂಡರು, ಕದನ ಪ್ರಚಂಡರು, ಏಕಾಂಗವೀರರು ಶರಣಾಗತ ವಜ್ರಪಂಜರರು, ಬಿಲ್ಲೇಶ್ವರದೇವರ ಪಾದಾರಾಧಕರು, ಮಪ್ಪ ಕಲ್ಲಕೇತ ಬೋವ ಮುಖ್ಯವಾಗಿ ಬಿಲ್ಲ ಮೂನೂರ್ವರು ಎಂದು ಉಲ್ಲೇಖಿಸಿದೆ.[೪೮] ಇದರಿಂದ ಬಿಲ್ಲ ಮೂನೂರ್ವರರು ಗ್ರಾಮದ ಹತ್ತಿರದ ಅರಣ್ಯದಲ್ಲಿ ವಾಸಿಸುತ್ತಿದ್ದು, ವರ್ತಕರು ಕರೆದಾಗ ರಕ್ಷಣೆಯ ನೆರವಿಗೆ ಹೋಗುತ್ತಿದ್ದರೆಂದು ತಿಳಿಯುತ್ತದೆ. ವರ್ತಕರು ತಮ್ಮ ರಕ್ಷಣೆ ಮಾಡಿದ ಯೋಧರ ಕುಟುಂಬಕ್ಕೆ ಸಹಾಯ ಮಾಡುತ್ತಿದ್ದರು. ವೀರರನ್ನು ಬಿರುದು ನೀಡಿ ಸನ್ಮಾನಿಸುತ್ತಿದ್ದರು. ಅಲ್ಲದೆ ಕೆಲವು ವರ್ತಕರು ಸ್ವತಃ ವೀರರು, ಸಾಹಸಿಗಳಾಗಿದ್ದರು. ಆಕಳು, ಕುರಿ, ಸ್ತ್ರೀಯರ ಅಪಹರಣವಾದಾಗ ಅವುಗಳನ್ನು ರಕ್ಷಿಸಲು ಹೋರಾಡಿ ಮರಣ ಹೊಂದಿದ ಬಗ್ಗೆ ಶಾಸನಗಳು, ವೀರಗಲ್ಲುಗಳು ತಿಳಿಸುತ್ತವೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಮುರ ಗ್ರಾಮದ ಸೋಮೇಶ್ವರ ದೇವಾಲಯದಲ್ಲಿ ಕುರಿಗಳ ರಕ್ಷಣೆಗಾಗಿ ಹೋರಾಡಿ ಪ್ರಾಣಬಿಟ್ಟ ವೀರನ ವೀರಗಲ್ಲುಯಿದೆ. ಇದರಿಂದ ಕುರುಬಸೇಣಿಯ ವರ್ತಕರು ವೀರರಾಗಿದ್ದರಲ್ಲದೆ ತಮ್ಮದೇ ಆದ ಪ್ರತ್ಯೇಕ ವೀರಪಡೆಯನ್ನು ಹೊಂದಿದ್ದರೆಂದು ತಿಳಿಯುತ್ತದೆ.

ಕುರುಬಸೇಣಿಯ ವರ್ತಕರು ವ್ಯಾಪಾರದಿಂದ ಬಂದ ಹಣವನ್ನು ಧಾರ್ಮಿಕ ಕಾರ್ಯಗಳಿಗೂ ವಿನಿಯೋಗಿಸುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ದೇವಾಲಯ ನಿರ್ಮಿಸುವುದರಿಂದ ಪುಣ್ಯ ಲಭಿಸುವುದೆಂಬ ಭಾವನೆಯಿತ್ತು, ಅದರಿಂದಾಗಿ ಅನೇಕ ದೇವಾಲಯಗಳಲ್ಲದೆ, ದೇವಾಲಯದ ಮುಂದೆ ದೀಪಮಾಲೆ ಕಂಬ ನಿಲ್ಲಿಸುವ, ಮಂಟಪ, ಸುಕನಾಸಿ ಮೊದಲಾದವುಗಳನ್ನು ನಿರ್ಮಿಸುವ ಕಾರ್ಯಕೈಗೊಂಡರು. ಅನೇಕ ವಿಗ್ರಹಗಳ, ಲಿಂಗಗಳ ಪ್ರತಿಷ್ಠಾಪನೆ ಮಾಡಿದರು. ಊರಿಂದೂರಿಗೆ ಬರುತ್ತಿದ್ದ ಅತಿಥಿಗಳ ಅಧ್ಯಯನ ಮಾಡುವ ವಿದ್ಯಾರ್ಥಿಗಳ ಭೋಜನ ವ್ಯವಸ್ಥೆಗಾಗಿ ಅನ್ನಛತ್ರ, ಮಠಗಳನ್ನು ನಿರ್ಮಿಸಿದ್ದರು.[೪೯] ಕುರುಬಸೇಣಿಯ ವರ್ತಕರು ದಾನಿಗಳಾಗಿದ್ದರೆಂದೂ ತಿಳಿಯುತ್ತದೆ. ಕಲ್ಯಾಣ ಚಾಲುಕ್ಯರ ಶಾಸನದಲ್ಲಿ ಕುರುಬ ಸೇಣಿಗನೆಂಬ ದಾನಿಯ ಹೆಸರನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ.[೫೦] ಅದೇ ರೀತಿ ಇನ್ನೊಂದು ಶಾಸನದಲ್ಲಿ 'ನೂಲ

ಪರ್ವಕ್ಕೆ ವರ್ಷಂಪ್ರತಿ ಕುರುಬಸೇಣಿಗರೊಕ್ಕ ಲೊಕ್ಕಲು ವಿಸವಯ್ಪಂ ಕೊಟ್ಟರ್ ಎಂದು ಉಲ್ಲೇಖಿಸಿದೆ.[೫೦] ಇದರಿಂದ ಪ್ರತಿವರ್ಷವೂ ನೂಲಹಬ್ಬಕ್ಕೆ ಕುರುಬಸೇಣಿಯಿಂದಲೇ ಎಣ್ಣೆಯ ನೂಲನ್ನು ಕೊಡುತ್ತಿದ್ದರು ಎಂದು ತಿಳಿಯುತ್ತದೆ. ಅಲ್ಲದೆ ಕೆಲವರು ತಮ್ಮ ಸರಕುಗಳ ಮೇಲಿನ ಸುಂಕವನ್ನು ದೇವಾಲಯಗಳಿಗೆ ದತ್ತಿಯಾಗಿ ಬಿಡುತ್ತಿದ್ದರು. ಹೀಗೆ ಮಧ್ಯಕಾಲದ ವರ್ತಕರು ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ದಾನ ಮಾಡಿರುವುದು ಕಂಡುಬರುತ್ತದೆ.

ಪ್ರಾಚೀನ ಹಾಗೂ ಮಧ್ಯಕಾಲದಲ್ಲಿ ಪ್ರಮುಖ ಪಾತ್ರವಹಿಸಿದ್ದ ಕುರುಬರ ಸೇಣಿಯು ಕುರುಬರ ವ್ಯಾಪಾರಕ್ಕೆ ಸುಗಮ ದಾರಿಯನ್ನು ನಿರ್ಮಿಸಿಕೊಟ್ಟಿತ್ತು. ಉತ್ಪಾದನ-ವಿನಿಮಯ ಎರಡೂ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಕುರುಬರು ಕುರುಬಸೇಣಿಯಂತಹ ಸಹಕಾರ ಸಂಘದ ಮೂಲಕ ಅಧಿಕ ಲಾಭವನ್ನು ಪಡೆದುಕೊಂಡಿದ್ದರೆಂದು ತಿಳಿಯುತ್ತದೆ. ಆರ್ಥಿಕ ಜೀವನ ಸುಗಮವಾಗಿದ್ದರಿಂದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಅನುಕೂಲಕರವಾಗಿತ್ತು. ಇದರಿಂದಾಗಿ ಕುರುಬರು ಉತ್ತಮ ಸ್ಥಾನ ಪಡೆಯಲು ಸಾದ್ಯವಾಗಿತ್ತೆಂದು ಹೇಳಬಹುದಾಗಿದೆ. ಒಟ್ಟಾರೆ ಸಹಕಾರ ತತ್ವದ ಆಧಾರದ ಮೇಲೆ ಸೃಷ್ಟಿಗೊಂಡ ವರ್ತಕ ಸಂಘಗಳು ಅಂದು ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವೆಂದು ಸ್ಪಷ್ಟವಡುತ್ತದೆ.

ಮಧ್ಯಯುಗದಲ್ಲಿ ಕುರುಬಸೇಣಿಯಂತಹ ಸಹಕಾರ ಸಂಘಗಳು ಬ್ರಿಟಿಷರ ಕಾಲದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ಆದರೆ ಕ್ರಿ.ಶ.೧೯೦೪ರಲ್ಲಿ ಆಂಗ್ಲ ಸರ್ಕಾರ ಕೋ-ಆಪರೇಟಿವ್ ಸೊಸೈಟಿ ಯ್ಯಾಕ್ಟ್‌ನ್ನು ಜಾರಿಗೊಳಿಸಿತು. ಆದರೆ ಭಾರತೀಯರು ಸಹಕರಿಸಿಲ್ಲ. ಸರ್.ಜೆ.ಮೆಕಾಲಿಯವರು ಎಲ್ಲೆಡೆ ಸಂಚರಿಸಿ ವಿಫಲರಾದರು. ಆಗ ಗದಗ ಜಿಲ್ಲೆಯ ಕಣಗಿನಹಾಳ ಗ್ರಾಮದ ಸಿದ್ಧನಗೌಡರು ಕೃಷಿ ಪತ್ತಿನ ಸಹಕಾರಿ ಸಂಘವನ್ನು ಪ್ರಾರಂಭಿಸಿದರು.[೫೧] ಹೀಗಾಗಿ ಕಣ್ಮರೆಯಾಗುತ್ತಿದ್ದ ಸಹಕಾರಿ ಸಂಘಗಳನ್ನು ಪುನಃ ಸ್ಥಾಪಿಸಲು ನಾಂದಿ ಹಾಡಿದವರು ಕುರುಬರಾದ ಸಿದ್ಧನಗೌಡರು ಎಂಬುದು ವಿಶೇಷ. ಇಂದಿಗೂ ಅವರ ಹೆಸರಿನಲ್ಲಿ ಅನೇಕ ಸಹಕಾರಿ ಸಂಘಗಳನ್ನು ಕಾಣಬಹುದಾಗಿದೆ.

ಆಧುನಿಕ ಕಾಲದ ಕೈಗಾರಿಕೀಕರಣದ ಪ್ರಭಾವದಿಂದಾಗಿ ಕುರುಬರ ಆರ್ಥಿಕ ಜೀವನ ಪರಿವರ್ತನೆಗೊಂಡಿರುವುದು ಕಂಡುಬರುತ್ತದೆ. ಕೃಷಿ, ಕುರಿ ಸಾಕಾಣಿಕೆ, ಕಂಬಳಿ ನೇಯ್ಗೆಯೊಂದಿಗೆ ವ್ಯಾಪಾರವನ್ನು ಕೈಗೊಂಡಿದ್ದಾರೆ. ಅನೇಕರು ದಲ್ಲಾಳಿ ವ್ಯಾಪಾರ ಮಾಡುವುದು ಕಂಡು ಬರುತ್ತದೆ. ಬೀರಲಿಂಗೇಶ್ವರ ಆಗ್ರೊ ಏಜೆನ್ಸಿ ಕನಕಗಿರಿ, ಟಿ.ಲಿಂಗರಾಜ್ ಟ್ರೇಡಿಂಗ್ ಕಂಪನಿ, ಮಹಾಲಿಂಗೇಶ್ವರ ಟ್ರೇಡರ್ಸ್ ಕಂಪನಿ ಕನಕಗಿರಿ, ಬೀರಲಿಂಗೇಶ್ವರ ಟ್ರೇಡಿಂಗ್ ಕಂಪನಿ ಗಂಗಾವತಿ, ಮಾರುತೇಶ್ವರ ಟ್ರೇಡಿಂಗ್ ಕಂಪನಿ ಕೊಪ್ಪಳ ಮೊದಲಾದ ದಲ್ಲಾಳಿ ಅಂಗಡಿಗಳಿವೆ. ಕೆಲವೆಡೆ ಕುರಿ, ಆಡುಗಳ ವ್ಯಾಪಾರ ಮಾಡುತ್ತಾರೆ. ಅದೇ ರೀತಿ ಇತರೆ ಸಣ್ಣ ವ್ಯಾಪಾರಗಳಾದ ಕಿರಾಣಿ, ಕಾಯಿಪಲ್ಲೆ, ಔಷಧಿ, ಹೋಟೆಲ್ ಮೊದಲಾದ ಅಂಗಡಿಗಳನ್ನಿಟ್ಟು ವ್ಯಾಪಾರ ಮಾಡುವುದು ಕಂಡು ಬರುತ್ತದೆ. ಗಂಗಾವತಿ, ಕೊಪ್ಪಳ ತಾಲ್ಲೂಕಿನಲ್ಲಿ ದಲ್ಲಾಳಿ ವ್ಯಾಪಾರ ಮಾಡುವವರ ಸಂಖ್ಯೆ ಅಧಿಕವಾಗಿದ್ದರೆ, ಕುಷ್ಟಗಿ, ಯಲಬುರ್ಗಾ ಭಾಗಗಳಲ್ಲಿ ಚಿಕ್ಕಪುಟ್ಟ ವ್ಯಾಪಾರ ಮಾಡುವುದು ಕಂಡುಬರುತ್ತದೆ. ಕ್ಷೇತ್ರ ಕಾರ್ಯದಲ್ಲಿ ಲಭಿಸಿದ ಮಾಹಿತಿಯ ಆಧಾರದ ಮೇಲೆ ಪ್ರತಿಶತ ಅಂಕಿ-ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

| ಕ್ರ.ಸಂ. | ತಾಲೂಕು | ಕುರಿ ಸಾಕಾಣಿಕೆ | ಕೃಷಿ | ವ್ಯಾಪಾರ | ಕೂಲಿ ಕಾರ್ಮಿಕರು |
|---|---|---|---|---|---|
| ೧. | ಕೊಪ್ಪಳ | ೨೨% | ೪೮% | ೩% | ೧೮% |
| ೨. | ಕುಷ್ಟಗಿ | ೨೫% | ೪೫% | ೧% | ೨೦% |
| ೩. | ಯಲಬುರ್ಗಾ | ೧೮% | ೩೮% | ೧% | ೧೪% |
| ೪. | ಗಂಗಾವತಿ | ೨೦% | ೪೦% | ೨.೫% | ೨೨% |

ಕ್ರಿ.ಶ. ೧೯೧೮ರಲ್ಲಿ ಮೈಸೂರು ಒಡೆಯರು ಲೆಸ್ಲಿ.ಸಿ.ಮಿಲ್ಲ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿದರು.[೫೩] ಸರಕಾರದ ನೇಮಕಾತಿಗಳಲ್ಲಿ ಬ್ರಾಹ್ಮಣೇತರರಿಗೆ ಅವಕಾಶ ನೀಡಬೇಕೆಂದು ವರದಿ ಸಲ್ಲಿಸಿತ್ತು. ಮಿಲ್ಲರ್ ಸಮಿತಿ ನೀಡಿದ ವರದಿಗಳನ್ನು ಅರಸರು ಅನುಷ್ಠಾನಗೊಳಿಸಿದರು. ಇದರಿಂದಾಗಿ ಕುರುಬರೂ ಅವಕಾಶ ಪಡೆದುಕೊಂಡರು. ಕ್ರಿ.ಶ.೧೯೨೬ ರಿಂದ ೧೯೧೮ರ ಅವಧಿಯಲ್ಲಿ ೨೫ ರೂ. ಸಂಬಳದೊಳಗಿನ ಹುದ್ದೆಗಳಲ್ಲಿ ಕೇವಲ ೧೪೩ ಜನರಿದ್ದರು. ರೂ.೨೫ಕ್ಕಿಂತ ಮೇಲ್ಪಟ್ಟ ವೇತನದ ಹುದ್ದೆಗಳಲ್ಲಿ ೫೭ ಜನರಿದ್ದರು. ಅದೇ ರೀತಿ ೫೦ ರೂ.ಯಿಂದ ೧೦೦ ರೂ.ವರೆಗಿನ ಹುದ್ದೆಗಳಲ್ಲಿ ೫ ಜನರು ಮಾತ್ರಯಿದ್ದರು ಎಂದು ತಿಳಿಯುತ್ತದೆ.[೫೪]

ಡಾ.ನಾಗನಗೌಡರು ಹಳೇ ಮೈಸೂರಿನಲ್ಲಿ ನೀಡಿದ ಅಂಕಿ-ಅಂಶಗಳ ಆಧಾರದ ಮೇಲೆ ಬೇರೆ ಬೇರೆ ಜನಾಂಗಗಳನ್ನು, ಜಾತಿಗಳನ್ನು ಗುರುತಿಸಿ ಅವರು ಹೊಂದಿರುವ ಶಿಕ್ಷಣ ಹಾಗೂ ಪಡೆದಿರುವ ಉದ್ಯೋಗ ಮತ್ತು ಸಾಮಾಜಿಕ ಸ್ಥಾನಮಾನಗಳ ಆಧಾರದ ಮೇಲೆ ಶೇ ೨೫ರಷ್ಟು ಹಿಂದುಳಿದ ಜಾತಿಗಳವರಿಗೆ ಸರಕಾರಿ ಸೇವೆಗಳಲ್ಲಿ ಮೀಸಲಾತಿ ನೀಡಬೇಕೆಂದು ಶಿಫಾರಸ್ಸು ನೀಡಿದರು. ಕ್ರಿ.ಶ.೧೯೬೦ರಲ್ಲಿ ಶೇ ೧೫ ಲಕ್ಷ ಜನಸಂಖ್ಯೆಯಿದ್ದು, ಶೇ.೬.೮೮ ರಷ್ಟಿದ್ದ ಕುರುಬರಲ್ಲಿ ೫೬ ಜನರು ಗೆಜೆಟೆಡ್ ಅಧಿಕಾರಿಗಳು, ೨೪೫೨ ನಾನ್‌ಗೆಜೆಟೆಡ್ ಅಧಿಕಾರಿಗಳಿದ್ದರು. ೨೦೭೬ ಜನರು ಡಿ ದರ್ಜೆಯಲ್ಲಿದ್ದರು. ಒಟ್ಟಾರೆ ೪೫೮೭ ಜನರು ಸರ್ಕಾರಿ ಹುದ್ದೆಯಲ್ಲಿದ್ದರೆಂದು ತಿಳಿಯುತ್ತದೆ.[೫೫] ಹೀಗಾಗಿ ಕೇವಲ ಶೇ.೩ರಷ್ಟು ಮಾತ್ರ ಸರ್ಕಾರಿ ಉದ್ಯೋಗದಲ್ಲಿದ್ದರೆಂದು ಸ್ಪಷ್ಟಪಡುತ್ತದೆ. ಇತ್ತೀಚೆಗೆ ಇದರ ಪ್ರಮಾಣ ಅಧಿಕಗೊಂಡಿರುವುದು ಕಂಡುಬರುತ್ತದೆ.

ಮೈಸೂರು ಅರಸರು ನೀಡಿದ ಸೌಲಭ್ಯಗಳು ಹೆಚ್ಚಾಗಿ ದಕ್ಷಿಣ ಕರ್ನಾಟಕದ ಕುರುಬರಿಗೆ ಲಭಿಸಿದವು. ಉತ್ತರ ಕರ್ನಾಟಕದ ಕುರುಬರು ಅಷ್ಟು ಲಾಭ ಪಡೆದುಕೊಳ್ಳಲಿಲ್ಲ. ಅದರಲ್ಲೂ ಹೈದರಾಬಾದ್ ಕರ್ನಾಟಕದ ಕುರುಬರು ಸೌಲಭ್ಯಗಳಿಂದ ವಂಚಿತರಾದರೆಂದು ಹೇಳಬಹುದಾಗಿದೆ. ಕೃಷಿ ಹಾಗೂ ಪಶುಪಾಲನೆಯನ್ನು ಪ್ರಧಾನವಾಗಿ ಹೊಂದಿದ್ದಲ್ಲದೆ, ಎರೆಭೂಮಿ ಅಧಿಕವಾಗಿದ್ದರಿಂದ ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗಲಿಲ್ಲ. ಈ ಕಾರಣವಾಗಿ ಶಿಕ್ಷಣವಲ್ಲದೆ, ಉದ್ಯೋಗ ರಂಗದಲ್ಲೂ ಹಿಂದುಳಿಯುವಿಕೆ ಕಂಡು ಬಂದಿತು. ಆದರೂ ಅನೇಕ ವ್ಯಕ್ತಿಗಳು ಸರಕಾರದ ವಿವಿಧ ಇಲಾಖೆಗಳಲ್ಲಿ ಪ್ರಥಮ, ದ್ವಿತೀಯ, ತೃತೀಯ ಮತ್ತು ನಾಲ್ಕನೇಯ ವರ್ಗದ ಹುದ್ದೆಗಳನ್ನು ಹೊಂದಿದ್ದಾರೆ. ಶಾಲಾ ಕಾಲೇಜುಗಳಲ್ಲಿ ಶಿಕ್ಷಕರು, ಉಪನ್ಯಾಸಕರಾಗಿ ಹಾಗೂ ಖಾಸಗಿ ಕಂಪನಿಗಳಲ್ಲೂ ವಿವಿಧ ಹುದ್ದೆಯನ್ನು ಪಡೆದಿರುವುದು ಕಂಡುಬರುತ್ತದೆ. ಶ್ರೀಮಂತರು,

ಜಮೀನುದಾರರು, ನೌಕರಿ ವರ್ಗದವರ ಸಂಖ್ಯೆ ಅಲ್ಪ ಪ್ರಮಾಣದಲ್ಲಿದ್ದು, ಕೃಷಿ, ಪಶುಪಾಲನೆ, ಕೂಲಿ ಕಾರ್ಮಿಕರು, ಹಮಾಲರು, ಸಣ್ಣ ವ್ಯಾಪಾರಸ್ಥರ ಸಂಖ್ಯೆ ಅಧಿಕ ಪ್ರಮಾಣದಲ್ಲಿದೆ ಎಂದು ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕುರುಬರ ಜನಸಂಖ್ಯೆಗನುಗುಣವಾಗಿ ಆರ್ಥಿಕ ಸ್ಥಿತಿ ಉನ್ನತಮಟ್ಟದಲಿಲ್ಲದಿರುವುದು ಕಂಡುಬರುತ್ತದೆ.

### ೭.೨. ಶೈಕ್ಷಣಿಕ ಸ್ಥಿತಿ

ಪ್ರಾಚೀನ ಭಾರತದ ವಿದ್ಯಾಭ್ಯಾಸ ಪದ್ಧತಿಯು ಧಾರ್ಮಿಕವಾಗಿತ್ತು. ಮಾನವನ ಜೀವನದ ಪ್ರಮುಖ ಗುರಿ ಮೋಕ್ಷ ಅಥವಾ ಆತ್ಮಜ್ಞಾನ ಹೊಂದುವುದಾಗಿತ್ತು. ಈ ಮೋಕ್ಷವನ್ನು ಪಡೆಯಲು ವಿದ್ಯಾಭ್ಯಾಸ ಪ್ರಮುಖವಾದ ಮಾರ್ಗವೆಂದು ನಂಬಿದ್ದರು. ಮನುಷ್ಯನಿಗೆ ವಿದ್ಯೆಯಿಂದಲೇ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ ಲಭಿಸುತ್ತದೆ.[೩೬] ವಿದ್ಯೆಯು ಕಲ್ಪಲತೆಯಂತೆ, ಪ್ರತಿಯೊಂದನ್ನು ತಾನೇ ಕೊಡುವುದಿಲ್ಲ. ಆದರೆ ತಾಯಿಯಂತೆ ಕಾಪಾಡುತ್ತದೆ, ತಂದೆಯಂತೆ ಸರಿಯಾದ ಮಾರ್ಗದಲ್ಲಿ ನಿಯೋಜಿಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ, ಐಶ್ವರ್ಯವನ್ನು ತರುತ್ತದೆ, ಕೀರ್ತಿಯನ್ನು ನೀಡುತ್ತದೆ.[೩೭] ಅದೇ ರೀತಿ ವಿದ್ಯಾಹೀನನಾದವನು ಒಂದು ಪಶುವಿಗೆ ಸಮಾನ ಎಂಬ ಅಭಿಪ್ರಾಯವನ್ನು ಪ್ರಾಚೀನ ಭಾರತದ ಜನರು ಹೊಂದಿದ್ದರು.

ಲಿಪಿಗಳು ಸೃಷ್ಟಿಗೊಳಿಸುವ ಪೂರ್ವದಲ್ಲಿ ಬಾಯಿ ಪಾಠದ ರೂಪದಲ್ಲಿ ಬೋಧನೆ ನೀಡಲಾಗುತ್ತಿತ್ತು. ಆಗ ಶ್ರವಣ, ಮನನ, ಧ್ಯಾನಗಳು ಪ್ರಮುಖವಾಗಿದ್ದವು. ಶಿಷ್ಯನ, ವಿದ್ಯಾಭ್ಯಾಸ ಸಂಪೂರ್ಣವಾಗಿ ಗುರುವಿನ ಆಧೀನದಲ್ಲಿ ನಡೆಯುತ್ತಿತ್ತು. ಗುರುವಿನ ಮನೆಯೇ ಪಾಠಶಾಲೆ. ವಿದ್ಯಾರ್ಥಿಗಳು ಭಿಕ್ಷಾನ್ನದಿಂದ ಜೀವನ ನಡೆಸಬೇಕಾಗುತ್ತಿತ್ತು. ಗುರು ಮತ್ತು ಶಿಷ್ಯನ ನಡುವೆ ಆತ್ಮೀಯ ಸಂಬಂಧವಿತ್ತು. ಆದರೆ ಸಾಮಾನ್ಯ ಶಿಕ್ಷಣವು ಉನ್ನತ ವರ್ಗದವರಿಗೆ ಮಾತ್ರ ಲಭಿಸುತ್ತಿತ್ತು. ಸಾಮಾನ್ಯ ವರ್ಗದ ಜನರಿಗೆ ಶಿಕ್ಷಣ ನೀಡುವ ವ್ಯವಸ್ಥೆಯಿರಲಿಲ್ಲ. ಪ್ರಾಚೀನ ಕಾಲದಲ್ಲಿದ್ದ ಅನೇಕ ಕೆಳ ಜನಾಂಗಗಳು ಶಿಕ್ಷಣದಿಂದ ವಂಚಿತವಾದವು. ಶಿಕ್ಷಣವನ್ನು ಪಡೆಯುವುದಿರಲಿ, ಆದನ್ನು ಕೇಳಿಸಿಕೊಂಡವರ ಕಿವಿಯಲ್ಲಿ ಕಾಸಿದ ಸೀಸವನ್ನು ಹಾಕಬೇಕು ಎಂಬ ನೀತಿಯನ್ನು ಜಾರಿಗೊಳಿದ್ದರೆಂದು ತಿಳಿಯುತ್ತದೆ. ಇದರಿಂದಾಗಿ ವಿದ್ಯಾಭ್ಯಾಸ ಕೇವಲ ಉನ್ನತ ವರ್ಗದವರಿಗೆ ಮಾತ್ರ ಮೀಸಲಾಗಿತ್ತೆಂದು ತಿಳಿದುಬರುತ್ತದೆ. 'ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ' ಎಂಬ ಶಾಸನೋಕ್ತಿಯಿದೆ.[೩೮] ಇದು ಗೊರವರು ಕೆಳವರ್ಗದವರಾಗಿದ್ದರೆಂದು ತಿಳಿಸುತ್ತದೆ. ಹೀಗಾಗಿ ಕೆಳವರ್ಗದವರಾಗಿದ್ದ ಗೊರವ(ಕುರುಬ)ರು ಶಿಕ್ಷಣದಂದ ವಂಚಿತರಾಗಿದ್ದರೆಂಬುದು ಸ್ಪಷ್ಟ.

ಪ್ರಾಚೀನ ಕಾಲದಲ್ಲಿ ಕುರುಬರು ಎಲ್ಲೆಡೆ ನೆಲೆಸಿದ್ದರಲ್ಲದೆ, ಪ್ರಬಲರಾಗಿದ್ದರು. ಕಾಲಾನಂತರ ಅನೇಕ ರಾಜಮನೆತನಗಳನ್ನು ನಿರ್ಮಿಸಿ ಆಳ್ವಿಕೆ ನಡೆಸಿದರು. ರಾಜರ ಆಳ್ವಿಕೆ ಪ್ರಾರಂಭಗೊಂಡ ನಂತರ ಶಿಕ್ಷಣವು ಮತ್ತಷ್ಟು ಪ್ರಾಮುಖ್ಯತೆ ಪಡೆದುಕೊಂಡಿತು. ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಆಶ್ರಮಗಳ, ಗುರು–ಶಿಷ್ಯ ವರ್ಗಗಳ ಯೋಗ ಕ್ಷೇಮಕ್ಕಾಗಿ ಆಸಕ್ತಿ ತಳೆದು, ಅವುಗಳ ಪ್ರಗತಿಗೆ ದಾನದತ್ತಿಗಳನ್ನು ನೀಡತೊಡಗಿದರೆಂದು ಶಾಸನಗಳಿಂದ ತಿಳಿದುಬರುತ್ತದೆ.

ವೇದಗಳ ಕಾಲದಲ್ಲಿ ಋಷ್ಯಾಶ್ರಮಗಳು, ಬೌದ್ಧಧರ್ಮದ ಕಾಲದಲ್ಲಿ ವಿಹಾರ, ಚೈತ್ಯಾಲಯಗಳು, ಜೈನರ ಕಾಲಕ್ಕೆ ಜೈನ

ಬಸದಿಗಳು ಶಿಕ್ಷಣದ ಪ್ರಮುಖ ಕೇಂದ್ರಗಳಾಗಿದ್ದವು. ವೇದ ಕಾಲದಲ್ಲಿ ಶಿಕ್ಷಣ ಉನ್ನತ ವರ್ಗದವರಿಗೆ ಮಾತ್ರ ಮೀಸಲಾಗಿದ್ದರೆ, ಬೌದ್ಧ ಕಾಲದಲ್ಲಿ ಶಿಕ್ಷಣ ಕೇವಲ ಕೆಲವರ ಸ್ವತ್ತಲ್ಲವೆಂಬ ತತ್ವವನ್ನು ಎತ್ತಿಹಿಡಿದರಲ್ಲದೆ, ಬಡವರಿಗೆ, ಕೆಳವರ್ಗದವರಿಗೆ, ಗಂಡಸರು, ಹೆಂಗಸರು ಎನ್ನುವ ಬೇಧ ಮಾಡದೆ ಎಲ್ಲರಿಗೂ ಶಿಕ್ಷಣ ಪಡೆಯುವ ಅವಕಾಶ ನೀಡಿದರು.[೬೦] ಹೀಗಾಗಿ ಅನೇಕ ವಿಹಾರಗಳು, ಮಠಗಳು, ಪ್ರಾರಂಭಗೊಂಡವು. ಅಲ್ಲಿ ಕೆಳವರ್ಗದವರು ಸೇರಿಕೊಂಡರು. ೭ವರ್ಷದ ವಯಸ್ಸಿನ ಮಕ್ಕಳಿಗೆ ಶಿಕ್ಷಣ ನೀಡುವುದು ಆರಂಭಗೊಳ್ಳುತ್ತಿತ್ತು. ವ್ಯಾಕರಣ, ಕುಶಲವೃತ್ತಿ, ಯಂತ್ರೋಪಕರಣ, ಕಲೆ, ಜ್ಯೋತಿಷ್ಯ, ವೈದ್ಯಶಾಸ್ತ್ರ, ಮಂತ್ರ ಪ್ರಯೋಗ, ತರ್ಕಶಾಸ್ತ್ರ, ಆತ್ಮವಿಜ್ಞಾನ ಮೊದಲಾದವುಗಳನ್ನು ಬೋಧಿಸುತ್ತಿದ್ದರು.[೬೧] ಈ ರೀತಿ ಶಿಕ್ಷಣ ಪಡೆದ ಅನೇಕ ಕೆಳವರ್ಗದವರಲ್ಲಿ ಕುರುಬರೂ ಕೂಡಿದ್ದರು.

ವಿದ್ಯಾದಾನವು ನಡೆಯುತ್ತಿದ್ದದ್ದು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ ಎಂದು ತಿಳಿಯುತ್ತದೆ. ಅವುಗಳಲ್ಲಿ ೧. ದೇವಸ್ಥಾನ ಅಥವಾ ಮಠ ೨. ಅಗ್ರಹಾರ ೩. ಬ್ರಹ್ಮಪುರಿ ೪. ಘಟಿಕಾಸ್ಥಾನ ಪ್ರಮುಖವಾಗಿದ್ದವು.[೬೨]

### ೧. ಮಠಗಳು

ಪ್ರಾಚೀನ ಕಾಲದಲ್ಲಿ ದೇವಸ್ಥಾನಗಳು ಶೈವಯತಿಗಳ ವಾಸಸ್ಥಾನಗಳಾಗಿದ್ದವು.[೬೩] ಯತಿಗಳು ಮಹಾವಿದ್ವಾಂಸರೂ ಆಗಿದ್ದರಿಂದ ವಿದ್ಯಾದಾನವನ್ನು ಕೈಗೊಂಡರು. ಭಕ್ತರು ದೇವಸ್ಥಾನಗಳ ಪೂಜಾದಿಗಳಿಗೆ ದತ್ತಿಗಳನ್ನು ಬಿಟ್ಟುಕೊಡುವಾಗ ವಿದ್ಯಾಭ್ಯಾಸಕ್ಕಾಗಿಯೂ ದತ್ತಿಗಳನ್ನು ಕೊಡುತ್ತಿದ್ದರು. ಹೀಗಾಗಿ ೮ ಅಥವಾ ೯ನೇ ಶತಮಾನಗಳ ನಂತರ ದೇವಸ್ಥಾನಗಳು ವಿದ್ಯಾ ಕೇಂದ್ರಗಳಾಗಿ ಪರಿಣಮಿಸಲ್ಪಟ್ಟವು.

ಕಾಳಾಮುಖ, ಲಾಕುಳ ಶೈವರೆಂಬ ಗೊರವರ ಅಸಂಖ್ಯಾತ ಗ್ರಾಮಗಳಲ್ಲಿ ಶಿವ ದೇವಾಲಯಗಳನ್ನು ನಿರ್ಮಿಸಿದರು. ಇವರನ್ನು ಬಹುದೊಡ್ಡ ದೇವಸ್ಥಾನದ ನಿರ್ಮಾಪಕರೆಂದು ಕರೆಯಲಾಗಿದೆ. ಅಲ್ಲದೆ ದೇವಸ್ಥಾನಗಳಲ್ಲಿ ವಾಸಿಸುತ್ತ ವಿದ್ಯಾ ಪ್ರಸಾರದ ಹೊಣೆಯನ್ನು ಹೊರುತ್ತಿದ್ದರು. ರಾಮೇಶ್ವರ ಎಂಬ ತೀರ್ಥಕ್ಕೆ ಶಿವಧಾರಿ ಎಂಬ ಗೊರವರು ಸ್ಥಾನಪತಿಗಳಾಗಿದ್ದರೆಂದು ರಾಷ್ಟ್ರಕೂಟರ ತಾಮ್ರಪಟದಿಂದ ತಿಳಿದು ಬರುತ್ತದೆ.[೬೪] ಇವರು ಬ್ರಹ್ಮಚಾರಿಗಳಾಗಿದ್ದು, ಬ್ರಹ್ಮಚಾರಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದರು. ಕೆಲವು ಗುರುಗಳು ವಿವಾಹಿತರಾಗಿದ್ದರು. ಗೊರವರು ಸ್ಥಾನಪತಿಗಳಾಗಿದ್ದರು. ಇವರಿಂದ ವಿದ್ಯಾದಾನ ಪಡೆಯುತ್ತಿದ್ದ ವಿದ್ಯಾರ್ಥಿಗಳು ಅಖಂಡ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬರಬೇಕೆಂದು, ಪಾಲಿಸಲು ಅಸಮರ್ಥರಾದರೆ ಅಂತಹ ಬ್ರಹ್ಮಚರ್ಯಹೀನರನ್ನು ಆ ಸ್ಥಾನಗಳಿಂದ ಹೊರ ಹಾಕಬೇಕೆಂದು ಕಠಿಣ ನಿಯಮ ಮಾಡಲಾಗಿತ್ತು.[೬೫] ಅರಸರು ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡುತ್ತಿದ್ದರು. ಗೊರವರು ಸ್ಥಾನಪತಿಗಳಾಗಿದ್ದರಿಂದ ಕುರುಬರು ವಿದ್ಯಾಭ್ಯಾಸದಲ್ಲಿ ಉತ್ತಮ ಸ್ಥಾನಗಳಿಸಿದ್ದರೆಂದು ತಿಳಿಯುತ್ತದೆ.

ವಿಜಯನಗರ ಕಾಲದಲ್ಲಿ ಶಿಕ್ಷಣ ಮಹತ್ವ ಪಡೆದುಕೊಂಡಿತ್ತು. ಅರಸರು ಸ್ವತಃ ತಾವೇ ವಿದ್ವಾಂಸರಾಗಿದ್ದು ಸಾಹಿತ್ಯ, ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿದ್ದರು. ದೇವಾಲಯಗಳಿಗೆ ವಿದ್ಯಾಭ್ಯಾಸಕ್ಕಾಗಿ ದಾನ-ದತ್ತಿಗಳನ್ನು ನೀಡುವುದು ನಂತರದ ಅರಸರ ಕಾಲದಲ್ಲೂ ಮುಂದುವರೆಯಿತು. ದೇವಸ್ಥಾನ ಅಥವಾ ಮಠಗಳೇ ಪಾಠಶಾಲೆಗಳಾಗಿದ್ದವೆಂದು ಶಾಸನಗಳು ಉಲ್ಲೇಖಿಸುತ್ತವೆ. ಜಂಗಮರು

ಮಠಗಳನ್ನು ನಿರ್ಮಿಸಿಕೊಂಡು ಶಿಕ್ಷಣ ವ್ಯವಸ್ಥೆ ಮಾಡಿದರು. ಅದೇ ರೀತಿ ಕುರುಬರು ಅನೇಕ ಗುರುಮಠಗಳನ್ನು ನಿರ್ಮಿಸಿಕೊಂಡು ವಿದ್ಯಾಭ್ಯಾಸ ನೀಡ ತೊಡಗಿದರು. ಕೊಪ್ಪಳ ಜಿಲ್ಲೆಯ ಅನೇಕ ಶಾಸನಗಳು ಶಿಕ್ಷಣದ ಬಗ್ಗೆ ಉಲ್ಲೇಖಿಸುತ್ತವೆ. ಕೊಪ್ಪಳದಲ್ಲಿ ಅಂದು ದೇವಾಲಯಗಳೇ ಪಾಠಶಾಲೆಗಳಾಗಿದ್ದವು. ಇವುಗಳ ಗುರುಗಳಿಗೆ ಅಯ್ಯನವರೆಂದು ಕರೆಯುತ್ತಿದ್ದರು. ಸಮಾಜ ಇವರನ್ನು ಪೂಜ್ಯ ಭಾವನೆಯಿಂದ ಕಾಣುತ್ತಿತ್ತು. ವಿದ್ಯಾರ್ಥಿಗಳು ವ್ಯಾಕರಣ, ಪುರಾಣ, ಕಾವ್ಯ, ನಾಟಕ, ಚತುರ್ವೇದಾಧ್ಯಯನಗಳನ್ನು ಕಲಿಯುತ್ತಿದ್ದರೆಂದು ತಿಳಿಯುತ್ತದೆ.[೬೬] ಕೊಪ್ಪಳ ಜಿಲ್ಲೆಯಾದ್ಯಂತ ಅನೇಕ ಮಠಗಳಿವೆ. ಆದರೆ ಎಲ್ಲ ಮಠಗಳೂ ವಿದ್ಯಾಕೇಂದ್ರಗಳಾಗಿ ಮುಂದುವರೆದಿಲ್ಲ. ಕುರುಬರ ಅನೇಕ ಗುರು ಮಠಗಳನ್ನು ಕಾಣಬಹುದಾಗಿದೆ. ಈ ಮಠಗಳು ಕೇವಲ ದೈವಕೇಂದ್ರಗಳಾಗಿವೆ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಬಸವಪಟ್ಟಣದ ನಂಜುಂಡೇಶ್ವರನ ಮಠವು ಮಾತ್ರ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿದೆ. ಕ್ರಿ.ಶ.೧೯೮೯ರಲ್ಲಿ ಸ್ಥಾಪನೆಗೊಂಡ ರಾಜರಾಜೇಶ್ವರಿ ವಿದ್ಯಾಸಂಸ್ಥೆ ೧ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಶಿಕ್ಷಣವನ್ನು ನೀಡುವ ಕೇಂದ್ರವಾಗಿದೆ. ಆದರೆ ಪ್ರಾಚೀನ ಕಾಲದಲ್ಲಿದ್ದಂತೆ ಮಠ ಅಥವಾ ದೇವಾಲಯಗಳಲ್ಲಿ ಶಿಕ್ಷಣ ನೀಡುವ ವ್ಯವಸ್ಥೆ ಇಲ್ಲವೆಂದು ಹೇಳಬಹುದಾಗಿದೆ.

**೨. ಅಗ್ರಹಾರಗಳು**

ಅಗ್ರಹಾರ ಎಂಬುದು ಅಗ್ರ+ಆಹಾರ ಎಂಬ ಎರಡು ಪದಗಳ ಸಮಾಸವೆಂದು ಪ್ರೊ.ಡಿ.ಎಲ್.ನರಸಿಂಹಚಾರ್ಯರು ಅಭಿಪ್ರಾಯಪಟ್ಟಿದ್ದಾರೆ.[೬೭] ಅಗ್ರ ಎಂದರೆ ಶ್ರೇಷ್ಠ ಆಹಾರ ಎಂದರೆ ದೇಶ ಅಥವಾ ಸ್ಥಳ ಹೀಗಾಗಿ ಅಗ್ರಹಾರ ವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂಬರ್ಥವಿದೆ.[೬೮] ಈ ಅಗ್ರಹಾರಗಳಲ್ಲಿ ಬ್ರಾಹ್ಮಣರಲ್ಲದೇ, ಬೇರೆ ಜಾತಿಯವರು ಇರಬಹುದಾಗಿತ್ತು. ಆದರೆ ಅಂದಿನ ಕಾಲದಲ್ಲಿ ಬ್ರಾಹ್ಮಣರದೇ ಅಧಿಕ ಸಂಖ್ಯೆಯಾಗಿತ್ತು. ಸ್ಥಾನಚಾರ್ಯರು. ಉಪಾಧ್ಯಾಯರುಗಳು ವಿದ್ಯಾಕೇಂದ್ರಗಳ ಮುಖ್ಯಸ್ಥರಾಗಿದ್ದರು. ಇವರೆಲ್ಲರ ವಾಸಸ್ಥಾನಗಳಾಗಿ ಅಗ್ರಹಾರಗಳು ಅಸ್ತಿತ್ವಕ್ಕೆ ಬಂದಿರುವ ಸಾಧ್ಯತೆಯಿದೆ.

ಅಗ್ರಹಾರವನ್ನು ದಾನವಾಗಿ ಪಡೆದವರೇ ಮಹಾಜನಗಳೆಂದು ಕರೆಯಲ್ಪಟ್ಟರು.[೬೯] ಈ ಮಹಾಜನಗಳು ಬ್ರಾಹ್ಮಣೇತರು ಆಗಿದ್ದರು. ಮಹಾಜನಗಳು ಅಗ್ರಹಾರಗಳ ಒಡೆಯ ರಾದ್ದರಿಂದ ಅವರಿಗೆ ಅಗ್ರಹಾರಗಳ ಮೇಲೆ ಒಂದು ರೀತಿಯ ಪ್ರಭುತ್ವವಿತ್ತು. ಮಹಾಜನರು ದೊಡ್ಡ ವಿದ್ವಾಂಸರಾಗಿದ್ದರು. ತಮ್ಮ ಅಗ್ರಹಾರಗಳಲ್ಲಿ ವಿದ್ಯೆಯನ್ನು ನೀಡುತ್ತಿದ್ದರು. ವ್ಯಾಖ್ಯಾನದ ಉಪಾಧ್ಯಾಯರಿಗೆ ಎಂಟು ಗದ್ಯಾಣ, ಪುರಾಣ ಹೇಳುವ ಭಟ್ಟರಿಗೆ ಎಂಟು ಗದ್ಯಾಣ, ಋಗ್ವೇದ ಮತ್ತು ಯಜುರ್ವೇದಗಳನ್ನು ಬೋಧಿಸುವ ಉಪಾಧ್ಯಾಯರಿಗೆ ತಲಾ ಆರು ಗದ್ಯಾಣಗಳನ್ನು ನೀಡುತ್ತಿದ್ದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[೭೦] ಈ ರೀತಿ ಹಣವನ್ನು ನೀಡಿ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಉತ್ತಮಗೊಳಿಸಿದ್ದರೆಂಬುದು ಸ್ಪಷ್ಟ.

ಅರಸರು ಅನೇಕ ಅಗ್ರಹಾರಗಳನ್ನು ನಿರ್ಮಿಸಿದ್ದರು. ಕೊಪ್ಪಳ ಜಿಲ್ಲೆಯಾದ್ಯಂತ ಅನೇಕ ಅಗ್ರಹಾರಗಳಿದ್ದ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಅಳವಂಡಿ, ಕವಲೂರು, ಮಾದಿನೂರು, ಮುಧೋಳ, ಕುಕನೂರು, ಇಟಗಿ, ತಳಕಲ್ಲು, ಮೊದಲಾದವು ಪ್ರಮುಖ ಅಗ್ರಹಾರಗಳಾಗಿದ್ದವು. ಈ ಅಗ್ರಹಾರಗಳಲ್ಲಿ ಮಹಾಜನರು ವೇದಾಧ್ಯಯನದ ಜೊತೆಗೆ ಇತರ ಸಕಲ ವಿದ್ಯೆಗಳ ಅಧ್ಯಯನ ನಡೆಸಿಕೊಡುತ್ತಿದ್ದರು. ಯಲಬುರ್ಗ ತಾಲೂಕಿನ ಕುಕನೂರ ಶಾಸನದಲ್ಲಿ ಸಕಲಶಾಸ್ತ್ರಗಳಲ್ಲಿ ಪರಿಣಿತ, ವೇದ ಪಾರಂಗತ,

ತ್ರಿವಿಕ್ರಮ, ಅಗ್ನಿಹೋತ್ರಿಯಾದ ಕಾಳಾಚಾರ್ಯನ ಪಾಂಡಿತ್ಯದ ವರ್ಣನೆ ಮಾಡಲಾಗಿದೆ.[೨೧] ಇದರಿಂದ ಕಾಳಾಚಾರ್ಯರು (ಗೊರವ) ಕುಕನೂರು ಅಗ್ರಹಾರದಲ್ಲಿದ್ದನೆಂದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಬ್ರಾಹ್ಮಣರೊಂದಿಗೆ ಮಹಾಜನರಾಗಿದ್ದ ಬ್ರಾಹ್ಮಣರೇತರಲ್ಲಿ ಕುರುಬರೂ ಸೇರಿದ್ದರೆಂದು ತಿಳಿಯುತ್ತದೆ.

ಮಠ ಅಗ್ರಹಾರಗಳು ಅಲ್ಲದೆ, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು ಪ್ರಮುಖ ವಿದ್ಯಾ ಕೇಂದ್ರಗಳಾಗಿದ್ದವು. ಕೊಪ್ಪಳದಲ್ಲಿ ಬ್ರಹ್ಮಪುರಿಗಳಿದ್ದ ಬಗ್ಗೆ ಉಲ್ಲೇಖಗಳಿವೆ. ಕವಲೂರು, ಬಳಗೇರಿ, ಕುಕನೂರು, ಪುರ ಗ್ರಾಮಗಳಲ್ಲಿ ಬ್ರಹ್ಮಪುರಿಗಳಿದ್ದವು. ಕುಕನೂರು, ಇಟಗಿ, ಕವಲೂರು, ಅಳವಂಡಿ, ಮಾದಿನೂರು, ಮುಧೋಳ, ತಳಕಲ್ಲು ಗ್ರಾಮಗಳ ಶಾಸನಗಳಿಂದ ಘಟಿಕಾಸ್ಥಾನಗಳಾಗಿದ್ದವೆಂದು ತಿಳಿಯುತ್ತದೆ.[೨೨] ಈ ಗ್ರಾಮಗಳಲ್ಲಿ ಇಂದಿಗೂ ಕುರುಬರು ಪ್ರಬಲರಾಗಿದ್ದಾರೆ. ಗೌಡ, ಪಟೇಲ, ಗುರಿಕಾರ, ದಳಪತಿ ಮೊದಲಾದ ಮನೆತನಗಳ ಕುರುಬರಲ್ಲಿ ಆರ್ಥಿಕವಾಗಿ ಸಬಲರಾಗಿದ್ದವರು ಅಂದು ವಿದ್ಯಾಭ್ಯಾಸ ಮಾಡಿರಬಹುದಾದ ಸಾಧ್ಯತೆಯಿದೆ. ಆದರೆ ಕೃಷಿ ಕುರಿ ಸಾಕಾಣಿಕೆಗೆ ಪ್ರಾಮುಖ್ಯತೆ ನೀಡಿದ್ದು ಆರ್ಥಿಕವಾಗಿ ಹಿಂದುಳಿದಿರುವ ಕುರುಬರು ಶಿಕ್ಷಣ ಪಡೆಯಲು ಆಗುತ್ತಿರಲಿಲ್ಲವೆಂದು ಹೇಳಬಹುದಾಗಿದೆ.

ಆಧುನಿಕ ಕಾಲದಲ್ಲಿ ಪಾಶ್ಚಾತ್ಯರ ಆಗಮನದಿಂದ ಶಿಕ್ಷಣ ಕ್ಷೇತ್ರದಲ್ಲಿ ನೂತನ ಯುಗ ಪ್ರಾರಂಭವಾಯಿತು. ಇಲ್ಲಿಯವರೆಗೆ ಅಸ್ತಿತ್ವದಲ್ಲಿದ್ದ ಅಗ್ರಹಾರಗಳು, ಘಟಿಕಾಸ್ಥಾನಗಳು ಮರೆಯಾಗಿ ಹೊಸ ಶಿಕ್ಷಣ ಕ್ರಮ ಪ್ರಾರಂಭವಾಯಿತು. ಪಾಶ್ಚಾತ್ಯರು ಅನೇಕ ಶಾಲಾ ಕಾಲೇಜಗಳನ್ನು ಪ್ರಾರಂಭಿಸಿ ಆಧುನಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಆಂಗ್ಲ ಭಾಷೆ ಪ್ರಮುಖ ಸ್ಥಾನ ಪಡೆದುಕೊಂಡಿತು. ಕ್ರಿ.ಶ.೧೮೮೯ರಲ್ಲಿ ಅಂದಿನ ಜಹಗೀರ ಸರ್ಕಾರ ಒಂದು ತಹತಾನಿಯಾ (ಪ್ರಾಥಮಿಕ) ಉರ್ದು ಶಾಲೆಯನ್ನು ಪ್ರಾರಂಭಿಸಿತು.[೨೩] ೧೮೯೦ರಲ್ಲಿ ಇದೇ ಶಾಲೆಯಲ್ಲಿ ಕನ್ನಡ ವರ್ಗಗಳು ಪ್ರಾರಂಭಗೊಂಡವು. ನಂತರ ಪೋಕಾನಿಯಾ (ಪ್ರೌಢಶಾಲೆ)ಗಳಲ್ಲಿ ಉರ್ದು ಪ್ರಮುಖ ಮಾಧ್ಯಮವಾಯಿತು. ಈ ತಹತಾನಿಯಾ, ವಸ್ತಾನಿಯಾ, ಪೋಕಾನಿಯಾ ಶಾಲೆಗಳ ಮುಖ್ಯಸ್ಥರಿಗೆ ಸದರ್ ಮುದರಿಸ್ (ಮುಖ್ಯಾಧ್ಯಾಪಕ) ಮತ್ತು ಉಳಿದ ಶಿಕ್ಷಕರಿಗೆ ಮುದರಿಸ್ ಎಂದು ಕರೆಯುತ್ತಿದ್ದರು.[೨೪] ಕೊಪ್ಪಳ, ಯಲಬುರ್ಗಾ ತಾಲೂಕುಗಳಲ್ಲಿ ತಹತಾನಿಯಾಗಳನ್ನು ಸರಕಾರವು ಸ್ಥಾಪಿಸಿತು. ಅಂದು ಗೌಡ, ಪಟೇಲ ಅಥವಾ ಶ್ರೀಮಂತರಾಗಿದ್ದ ಕುರುಬರು ಮಾತ್ರ ಶಿಕ್ಷಣ ಪಡೆದುಕೊಂಡಿದ್ದರು. ಸಾಮಾನ್ಯರಾಗಿದ್ದ ಕುರುಬರು ಶಿಕ್ಷಣದಲ್ಲಿಯ ಆಸಕ್ತಿಯನ್ನು ಕಳೆದುಕೊಂಡಿದ್ದರು. ಉರ್ದು ಮಾಧ್ಯಮವಿದ್ದರಿಂದ ಹೆಚ್ಚಿನ ಆಸಕ್ತಿ ತೋರಿಸುತ್ತಿರಲಿಲ್ಲ ಎಂಬ ಅಭಿಪ್ರಾಯವಿದೆ.

ಮೈಸೂರು ಅರಸರು ಕ್ರಿ.ಸ.೧೯೧೮ರಲ್ಲಿ ಲೆಸ್ಲಿ.ಸಿ.ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿದರು.[೨೫] ಸರ್ಕಾರದ ನೇಮಕಾತಿಗಳಲ್ಲಿ ಎಲ್ಲಾ ಜಾತಿ ವರ್ಗಗಳವರಿಗೂ ಸರಿಸಮವಾದ ಅವಕಾಶಗಳಿವೆಯೇ ಅಥವಾ ಸಮಾನ ಅವಕಾಶಗಳು ದೊರೆಯುವಂತಾಗಲು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆ ನೀಡುವುದು ಈ ಸಮಿತಿಯ ಕಾರ್ಯವಾಗಿತ್ತು. ಮಿಲ್ಲರ್ ಸಮಿತಿಯ ವರದಿಯಲ್ಲಿ ಬ್ರಾಹ್ಮಣೇತರರಿಗೆ ಸರಕಾರಿ ಸೇವೆಯಲ್ಲಿ ಅವಕಾಶ ನೀಡಬೇಕೆಂದು ತಿಳಿಸಲಾಗಿತ್ತು. ಈ ಸಮಿತಿ ವರದಿ ಪ್ರಕಾರ ೧೯೧೫ರಿಂದ ೧೯೧೮ ರವರೆಗಿನ ಅವಧಿಯಲ್ಲಿ ಕುರುಬರು ಶೈಕ್ಷಣಿಕವಾಗಿ ಹಿಂದುಳಿದಿದ್ದರೆಂದು ತಿಳಿಯುತ್ತದೆ.

೧೯೧೫ಕ್ಕಿಂತ ಮೊದಲು ಕುರುಬ ಜನಾಂಗದಲ್ಲಿ ಲೋಯರ್ ಸೆಕೆಂಡರಿಗೆ ಮೇಲ್ಪಟ್ಟು ಓದಿದವರು ಯಾರೂ ಇದ್ದಿಲ್ಲ.

ಆದರೆ ೧೯೧೫ ರ ಅವಧಿಯಲ್ಲಿ ಒಬ್ಬ ಹೈಸ್ಕೂಲ್ ವಿದ್ಯಾರ್ಥಿ, ೧೫ ಲೋಯರ್ ಸೆಕೆಂಡರಿ ವಿದ್ಯಾರ್ಥಿಗಳು ಫ್ರೀಷಿಪ್ ಪಡೆದಿದ್ದರೆಂದು ತಿಳಿಯುತ್ತದೆ.[೬೬] ಅಲ್ಲದೆ ವಿವಿಧ ಸರಕಾರಿ ಇಲಾಖೆಗಳ ಸೇವೆಯಲ್ಲಿ ೨೫ ರೂ ವೇತನ ಹೊಂದಿರುವವರು ೧೪೩ಜನ, ೨೫ ರಿಂದ ೫೦ ರೂ ವೇತನ ಹೊಂದಿದವರು ೫೭ ಜನ ಹಾಗೂ ಅದಕ್ಕಿಂತಲೂ ಹೆಚ್ಚಿನ ವೇತನವನ್ನು ಪಡೆಯುತ್ತಿರುವವರ ಸಂಖ್ಯೆ ೫ ಎಂದು ತಿಳಿದುಬರುತ್ತದೆ.[೬೭] ಇದರಿಂದ ಕುರುಬ ಸಮುದಾಯದ ಶಿಕ್ಷಣ ಮಟ್ಟ ಕೆಳಹಂತದಲ್ಲಿದ್ದು, ಉನ್ನತ ಹುದ್ದೆಗಳನ್ನು ಪಡೆಯಲು ಸಾದ್ಯವಾಗಲಿಲ್ಲ ಎಂಬುದು ಸ್ಪಷ್ಟಗೊಳ್ಳುತ್ತದೆ.

ಮಿಲ್ಲರ್ ಸಮಿತಿ ನೀಡಿದ ವರದಿಗಳನ್ನು ಮೈಸೂರು ಅರಸರು ಅನುಷ್ಠಾನ ಗೊಳಿಸದಿದ್ದಲ್ಲಿ ಬ್ರಾಹ್ಮಣೇತರು ಶಿಕ್ಷಣ ಪಡೆಯುವ ಅವಕಾಶದಿಂದ ವಂಚಿತರಾಗುತ್ತಿದ್ದರು. ಶಿಕ್ಷಣ, ಉದ್ಯೋಗಗಳಲ್ಲಿ ಮೀಸಲಾತಿಯನ್ನು ಕಲ್ಪಿಸಿಕೊಟ್ಟರು. ಇದರಿಂದ ಬ್ರಾಹ್ಮಣೇತರರ ಶೈಕ್ಷಣಿಕ ಹಾಗೂ ಉದ್ಯೋಗದ ಸ್ಥಿತಿ ಬದಲಾವಣೆಗೊಂಡಿತೆಂದು ಹೇಳಬಹುದು. ಕ್ರಿ.ಶ.೧೯೫೯ರಲ್ಲಿ ಡಾ.ಆರ್.ನಾಗನಗೌಡರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಯು ಸರಕಾರಕ್ಕೆ ವರದಿ ನೀಡಿತು. ಅದರ ಪ್ರಕಾರ ಕುರುಬ ಜನಾಂಗವು ಲಿಂಗಾಯತರ, ಒಕ್ಕಲಿಗರ, ಮಹ್ಮದೀಯರ ನಂತರ ನಾಲ್ಕನೇ ಸ್ಥಾನದಲ್ಲಿತ್ತು. ಅದರಂತೆ ಕುರುಬರು ೧೪,೫೫,೭೫೪ (ಶೇ೬೮.೮೩)ರಷ್ಟು ಜನಸಂಖ್ಯೆ, ಶಿಕ್ಷಣ ಹಾಗೂ ಉದ್ಯೋಗದಲ್ಲಿ ಸ್ಥಾನಪಡೆದಿದ್ದರೆಂದು ತಿಳಿಯುತ್ತದೆ.[೬೮] ಬ್ರಾಹ್ಮಣೇತರು ತಮ್ಮ ಜನಸಂಖ್ಯೆಗೆ ಆಧಾರಿತವಾಗಿ ಶಿಕ್ಷಣದ ಲಾಭ ಪಡೆದಿದ್ದರೆಂದು ಕಾಣುತ್ತದೆ. ಈ ಹಿಂದುಳಿದ ಜನಾಂಗದವರ ಏಳ್ಗೆಗೆ ವಸತಿ ನಿಲಯಗಳನ್ನು ಸ್ಥಾಪಿಸಬೇಕು, ಶಿಷ್ಯವೇತನ, ಉಚಿತ ಶಿಕ್ಷಣ ದೊರೆಯುವಂತಾಗಬೇಕು. ಹಾಗೂ ೧೨೦೦ ರೂ.ಗಳಿಗೂ ಕಡಿಮೆ ವಾರ್ಷಿಕ ವರಮಾನವಿರುವ ಮಕ್ಕಳಿಗೆ ಸಂಪೂರ್ಣ ಉಚಿತ ಶಿಕ್ಷಣ, ವಸತಿ ಸೌಲಭ್ಯ ದೊರಕಿಸಿಕೊಡಬೇಕೆಂದು ನಾಗನಗೌಡರ ಸಮಿತಿ ಶಿಫಾರಸ್ಸು ಮಾಡಿತು.[೬೯]

ಕ್ರಿ.ಶ.೧೯೫೦-೬೦ರ ಅವಧಿಯಲ್ಲಿ ಸುಮಾರು ೧೪.೫೫.೮೦೦ರಷ್ಟಿದ್ದ ಕುರುಬ ಜನಸಂಖ್ಯೆಯಲ್ಲಿ ಕೇವಲ ೨೬೦೯ ವಿದ್ಯಾರ್ಥಿಗಳು ಮಾತ್ರ ಹೈಸ್ಕೂಲ್ ಕಲಿಯುತ್ತಿದ್ದರು. ಅಂದರೆ ಶೇ.೭ರಷ್ಟಿದ್ದ ಜನಸಂಖ್ಯೆಗೆ ಹೈಸ್ಕೂಲಿನಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ೧.೮ರಷ್ಟು ಮಾತ್ರವಿದ್ದದ್ದು ಕಂಡುಬರುತ್ತದೆ.[೭೦] ನಂತರ ಇದರ ಸಂಖ್ಯೆಯಲ್ಲಿ ಅಧಿಕ ಪ್ರಮಾಣ ಕಂಡುಬರತೊಡಗಿತು. ಅಂದು ಮುಖ್ಯಮಂತ್ರಿಗಳಾಗಿದ್ದ ದೇವರಾಜು ಅರಸುರವರೇ ಇದಕ್ಕೆ ಕಾರಣ ಎಂದು ಹೇಳಬಹುದಾಗಿದೆ. ಶಿಕ್ಷಣಕ್ಕೆ ಅಧಿಕ ಮಹತ್ವ ನೀಡಿದ ಸರ್ಕಾರ ಅನೇಕ ಶಾಲಾ-ಕಾಲೇಜುಗಳನ್ನು ಸ್ಥಾಪಿಸಿತು. ಅದೇರೀತಿ ಅನೇಕ ಶಾಲಾ-ಕಾಲೇಜುಗಳು ಅಸ್ತಿತ್ವಕ್ಕೆ ಬಂದು ಕೆಳಸ್ತರದವರಿಗೆ ಮತ್ತಷ್ಟು ಶಿಕ್ಷಣದ ಸೌಲಭ್ಯವನ್ನು ಒದಗಿಸಿಕೊಟ್ಟವು ಎಂದು ತಿಳಿಯುತ್ತದೆ.

ಭಾರತದಾದ್ಯಂತ ನೆಲೆಸಿರುವ ಕುರುಬರಲ್ಲಿ ಶೇ೫೧ರಷ್ಟು ಶಿಕ್ಷಣವನ್ನು ಕರ್ನಾಟಕದ ಕುರುಬರು ಹೊಂದಿದ್ದಾರೆ.[೭೧] ಕರ್ನಾಟಕದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಾಕ್ಷರರಾಗಿದ್ದಾರೆ. ಆದರೆ ಕರ್ನಾಟಕಲ್ಲಿ ಅಕ್ಷರಸ್ಥರಿಗಿಂತ ಅಧಿಕವಾಗಿ ಅನಕ್ಷರಸ್ಥರನ್ನು ಪಡೆದಿರುವ ಜಿಲ್ಲೆಗಳಲ್ಲಿ ಹೈದರಾಬಾದ ಕರ್ನಾಟಕ ಭಾಗದ ಜಿಲ್ಲೆಗಳಾದ ಬಳ್ಳಾರಿ, ಬೀದರ, ಗುಲಬರ್ಗಾ, ಕೊಪ್ಪಳ, ರಾಯಚೂರು ಪ್ರಮುಖವಾಗಿವೆ. ಬೆಂಗಳೂರು ನಗರ ಮತ್ತು ಗ್ರಾಮಾಂತರ, ಕೋಲಾರ, ಶಿವಮೊಗ್ಗ, ದಾವಣಗೆರೆ ಮೊದಲಾದ ದಕ್ಷಿಣ ಕರ್ನಾಟಕದ ಕುರುಬರಲ್ಲಿ ಶಿಕ್ಷಣದ ಪ್ರಮಾಣ ಅಧಿಕವಿದೆ. ಉತ್ತರ ಕರ್ನಾಟಕದಲ್ಲಿ ಶಿಕ್ಷಣದ ಕುರಿತ ಅರಿವೂ ಕಾಳಜಿ ಕಡಿಮೆ ಎನ್ನಬಹುದು.

ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ಕುರುಬರು ಜನಸಂಖ್ಯಾ ಪ್ರಮಾಣದಲ್ಲಿ ಎರಡನೇ ಸ್ಥಾನ ಹೊಂದಿದ್ದಾರೆ. ಆದರೆ ಜನಸಂಖ್ಯೆ ಆಧಾರಿತ ಪ್ರವಾಣದಲ್ಲಿ ಶಿಕ್ಷಣದ ಪ್ರಮಾಣ ಏರಿಕೆ ಕಂಡಿಲ್ಲ. ಕುರುಬರಿಗೆ ಕುರಿ ಸಾಕಾಣಿಕೆ, ಕೃಷಿ, ಕಂಬಳಿನೇಯ್ಗೆಯಂತಹ ಕಾರ್ಯಗಳಲ್ಲಿ ಆಸಕ್ತಿ ಅಧಿಕವಾಗಿ ಶಿಕ್ಷಣ ಒಲವು ಕಡಿಮೆಯಾಗಿರುವುದೇ ಇದಕ್ಕೆ ಕಾರಣ. ಅದರಲ್ಲೂ ಕುರುಬರ ಶಿಕ್ಷಣ ಸಂಸ್ಥೆಗಳು ಕಡಿಮೆ ಸಂಖ್ಯೆಯಲ್ಲಿವೆ. ಇಂದಿಗೂ ಕುರುಬರು ಅಧಿಕವಾಗಿ ನೆಲೆಸಿರುವುದು ಗ್ರಾಮಗಳಲ್ಲಿ. ಗ್ರಾಮಗಳಲ್ಲಿ ಶಿಕ್ಷಣದ ಆಸಕ್ತಿ ಕಡಿಮೆಯಾಗಿರುತ್ತದೆ. ಕುರುಬರು ಕುರಿಸಾಕಾಣಿಕೆ ಮಾಡುತ್ತ ತಮ್ಮ ಪರಿವಾರದೊಂದಿಗೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ಸುಮಾರು ೫ ರಿಂದ ೬ ತಿಂಗಳವರೆಗೆ ವಲಸೆ ಹೋಗುವುದು ಕಂಡು ಬರುತ್ತದೆ. ಹೀಗಾಗಿ ಒಂದೆಡೆ ನಿಲ್ಲುವುದು ಕಠಿಣವಾದ್ದರಿಂದ ಮಕ್ಕಳಿಗೆ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ. ಆರ್ಥಿಕ ಸ್ಥಿತಿಯ ಅನಾನುಕೂಲತೆಯಿಂದಾಗಿ ಶಿಕ್ಷಣದಿಂದ ವಂಚಿತರಾಗಿರುವುದು ಕಂಡುಬರುತ್ತದೆ.

ಕೊಪ್ಪಳದ ನಾಲ್ಕು ತಾಲೂಕುಗಳಲ್ಲಿ ನೆಲೆಸಿರುವ ಕುರುಬರ ಶಿಕ್ಷಣ ಪ್ರಮಾಣದಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕುಷ್ಟಗಿ, ಯಲಬುರ್ಗಾದಂಥ ಎರೆಭೂಮಿ ಹೊಂದಿರುವ ಪ್ರದೇಶಗಳಲ್ಲಿ ಶಿಕ್ಷಣ ಪ್ರಮಾಣ ಕಡಿಮೆಯಿದ್ದರೆ, ಗಂಗಾವತಿ, ಕೊಪ್ಪಳ ಭಾಗದ ನೀರಾವರಿ ಭೂಮಿ, ವ್ಯಾಪಾರವನ್ನು ಹೊಂದಿರುವ ಪ್ರದೇಶಗಳಲ್ಲಿ ಶಿಕ್ಷಣ ಪ್ರಮಾಣ ಅಧಿಕವಾಗಿದೆ. ಕುರುಬರಲ್ಲಿ ಶಿಕ್ಷಣದ ಅಧಿಕ ಮಟ್ಟವೆಂದರೆ ಪ್ರೌಢಶಾಲೆ ಎಂದು ಹೇಳಬಹುದಾಗಿದೆ. ಪ್ರೌಢಶಿಕ್ಷಣವನ್ನು ಮುಗಿಸಿ ಕಾಲೇಜು ಶಿಕ್ಷಣ ಪಡೆಯುವವರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿದೆ. ಕ್ಷೇತ್ರ ಕಾರ್ಯದಲ್ಲಿ ದೊರೆತ ಮಾಹಿತಿ ಹಾಗೂ ಕುಷ್ಟಗಿ ತಾಲೂಕಾ ಸಾಕ್ಷರತಾ ಸಮಿತಿಯ ಸಂಯೋಜಕರಾದ ಬಿ.ಎಂ.ಗಟ್ಟಿಯವರು ನೀಡಿದ ಮಾಹಿತಿಯ ಆಧಾರದ ಮೇಲೆ ಈ ಕೆಳಗಿನ ಕೋಷ್ಟಕವನ್ನು ನೀಡಲಾಗಿದೆ.

| ಕ್ರ.ಸಂ. | ತಾಲೂಕು | ಪ್ರಾಥಮಿಕ ಶಿಕ್ಷಣ | ಪ್ರೌಢ ಶಿಕ್ಷಣ | ಪದವಿ | ಉನ್ನತ ಪದವಿ |
|---|---|---|---|---|---|
| ೧. | ಕೊಪ್ಪಳ | ೨೬% | ೧೫% | ೧೦% | ೧೦ |
| ೨. | ಕುಷ್ಟಗಿ | ೨೫% | ೧೧% | ೦೮% | ೦೬ |
| ೩. | ಯಲಬುರ್ಗಾ | ೨೦% | ೦೯% | ೦೬% | ೦೫ |
| ೪. | ಗಂಗಾವತಿ | ೨೮% | ೧೩% | ೦೯% | ೦೮ |

ಪಶುಪಾಲನೆ, ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುತ್ತಿದ್ದ ಕುರುಬರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಇದನ್ನು ಮನಗಂಡ ಪ್ರಮುಖ ವ್ಯಕ್ತಿಗಳು ಅನೇಕ ಶಾಲೆ-ಕಾಲೇಜುಗಳನ್ನು ಪ್ರಾರಂಭಿಸಲು ಮುಂದಾದರು. ಕರ್ನಾಟಕದಾದ್ಯಂತ ಅನೇಕ ಶಿಕ್ಷಣ ಸಂಸ್ಥೆಗಳು ಸ್ಥಾಪನೆಯಾಗಿ ಕುರುಬರ ಶಿಕ್ಷಣಕ್ಕೆ ಸಹಾಯಕವಾದವು. ಅದೇ ರೀತಿ ಕೊಪ್ಪಳ ಭಾಗದಲ್ಲೂ ಕೆಲವು ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡವು.

### ೬.೨.೩ ಶಿಕ್ಷಣ ಸಂಸ್ಥೆಗಳು

### ೧. ಕರ್ನಾಟಕ ಕುರುಬರ ಬೋರ್ಡಿಂಗ್, ಕೊಪ್ಪಳ

ಈ ಸಂಸ್ಥೆಯನ್ನು ೧೯೫೪ರಲ್ಲಿ ಸ್ಥಾಪಿಸಲಾಯಿತು. ಸನ್ಯಾನ್ಯ ಹಿರೇಗೌಡ್ರು ಮಾಲಿ ಪಾಟೀಲ್ ಬಿಸರಳ್ಳಿಯವರು ಸ್ಥಾಪಿಸಿದರು. ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳ ವಿದ್ಯಾರ್ಥಿಗಳಿಗೆ ಊಟ-ವಸತಿ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಇದರಿಂದ ಅನೇಕ ಬಡವಿದ್ಯಾರ್ಥಿಗಳಿಗೆ ಅನುಕೂಲವಾಯಿತು. ನಂತರ ೧೯೮೦ರಲ್ಲಿ ಕಾಳಿದಾಸ ಪ್ರೌಢಶಾಲೆಯನ್ನು ಚನ್ನಬಸಪ್ಪ ಭೂತಣ್ಣನವರ್ ಚಿಕ್ಕಸಿಂದೋಗಿ ಎಂಬುವವರು ಸ್ಥಾಪನೆಗೆ ಪ್ರಮುಖ ಕಾರಣರಾದರು. ಈ ಪ್ರೌಢಶಾಲೆಯಲ್ಲಿ ಕುರುಬ ವಿದ್ಯಾರ್ಥಿಗಳಿಗೆ ಆದ್ಯತೆ ನೀಡಿದ್ದರೂ ಬೇರೆ ಸಮುದಾಯದವರಿಗೂ ಅವಕಾಶ ಕಲ್ಪಿಸಲಾಯಿತು. ೨೦೦೦-೨೦೦೧ರಲ್ಲಿ ಕಾಳಿದಾಸ ಪ್ರಾಥಮಿಕ ಶಾಲೆಯನ್ನು ಸಹ ಪ್ರಾರಂಭಿಸಲಾಯಿತು. ಸುಮಾರು ೪ ಎಕರೆ ಭೂಮಿಯಲ್ಲಿ ಸುಂದರವಾದ ಶಾಲೆಕಟ್ಟಡವನ್ನು ನಿರ್ಮಿಸಲಾಗಿದೆ. ಇಂದು ಈ ಸಂಸ್ಥೆ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದು, ಆನೇಕ ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡಿದೆ. ಈ ಸಂಸ್ಥೆಗೆ ಚನ್ನಬಸಪ್ಪ ಬೂತಣ್ಣನವರ್, ಹನುಮಂತಪ್ಪ ಅಂಗಡಿ, ಕೆ.ಬಸವರಾಜ ಹಿಟ್ನಾಳ, ಕರಿಯಣ್ಣ ಸಂಗಟಿ ಅಧ್ಯಕ್ಷರಾಗಿದ್ದರು. ಇಂದು ಅಧ್ಯಕ್ಷರಾಗಿ ಹನುಮಂತಪ್ಪ ಅಂಗಡಿಯವರಿದ್ದಾರೆ. ಸರಕಾರದಿಂದ ಅನುದಾನ ಪಡೆದ ಸಂಸ್ಥೆಯಾಗಿದೆ.

### ೨.ಕನಕದಾಸ ಹಿರಿಯ ಪ್ರಾಥಮಿಕ ಶಾಲೆ, ಮುಧೋಳ

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಮುಧೋಳ ಗ್ರಾಮದಲ್ಲಿ ಕ್ರಿ.ಶ.೧೯೮೭-೮೮ರಲ್ಲಿ ಕನಕದಾಸ ಹಿರಿಯ ಪ್ರಾಥಮಿಕ ಶಾಲೆ ಪ್ರಾರಂಭಗೊಂಡಿತು. ಇದರ ಸ್ಥಾಪಕರು ಶಿವಪ್ಪ ಹಿರೇಹಾಳ, ೧ನೇ ತರಗತಿಯಿಂದ ೭ನೇ ತರಗತಿಯವರೆಗೆ ಶಾಲೆಯಿದೆ. ಇದು ಅನುದಾನ ರಹಿತವಾಗಿದ್ದು, ಸ್ವಂತ ಕಟ್ಟಡವನ್ನು ಹೊಂದಿದೆ. ಸುಮಾರು ೪೦೦-೫೦೦ ರಷ್ಟು ವಿದ್ಯಾರ್ಥಿಗಳ ಸಂಖ್ಯೆಯಿದೆ.

### ೩. ರಾಜರಾಜೇಶ್ವರಿ ವಿದ್ಯಾಸಂಸ್ಥೆ, ಬಸವಪಟ್ಟಣ

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಬಸವಪಟ್ಟಣದಲ್ಲಿ ರಾಜರಾಜೇಶ್ವರಿ ಸಂಸ್ಥೆಯನ್ನು ಕ್ರಿ.ಶ.೧೯೮೯ರಲ್ಲಿ ಸ್ಥಾಪಿಸಲಾಯಿತು. ಈ ಸಂಸ್ಥೆಯನ್ನು ನಂಜುಂಡೇಶ್ವರ ಮಠದ ವತಿಯಿಂದ ಸ್ಥಾಪಿಸಲಾಗಿದೆ. ವಿ.ಸಣ್ಣಪ್ಪನವರು ಅಧ್ಯಕ್ಷರಾಗಿದ್ದಾರೆ, ಆಂಗ್ಲ ಮತ್ತು ಕನ್ನಡ ಮಾಧ್ಯಮ ಪ್ರೌಢಶಾಲೆಯಾಗಿದೆ. ೧ನೇ ತರಗತಿಯಿಂದ ೧೦ ತರತಗತಿಯವರಿಗೆ ಶಾಲೆಯು ಅನೇಕ ಉತ್ತಮ ರೀತಿಯ ಸೌಕರ್ಯಗಳನ್ನು ಹೊಂದಿದೆ.

### ೪. ಶಿವಪದ್ಮ ವಿದ್ಯಾಸಂಸ್ಥೆ, ಕುಷ್ಟಗಿ

ಕೊಪ್ಪಳ ಜಿಲ್ಲೆಯ ಕುಷ್ಟಗಿಯಲ್ಲಿ ಕ್ರಿ.ಶ.೧೯೮೩ರಲ್ಲಿ ಶಿವಪದ್ಮ ವಿದ್ಯಾಸಂಸ್ಥೆಯನ್ನು ಪ್ರಾರಂಭಿಸಲಾಯಿತು. ಇದರ ಸ್ಥಾಪಕರು ನವಲಿಸಿದ್ಧಪ್ಪ ಬಿ.ತೋಂಟಾಪುರ ಅಂಧ, ಅಂಗವಿಕಲ ಮಕ್ಕಳಿಗೆ ಸ್ಥಾಪಿತವಾದ ಈ ಸಂಸ್ಥೆಯು ಉಚಿತ ಪ್ರಸಾದ ನಿಲಯವನ್ನು

ಸ್ಥಾಪಿಸಿತು. ನಂತರ ೧೦ನೇ ತರಗತಿವರೆಗೆ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಹೆಣ್ಣು ಮಕ್ಕಳಿಗೆ ಕಸೂತಿ, ವಿವಿಧ ತರಬೇತಿಗಳನ್ನು ನೀಡುವ ಶಾಲೆ ಪ್ರಾರಂಭಿಸಿದರು. ಇಂದು ಸರ್ಕಾರ ಕೇವಲ ೨೫ ಮಕ್ಕಳಿಗೆ ಮಾತ್ರ ಅನುದಾನ ನೀಡುತ್ತದೆ. ಆದರೆ ಈ ಸಂಸ್ಥೆಯಲ್ಲಿ ೫೦ಕ್ಕಿಂತಲೂ ಅಧಿಕ ಮಕ್ಕಳಿದ್ದಾರೆ. ಅಧಿಕವಾಗಿ ಮಕ್ಕಳ ಜವಾಬ್ದಾರಿಯನ್ನು ಸಂಸ್ಥೆಯು ನಿರ್ವಹಿಸುತ್ತಿರುವುದು ವಿಶೇಷವಾಗಿದೆ.

**೫. ಶ್ರೀ ಕನಕ ವಿದ್ಯಾಪೀಠ ಸಂಸ್ಥೆ( ವಿದ್ಯಾರ್ಥಿ ನಿಲಯ), ಕನಕಗಿರಿ**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಕನಕಗಿರಿಯಲ್ಲಿ ಕ್ರಿಶ.೨೦೦೦-೦೧ ರಲ್ಲಿ ಕನಕ ವಿದ್ಯಾಪೀಠ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಇದು ವಿದ್ಯಾರ್ಥಿನಿಲಯವಾಗಿದೆ. ಶ್ರೀ ನಾಗಪ್ಪ ಸಾಲೋಣಿಯವರ ಅಧ್ಯಕ್ಷತೆಯಲ್ಲಿ ಈ ಸಂಸ್ಥೆ ನಡೆಯುತ್ತಿದೆ. ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನೀಡುವ ಸಂಸ್ಥೆಯಾಗಿದೆ. ಈ ಸಂಸ್ಥೆಯಲ್ಲಿ ೫೦ ವಿದ್ಯಾರ್ಥಿಗಳಿಗೆ ಮಾತ್ರ ಅವಕಾಶವಿದೆ. ಪ್ರತಿವರ್ಷ ಉಚಿತ ಪುಸ್ತಕ ವಿತರಣೆ, ಉಚಿತ ಮನೆ ಪಾಠದ ವ್ಯವಸ್ಥೆ ಮಾಡಿಕೊಡಲಾಗುತ್ತಿದೆ. ಕುರುಬರಿಗೆ ಅಧಿಕ ಅವಕಾಶ ನೀಡಿ ಅವರ ಶೈಕ್ಷಣಿಕ ಪ್ರಗತಿಗೆ ಶ್ರಮಿಸುತ್ತಿರುವ ಸಂಸ್ಥೆಯಾಗಿದೆ. ಇತ್ತೀಚೆಗೆ ಕ್ರಾಂತಿವೀರ ಸಂಗೊಳ್ಳಿರಾಯಣ್ಣ ಕಿರಿಯ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಲಾಗಿದೆ.

**೬. ಓಲೇಕಾರ ಶಿಕ್ಷಣ ಸಂಸ್ಥೆ, ಕೊಪ್ಪಳ**

ಸುಮಾರು ೧೯೯೨-೯೩ರಲ್ಲಿ ಪ್ರಾರಂಭಿಸಿದ ಓಲೇಕಾರ ಶಿಕ್ಷಣ ಸಂಸ್ಥೆ ಪೂರ್ವಪ್ರಾಥಮಿಕ ದಿಂದ ಪ್ರೌಢದ ಹಂತದವರೆಗೂ ಶಿಕ್ಷಣ ವ್ಯವಸ್ಥೆ ಹೊಂದಿದೆ. ಮೊದಲಿಗೆ ಶ್ರೀಮತಿ ಓಲೇಕಾರರವರು ಅಧ್ಯಕ್ಷರಾಗಿದ್ದರು, ಇಂದು ಪಾಂಡುರಂಗ ಓಲೇಕಾರರವರು ಅಧ್ಯಕ್ಷರಾಗಿದ್ದಾರೆ. ಶಿಕ್ಷಣದ ಜೊತೆಗೆ ಅನೇಕ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ.

ಮಾಜಿ ಎಂ.ಎಲ್.ಸಿ. ಯಾದ ಕರಿಯಣ್ಣ ಸಂಗಟಿಯವರು ಡಿ.ಎಡ್ ವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. ಇದರಿಂದಾಗಿ ಕೇವಲ ಪ್ರಾಥಮಿಕ, ಪ್ರೌಢಶಾಲೆಗಳನ್ನು ಮಾತ್ರ ಹೊಂದಿದ್ದ ಕುರುಬರ ಸಂಸ್ಥೆಗಳಲ್ಲಿ ಉನ್ನತ ಮಟ್ಟದ ಶಿಕ್ಷಣಕ್ಕೂ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣನವರ, ಪ್ರ:ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೭೭

೨. ಅದೇ, ಪು-೭೭

೩. ಅದೇ, ಪು-೭೮

೪. ಅದೇ, ಪು-೭೯

೫. ಅದೇ, ಪು-೭೯

೬. ಅದೇ, ಪು-೮೦

೭. ಕೊಪ್ಪಳ : ಒಂದು ಸಾಂಸ್ಕೃತಿಕ ಪರಂಪರೆ, ಲೇ: ಬಿ.ಸಿ.ಪಾಟೀಲ, ಪ್ರ: ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ-೨೦೦೧. ಪು-೧೫

೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ (ಬಳ್ಳಾರಿ ಜಿಲ್ಲೆ), ಸಂ: ದೇವರಕೊಂಡಾರೆಡ್ಡಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪು-೫೮೬

೯. ಅದೇ, ಪು-೫೮೫

೧೦. ಹಾಲುಮತ ಕುರುಬ ಜನಾಂಗದ ಇತಿಹಾಸ, ಲೇ:ಪ್ರೊ.ಒಡೆಯರ.ಡಿ.ಹೆಗಡೆ, ಪ್ರ:ಅಖಿಲಾ ಏಜೆನ್ಸಿ, ಮೈಸೂರು-೨೦೦೫. ಪು-೧೫೧

೧೧. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೯೧

೧೨. ಅದೇ, ಪು-೮೪

೧೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ. ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೨. ಪು-೪೦೪

೧೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨(ಕೊಪ್ಪಳ ಜಿಲ್ಲೆ), ಸಂ: ದೇವರಕೊಂಡಾರೆಡ್ಡಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮, ಪು-೯೦

೧೫. ಕರ್ನಾಟಕ ಚರಿತ್ರೆ, ಸಂ:೩ ಪ್ರ.ಸಂ: ಪ್ರೊ.ಬಿ.ಷೇಕ್‌ಅಲಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೫೨

೧೬. ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨(ಕೊಪ್ಪಳ ಜಿಲ್ಲೆ), ಸಂ: ದೇವರಕೊಂಡಾರೆಡ್ಡಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪು-೬೫

೧೭. ಕರ್ನಾಟಕ ಚರಿತ್ರೆ, ಸಂ:೩, ಪ್ರ.ಸಂ:ಪ್ರೊ. ಬಿ.ಷೇಕ್‌ಅಲಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೫೭

೧೮. ಕೊಪ್ಪಳ ಜಿಲ್ಲಾ ದರ್ಶನ, ಲೇ:ಡಾ.ಬಿ.ಆರ್.ಚಂದ್ರಶೇಖರ ಸಂ.ಎಚ್.ಎಸ್.ಪಾಟೀಲ, ಪ್ರ: ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೨೦೦೫. ಪು-೫೭

೧೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್‌ಹೌಸ್, ಬೆಂಗಳೂರು-೨೦೦೨. ಪು-೪೦೭

೨೦. ಕರ್ನಾಟಕ ಚರಿತ್ರೆ ಸಂಪುಟ-೩, ಪ್ರ.ಸಂ: ಪ್ರೊ. ಬಿ.ಷೇಕ್‌ಅಲಿ, ಪ್ರ: ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೬೧

೨೧. ಅದೇ, ಪು-೧೬೧

೨೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨(ಕೊಪ್ಪಳ ಜಿಲ್ಲೆ), ಸಂ: ದೇವರಕೊಂಡಾರೆಡ್ಡಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪು-೧೪೫

೨೩. ಅದೇ, ಪು-೧೨

೨೪. ಕೊಪ್ಪಳ ಜಿಲ್ಲಾ ದರ್ಶನ, ಲೇ:ಡಾ.ಬಿ.ಆರ್.ಚಂದ್ರಶೇಖರ, ಸಂ.ಎಚ್.ಎಸ್.ಪಾಟೀಲ,ಪ್ರ: ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೨೦೦೫. ಪು-೫೭

೨೫. ಕನ್ನಡ ವಿಶ್ವಕೋಶ ಸಂಪುಟ-೩, ಪ್ರ.ಸಂ:ಹಾ.ಮಾ.ನಾಯಕ, ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೭೧. ಪು-೫೩೧

೨೬. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೦೦

೨೭. ಕನ್ನಡ ವಿಶ್ವಕೋಶ ಸಂಪುಟ-೩, ಪ್ರ.ಸಂ:ಹಾ.ಮಾ.ನಾಯಕ, ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೭೧. ಪು-೫೩೨

೨೮. ಅದೇ, ಪು-೫೩೨

೨೯. ಅದೇ, ಪು-೫೩೨

೩೦. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩, ಪು-೧೦೨

೩೧. ಅದೇ, ಪು-೧೦೨

೩೨. ಅದೇ, ಪು-೧೦೨

೩೩. ಅದೇ, ಪು-೧೦೩

೩೪. ಕನ್ನಡ ವಿಶ್ವಕೋಶ ಸಂಪುಟ-೩, ಪ್ರ.ಸಂ:ಹಾ.ಮಾ.ನಾಯಕ, ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೭೧. ಪು-೫೩೪

೩೫. ಕರ್ನಾಟಕದ ಕುರುಬರು, ಲೇ:ಡಾ.ಶಿವಾನಂದ ಗುಬ್ಬಣ್ಣವರ, ಪ್ರ:ಲಕ್ಷ್ಯ ಪ್ರಕಾಶನ, ಧಾರವಾಡ-೧೯೯೩. ಪು-೧೧೭

೩೬. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ: ಡಾ.ಚೆನ್ನಬಸವಯ್ಯ ಹಿರೇಮಠ, ಪ್ರ:ಸಂಗಣ್ಣನವರು, ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ-೧೯೯೫. ಪು-೨೧೮

೩೭. ಅದೇ, ಪು-೨೧೮

೩೮. ಶಾಸನಗಳಲ್ಲಿ ಕರ್ನಾಟಕ ವರ್ತಕರು, ಸಂ:ಬಿ.ಆರ್.ಹಿರೇಮಠ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೬. ಪು-೮

೩೯. ಅದೇ, ಪು-೭೧

೪೦. ಅದೇ, ಪು-೭೧

೪೧. ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್‌ಡಿ ಪ್ರಬಂಧ), ಸಂ.ಶೋ:ಸಾಯಬಣ್ಣ ಕ. ಮೇಲಕಾರ, ಪ್ರ ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೧೫೨

೪೨. ಕುರುಗೋಡು ಸಿಂದರು : ಒಂದು ಅಧ್ಯಯನ, ಲೇ:ಡಾ.ಚನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ-೧೯೯೫. ಪು-೨೨೫

೪೩. ಹಾಲಕೆನೆ, ಪ್ರ.ಸಂ:ಡಾ.ಶ್ರೀರಾಮ ಇಟ್ಟಣ್ಣವರ, ಲೇ: ಡಾ.ಎಫ್.ಟಿ.ಹಳ್ಳಿಕೇರಿ, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪುರ-೨೦೦೨. ಪು-೨೪

೪೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಎಂ.ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೨. ಪು-೪೨೭

೪೫. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಸಂ:ಬಿ.ಆರ್.ಹಿರೇಮಠ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೬. ಪು-೧೫೩

೪೬. ಅದೇ, ಪು-೧೭೨

೪೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ (ಕೊಪ್ಪಳ ಜಿಲ್ಲೆ), ಸಂ:ಡಾ.ದೇವರಕೊಂಡಾರೆಡ್ಡಿ, ಪ್ರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪು-೧೭೫

೪೮. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಸಂ:ಬಿ.ಆರ್.ಹಿರೇಮಠ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೬. ಪು-೧೫೩

೪೯. ಅದೇ, ಪು-೧೫೩

೫೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬(ಮಹಾರಾಷ್ಟ್ರದ ಕನ್ನಡ ಶಾಸನಗಳು). ಸಂ:ಡಾ.ಜಿ.ಎನ್.ಉಪಾಧ್ಯ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೧. ಪು-೧೪೬

೫೧. ಹಾಲಕೆನೆ, ಪ್ರ.ಸಂ:ಡಾ.ಶ್ರೀರಾಮ ಇಟ್ಟಣ್ಣವರ್, ಲೇ: ಡಾ.ಎಫ್.ಟಿ.ಹಳ್ಳಿಕೇರಿ, ಪ್ರ: ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ಬಿಜಾಪುರ-೨೦೦೨. ಪು-೭೪

೫೨. ಕಾಯಕಯೋಗಿ, ಲೇ: ಬ.ಪ.ನಾಯ್ಕರ್, ಪ್ರ:ವಿದ್ಯಾನಿಧಿ ಪ್ರಕಾಶನ ರಜತ ಮಹೋತ್ಸವ ಸಮಿತಿ, ಗದಗ-೨೦೦೨. ಪು-೩೫೯

೫೩. ಮೇಷವಿಜಯ, ಲೇ: ಎಂ.ಕರಿಯಪ್ಪ, ಪ್ರ: ಸಿ.ವಿ.ಜಿ.ಪಬ್ಲಿಕೇಷನ್, ಬೆಂಗಳೂರು-೨೦೦೧. ಪು-೩

೫೪. ಅದೇ, ಪು-೩

೫೫. ಅದೇ, ಪು-೬

೫೬. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಹೆಚ್.ಎಸ್. ಗೋಪಾಲ್‌ರಾವ್, ಪ್ರ: ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರು-೧೯೯೩. ಪು-೧೫೫

೫೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ಚಿದಾನಂದ ಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೨. ಪು-೨೨೬

೫೮. ಅದೇ, ಪು -೨೨೬

೫೯. ಕುರುಗೋಡು ಸಿಂದರು ಒಂದು ಅಧ್ಯಯನ, ಲೇ: ಚೆನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರ ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ-೧೯೯೫. ಪು-೧೮೨

೬೦. ಕನ್ನಡ ವಿಶ್ವಕೋಶ ಸಂಪುಟ-೪, ಪ್ರ.ಸಂ: ಹಾ.ಮಾ.ನಾಯಕ, ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ಪು-೧೩೯

೬೧. ಅದೇ, ಪು-೧೩೯

೬೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ:ಡಾ.ಚಿದಾನಂದಮೂರ್ತಿ, ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೨. ಪು-೨೩೦

೬೩. ಅದೇ, ಪು-೨೩೯

೬೪. ಅದೇ, ಪು-೧೫೫

೬೫. ಅದೇ, ಪು- ೧೫೬

೬೬. ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಲೇ:ಬಿ.ಸಿ.ಪಾಟೀಲ್, ಪ್ರ: ಹರಿಹರ ಪ್ರಕಾಶನ, ಕೊಪ್ಪಳ-೨೦೦೧. ಪು-೮೮

೬೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ಚಿದಾನಂದ ಮೂರ್ತಿ, ಪ್ರ: ಸಪ್ನಬುಕ್‌ಹೌಸ್, ಬೆಂಗಳೂರು-೨೦೦೨. ಪು-೨೩೦

೬೮. ಅದೇ, ಪು-೨೩೦

೬೯. ಅದೇ, ಪು-೨೩೦

೭೦. ಅದೇ, ಪು-೨೩೨

೭೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ (ಕೊಪ್ಪಳ ಜಿಲ್ಲೆ), ಸಂ. ದೇವರಕೊಂಡಾರೆಡ್ಡಿ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೮. ಪು-೧೩೮

೭೨. ಅದೇ, ಪು-೨೩೮

೭೩. ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಲೇ: ಬಿ.ಸಿ.ಪಾಟೀಲ್, ಪ್ರ:ಹರಿಹರ ಪ್ರಕಾಶನ, ಕೊಪ್ಪಳ-೨೦೦೧. ಪು-೮೮

೭೪. ಅದೇ, ಪು-೮೮

೭೫. ಪಾವನ, ಸಂ.ಎಂ.ಜೈಕುಮರ್, ಪ್ರ: ಶ್ರೀ ಕಾಗಿನೆಲೆ ಮಹಾ ಸಂಸ್ಥಾನ ಕನಕಗುರು ಪೀಠ, ಬೆಂಗಳೂರು-೧೯೯೨. ಪು-೫೪

೭೬. ಅದೇ, ಪು-೫೪

೭೭. ಅದೇ, ಪು-೫೫

೭೮. ಅದೇ, ಪು-೫೫

೭೯. ಅದೇ, ಪು-೫೫

೮೦. ಅದೇ, ಪು-೫೫

೮೧. ಭಾರತದ ಕುರುಬರು, ಲೇ: ಡಾ.ಬಿ.ಕೆ.ರವಿ, ಪ್ರ: ಅಂಕಿತ ಪುಸ್ತಕ, ಬೆಂಗಳೂರು-೨೦೦೫. ಪು-೮೭

## ಅಧ್ಯಾಯ ೮

## ಕಲೆ ಮತ್ತು ಸಾಹಿತ್ಯ

೮.೧ ಡೊಳ್ಳಿನ ತಯಾರಿಕೆ

೮.೨ ಡೊಳ್ಳಿನ ಕುಣಿತ

೮.೩ ಡೊಳ್ಳಿನ ಹಾಡುಗಾರಿಕೆ

೮.೪ ಪ್ರಮುಖ ಸಾಹಿತಿಗಳು

ಜನಪದರ ಅನುಭವಗಳಿಂದ, ಭಾವನೆಗಳಿಂದ ಮತ್ತು ಅದರ ಸ್ಫೂರ್ತಿಗಳಿಂದ ಹುಟ್ಟಿಕೊಂಡ ಕಲೆಗಳೇ ಜನಪದ ಕಲೆಗಳಾಗಿವೆ. ಈ ಜನಪದ ಕಲೆಗಳೆಲ್ಲ ಶ್ರಮದ ಜೊತೆಯಲ್ಲಿಯೇ ಹುಟ್ಟಿದವುಗಳಾಗಿವೆ. ಇಂತಹ ಸಾಹಿತ್ಯ, ಕ್ರೀಡೆ, ಭಾಷೆ ಮೊದಲಾದವುಗಳನ್ನು ಪ್ರತಿಯೊಂದು ಸಮುದಾಯವು ಹೊಂದಿದೆ. ಕರ್ನಾಟಕದಾದ್ಯಂತ ನೆಲೆಸಿರುವ ಹಲವಾರು ಸಮುದಾಯಗಳು ತಮ್ಮದೇ ಆದ ವಿಶಿಷ್ಟವಾದ ಜನಪದ ಸಾಹಿತ್ಯ ಕಲೆಯನ್ನು ಹೊಂದಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲಧಿಂದಲೂ ಇವರು ತಮ್ಮ ಜನಪದ ಕಲೆ, ಸಾಹಿತ್ಯವನ್ನು ಉಳಿಸಿ, ಬೆಳೆಸಿಕೊಂಡು ಬಂದಿದ್ದಾರೆ. ಹೀಗೆ ಜನಪದ ಸಾಹಿತ್ಯ ಕಲೆಯನ್ನು ಉಳಿಸಿ ಬೆಳೆಸಿದವರಲ್ಲಿ ಕುರುಬ ಸಮುದಾಯವು ಒಂದಾಗಿದೆ. ಕುರುಬರು ಡೊಳ್ಳಿನ ಹಾಡು, ರ್‍ವಾಣಗಳಿಂದ ಸಾಹಿತ್ಯಕ್ಕೆ ಹಾಗೂ ಡೊಳ್ಳಿನ ಕುಣಿತ, ಡೊಳ್ಳಿನ ಪೆಟ್ಟುಗಳ ಮೂಲಕ ಕಲೆಗೆ ವಿಶಿಷ್ಟ ಸ್ಥಾನ ನೀಡಿದ್ದಾರೆ.

**೮.೧ ಡೊಳ್ಳಿನ ತಯಾರಿಕೆ**

ಪ್ರಾಚೀನ ಕಾಲದಲ್ಲಿ ಬೇಟೆಯ ಮೂಲಕ ಪ್ರಾಣಿಗಳ ಚರ್ಮವನ್ನು ಸಂಗ್ರಹಿಸಿ ಅದರಿಂದ ಅನೇಕ ಬಗೆಯ ವಸ್ತುಗಳನ್ನು ತಯಾರಿಸಿಕೊಂಡರು. ಆ ವಸ್ತುಗಳಿಂದ ವಿವಿಧ ರೀತಿಯ ನಾದ ಹುಟ್ಟಿಸಿಕೊಂಡಿರುವ ಸಾಧ್ಯತೆಯಿದೆ.[೧] ಕಾಲಾನಂತರ ಬೌದ್ಧಿಕ ಬೆಳವಣಿಗೆ ಹೊಂದಿದಂತೆ ಅವು ವಿಭಿನ್ನ ರೀತಿಯ ರೂಪ ಪಡೆದುಕೊಂಡವು, ಅಲ್ಲದೆ ಅನೇಕ ಚರ್ಮವಾದ್ಯಗಳು ಹುಟ್ಟಿಕೊಂಡವು. ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಚರ್ಮವು ಒಂದು ಮೈಲಿಗೆ ವಸ್ತು ಎಂಬ ಭಾವನೆಯಿದೆ. ಇದರಿಂದಾಗಿ ಚರ್ಮವಾದ್ಯಗಳೆಲ್ಲ ಕೆಳವರ್ಗದವರ ಪಾಲಿಗೆ ಮೀಸಲಾದರೆ, ಉಳಿದ ಚರ್ಮೋತ್ತರ ವಾದ್ಯಗಳು ಸವರ್ಣೀಯರ ಪಾಲಾದವು.[೨] ಹೀಗೆ ಕೆಳವರ್ಗದವರ ಪಾಲಾದ ಚರ್ಮವಾದ್ಯಗಳಲ್ಲಿ ಕೊರವರ ಸನಾದಿ, ಹೊಲೆಯರ ಕೊಂಬು, ಮಾದಿಗರ ಹಲಗೆ, ಗೊರವರ ಡಮರುಗ, ದುರುಗ ಮುರುಗಿಯರ ಬುರಬುರಿ, ಬುಡಬುಡಕಿಯರ ಬುಡುಬುಡಿಕೆ, ಕುರುಬರ ಡೊಳ್ಳು ಪ್ರಮುಖವಾಗಿವೆ.

ಕುರುಬ ಸಮುದಾಯದ ಸಾಂಸ್ಕೃತಿಕ ಜೀವನದೊಂದಿಗೆ ಸಮರಸವಾಗಿ ಬೆರೆತುಕೊಂಡಿರುವ ವಾದ್ಯ ಡೊಳ್ಳುವಾದ್ಯವಾಗಿದೆ. ಇದೊಂದು ಚರ್ಮವಾದ್ಯವಾಗಿದ್ದು, ಪ್ರಮುಖವಾಗಿ ಕುರುಬರಿಗೆ ಮೀಸಲಾಗಿರುವ ವಾದ್ಯವಾಗಿದೆ. ಕಾರಣ ಕುರುಬರು ತಮ್ಮ ಸಾಕು ಪ್ರಾಣಿಗಳ ಸಂರಕ್ಷಣೆಗಾಗಿ ನೀರು, ಹುಲ್ಲು ದೊರೆಯುವ ಸ್ಥಳಗಳಲ್ಲಿ ವಾಸಿಸುತ್ತಿದ್ದರು. ಕ್ರೂರ ಮೃಗಗಳಿಂದ ಕುರಿಗಳನ್ನು ರಕ್ಷಿಸಿಕೊಳ್ಳಲು ಈ ವಾದ್ಯವನ್ನು ಸೃಷ್ಟಿಮಾಡಿದರು. ಡೊಳ್ಳು ಬಾರಿಸುವುದರಿಂದ ಕಿವಿಗಡಿಚಿಕ್ಕುವ ನಾದ ಹೊರಡುವುದು. ಈ ಶಬ್ದ ಕೇಳಿದ ಕ್ರೂರ ಮೃಗಗಳು ದೂರ ಓಡಿ ಹೋಗುತ್ತಿದ್ದವು. ಈ ರೀತಿಯಾಗಿ ತಮ್ಮ ಹಾಗೂ ಪ್ರಾಣಿಗಳ ಸಂರಕ್ಷಣೆಗಾಗಿ ಕುರಿಗಳ ಚರ್ಮದಿಂದ ಡೊಳ್ಳನ್ನು ನಿರ್ಮಿಸಿಕೊಂಡರು.

ಕಾಲಾನಂತರ ಈ ವಾದ್ಯವು ಧಾರ್ಮಿಕ ಕಾರ್ಯಗಳಿಗೆ ಬಳಕೆಯಾಗತೊಡಗಿತು. ಸಂಗೀತದೊಡನೆ ವಾದ್ಯಗಳು ಬೆರೆತು ಜನಪದದ ಭದ್ರ ಬುನಾದಿಯ ಮೇಲೆ ಜನಜೀವನದ ಒಡನಾಡಿಯಾಗಿ ವಾದ್ಯಗಳು ವಿಕಾಸಗೊಂಡವು. ಡೊಳ್ಳಿನ ಕುಣಿತ,

ಸಾಹಿತ್ಯದ ಬೆಳವಣಿಗೆಯಿಂದಾಗಿ ಅಧಿಕ ಮೆರುಗನ್ನು ಪಡೆದುಕೊಂಡಿತು. ಡೊಳ್ಳು ವಾದ್ಯದ ಬಗ್ಗೆ ಅನೇಕ ಪೌರಾಣಿಕ ಕಥೆಗಳನ್ನು ಸೃಷ್ಟಿಸಿದರಲ್ಲದೆ, ಅದನ್ನು ಪವಿತ್ರ ಹಾಗೂ ಶಿವನ ಕೊಡುಗೆ ಎಂದು ನಂಬಿದರು. ಹೀಗಾಗಿ ಕೇವಲ ಧಾರ್ಮಿಕ ಆಚರಣೆಗಳ, ಸತ್ಕರ್ಮದಲ್ಲಿ ಮಾತ್ರ ಉಪಯೋಗಿಸಬೇಕೆಂದು ತೀರ್ಮಾನಿಸಿದರು.

ಭರತ ಮುನಿಯು ಸಂಗೀತ ವಾದ್ಯಗಳ ರಚನೆ ಮತ್ತು ಉಪಯೋಗವನ್ನು ಅನುಸರಿಸಿ ಅವುಗಳನ್ನು ನಾಲ್ಕು ಪ್ರಕಾರಗಳಲ್ಲಿ ವಿಗಂಡಿಸಿದ್ದಾನೆ.[೩] ಅವುಗಳೆಂದರೆ ೧) ತಂತಿವಾದ್ಯಗಳು ೨) ಗಾಳಿ ವಾದ್ಯಗಳು ೩)ತಟ್ಟು ವಾದ್ಯಗಳು ೪) ಘನವಾದ್ಯಗಳು. ಮೂರನೆಯದಾದ ತಟ್ಟು ವಾದ್ಯಗಳಲ್ಲಿ ಡೊಳ್ಳು ಪ್ರಮುಖವಾಗಿದೆ. ಇದರಲ್ಲಿ ಚರ್ಮದ ಬಳಕೆಯಿರುವುದರಿಂದ ಇದಕ್ಕೆ ತಟ್ಟು ವಾದ್ಯ ಎನ್ನಲಾಗಿದೆ. ಇದನ್ನು ಬೆರಳುಗಳಿಂದ ಅಥವಾ ಮರದ ಭಡಿಯಿಂದ ನುಡಿಸಬಹುದಾಗಿದೆ.

ಶಾಸನಗಳಲ್ಲಿ ಡೊಳ್ಳಿನ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಆದರೂ ಅರಸರು ತಮ್ಮ ದರ್ಬಾರು ನಡೆಯುವ ಸಂದರ್ಭದಲ್ಲಿ ಅಥವಾ ವಿಶೇಷ ಸಭೆ- ಸಮಾರಂಭಗಳಲ್ಲಿ, ಹಬ್ಬ-ಉತ್ಸವಗಳಲ್ಲಿ ಡೊಳ್ಳನ್ನು ಉಪಯೋಗಿಸುತ್ತಿದ್ದರೆಂದು ತಿಳಿಯಬಹುದಾಗಿದೆ. ಅಂದಿನ ಮನರಂಜನೆಯ ಕಲೆಗಳಲ್ಲಿ ಡೊಳ್ಳು ಕುಣಿತವೂ ಒಂದಾಗಿರುವ ಸಾಧ್ಯತೆಯಿದೆ. ಏಕೆಂದರೆ ಅನೇಕ ದೇವಾಲಯಗಳ ಕಂಬಗಳ ಮೇಲೆ ಡೊಳ್ಳು ವಾದ್ಯ ನುಡಿಸುತ್ತಿರುವ ಚಿತ್ರವನ್ನು ಕಾಣಬಹುದಾಗಿದೆ. ಕೊಪ್ಪಳ ಭಾಗದಲ್ಲಿರುವ ಕನಕಗಿರಿ, ಮುಧೋಳ, ಕಲ್ಲೂರು, ಆನೆಗೂಂದಿ, ಹಿರೇಮನ್ನಾಪುರ ಮೊದಲಾದ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ಡೊಳ್ಳು ವಾದ್ಯದ ಶಿಲ್ಪವನ್ನೂ ನೋಡಬಹುದಾಗಿದೆ. ಇದರಿಂದ ಡೊಳ್ಳು ಅಂದು ಪ್ರಮುಖ ವಾದ್ಯವಾಗಿತ್ತೆಂಬುದು ಸ್ಪಷ್ಟ.

ಮಧ್ಯಕಾಲದಲ್ಲಿ ಅಕ್ಬರನ ಆಳ್ವಿಕೆಯಲ್ಲಿ ರಚಿತಗೊಂಡ ಅಬ್ದುಲ್ ಫಜಲ್ ನ 'ಐನ್-ಎ-ಅಕ್ಬರಿ' ಕೃತಿಯು ಸಂಗೀತದ ಬಗ್ಗೆ ವಿವರಿಸುತ್ತದೆ. ಅಂದು ತಾನ್‌ಸೇನನ ನೇತೃತ್ವದಲ್ಲಿ ಮೂವತ್ತಾರು ಜನ ಸಂಗೀತಗಾರರ ತಂಡವಿದ್ದಿತ್ತು. ಆ ತಂಡದಲ್ಲಿ ನಾಲ್ಕು ತಂಡಗಳು ಡೊಳ್ಳು ಬಾರಿಸುವವು ಆಗಿದ್ದವೆಂದು ತಿಳಿಯುತ್ತದೆ.[೪]

ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರ ಕಾಲದಲ್ಲಿ ಡೊಳ್ಳು ತನ್ನ ಪ್ರಾಮುಖ್ಯತೆಯನ್ನು ಪಡೆದಿತ್ತೆಂದು ಅವರು ನಿರ್ಮಿಸಿರುವ ದೇವಾಲಯಗಳಿಂದ ತಿಳಿಯುತ್ತದೆ. ಈ ದೇವಾಲಯಗಳ ಕಂಬದ ಅಥವಾ ಗೋಡೆಯ ಮೇಲೆ ಡೊಳ್ಳು ವಾದ್ಯವನ್ನು ನುಡಿಸುತ್ತಿರುವ ವ್ಯಕ್ತಿಗಳ ಶಿಲ್ಪಗಳನ್ನು ಕೆತ್ತಿರುವುದು ಇದಕ್ಕೆ ಸಾಕ್ಷಿಯಾಗಿದೆ. ಹೀಗೆ ಡೊಳ್ಳು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ. ಇಂದಿಗೂ ಪ್ರತಿಯೊಂದು ಉತ್ಸವಗಳಿಗೂ ಡೊಳ್ಳು ಬಾರಿಸುವುದು ಕಂಡುಬರುವುದೇ ಅದರ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಕುರುಬರಲ್ಲಿ ಡೊಳ್ಳಿನ ಸೃಷ್ಟಿಯ ಬಗ್ಗೆ ಅನೇಕ ಪೌರಾಣಿಕ ಕಥೆಗಳಿವೆ. ಅವುಗಳಲ್ಲಿ ಒಂದು ದಂತ ಕಥೆ ಹೀಗಿದೆ. ಡೊಳ್ಳಾಸುರನೆಂಬ ರಾಕ್ಷಸನು ಶಿವವನ್ನು ಒಲಿಸಿಕೊಳ್ಳಲು ಸೂಜಿಯ ಮೇಲೆ ನಿಂತು ಕಠಿಣವಾದ ತಪಸ್ಸನ್ನು ಆಚರಿಸಿದನು. ಅವನ ತಪ್ಪಿಸ್ಸಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು. ಶಿವನ ಕೃಪೆಗೆ ಪಾತ್ರನಾದ ಡೊಳ್ಳಾಸುರ ಶಿವನನ್ನು ನುಂಗುವುದಾಗಿ ಬೇಡಿಕೊಂಡನು. ಶಿವನು ವರವನ್ನು ನೀಡಿದನಲ್ಲದೆ, ನನ್ನನ್ನು ಯಾವಾಗ ಹೊರಹಾಕುವೆ ಎಂದು ಕೇಳಿದನು. ಪಂಚರಾತ್ರಿಗಳು ಕೂಡಿದಾಗ ಬಿಡುವೆನೆಂದು ಹೇಳಿದನು.[೫] ಇದಕ್ಕೆ ಒಪ್ಪಿದ ಶಿವನು ಡೊಳ್ಳಾಸುರನ ಹೊಟ್ಟೆಯನ್ನು

ಸೇರಿದನು. ಪಂಚರಾತ್ರಿಗಳು ಕೂಡಿದ ದಿನವು ಬಂದಿತು. ಆದರೆ ಡೊಳ್ಳಾಸುರ ಶಿವನನ್ನು ಬಿಡಲು ಒಪ್ಪಲಿಲ್ಲ. ಕೊಟ್ಟ ಮಾತಿಗೆ ತಪ್ಪಿದ ದೈತ್ಯನ ಹೊಟ್ಟೆಯನ್ನು ವಿಷ್ಣು ಸೀಳಿ ಶಿವನನ್ನು ಬಂಧ ಮುಕ್ತಗೊಳಿಸಿದನು. ಆದರೆ ಶಿವನು ಧ್ಯಾನಾಸಕ್ತನಾಗಿದ್ದರಿಂದ. ಶಿವನನ್ನು ಎಚ್ಚರಗೊಳಿಸಲು ಡೊಳ್ಳಾಸುರನ ಹೊಟ್ಟೆಯಿಂದ ಪಡಗ ಮಾಡಿದನು. ಚರ್ಮ ತೆಗೆದು ಪಡಗಕ್ಕೆ ಮುಚ್ಚಿದನು. ಕರುಳು ತೆಗೆದು ಹಗ್ಗ ಮಾಡಿದನು. ರಾಕ್ಷಸನ ಕೋರೆಯನ್ನು ಮುರಿದು ಡೊಳ್ಳಿನ ಗುಣಿಯನ್ನು ಮಾಡಿದನು. ಅವನ ಅಂಗೈಯನ್ನು ಕಡಿದು ತಾಳವನ್ನು ಮಾಡಿದನು. ಈ ರೀತಿ ತಯಾರಾದ ವಾದ್ಯದಿಂದ ಅದ್ಭುತವಾದ ನಾದವನ್ನು ಕೇಳಿ ಎಚ್ಚರಗೊಂಡ ಶಿವ ಆ ವಾದ್ಯವನ್ನು ಕುರುಬರಿಗೆ ನೀಡಿದನು.[೬] ಹೀಗೆ ಡೊಳ್ಳಾಸುರನ ಅಂಗಾಂಗಗಳಿಂದ ನಿರ್ಮಿತಗೊಂಡ ವಾದ್ಯವನ್ನು ಡೊಳ್ಳು ಎಂದು ಕರೆದರು.

ಎರಡನೇ ದಂಥ ಕಥೆ ಹೀಗಿದೆ. ಒಂದು ದಿನ ಕೈಲಾಸದಲ್ಲಿ ಪಾರ್ವತಿ ಮತ್ತು ಶಿವ ಜೂಜಾಡುತ್ತಿದ್ದರು. ಸೋತವರು ತಮ್ಮ ಸರ್ವಸ್ವವನ್ನು ಬಿಟ್ಟು ಕೈಲಾಸ ತೊರೆದು ಯಾರಿಗೂ ಕಾಣದಂತೆ ಜೀವನ ನಡೆಸಬೇಕೆಂದು ಪಣ ಕಟ್ಟಿದರು. ಪಂದ್ಯದಲ್ಲಿ ಶಿವ ಸೋತು ಹೋದನು. ಪಣದಂತೆ ಶಿವ ಭೂಲೋಕಕ್ಕೆ ಒಂದು ಸಿದ್ಧಗಿರಿಯಲ್ಲಿ ತಪಸ್ಸಿಗೆ ಕುಳಿತುಕೊಂಡನು. ತಪಸ್ಸಿಗೆ ಯಾರೂ ಭಂಗ ತರದಂತೆ ನೋಡಿಕೊಳ್ಳಲು ನಾದಚಾರಕನೆಂಬ ಸೇವಾಧಾರಿಯನ್ನು ಕಾವಲಿಡುತ್ತಾನೆ. ಶಿವನಿಲ್ಲದೆ ಪಾರ್ವತಿ ಚಿಂತಾಕ್ರಾಂತಳಾಗಿ ಹುಡುಕುತ್ತಾ ಸಿದ್ಧಗಿರಿಗೆ ಬರುತ್ತಾಳೆ. ಅಲ್ಲಿ ಶಿವನನ್ನು ನೋಡಬೇಕೆಂದಾಗ ನಾದಚಾರಕನು ತಡೆಯುತ್ತಾನೆ. ಈ ವಿಷಯ ತಿಳಿದ ಪಾರ್ವತಿಯ ವಾಹನವಾದ ನಂದಿಗೂ ಮತ್ತು ನಾದಚಾರಕನಿಗೂ ಘೋರ ಯುದ್ಧವಾಗುತ್ತದೆ.[೭] ಯುದ್ಧದಲ್ಲಿ ನಾದಚಾರಕನ ಹೊಟ್ಟೆಗೆ ನಂದಿ ತಿವಿದಾಗ ಅವನು ಕಿರುಚಿಕೊಳ್ಳುತ್ತಾನೆ. ಈ ಭೀಕರ ಕೂಗನ್ನು ಕೇಳಿ ಎಚ್ಚರಗೊಂಡ ಶಿವ ನಡೆದ ವಿಷಯವನ್ನು ತಿಳಿದುಕೊಳ್ಳುತ್ತಾನೆ. ನಾದಚಾರಕನ ಪ್ರಾಮಾಣಿಕತೆ, ಕಾರ್ಯದಕ್ಷತೆ, ಶ್ರೇಷ್ಠ ಭಕ್ತಿಗೆ ಮೆಚ್ಚಿದ ಶಿವನು ಅವನ ದೇಹದ ಚರ್ಮ-ನರ-ನಾಡಿಗಳಿಂದ ಡೊಳ್ಳನ್ನು ತಯಾರಿಸುತ್ತಾನೆ. ನಂತರ ಅದನ್ನು ನಾರದ ಬಾರಿಸುತ್ತಾ ಕೈಲಾಸಕ್ಕೆ ಬರುತ್ತಾನೆ. ನಾರದ ಡೊಳ್ಳನ್ನು ಬಾರಿಸುತ್ತಾ, "ದೇವಿಯೇ ನಿಮ್ಮಯ ದೇವರು ಬಂದಾನ ಬನ್ನಿರೆ" ಎಂದು ಪಾರ್ವತಿಯ ಕರೆದನು. ಆಗ ಪಾರ್ವತಿಯು 'ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೆ' ಎಂದು ಸಂತೋಷದಿಂದ ಬರಮಾಡಿಕೊಂಡಳು.[೮] ನಂತರ ಶಿವನು ಈ ಡೊಳ್ಳನ್ನು ಕುರಿಕಾಯುವ ಕುರುಬರಿಗೆ ನೀಡಿ ಈ ವಾದ್ಯವನ್ನು ದೇವರ ಒಲಿಯುವಿಕೆಗಾಗಿ ಮಾತ್ರ ಬಳಸಿ, ನಾದಚಾರನನ್ನು ಅಮರನನ್ನಾಗಿಸಿ ಎಂದು ಹೇಳಿ ಆಶೀರ್ವದಿಸಿದನು.

ಒಟ್ಟಾರೆ ಈ ಪೌರಾಣಿಕ ಕಥೆಗಳ ಪ್ರಮುಖ ಉದ್ದೇಶ ಡೊಳ್ಳಿಗೆ ಧಾರ್ಮಿಕ ಹಿನ್ನೆಲೆ ನೀಡುವುದಾಗಿದೆ. ಅಲ್ಲದೆ ಪರಶಿವನೇ ಕುರುಬರಿಗೆ ಡೊಳ್ಳನ್ನು ದಯಪಾಲಿಸಿದನೆಂದು, ಈ ಡೊಳ್ಳು ಅಷ್ಟ ಓಲಗದಲ್ಲಿ ಶ್ರೇಷ್ಟವಾದುದೆಂಬ ನಂಬಿಕೆಯನ್ನು ಪ್ರಚುರಪಡಿಸುವುದಾಗಿದೆ. ಈ ಹಿನ್ನೆಲೆಯಲ್ಲಿ ಡೊಳ್ಳು ಒಂದು ಸಾಮಾನ್ಯ ಚರ್ಮವಾದ್ಯವಲ್ಲ. ಅದು ಅತ್ಯಂತ ಪವಿತ್ರವಾಗಿದೆ ಎಂಬ ನಂಬಿಕೆಯನ್ನು ಮೂಡಿಸಿಕೊಂಡಿರುವುದು ಕಂಡು ಬರುತ್ತದೆ. ಇಂದಿಗೂ ಕುರುಬರು ಡೊಳ್ಳನ್ನು ಪವಿತ್ರ ಎಂದು ಭಾವಿಸುವರಲ್ಲದೆ, ಅದನ್ನು ಸತ್ಕರ್ಮಗಳಲ್ಲಿ ಮಾತ್ರ ಬಳಸುವುದು ಕಂಡುಬರುತ್ತದೆ. ಹೀಗಾಗಿ ಡೊಳ್ಳು ಕುರುಬರಿಗೆ ಮೀಸಲಾದ ಚರ್ಮವಾದ್ಯವಾಗಿದೆ ಎಂದು ತಿಳಿದು ಬರುತ್ತದೆ.

### ೮.೧.೨ ಡೊಳ್ಳು ವಾದ್ಯದ ರಚನೆ

ಡೊಳ್ಳು ವಾದ್ಯದ ರಚನೆ ಸರಳ ರೀತಿಯಲ್ಲಿದೆ. ಸುಮಾರು ಅರ್ಧದಂಗುಲ ದಪ್ಪ ಅಂಚುಳ್ಳ ಮಾವಿನ ಅಥವಾ ಬೇವಿನ ಮರದ ಕಟ್ಟಿಗೆಯ ತುಂಡನ್ನು ಪೊಳ್ಳಾಗುವಂತೆ ಕೊರೆಯುತ್ತಾರೆ. ಅದರಿಂದ ಸಿಲಿಂಡರಾಕಾರದ ಪಡಗಗಳನ್ನು ತಯಾರಿಸುತ್ತಾರೆ. ಇದು ಸುಮಾರು ಒಂದು ಮೀಟರ್ ಸುತ್ತಳತೆಯಿರುತ್ತದೆ. ಪಡಗದ ಎರಡೂ ಬದಿಗೆ ಹದ ಮಾಡಿದ ಚರ್ಮದ ಹೊದಿಕೆ, ನೂಲಿನ ಹಗ್ಗ ಅಥವಾ ಚರ್ಮದ ಬಾರಿನ ಸಹಾಯದಿಂದ ಬಿಗಿಯಲಾಗಿರುತ್ತದೆ. ಡೊಳ್ಳಿನ ಎಡಭಾಗಕ್ಕೆ ಆಡಿನ ಚರ್ಮ ಹಾಗೂ ಬಲಭಾಗಕ್ಕೆ ಕುರಿಯ ಚರ್ಮವನ್ನು ಹಾಕುತ್ತಾರೆ.[೯] ಕುರಿಯ ಚರ್ಮದ ಹೊದಿಕೆಯ ಹೊರಭಾಗದ ತುಂಬ ಬಾಳೆಸೊಪ್ಪಿನ ಬೂದಿ ಹಾಗೂ ಎಣ್ಣೆಯಿಂದ ತಯಾರಿಸಿದ ಜಿಗಿಯನ್ನು ಲೇಪಿಸುತ್ತಾರೆ. ಇದನ್ನು ಲೇಪಿಸುವುದರಿಂದ ಮಂದವಾದ ನಾದ ಬರುತ್ತದೆ.

ಚರ್ಮವನ್ನು ಬಿಗಿಯಾಗಿ ಪಡಗದ ಸುತ್ತಲೂ ಹಿಡಿಯುವುದಕ್ಕಾಗಿ ನಾಗಬೆತ್ತ ಜಾಲಿಬೇರು ಮೊದಲಾದ ಬಾಳಿಕೆ ಬರುವ ಮತ್ತು ಬಗ್ಗುವ ಕಟ್ಟಿಗೆಗಳಿಂದ ಕಂಕಣ ಕಟ್ಟಿರುತ್ತಾರೆ.[೧೦] ಈ ಕಂಕಣ ಚರ್ಮ ಸರಿದಾಡದಂತೆ ನೋಡಿಕೊಳ್ಳುತ್ತದೆ. ಇದು ಬಿಗುವಾಗಿರಲು ಡೊಳ್ಳಿಗೆ ಚರ್ಮತೊಡಿಸಿ, ಕಂಕಣ ಕೂಡುವ ಜಾಗದಲ್ಲಿ ಮೆಂತೆ ಬೀಜವನ್ನು ಅರೆದು ಹಚ್ಚುತ್ತಾರೆ. ಇದು ಚರ್ಮವನ್ನು ಜಾರಲು ಬಿಡುವುದಿಲ್ಲ. ಈ ಕಂಕಣದ ಎರಡು ಬದಿಯನ್ನು ಡೊಳ್ಳಿನ ಪಡಗಕ್ಕೆ ಬಿಗಿಯಾಗಿ ಕಟ್ಟಲು ನಾದವನ್ನು ಹೊರಹೊಮ್ಮಿಸುವ ದೃಷ್ಟಿಯಿಂದ 'ನುಲಿ'ಯನ್ನು ಬಳಸುತ್ತಾರೆ.[೧೧] ಈ ನುಲಿ ಎರಡು ಕಡೆಯ ಕಂಕಣದಲ್ಲಿ ಹಾಯ್ದು ಪಡಗದ ಮೇಲೆ ಅಡ್ಡವಾಗಿ ಹೆಣೆದಿರುವಂತಿರುತ್ತದೆ. ಇನ್ನೂ ಹೆಚ್ಚಿನ ನಾದಕ್ಕಾಗಿ ನುಲಿಗೆ ಅಡ್ಡವಾಗಿ ಇನ್ನೊಂದು ಹಗ್ಗವನ್ನು ಬಿಗಿಯುತ್ತಾರೆ. ಇದಕ್ಕೆ ಅಣಗ ಬಿಗಿಯುವುದು ಎಂದು ಕರೆಯುತ್ತಾರೆ. ಡೊಳ್ಳನ್ನು ಬಾರಿಸುವಾಗ ತಮಗೆ ಬೇಕಾದ ಸ್ವರ ಮಾಧುರ್ಯಕ್ಕೆ ತಕ್ಕಂತೆ ಅಣಕಗಳನ್ನು ಸಡಿಲಗೊಳಿಸುವ ಸಾಧ್ಯತೆಯಿರುತ್ತದೆ.

ಡೊಳ್ಳನ್ನು ಬಾರಿಸುವಾಗ ಗುಣಿಯನ್ನು ಉಪಯೋಗಿಸುತ್ತಾರೆ. ಈ ಗುಣಿಯನ್ನು ಜಾಲಿ, ಮಸ್ಯಾಲ, ಹುಣಸೆ ಮರದ ಕೆಚ್ಚಿನಂತಹ ಗಟ್ಟಿಯಾದ ಕಟ್ಟಿಗೆಯಿಂದ ತಯಾರಿಸುತ್ತಾರೆ.[೧೨] ಇದು ಮುಂದೆ ಚೂಪಾಗಿ ನುಣುಪಾಗಿದ್ದು, ಹಿಂದೆ ಕೈಹಿಡಿಯಲು ಅನುಕೂಲವಾಗುವಂತೆ ಗುಂಡಗೆ ಮಾಡಿರುತ್ತಾರೆ. ಇದರಿಂದ ಗುಣಿಯನ್ನು ಗಟ್ಟಿಯಾಗಿ ಹಿಡಿದು ಬಾರಿಸಲು ಅನುಕೂಲವಾಗುತ್ತದೆ.

ಈ ರೀತಿ ತಯಾರಾದ ಡೊಳ್ಳನ್ನು ಕುರುಬರು ನಡುವಿಗೆ ಕಟ್ಟಿಕೊಂಡು ಹಗ್ಗದಿಂದ ಕೊರಳಿಗೆ ಹಾಕಿಕೊಂಡು ಬಾರಿಸುತ್ತಾರೆ. ಕೆಲವು ಬಾರಿ ಕುಳಿತು ಬಾರಿಸುತ್ತ ಹಾಡುವುದು ಕಂಡುಬರುತ್ತದೆ. ಇದು ಗಾತ್ರದಲ್ಲಿ ದೊಡ್ಡದಾಗಿರುವುದರಿಂದ ಸಾಮಾನ್ಯರು ಎತ್ತಲು ಆಗುವುದಿಲ್ಲ. ಡೊಳ್ಳನ್ನು ಎತ್ತಲು ದೈಹಿಕವಾಗಿ ದಷ್ಟ ಪುಷ್ಟವಾಗಿರಬೇಕಾಗುತ್ತದೆ. ಒಟ್ಟಾರೆ ಡೊಳ್ಳಿನ ರಚನೆ ವಿಶಿಷ್ಟವಾಗಿದೆ.

### ೮.೨ ಡೊಳ್ಳಿನ ಕುಣಿತ

ಜನಪದ ಕಲೆಯಲ್ಲಿ ಡೊಳ್ಳು ಕುಣಿತ ಗಂಡು ಕಲೆ ಎಂದು ಹೆಸರಾಗಿದೆ. ಡೊಳ್ಳು ಕುಣಿತ ಪುರುಷರಿಗೆ ಮೀಸಲಾಗಿರುವ ಕಲೆಯಾಗಿದೆ. ಉತ್ತಮ ದೇಹದಾರ್ಢ್ಯತೆಯುಳ್ಳ ವ್ಯಕ್ತಿಗಳು ಮಾತ್ರ ಈ ಕಲೆಯನ್ನು ಪ್ರದರ್ಶಿಸಬಲ್ಲರು. ಇದಕ್ಕೆ ವಯಸ್ಸಿನ

ನಿರ್ಬಂಧವಿಲ್ಲ. ಆದರೆ ಡೊಳ್ಳು ಕುಣಿಯುವಾಗ ಮಡಿಯಿಂದಿರಬೇಕೆಂಬ ನಿಯಮವಿದೆ. ಈ ಕಲಾ ಪ್ರದರ್ಶನದಲ್ಲಿ ಮೊದಲು ಡೊಳ್ಳು ಕಟ್ಟಿಕೊಳ್ಳುವ ಹಕ್ಕು ಈ ಸಮಾಜದ ಧಾರ್ಮಿಕ ಧುರೀಣ ಈರಗಾರನದಾಗಿರುತ್ತದೆ.[೧೩] ಕಾಲಲ್ಲಿ ಗೆಜ್ಜೆ ಹಾಗೂ ದಿನ ನಿತ್ಯದ ಉಡುಪಿನಲ್ಲಿರುವ ಇವನು ಟೊಂಕಕ್ಕೆ ಕಂಬಳಿಯನ್ನು ಸುತ್ತಿಕೊಂಡು ಹಗ್ಗದಿಂದ ಡೊಳ್ಳನ್ನು ಕಟ್ಟಿಕೊಳ್ಳುತ್ತಾನೆ. ಡೊಳ್ಳು ಬಾರಿಸುವವರು ಕೆಲವು ಸಂದರ್ಭಗಳಲ್ಲಿ ಸಾಮಾನ್ಯವಾಗಿ ಉಡುಪು ಧರಿಸಿದ್ದರೆ, ಕೆಲವು ವಿಶೇಷ ಸಂದರ್ಭಗಳಲ್ಲಿ ಕಾಲಲ್ಲಿ ಗೆಜ್ಜೆ, ಟೊಂಕಕ್ಕೆ ಕಂಬಳಿ, ಕೊರಳಲ್ಲಿ ಹಾರ, ತಲೆಗೆ ರುಮಾಲು, ರುಮಾಲಿಗೆ ನವಿಲುಗರಿ ಇಟ್ಟುಕೊಂಡು ವಿಶೇಷವಾದ ಉಡುಪನ್ನು ಧರಿಸುತ್ತಾರೆ.

ಕೊಪ್ಪಳ ಜಿಲ್ಲೆಯಾದ್ಯಂತ ನೆಲೆಸಿರುವ ಕುರುಬರು ಪ್ರತಿಯೊಂದು ಜಾತ್ರೆ, ಉತ್ಸವ, ಹಬ್ಬ, ಮೊದಲಾದ ಸಂದರ್ಭಗಳಲ್ಲಿ ಡೊಳ್ಳು ಕುಣಿತವನ್ನು ಪ್ರದರ್ಶಿಸುತ್ತಾರೆ. ಈ ಡೊಳ್ಳು ಕುಣಿತದ ತಂಡದಲ್ಲಿ ಸಾಮಾನ್ಯವಾಗಿ ನಾಲ್ಕರಿಂದ ಹತ್ತು ಅಥವಾ ಹನ್ನೆರಡು ಕಲಾವಿದರಿರುತ್ತಾರೆ. ಡೊಳ್ಳು ಬಾರಿಸುವಾಗ ಬಲಗೈಯಲ್ಲಿ ಮಾತ್ರ ಕಟ್ಟಿಗೆಯ ಗುಣಿಯಿರುತ್ತದೆ.[೧೪] ಹೋತಿನ ಚರ್ಮದ ಹೊದಿಕೆಯ ಭಾಗದ ಮೇಲೆ ಎಡಗೈಯ ನಾಲ್ಕು ಬೆರಳುಗಳನ್ನಿಟ್ಟುರುತ್ತಾರೆ. ಡೊಳ್ಳಿನ ಮೇಳಕ್ಕೆ ಒಬ್ಬ ಸೂತ್ರದಾರನಿರುತ್ತಾನೆ. ಕುಣಿತದ ಭಂಗಿಗಳು ಅವನ ಮೂಲಕವೇ ಬದಲಾವಣೆಗೊಳ್ಳುತ್ತವೆ. ಕುಣಿತಕ್ಕೆ ಹಿನ್ನೆಲೆಯಾಗಿ ಚಪತಾಳ, ಕೊಳಲು ನುಡಿಸುತ್ತಾರೆ.

ವೃತ್ತಾಕಾರವಾಗಿ ನಿಂತ ತಂಡದ ಸದಸ್ಯರು ನಿಧಾನವಾಗಿ ಡೊಳ್ಳು ಬಾರಿಸಲು ಪ್ರಾರಂಭಿಸುತ್ತಾರೆ. ಡೊಳ್ಳಿನ ಬಡಿತ ಗುಣಿ ಲೆಕ್ಕದಲ್ಲಿರುತ್ತದೆ. ಒಂದು ಕೋಲು ಪಟ್ಟಿ, ಇನ್ನೊಂದು ಕೈ ಪಟ್ಟಿ ಸೇರಿದರೆ ಒಂದು ಗುಣಿಯಾಗುತ್ತದೆ.[೧೫] ಗುಣಿಯ ಲೆಕ್ಕದಲ್ಲಿ ಬಾರಿಸುವಿಕೆ, ಹೊಡೆತೆಗಳ ಲೆಕ್ಕವನ್ನು ಸೂಚಿಸುತ್ತದೆ. ಒಂದು ಗುಣಿಗೆ ಮೊದಲ ಹೆಜ್ಜೆ ಎನ್ನುತ್ತಾರೆ. ಮೂರು ಗುಣಿ ಎಂದರೆ ಮೂರು ಕೋಲು ಪಟ್ಟಿನ ಬಳಿಕ ಒಂದು ಕೈಪಟ್ಟಿ ಬಾರಿಸುವುದು. ಸಾಮಾನ್ಯವಾಗಿ ಗುಣಿಯಲ್ಲಿ ಬೆಸ ಸಂಖ್ಯೆಯಿರುತ್ತದೆ. ಇವರು ಏಳು ಗುಣಿಯನ್ನು ಮಾತ್ರ ಬಾರಿಸುವುದಿಲ್ಲ. ಕಾರಣ ಏಳು ಅಶುಭ ಎಂಬ ನಂಬಿಕೆಯಿದೆ. ಹೆಚ್ಚು ಗುಣಿಯನ್ನು ಬಾರಿಸುವಾಗ ಜೋಡಿ ಕಲಾವಿದರು ಎದುರು ಬದುರು ನಿಲ್ಲುವರು. ಬಲಗಾಲು ಮುಂದಿಟ್ಟು ಸ್ವಲ್ಪ ಬಾಗಿ ಪೈಪೋಟಿಯಿಂದ ಡೊಳ್ಳನ್ನು ಬಾರಿಸುತ್ತಾರೆ. ಇದರ ಜೊತೆಗೆ ಹಿಮ್ಮೇಳವು ಕೂಡಿರುತ್ತದೆ. ಕ್ರಮೇಣ ಗತ್ತು ಏರುತ್ತ ಹೋದಂತೆ ಡೊಳ್ಳು ಬಡಿತ ಅಧಿಕಗೊಂಡು ಕೇಳುವವರ ಕಿವಿಗಡಚಿಕ್ಕುತ್ತದೆ. ಬಲಗೈಯ ಬಡಿತ "ಬ್ರಹ್ಮ ದೊಡ್ಡ" ಎಂಬ ಶಬ್ಧ ಮಾಡಿದರೆ, ಎಡಗೈ ಪೆಟ್ಟು "ಡಾಂವ" ಎಂಬ ಶಬ್ಧ ಮಾಡುತ್ತದೆ. ಹೀಗೆ ಆ ಶಬ್ಧ ಒಟ್ಟಾಗಿ "ಬ್ರಹ್ಮದೊಡ್ಡಾಂವ" ಎಂದು ಉದ್ಗಾರ ತೆಗೆಯುತ್ತದೆ.[೧೬] ಕೋಲಿನ ಪಟ್ಟಿ ಏರಿಕೆಯಲ್ಲಿಯೇ ಮುಕ್ತಾಯವಾಗುವುದು ಕಂಡುಬರುತ್ತದೆ.

ಡೊಳ್ಳು ಕುಣಿತದಲ್ಲಿ ಹಲವು ಪ್ರಕಾರಗಳಿವೆ. ನಾಲ್ಕು ಪ್ರಕಾರಗಳು ವಿಶಿಷ್ಟವಾಗಿದ್ದು, ತಮ್ಮದೇ ಆದ ಕಲೆಯ ಶ್ರೇಷ್ಠತೆಯನ್ನು ಪಡೆದುಕೊಂಡಿವೆ. ಅವುಗಳು ಈ ರೀತಿಯಾಗಿವೆ.[೧೭]

**೧) ಕುಳಿತು ಬಾರಿಸುವುದು**

ಇದನ್ನು ಕುಕ್ಕರಗಾಲಿನಲ್ಲಿ ಕುಳಿತು ಬಾರಿಸುತ್ತಾರೆ ಹಾಗೆಯೇ ಕುಪ್ಪಳಿಸುವುದು ಕಂಡು ಬರುತ್ತದೆ. ಕುಪ್ಪಳಿಸುತ್ತ ಬಾರಿಸುವ ಈ ಕುಣಿತ ನಿಧಾನವಾಗಿ ಸಾಗುವುದು ವಿಶೇಷವಾಗಿದೆ. ಇದನ್ನು ಗುಲಬರ್ಗಾ ಜಿಲ್ಲೆಯಲ್ಲಿ ಕೂತುಪಾಲಿ ಎನ್ನುತ್ತಾರೆ.

**೨) ಲಾಗ ಹಾಕುವುದು**

ಡೊಳ್ಳು ಬಾರಿಸುತ್ತ ಗತ್ತಿಗೆ ತಕ್ಕಂತೆ ಲಾಗಹಾಕುವುದು ಮತ್ತು ಪುನಃ ನೇರಸ್ಥಿತಿಗೆ ಬಂದು ಗತ್ತು ತಪ್ಪದಂತೆ ಪೆಟ್ಟು ಹಾಕುವುದು ಇದರ ವಿಶೇಷವಾಗಿದೆ. ಈ ಕಲೆಯನ್ನು ತಂಡದಲ್ಲಿ ಕೆಲವು ಜನ ಮಾತ್ರ ಅಭ್ಯಾಸ ಮಾಡಿರುತ್ತಾರೆ.

**೩) ಹಾರುವುದು**

ಡೊಳ್ಳು ಬಾರಿಸುತ್ತ ಎರಡು ಅಥವಾ ಮೂರು ಅಡಿ ಎತ್ತರಕ್ಕೆ ಮೇಲೆ ನೆಗೆಯುವುದು ಇದರ ಲಕ್ಷಣವಾಗಿದೆ. ಬಹಳ ಭಾರವಾಗಿರುವ ಡೊಳ್ಳನ್ನು ಹೊತ್ತುಕೊಂಡು ಎತ್ತರಕ್ಕೆ ಹಾರಬೇಕಾದವನು ಬಲಿಷ್ಠನಾಗಿರುವುದು ಅವಶ್ಯಕವಾಗಿರುತ್ತದೆ.

**೪) ಮಂಡಿ ಬಡಿತ**

ಜೋಡಿ ಕಲಾವಿದರು ಎಡಗಾಲು ಮಂಡಿಯನ್ನು ನೆಲಕ್ಕೆ ಒತ್ತಿ ಬಲಗಾಲನ್ನು ಊರಿಕೊಂಡು ಡೊಳ್ಳು ಬಾರಿಸುತ್ತಾರೆ.

**೫) ಮರಗಾಲು ಬಡಿತ**

ಸುಮಾರು ಒಂದರಿಂದ ಎರಡು ಅಡಿ ಎತ್ತರದ ಮರಗಾಲನ್ನು ಕಟ್ಟಿಕೊಂಡು ಡೊಳ್ಳು ಬಾರಿಸುವುದು ಇದರ ಲಕ್ಷಣವಾಗಿದೆ.

**೬) ಗಾಡಿ ಚಕ್ರದ ಬಡಿತ**

ಕಬ್ಬಿಣದ ಅಚ್ಚಿನ ಮೇಲೆ ಎತ್ತಿನ ಗಾಡಿಯ ಚಕ್ರ. ಈ ಚಕ್ರದ ಮೇಲೆ ನಿಂತುಕೊಂಡು ತಲೆಯ ಮೇಲೆ ನೀರು ತುಂಬಿದ ಕೊಡವನ್ನಿಟ್ಟು ಡೊಳ್ಳು ಬಾರಿಸುತ್ತಾರೆ.

**೭) ಲವಳ ಹಾಕುವುದು**

ಉರುಟಾದ ಹಲಗೆಯ ಮೇಲ್ಭಾಗದಲ್ಲಿ ಒಂದು ಕಬ್ಬಿಣದ ಕೊಂಡಿಯನ್ನಿಡುತ್ತಾರೆ. ಆ ಕೊಂಡಿಯ ಸುತ್ತಲೂ ಎಂಟರಿಂದ ಹತ್ತು ರಂಧ್ರಗಳನ್ನು ಮಾಡಿ ಅದಕ್ಕೆ ನೂಲಿನ ಹಗ್ಗಗಳನ್ನು ಸೇರಿಸುತ್ತಾರೆ. ಮಧ್ಯದಲ್ಲಿ ದಪ್ಪವಾದ ಒಂದು ಮಿಣಿಯನ್ನು ಇಳಿಬಿಡುತ್ತಾರೆ. ಎಂಟು ಅಥವಾ ಹತ್ತು ಅಡಿ ಎತ್ತರದಲ್ಲಿ ಕಟ್ಟಿರುವ ಬಿದಿರು ಬೊಂಬಿಗೆ ಈ ಕೊಂಡಿಯನ್ನು ಹುರಿಹಾಕಿ ಭದ್ರಪಡಿಸುತ್ತಾರೆ ಕಲಾವಿದರಲ್ಲಿ ಪ್ರತಿಯೊಬ್ಬರೂ ಎಡಗೈಯಲ್ಲಿ ಹಗ್ಗವನ್ನು ಹಿಡಿದು ಬಲಗೈಯಲ್ಲಿ ಡೊಳ್ಳು ಬಾರಿಸುತ್ತಾ ಕುಣಿಯುತ್ತಾರೆ. ಕಲಾವಿದರು ಒಂದು ನಿರ್ದಿಷ್ಟ ಕ್ರಮದಲ್ಲಿ ಸುತ್ತಿದಾಗ ಹಗ್ಗಗಳು ಜಡೆಯಂತೆ ಸುತುತ್ತವೆ. ಈ ಕುಣಿತವನ್ನು ಹಿಮ್ಮುಖಗೊಳಿಸಿದರೆ ಜಡೆ ಬಿಚ್ಚಿಗೊಳ್ಳುತ್ತದೆ. ಇದನ್ನು ಜಡೆ ಹೆಣೆಯುವುದು ಎಂದೂ ಕರೆಯಲಾಗುತ್ತದೆ.

೮) ಒಂದು ದೊಡ್ಡ ಡೊಳ್ಳಿನ ಮೇಲೆ ಮತ್ತೊಂದು ಚಿಕ್ಕ ಡೊಳ್ಳನ್ನು ಕಟ್ಟುತ್ತಾರೆ. ನಂತರ ಎರಡೂ ಡೊಳ್ಳುಗಳನ್ನು ಒಂದಾದ ಮೇಲೊಂದರಂತೆ ಬಾರಿಸುತ್ತಾರೆ. ಇದು ಒಂದು ಪ್ರಕಾರವಾಗಿರುವುದು ವಿಶೇಷ.

೯) ಬಾಯಲ್ಲಿ ತುಂಬಿದ ಕೊಡ ಕಚ್ಚಿಕೊಂಡು ನೀರು ಹೊರ ಚೆಲ್ಲದಂತೆ ಡೊಳ್ಳು ಬಾರಿಸುತ್ತ ಕುಣಿಯುತ್ತಾರೆ.

೧೦) ಭೂಮಿ ಮೇಲೆ ಅಂಗಾತ ಮಲಗಿಕೊಂಡು ಡೊಳ್ಳನ್ನು ಬಾರಿಸುತ್ತಾರಲ್ಲದೆ, ತೆವಳುತ್ತಾ ಸುತ್ತುತ್ತಾರೆ.

೧೧) ಕಲಾವಿದನ ಹಿಂಭಾಗ ಹಾಗೂ ಮುಂಭಾಗಗಳಿಗೆ ಒಂದೊಂದು ಡೊಳ್ಳನ್ನು ಕಟ್ಟುತ್ತಾರೆ. ಆ ಡೊಳ್ಳಿನ ಮೇಲೆ ಚಿಕ್ಕ ಮಕ್ಕಳನ್ನು ಕೂಡಿಸಿಕೊಂಡು ಡೊಳ್ಳನ್ನು ಬಾರಿಸುತ್ತಾರೆ.

ಇವುಗಳಲ್ಲದೆ ಕುದುರೆ ಕುಣಿತ, ಕೋಲು ಕುಣಿತ, ಒಂದೆಜ್ಜೆ ಕುಣಿತ, ಎರಡೆಜ್ಜೆ ಕುಣಿತ, ಮಂಡಲ ಕುಣಿತ, ಜಗ್ಗಿನ ಕೈಯಿ ಮೊದಲಾದ ಕುಣಿತಗಳಿವೆ.[೧೮] ಹೀಗೆ ಅನೇಕ ಪ್ರಕಾರಗಳಲ್ಲಿ ಡೊಳ್ಳು ಕುಣಿತವನ್ನು ಪ್ರದರ್ಶಿಸಲಾಗುತ್ತದೆ. ವಿವಿಧ ಪ್ರಕಾರಗಳನ್ನು ನೋಡಿದಾಗ ಇದೊಂದು ಶಕ್ತಿ–ಯುಕ್ತಿ ಎರಡನ್ನೂ ಮೈಗೂಡಿಸಿಕೊಂಡು ಬೆಳೆದು ಬಂದಿರುವ ವಿಶೇಷ ಕಲೆಯಾಗಿದೆ ಎಂದು ತಿಳಿಯುತ್ತದೆ.

ಆರಂಭದಲ್ಲಿ ಡೊಳ್ಳಿನ ಗತ್ತು 'ಬ್ರಹ್ಮದೊಡ್ಡಾಂವ' ಎಂಬ ಘೋಷಣೆಯನ್ನು ಸೃಷ್ಟಿಸಿದರೆ, ಮುಕ್ತಾಯದ ಸಮಯದಲ್ಲಿ 'ಹಿಡಿದ್ಯಾಂಗ, ಬಿಟ್ಯಾಂಗ ಎನ್ನುತ್ತ ಡುಬ್ಬದ್ದುರಿ, ಡುಬ್ಬದ್ದುರಿ, ಡುಬ್ಬದ್ದುರಿ,' ಎಂದು ಮುಕ್ತಾಯಗೊಳ್ಳುತ್ತದೆ.[೧೯] ಹೀಗೆ ಕುರುಬರಿಗೆ ಡೊಳ್ಳು ಕುಣಿತ ಪ್ರಮುಖವಾಗಿರುವ ಕಲೆಯಾಗಿದೆ.

ಕುರುಬರು ನೆಲೆಸಿರುವ ಪ್ರತಿಯಿಂದು ಗ್ರಾಮದಲ್ಲೂ ಡೊಳ್ಳು ಇರುತ್ತವೆ. ಗ್ರಾಮದ ಯಾವುದೇ ಜಾತ್ರೆ, ಉತ್ಸವ ಸಭೆ–ಸಮಾರಂಭಗಳಲ್ಲಿ ಡೊಳ್ಳು ಕುಣಿತವಿರುತ್ತದೆ. ಡೊಳ್ಳು ವಾದ್ಯಗಾರರ ತಂಡಕ್ಕೆ ಎರಡು ಎಲೆ ಅಡಿಕೆಯನ್ನು ವೀಳ್ಯೆ ಎಂದು ನೀಡುತ್ತಾರೆ. ಈ ವೀಳ್ಯೆಯನ್ನು ನೀಡಿ ಆಮಂತ್ರಿಸಿದರೆ ಸಾಕು ಡೊಳ್ಳು ವಾದ್ಯಗಾರರು ಉತ್ಸವಗಳಿಗೆ ಹಾಜರಾಗುತ್ತಾರೆ. ಯಾವುದೇ ರೀತಿಯ ಹಣದ ಆಮಿಷವಿಲ್ಲದೆ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ. ಡೊಳ್ಳು ಕುಣಿತದ ಕಲಾವಿದರಿಗೆ ಜಾತಿಯ ಕಟ್ಟುಪಾಡಿಲ್ಲ. ಪ್ರತಿಯೊಂದು ಧರ್ಮದ, ಜಾತಿಯ ಉತ್ಸವಗಳಿಗೆ ಹೋಗಿ ಕಲೆಯನ್ನು ಪ್ರದರ್ಶಿಸುತ್ತಾರೆ. ಪ್ರತಿಯೊಂದು ಗ್ರಾಮದಲ್ಲೂ ಸುಮಾರು ಮೂರರಿಂದ ನಾಲ್ಕು ಡೊಳ್ಳುಗಳಿರುತ್ತವೆ. ಅಲ್ಲದೆ ಡೊಳ್ಳನ್ನು ಸ್ವತಃ ತಾವೇ ತಯಾರಿಸುವುದು ವಿಶೇಷವಾಗಿದೆ. ಡೊಳ್ಳನ್ನು ಕೆಲವು ಗ್ರಾಮದವರು ತಯಾರಿಸಿ ಬೇರೆಯವರಿಗೆ ನೀಡುವುದು ಕಂಡು ಬರುತ್ತದೆ. ಹೀಗಾಗಿ ಕುರುಬರು ಡೊಳ್ಳಿನ ಕುಣಿತದಲ್ಲಿ ಹಾಗೂ ತಯಾರಿಕೆಯಲ್ಲಿ ಪ್ರಾವೀಣ್ಯತೆ ಪಡೆದಿದ್ದಾರೆ.

ಡೊಳ್ಳುಗಳನ್ನು ಬೀರದೇವರ ದೇವಸ್ಥಾನದಲ್ಲಿಡಲಾಗುತ್ತದೆ. ಅದನ್ನು ಪವಿತ್ರವೆಂದು ನಂಬಿ ಪೂಜೆ ಸಲ್ಲಿಸಲಾಗುತ್ತದೆ. ರವಿವಾರದಂದು ಬೀರದೇವರ ಪೂಜೆ ಮುಗಿದ ನಂತರ ಡೊಳ್ಳನ್ನು ಬಾರಿಸುವರಲ್ಲದೆ, ಹಾಡನ್ನು ಹಾಡುತ್ತಾರೆ. ಪ್ರತಿಯೊಂದು ಗ್ರಾಮದಲ್ಲಿಯೂ ಸಾಮಾನ್ಯವಾಗಿ ನಾಲ್ಕರಿಂದ ಐದು ಡೊಳ್ಳುಗಳಿರುವುದು ಹಾಗೂ ಸುಮಾರು ಎಂಟರಿಂದ ಹತ್ತು ಜನರು ಕುಣಿತ ಹಾಗೂ ಹಾಡುಗಾರಿಕೆಯಲ್ಲಿ ಪ್ರವೀಣರಾಗಿದ್ದುದು ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದಿದೆ. ಕೆಲವು ವ್ಯಕ್ತಿಗಳು ನಾಡಿನ ಹೊರಗೆ ಹೋಗಿ ತಮ್ಮ ಕಲೆಯನ್ನು ಪ್ರದರ್ಶಿಸಿ ಬಂದಿದ್ದಾರೆ. ಅನೇಕ ತಂಡಗಳನ್ನು ರಚಿಸಿಕೊಂಡು ಡೊಳ್ಳು ಕುಣಿತದ ನಾನಾ ಪ್ರಕಾರಗಳನ್ನು ಪ್ರದರ್ಶಿಸಿ ಪ್ರಶಸ್ತಿ, ಗೌರವ ಪಡೆದುಕೊಂಡಿದ್ದಾರೆ. ಕೊಪ್ಪಳ ಜಿಲ್ಲೆಯ ಹೂವಿನಾಳ, ಬಸವಪಟ್ಟಣ, ಕಬ್ಬರಗಿ,

ಚಿಕ್ಕೇನಕೊಪ್ಪ, ಇಂದರಗಿ, ಸೋಂಪುರ, ಟಕ್ಕಳಕಿ, ಅರಕೇರಿ, ತಿಗರಿ, ಬಾದಿಮನಾಳ, ಬಹದ್ದೂರಬಂಡಿ, ಹಿರೇಮನ್ನಾಪುರ, ಮನಸೂರ, ವಜ್ರಬಂಡಿ, ಯಡಿಯಾಪುರ, ಕಾರಟಗಿ, ಸಿದ್ದಾಪುರ, ನವಲಿ, ಕನಕಗಿರಿ, ಕೊಪ್ಪಳ, ಬಿಸರಳ್ಳಿ, ಅಳವಂಡಿ, ಹಲಗೇರಿ, ಕುಕನೂರು, ಕುಷ್ಟಗಿ, ಮುಧೋಳ, ಯಲಬುರ್ಗಾ, ಸಂಗನಹಾಳ, ಕಲ್ಲೂರು, ಮೋರನಹಳ್ಳಿ ಮೊದಲಾದ ಗ್ರಾಮಗಳಲ್ಲಿ ಡೊಳ್ಳು ಕುಣಿತದ ಕಲಾವಿದರ ತಂಡವಿದೆ. ಕೊಪ್ಪಳ ಜಿಲ್ಲೆಯಲ್ಲಿ ವಿಶೇಷವಾಗಿ ಕಂಡು ಬರುವುದೇನೆಂದರೆ ಡೊಳ್ಳಿನ ಹಾಡನ್ನು ಹೇಳುವುದರ ಜೊತೆಗೆ ಡೊಳ್ಳಿನ ಕುಣಿತಕ್ಕೆ ಹೆಸರಾದವರಲ್ಲಿ ಮಹಿಳೆಯರಿದ್ದಾರೆ. ಕೊಪ್ಪಳದ ಕುರುಬರ ಓಣಿಯಲ್ಲಿರುವ ಮಹಿಳೆ ಹನುಮಂತವ್ವ ಮಸಲಿ ಎಂಬುವರು ಡೊಳ್ಳಿನ ಹಾಡು ಹೇಳುವ ಜೊತೆ ಡೊಳ್ಳು ಬಾರಿಸುತ್ತಾಳೆ. ಇವರು ಹಬ್ಬ, ಉತ್ಸವ, ಜಾತ್ರೆಗಳಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರಲ್ಲದೆ, ಬೇರೆ ಗ್ರಾಮದವರಿಂದ ಆಮಂತ್ರಣ ಬಂದರೆ ಅಲ್ಲಿಗೆ ಹೋಗಿ ಕಲೆಯನ್ನು ಪ್ರದರ್ಶಿಸುತ್ತಾರೆ. ಡೊಳ್ಳು ಕುಣಿತದ ನಂತರ ಇವರಿಗೆಲ್ಲ ಎರಡು ಎಲೆ, ಅಡಿಕೆ, ಬೀಡಿಯಕಟ್ಟು, ಕಡ್ಡಿಪಟ್ಟಣ ಹಾಗೂ ಸ್ವಲ್ಪ ಹಣವನ್ನು ವೀಳ್ಯೆ ರೂಪದಲ್ಲಿ ನೀಡುವುದು ಸಂಪ್ರದಾಯವಾಗಿದೆ. ಒಟ್ಟಾರೆ ಕುರುಬರಿಗೆ ಡೊಳ್ಳು ಪವಿತ್ರವಾಗಿದೆ. ಇಂದು ಡೊಳ್ಳಿನ ಕುಣಿತವು ಇತರೆ ಸಮುದಾಯದವರಲ್ಲೂ ಕಂಡುಬರುತ್ತದೆ.

### ೮.೩. ಡೊಳ್ಳಿನ ಹಾಡುಗಾರಿಕೆ

ಜನಪದ ಪದ್ಯ ಸಾಹಿತ್ಯದಲ್ಲಿ ಏಕತಾರಿ ಪದ, ಗುಮಟೆ ಪದ, ಚೌಡಕಿ ಪದ, ಡಪ್ಪಿನ ಪದ, ಡೊಳ್ಳಿನ ಪದ ಮೊದಲಾದವು ಪ್ರಮುಖವಾಗಿವೆ.[೨೦] ಇವುಗಳಲ್ಲಿ ಡೊಳ್ಳಿನ ಪದಗಳು ತಮ್ಮ ಪ್ರಾಚೀನ ಪರಂಪರೆ ಹಾಗೂ ಸಾಂಸ್ಕೃತಿಕ ಹಿನ್ನೆಲೆಯ ವೈಶಿಷ್ಟತೆಯಿಂದ ಗಮನಾರ್ಹವಾಗಿವೆ. ಆದಿಕಾಲದಿಂದಲೂ ಮೌಖಿಕವಾಗಿ ಒಬ್ಬರಿಂದ ಒಬ್ಬರಿಗೆ ಸಾಗಿ ಬಂದಿರುವ ಡೊಳ್ಳಿನ ಹಾಡುಗಳು ಕುರುಬರ ಸಂಸ್ಕೃತಿಯ ಪ್ರತೀಕವಾಗಿವೆ. ಈ ಡೊಳ್ಳಿನ ಹಾಡುಗಳ ಮೂಲ ಪ್ರೇರಣೆ ಆರಾಧನೆಯಾಗಿದೆ. ಡೊಳ್ಳನ್ನು ಟೊಂಕಕ್ಕೆ ಕಟ್ಟಿಕೊಂಡು ಕುಣಿದರೆ ಡೊಳ್ಳು ಕುಣಿತವೆಂದು, ಡೊಳ್ಳನ್ನು ಮುಂದಿಟ್ಟುಕೊಂಡು ಎಡ ಮತ್ತು ಬಲಗೈಯನ್ನು ನಾಲ್ಕು ತುದಿಬೆರಳುಗಳಿಂದ ಬಾರಿಸುತ್ತ ಪದಗಳನ್ನು ಹಾಡಿದರೆ ಡೊಳ್ಳಿನ ಹಾಡುಗಾರಿಕೆ ಎಂದು ಕರೆಯುತ್ತಾರೆ. ಡೊಳ್ಳಿನ ಹಾಡುಗಳನ್ನು ಹಾಡುವವರನ್ನು ದಿಮ್ಮಿ ಮೇಳ, ಡೊಳ್ಳಿನ ಮಜಲು, ಕೈಪೆಟ್ಟಿನವರು ಎಂದೂ ಕರೆಯುತ್ತಾರೆ.[೨೦]

ಡೊಳ್ಳಿನ ಪದಗಳು ಸಾಮಾನ್ಯವಾಗಿ ಪೌರಾಣಿಕ ವಸ್ತುಗಳನ್ನು ಒಳಗೊಂಡಿದ್ದರೂ ಜೊತೆಗೆ ಸಮಾಜ, ನಿಸರ್ಗ, ವ್ಯಕ್ತಿಗಳನ್ನು ಕುರಿತು ರಚನೆಗೊಂಡಿವೆ. ಪುರಾಣ, ಕಥೆಗಳು, ನಡೆನುಡಿಗಳು, ಧಾರ್ಮಿಕ ಪುಣ್ಯ ಪುರುಷರ ವೃತ್ತಾಂತಗಳು  ಪ್ರಧಾನವಾಗಿ ಡೊಳ್ಳಿನ ಪದಗಳ ವಸ್ತುಗಳಾಗಿವೆ. ಈ ಪದಗಳಲ್ಲಿನ ಪುಣ್ಯ ಕಥೆಗಳ ನೀತಿ, ತತ್ವ, ಧರ್ಮವನ್ನು ಕೇಳಿ ಜನರು ತಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಂಡು ಆದರ್ಶಯುತ ಬಾಳನ್ನು ಬಾಳಬೇಕೆಂಬುದೇ ಈ ಪದಗಳ ಮೂಲ ಆಶಯವಾಗಿರುವುದು ವಿಶೇಷ. ದೈವಭಕ್ತಿಗೆ ಹೆಚ್ಚಿನ ಪ್ರಾದಾನ್ಯತೆಯಿರುವುದರಿಂದ ಡೊಳ್ಳಿನ ಪದಗಳನ್ನು ಭಕ್ತಿಗೀತೆಗಳೆಂದು ಕರೆಯಬಹುದಾಗಿದೆ. ಒಟ್ಟಾರೆ ಈ ಡೊಳ್ಳಿನ ಪದಗಳು ಮನರಂಜನೆಗಿಂತ ಮತ ಶ್ರದ್ದೆಗೆ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ.

#### ೮.೩.೧ ಹಾಡುಗಳನ್ನು ಹಾಡುವ ಕ್ರಮ

ಡೊಳ್ಳಿನ ಹಾಡುಗಳನ್ನು ಸಾಮಾನ್ಯವಾಗಿ ಜಾತ್ರೆ, ಉತ್ಸವ, ಸಮಾರಾಧನೆ,  ಶ್ರಾವಣಮಾಸ, ಮಹಾನವಮಿ, ಯುಗಾದಿ,

ಶಿವರಾತ್ರಿ, ದೀಪಾವಳಿ ಹಾಗೂ ರೇವಣಸಿದ್ಧೇಶ್ವರ, ಬೀರದೇವರು, ಮಾಳಿಂಗರಾಯ, ಮೈಲಾರಲಿಂಗೇಶ್ವರ, ಅಮೋಘಸಿದ್ಧ, ಮೊದಲಾದ ದೇವರುಗಳ ಉತ್ಸವ ಜಾತ್ರೆ ಸಂದರ್ಭಗಳಲ್ಲಿ ದೇವಸ್ಥಾನದಲ್ಲಿ ಹಾಡುತ್ತಾರೆ. ಡೊಳ್ಳಿನ ಹಾಡುಗಳನ್ನು ಹಾಡಲು ತಂಡದವರು ಕೆಲವು ನಿಯಮಗಳನ್ನು ಅನುಸರಿಸುವರು. ಮೊದಲಿಗೆ ಕರಿಕಂಬಳಿಯ ಕರಿಯನ್ನು ಮುಂದೆ ಮಾಡಿ ಹಾಸುತ್ತಾರೆ. ಅದರ ಮೇಲೆ ದಿಮ್ಮಿನ ಡೊಳ್ಳನ್ನು ಇಡುತ್ತಾರೆ. ಡೊಳ್ಳು ಬಾರಿಸುವವರು ಎದುರಿಗೆ ಕುಳಿತು ಅದಕ್ಕೆ ನಮಸ್ಕರಿಸುತ್ತಾರೆ. ನಂತರ ಕೈಯಿಂದ "ದಾಂಗ್, ದಿಂಗ್, ದಾಂಗ್, ದಿಂಗ್" ಎಂದು ಬಾರಿಸಲು ಪ್ರಾರಂಭಿಸಿದಂತೆಯೇ ಕುಳಿತ ತಾಳದ ವ್ಯಕ್ತಿಗಳು "ಚಾಂಗ್ ಚಂಗ್, ಚಾಂಗ್ ಚಂಗ್" ಎಂದು ತಾಳ ನುಡಿಸುತ್ತಾರೆ.[೨೨] ಇನ್ನು ಕೆಲವು ಭಾಗಗಳಲ್ಲಿ

"ದುಮ್, ತಂಗ್, ತಂಗ್, ತಂಗ್, ದುಮ್, ತಂಗ್, ತಂಗ್, ತಂಗ್
ದುಮ್, ತಂಗ್, ತಂಗ್, ತಂಗ್, ದುಮ್, ತಂಗ್, ತಂಗ್, ತಂಗ್"

ಎಂದು ಮುಮ್ಮೇಳದವರು ಡೊಳ್ಳನ್ನು ಬಾರಿಸಿ ಹಾಡನ್ನು ಪ್ರಾರಂಭಿಸುತ್ತಾರೆ.[೨೩] ನಂತರ ಈ ಮೇಳದವರು

"ತಂಗ್, ತಂಗ್ ತ್ ಮಕ್
ತಂ ಗಂಗ್ ತನ್ನ ಗಿಡಗಿಡ
ತನ್ನಾ ಗಿಡಗಿಡ ತನ್ನಾ ಗಿಡಗಿಡ
ಥಾರಾ ಚಪಾಂಗ ಧಾಂ ಚಪಾಂಗ್"

ಎಂದು ಡೊಳ್ಳನ್ನು ಬಾರಿಸಿ ಪದಗಳನ್ನು ಪ್ರಾರಂಭಿಸುವುದು ಕಂಡು ಬರುತ್ತದೆ.[೨೪] ಇದರ ನಂತರ ಕಲಾವಿದರು ಈ ರೀತಿ ಹಾಡನ್ನು ಪ್ರಾರಂಭಿಸುತ್ತಾರೆ.

"ಸ್ವಾಮೀ ನಮ್ಮಯ ದೇವರು ಬಂದಾನ ಬನ್ನಿರೇ
ಶಿವನೇ ನಮ್ಮಯ ದೇವರು ಬಂದಾನ ಬನ್ನಿರೇ"

ಎಂದು ಪ್ರಾರಂಭಿಸುವ ಪದವು ದೀರ್ಘವಾದುದಾಗಿರುತ್ತದೆ. ಇದರಲ್ಲಿ ಅನೇಕ ಪುರಾಣ, ನೀತಿಯುತ ಕಥೆಗಳಿರುತ್ತವೆ. ಪದವು ಮುಗಿಯುತ್ತಿದ್ದಂತೆಯೇ ಡೊಳ್ಳಿನವರು ಹಾಗೂ ತಾಳದವರು ಮುಂದುವರೆದು

"ತಾಕಡಗಡ ತಾಕಡತಾಗಡಗಡ ತತ್
ತಾಕಡಗಡ ತಾಕಡತಾಗಡಗಡ ತತ್
ತಾಕಡಗಡ ತಾಕಡತಾಗಡಗಡ ತತ್"

ಎಂದು ಬಾರಿಸುತ್ತಾ ಕೊನೆಗೆ "ಗದನ್ ತಾಕ್, ದಿನ ಗುಕ್" ಎಂದು ಬಾರಿಸಿ ಮುಕ್ತಾಯ ಮಾಡಿ ಡೊಳ್ಳಿಗೆ ನಮಸ್ಕರಿಸಿ ಮೇಲೇಳುತ್ತಾರೆ.[೨೫] ಹೀಗೆ ಡೊಳ್ಳು ಮತ್ತು ತಾಳದ ಗತ್ತಿಗೆ ಮುಮ್ಮೇಳದವರು ಹಾಗೂ ಹಿಮ್ಮೇಳದವರು ರಾಗಬದ್ಧವಾಗಿ ಹಾಡುತ್ತಾರೆ.

ಡೊಳ್ಳಿನ ಹಾಡುಗಳು ಸರಳವಾದ ರಚನೆ, ಪ್ರಾಸಾನು ಪ್ರಾಸ, ದ್ವಿಪದಿ, ತ್ರಿಪದಿ ಹಾಗೂ ಚೌಪದಿಯಲ್ಲಿರುವುದು

ಕಂಡುಬರುತ್ತದೆ.[೨೬] ಇವುಗಳು ನಿತ್ಯ ವ್ಯವಹಾರದ ಸರಳ, ಸಹಜ ಸಂಭಾಷಣೆಯಿಂದ ಕೂಡಿರುತ್ತವೆ. ಹಾಡಿನ ಕಲಾಭಿವ್ಯಕ್ತಿ ಮತ್ತು ಕಾವ್ಯದ ದೃಷ್ಟಿಯ ಆಡುಭಾಷೆಯದಾದರೂ ಸಹ ಅರ್ಥವತ್ತಾಗಿ ನಾಗರಿಕ ಭಾಷೆಯ ಮತ್ತೊಂದು ಮುಖವನ್ನು ಕಾಣಬಹುದಾಗಿದೆ. ಹಾಡುಗಳು ದಾಟಿಯಲ್ಲಿ ಬಹುಟ್ಟಿಗೆ ಏಕತಾನತೆಯನ್ನು ಹಾಗೂ ಸ್ವರದ ಏರಿಳಿತಗಳನ್ನು ಹೊಂದಿವೆ. ನಿತ್ಯ ಜೀವನದ ಆಡು ಭಾಷೆಯ ಸೊಗಡು ತುಂಬಿರುವುದರಿಂದ, ಈ ಹಾಡುಗಳ ಭಾಷೆಯು ಖಂಡಿತವಾಗಿ ಜಾನಪದವೆನಿಸದೆ ಶಿಷ್ಟಪದ ಭಾಷೆ ಎಂದು ಕಂಡುಬರುತ್ತದೆ. ಹಾಲುಮತದ ದೇವರ ಮತ್ತು ಕುಲದ ಮಹಿಮೆಯ ಪವಾಡಗಳ ವೈಭವವನ್ನು ಅಧಿಕವಾಗಿ ಕಾಣಬಹುದಾಗಿದೆ. ಡೊಳ್ಳಿನ ಹಾಡುಗಳಲ್ಲಿ ರ್‍ವಾಣಗಳನ್ನು ಸೇರಿಸುವುದರಿಂದ ಹಾಡಿಗೆ ಮತ್ತಷ್ಟು ಮೆರುಗು ದೊರೆಯುತ್ತದೆ. ರ್‍ವಾಣಗಳಿಂದ ಕೂಡಿದ ಹಾಡುಗಳು ಕೇಳುವವರ ಮನಸ್ಸಿಗೆ ಉಲ್ಲಾಸ ನೀಡುವಲ್ಲಿ ವಿಶೇಷತೆಯನ್ನು ಹೊಂದಿವೆ.

### ೮.೩.೨ ಡೊಳ್ಳಿನ ಹಾಡುಗಳ ವಿಂಗಡನೆ

ಡೊಳ್ಳಿನ ಹಾಡುಗಳನ್ನು ಡಾ.ಎಸ್.ಎಫ್.ಜಕಬಾಳರವರು ಐದು ಪ್ರಕಾರವಾಗಿ ವಿಂಗಡಿಸಿದ್ದಾರೆ. ಅವುಗಳು ಈ ರೀತಿಯಾಗಿವೆ. ೧. ಪೌರಾಣಿಕ ಹಾಡುಗಳು ೨. ಚರಿತ್ರೆಯ ಹಾಡುಗಳು ೩. ಶಿವಶರಣರ ಹಾಡುಗಳು ೪. ನೀತಿಬೋಧಕ ಹಾಡುಗಳು ೫. ಒಗಟಿನ ಹಾಡುಗಳು.[೨೭] ಅದೇ ರೀತಿ ಡಾ.ಅರ್ಜುನ ಗೋಳಸಂಗಿಯವರು ಐದು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ೧.ಪುರಾಣದ ಪದಗಳು ೨. ಪವಾಡದ ಪದಗಳು ೩. ನೀತಿಪದಗಳು ೪. ಧರ್ಮದಪದಗಳು ೫. ಚುಟುಕುಗಳು ಪ್ರಮುಖವಾಗಿವೆ.[೨೮]

ಡೊಳ್ಳಿನ ಹಾಡುಗಳೆಲ್ಲ ಬಹುಪಾಲು ಅನಕ್ಷರಸ್ತರಿಂದ ರಚಿತವಾಗಿವೆ. ಹಾಗಾಗಿ ಹಾಡುಗಳನ್ನು ಕಂಠಪಾಠದಲ್ಲಿಯೇ ಮುಂದುವರೆಸಿಕೊಂಡು ಬಂದಿದ್ದಾರೆ. ಆದರೆ ಇತ್ತೀಚೆಗೆ ಹಾಡುಗಳು ರಚಿಸಲ್ಪಡುತ್ತಿವೆ. ಕುರುಬರು ಹಾಗೂ ಕುರುಬರೇತರರು ಡೊಳ್ಳಿನ ಹಾಡುಗಳನ್ನು ರಚಿಸಿರುವುದು ಕಂಡುಬಂದಿದೆ.

### ೧. ಪೌರಾಣಿಕ ಹಾಡುಗಳು

ಕುರುಬರು ತಮ್ಮ ಆಚಾರ–ವಿಚಾರ ಮತಶ್ರದ್ಧೆಗಳನ್ನು ತಿಳಿಸುವಾಗ ಪುರಾಣಮಯವಾಗಿ ಹೆಮ್ಮೆಯಿಂದ ಹೇಳಿಕೊಂಡಿರುವುದು ಅನೇಕ ಪೌರಾಣಿಕ ಹಾಡುಗಳಿಂದ ತಿಳಿದುಬಂದಿದೆ. ಈ ಡೊಳ್ಳಿನ ಪೌರಾಣಿಕ ಹಾಡುಗಳು ರಾಮಾಯಣ, ಮಹಾಭಾರತ, ಭಾಗವತ ಹಾಗೂ ಅನೇಕ ಪುರಾಣಗಳಲ್ಲಿ ಬರುವ ಕಥೆಗಳ ವಸ್ತು ವಿಷಯವನ್ನು ಹೊಂದಿರುತ್ತವೆ. ಹೆಚ್ಚಾಗಿ ಈ ಹಾಡುಗಳು ದ್ವಿಪದಿಯ ಛಂದಸ್ಸಿನಲ್ಲಿರುತ್ತವೆ.[೨೯] ಇವುಗಳ ಲಯ ನಾಗಾಲೋಟದಲ್ಲಿರುತ್ತದೆ. ಈ ನಾಗಲೋಟ ಲಯವು ಎಂತಹ ದೀರ್ಘವಾದ ಕಥೆಯನ್ನೂ ಸರಾಗವಾಗಿ ಹೇಳಿಸಿಕೊಂಡು ಹೋಗುವಂತಿರುತ್ತವೆ. ಪದ್ಯದಿಂದ ಆರಂಭಗೊಳ್ಳುವ ಈ ಹಾಡುಗಳಲ್ಲಿ ಮಧ್ಯೆ ಗದ್ಯವೂ ಕೂಡಿ ಕೊನೆಗೆ ಪದ್ಯದಿಂದಲೇ ಮುಕ್ತಾಯಗೊಳ್ಳುತ್ತದೆ. ಉದಾಹರಣೆಗೆ ಈ ಪದ್ಯವನ್ನು ನೋಡಬಹುದು.

"ಒಂದು ಹನಿರಕ್ತ ನೆಲಕ ಬಿದ್ದರ
ಕೋಟಿ ದಂಡ ಹುಟ್ಟುತ ಮತ್ತ
ಮುಂದ ಕಡಿದ್ಹಾಂಗ ಹುಟ್ಟುದು
ನೋಡಿ ನಿಂತಾಳಾಕಿ ಬೇಸತ್ತ" ॥[೩೦]

ಇನ್ನೊಂದು ಪದ್ಯ ಕುರುಬರ ಮೂಲ ತಿಳಿಸುವ ಪದ್ಯವಾಗಿದೆ. ಈ ಪದ್ಯವನ್ನು ರಗಳೆಯ ದಾಟಿಯಲ್ಲಿ ಹಾಡುತ್ತಾರೆ. ಇದು ಕುರುಬರ ಸೃಷ್ಟಿ, ಹತ್ತಿಕಂಕಣ, ಉಣ್ಣೆ ಕಂಕಣ ಪಂಗಡಗಳ ಸೃಷ್ಟಿಯೊಂದಿಗೆ ಹಾಡು ಮುಕ್ತಾಯವಾಗುತ್ತದೆ. ಅದು ಈ ರೀತಿಯಾಗಿದೆ.

"ಏಳು ಗಂಜನಿಗಿ ನೀರಾ ತಂದಾವು ನಿನ್ನೇ

ಎತ್ತಗೊಳಗೆ ಮೇವಾ ನೀರಾ ಮಾಡಿದಾವು ನಿನ್ನೇ !

ಉಂಡಾಡು ಪದ್ಮಗುಂಡ ನಿನ್ನೇ

ನೇಗಿಲ ಹೊಡಿ ಹುತ್ತಿನ ಗಡ್ಡಿಗೆ ಹಾಸಿ

ಭಾಗ್ಯ ಎಬ್ಬಿಸಿದವ ನಿನ್ನೇ

ಉಂಡಾಡು ಪದ್ಮಗುಂಡ ನೀನ್ನೇ ॥"[೨೧]

ಈ ರೀತಿ ಡೊಳ್ಳಿನ ಪದಗಳಲ್ಲಿ ಪುರಾಣದ ಹಾಡುಗಳು ಮೂಡಿಬರುತ್ತವೆ. ಇವು ಸಾಮಾನ್ಯವಾಗಿ ದೀರ್ಘವಾಗಿರುತ್ತವೆ. ಅಲ್ಲದೇ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಹಾಡುಗಳು ಅಧಿಕವಾಗಿ ಕಂಡುಬರುತ್ತವೆ.

**೨. ಐತಿಹಾಸಿಕ ವ್ಯಕ್ತಿಗಳ ಬಗ್ಗೆ ಇರುವ ಹಾಡುಗಳು**

ಡೊಳ್ಳಿನ ಹಾಡುಗಳಲ್ಲಿ ಬರುವ ಚರಿತ್ರೆಯ ಹಾಡುಗಳನ್ನು ನೋಡಿದರೆ ಅವು ಬಹು ಪ್ರಾಚೀನವಾದವುಗಳೆಂದು, ಅಲ್ಲದೇ ಕವಿರಾಜ ಮಾರ್ಗದ ಕಾವ್ಯಕ್ಕಿಂತ ಹಿಂದಿನವು ಎಂದು ವಿದ್ವಾಂಸರ ಅಭಿಪ್ರಾಯವಿದೆ. ಕುರುಬರ ಆರಾಧ್ಯ ದೇವರುಗಳಾದ ಸಿದ್ಧಬೀರ, ಕರಿಸಿದ್ಧ, ಅಮೋಘಸಿದ್ಧ ಮೊದಲಾದ ಪುರುಷದೇವರಲ್ಲದೇ, ಎಲ್ಲವ್ವ, ಕರಿಯವ್ವ, ಜಕ್ಕವ್ವ, ಮಾಯವ್ವ ಮೊದಲಾದ ಸ್ತ್ರೀ ದೇವತೆಗಳ ಚರಿತ್ರೆಗಳು ಈ ಹಾಡುಗಳ ಕಥಾ ವಸ್ತುಗಳಾಗಿರುತ್ತವೆ.

ಸಿದ್ಧಬೀರನ ಒಂದು ಡೊಳ್ಳಿನ ಪದ ಈ ರೀತಿಯಾಗಿದೆ. ಅದರಲ್ಲಿ ಸೂರಂದೇವಿಯ ಸಂದಿಯ ಹಾಡು ಇದಾಗಿದೆ.

"ಚಂದರಗಿಯ ಬಳಗಪ್ಪ

ಸೂರಂದೇವಿಯ ಅರಮನಿಯ ।

ಸೂರಂದೇವಿಯ ಕಲ್ಲೇಳ

ಪಂಚಪಗಡಿಯ ಕಲ್ಲೇಳ

ಪಂಚ ಪಗಡಿಯ ಕಲ್ಲನ್ಯಾಗ

ಕೋದ ಕಿಡಕಿಯ ಮಾಡ್ಯಾಳ ।

ಕೋದ ಕಿಡಕಿಯ ಮಾಡಿನ್ಯಾಗ

ನೀಲಗನ್ನಡಿ ಇಟ್ಟಾರ ॥

ಸೂಹದೇವಿಯ ಅಮರನಿಗೆ

ಮುತ್ತು ಹಚ್ಚಿನ ಬಾಗಲಿ

ಮುತ್ತು ಹಚ್ಚಿದ ಬಾಗಲ ಮುಂದ

ಸಾಲತೆಂಗಿನ ಮರವೇನೋ ॥" [೨]

**ಇನ್ನೊಂದು ಪದ್ಯ**

"ಮಾಯದ ಕುದರಿ ಮಾಯವಾಗಿ ಹೋಯಿತು

ವಿಕ್ರಮರಾಜ ನಿಂತಾನ ಗಾಬರ್‍ಯಾಗಿ

ನೀರಡಿಸಿ ಹತ್ತ ಹಲ್ಲಿನ ಹಾರಿ

ಅತ್ತ ಇತ್ತ ಏರಿ ನೋಡಿದ

ಊರ ಇತ್ತ ಗುಡ್ಡದೇರಿಗಿ ॥"[೩೩]

ಈ ಪದ್ಯದಲ್ಲಿ ವಿಕ್ರಮರಾಜನಿಗೆ ವಿಧಿಕಾಡಿದ ವಿಚಿತ್ರ ರೀತಿಯನ್ನು ನೋಡಬಹುದಾಗಿದೆ. ಬೇಟೆಗೆ ಹೋದ ರಾಜ ಕುದುರೆಯ ಕಳೆದುಕೊಂಡು, ನೀರಡಿಸಿ, ಹೌಹಾರಿ ಸಮೀಪದ ರಾಜನ ಆಶ್ರಯ ಪಡೆಯುತ್ತಾನೆ. ಶನಿ ವಿಕ್ರಮರಾಜನಿಗೆ ಪಣ ಒಡ್ಡುತ್ತದೆ. ರತ್ನಹಾರದ ಕಳ್ಳತನದ ಅಪವಾದದಿಂದ ವಿಕ್ರಮರಾಜ ಕೈಕಾಲು ಕತ್ತರಿಸಿಕೊಳ್ಳಬೇಕಾಗುತ್ತದೆ. ಮಂಡದೇಹದಿಂದ ಏಳೂರು ಭಿಕ್ಷೆ ಬೇಡಿ ಕೊನೆಗೆ ಮಗಳ ಸಹಾಯದಿಂದ ಮೊದಲಿನ ಸ್ಥಿತಿಗೆ ಬರುತ್ತಾನೆ. ಈ ಕಥೆಯು ಮನುಷ್ಯನ ಬದುಕಿನ ವಿವಿಧ ವಿಷಣ್ಣತೆಯನ್ನು ಪ್ರತೀಕಿಸುತ್ತದೆ. ಅಲ್ಲದೇ ಎಂತವರಿಗೂ ಕಷ್ಟ ತಪ್ಪಿದ್ದಲ್ಲಿ ಎಂಬ ನೀತಿಯನ್ನು ಸ್ಪಷ್ಟಪಡಿಸುತ್ತದೆ.

**೩. ಪವಾಡದ ಹಾಡುಗಳು**

ಶರಣರ, ಮಹಾತ್ಮರ, ಪವಾಡ ಪುರುಷರ ಮಹಿಮೆಯನ್ನು ಅವರ ಸಿದ್ಧಿ ಸಾಧನೆಯನ್ನು ಡೊಳ್ಳಿನ ಹಾಡಿನ ಮುಖಾಂತರ ಹಾಡಲಾಗುತ್ತದೆ. ಈ ಪದ್ಯಗಳು ದೈವೀ ಪುರುಷನ ಜೀವನ ವೃತ್ತಾಂತವಾಗಿರುತ್ತವೆ. ಇವುಗಳಲ್ಲಿ ಭಕ್ತಿ ಪ್ರಮುಖ ವಸ್ತುವಾಗಿರುತ್ತದೆ. ನೆರೆದ ಜನ ಸಮೂಹಕ್ಕೆ ಪ್ರಾರ್ಥಿಸಿ ಹಾಡನ್ನು ಈ ರೀತಿ ಪ್ರಾರಂಭಿಸುತ್ತಾರೆ.

"ಕೇಳ್ರಪ್ಪ ಕುಂತೋ । ಹೇಳುವೆನು ಶಾಂತೋ ।

ದೇವರ ಮಾತೋ । ಆದ ವೃತ್ತಾಂತೋ ।

ದೈವ ಕೂಂತಿರಿ ಶಿಸ್ತೋ ॥

ದೇವರ ಕತಿಕೇಳಿ ಆಗ್ರಪ್ಪ ಶಾಂತೋ ।"[೩೪]

ನಂತರ ಶರಣರ, ಪವಾಡ ಪುರುಷರ ಜೀವನದ ವೃತ್ತಾಂತವನ್ನು ಪ್ರಾರಂಭಿಸುವರು. ಮಳೆಯಿಲ್ಲದೇ ಭೂಲೋಕದಲ್ಲಿ ಹಾಹಾಕಾರ ಪ್ರಾರಂಭವಾಗುತ್ತದೆ. ಆಗ ಊರವರೆಲ್ಲ ಸೇರಿ ಕುರುಬ ಗ್ಯಾನಣ್ಣನಿಗೆ ಮಳೆ ತರಿಸಲು ಭಿನ್ನವಿಸಿಕೊಳ್ಳುತ್ತಾರೆ. ಗ್ಯಾನಣ್ಣ ಗುಡ್ಡದ ಮೇಲೆ ನಿಂತು ಕಂಬಳಿಬೀಸಿ ಕರೆದರೆ ಮಳೆರಾಯ ಮುತ್ತು ಉದುರಿಸುತ್ತಾನೆ ಎಂಬ ಜನರ ನಂಬಿಕೆಯಂತೆ,

ಗ್ಯಾನಣ್ಣ ಗುಡ್ಡದ ಮೇಲೆ ನಿಂತು ಕಂಬಳಿ ಬೀಸಿದರೆ ಮಳೆ ಸುರಿಯುತ್ತದೆ ಎಂಬ ಪದ್ಯವನ್ನು ಈ ಕೆಳಗಿನಂತೆ ಹಾಡಲಾಗುತ್ತದೆ.

"ಮೂರು ತಿಂಗಳ ಮಳಿಯಿಲ್ಲ ಗ್ಯಾನಣ್ಣ
ಮೂರು ದಿನಮಾನ ಉಂಡಿಲ್ಲ
ಏಳ ಊರ ಗೌಡರು ಕಲಿತು
ಗಟ್ಟಿ ಮಾಡೆಂದು ತರಬ್ಯಾರ
ಐದು ವರ್ಷದ ಕಂದ ಗ್ಯಾನಣ್ಣ
ಕರಡಿಯ ಗುಡ್ಡಕ ನಡದಾನ
ಆಕಳ ಸಗಣಿಯ ತರಸ್ಯಾನ
ಹೊಳಿಯ ಸೀತಾಳ ತರಿಸ್ಯಾನ
ಗ್ಯಾನಣ್ಣ ನೆಲವ ಸಾರುಗೊಂಡಾನ
ಧೂಪಹಾಕ್ಯಾನು ದೀಪಗಳ ಮುಡಿಸ್ಯಾನು
ಕೈಲಾಸಕೆ ಕೈ ಮುಗದಾನು
ನಮ್ಮಪ್ಪ ನಮತಾಯಿ ದುರಗವ್ವ
ವರವಿನ ಗಾಳ್ಯೊಂದು ತಿರವ್ಯಾಳ
ನಮ್ಮಪ್ಪ ನಮ್ಮ ಮಾನಪ್ಪಯ್ಯ
ಕೋಲ ಮಿಂಚೊಂದೊಡದಾನ
ಕತ್ತಲೆಂಬುದೇನ್ಹೇಳು ಸ್ವಾಮಿ ಅದು,
ನೆತ್ತರೆಂಬುದಿದು ಏನಯ್ಯ
ಕತ್ತಲ ಕರಿ ಮುದ್ದಿನ ಮಳಿಯಾ
ನೆತ್ತರ ಕೋಲ ಮಿಂಚೇಳೊ
ಕೈಬೀಸಿ ಮಳೆಗಳ ಕರದಾನೂ
ಹಿಂದಿಂದ ಮಳಿ ಮೂಡಿದ್ದಾವೆ
ವಜ್ಜರದಾಗೊಂದು ಕೀಲ ಸಡ್ಯಾವೊ" [೨೧]

ಈ ಪದ್ಯದಿಂದ ಕುರುಬರ ಗ್ಯಾನಣ್ಣ ಕಂಬಳಿ ಬೀಸಿದರೆ ಮಳೆ ಬರುತ್ತದೆ ಎಂಬುದನ್ನು ಜನರಲ್ಲಿ ಮೂಡಿಸುವರಲ್ಲದೇ ಕುರುಬರ ಪವಾಡದ ಅರಿವು ನೀಡುತ್ತಾರೆ.

## ೪. ಶಿವಶರಣರ ಹಾಡುಗಳು

ಶೈವ ಪರಂಪರೆಯಲ್ಲಿ ಪುರಾತನರೆನಿಸಿದ ಶರಣರ ಜೀವನ ಚರಿತ್ರೆ ಮತ್ತು ೧೨ನೇ ಶತಮಾನದಲ್ಲಿ ಆಗಿಹೋದ ಬಸವಾದಿ ಶರಣರ ದಿವ್ಯಜೀವನ ಚರಿತ್ರೆಯನ್ನು ಹಾಡುಗಳು ಒಳಗೊಂಡಿರುತ್ತವೆ. ಇವು ಗದ್ಯ ಪದ್ಯ ಮಿಶ್ರಿತವಾಗಿರುತ್ತವೆ. ರಗಳೆಯ ದಾಟಿಯಲ್ಲಿ ಈ ಪದ್ಯಗಳಿರುವುದು ವಿಶೇಷ. ಶಿವಶರಣರ ಪದ್ಯಗಳಲ್ಲಿ ಕುರುಬ ವೀರಗೊಲ್ಲಾಳ, ಏಳುಕೊಳದ ಎಲ್ಲಮ್ಮ, ಶಿವಶರಣೆ ನಿಂಬೆಕ್ಕ, ಭಕ್ತ ಪ್ರಹ್ಲಾದ, ಗುರುಭಕ್ತ ತಿರುನೀಲಕಂಠ, ಪತಿಭಕ್ತೆ ಅನಲಾದೇವಿ ಮೊದಲಾದವರ ಜೀವನ ಚರಿತ್ರೆಗಳಿವೆ. ಅವುಗಳಲ್ಲಿ ಗೊಲ್ಲಾಳೇಶ್ವರನ ಕುರಿತ ಪದ್ಯವೊಂದು ಈ ರೀತಿಯಿದೆ.

> "ಗ್ವಾಲಗೇರಿ ಭೂಮ್ಯಾಗ ಸತ್ತುಳ್ಳ ಶರಣ ಕುರಿಕಾಯುತ್ತಿದ್ದ ಯಾವುತ್ತೋ ।
> ಕುರಿಕಾಯುತ್ತಿದ್ದ ನೋಡ್ರಿ, ಯಾವುತ್ತೋ ।
> ಸಾವಿರಾರು ಜಂಗಮರು ಕಂಬಳಿಯ ಹೊತ್ತೋ ।
> ಶ್ರೀ ಶೈಲಕ ಹೊಂಟಾರ ಎಲ್ಲಾರೊಂದೆ ಜತ್ತೋ ।" [೩೭]

ಹೀಗೆ ಈ ಪದ್ಯ ಸಾಗುತ್ತ ಗೊಲ್ಲಾಳನ ಜೀವನ ಚರಿತ್ರೆಯೊಂದಿಗೆ ಅವನ ಪವಾಡವನ್ನು ವಿವರಿಸುತ್ತದೆ.

## ೫. ನೀತಿ ಬೋಧಕ ಹಾಡುಗಳು

ಡೊಳ್ಳಿನ ಪದಗಳಲ್ಲಿ ನೀತಿಯುಕ್ತ ಹಾಡುಗಳನ್ನು ಕಾಣಬಹುದಾಗಿದೆ. ರಾತ್ರಿಯಿಡಿ ಹಾಡುವ ಹಾಡುಗಳಾಗಿರದೆ ಒಂದು ಚರಿತ್ರೆಯ ಹಾಡನ್ನು ಹಾಡಿ ಮುಗಿಸುವ ಸಮಯದಲ್ಲಿ ಕೊನೆಗೆ ನೀತಿಯುಕ್ತ ಹಾಡುಗಳನ್ನು ಹಾಡುತ್ತಾರೆ. ಈ ಹಾಡುಗಳಲ್ಲಿ ತಂದೆ–ತಾಯಿಗೆ ಸಂಬಂಧಿಸಿದ ಪದ್ಯಗಳು, ಸ್ತ್ರೀ ಶೋಷಣೆಯ ಪದ್ಯಗಳು, ಸಿರಿತನ, ಬಡತನ, ಮೇಲು–ಕೀಳು ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಪದ್ಯಗಳು ಕೂಡಿರುತ್ತವೆ. ಈ ಹಾಡುಗಳು ಸುಮಾರು ಐದು ನುಡಿಯಿಂದ ಹಿಡಿದು ಎಂಟು ನುಡಿಗಳವರೆಗೂ ಇರುತ್ತವೆ. ಈ ಹಾಡುಗಳಲ್ಲಿ ನೀತಿ ಬೋಧನೆಯೊಂದಿಗೆ ಸಾಮಾಜಿಕ ವಿಡಂಬನೆಯೂ ಇರುತ್ತದೆ. ಅಂತಹ ಒಂದು ನೀತಿಯುಕ್ತ ಹಾಡು ಈ ರೀತಿಯಾಗಿದೆ.

> "ಕೇಳಬಾರದೋ, ಕೇಳಬಾರದೋ, ಕೇಳಬಾರದೋ,
> ಮನೆಹಾಳು ಮಾಡುವವರ ಮಾತು ಕೇಳಬಾರದೋ,
> ಹೊತ್ತ ಮುಳುಗಿ ದಾರಿಯೊಂದು ಹಿಡಿಯಬಾರದೋ
> ಹೊಲ್ಯಾಚೆಗೆ ನೆಂಟಸ್ಥನ ಮಾಡಬಾರದೋ ॥
> ತಂದೆ–ತಾಯಿ ಮಾತೊಂದು ಮೀರಬಾರದೋ
> ಗುರುವಿನ ಪಾದಾ ಒಂದು ಮರೆಯಬಾರದೋ ॥" [೩೮]

ಇನ್ನೊಂದು ನೀತಿಯುತ ಪದ್ಯ ಈ ರೀತಿಯಿದೆ.

> "ಹೆಣ್ಣು ಮಕ್ಕಳಿಗೆಲ್ಲ ನಾನು ಸಣ್ಣವನಾಗಿ ಹೇಳ್ತೇನಿ ।

ಮುತ್ತಿನಂಥ ಮಾತೊಂದು ಹೇಳತೀನಿ

ನೀತಿ ಮಾರ್ಗ ಮುಂದಿನ ಹಾದಿಗಿ ॥

ವಯಸಿನ ಬೆನ್ನ ಹತ್ತಿ ನೀವು ಬಡಿಯಾರ ಮಾಡಾಕಹ್ವಾದರ

ಹೋಗಿ ಬೀಳತೀರಿ ತಿರಗದ ಬಾವಿಯೊಳಗ ॥" ೩೮

ಈ ಎರಡೂ ಪದ್ಯಗಳು ನೀತಿ ಮಾರ್ಗವನ್ನೇ ಒತ್ತಿ ಹೇಳುತ್ತವೆ. ಈ ಹಿನ್ನೆಲೆಯಲ್ಲಿ ನೀತಿಯುತವಾದ ಡೊಳ್ಳಿನ ಹಾಡುಗಳು ಸಮಾಜದ ಬದುಕನ್ನು ಒಂದು ಸುಸ್ಥಿತಿಯಲ್ಲಿ ಮುನ್ನೆಡೆಸಲು ಬಹಳ ಉಪಕಾರಿಯಾಗಿರುವುದು ಕಂಡುಬರುತ್ತದೆ.

**೬. ಒಗಟಿನ ಹಾಡುಗಳು**

ಒಗಟಿನ ಹಾಡುಗಳು ಪ್ರಶ್ನೆಯೊಂದಿಗೆ ಪ್ರಾರಂಭವಾಗುತ್ತವೆ. ತರ್ಕಶಾಸ್ತ್ರದ ವಿಷಯ ಈ ಹಾಡುಗಳಿಗೆ ವಸ್ತುವಾಗುತ್ತದೆ. ಈ ಹಾಡುಗಳನ್ನು ಜಾತ್ರೆ, ಉತ್ಸವದ ಸಂದರ್ಭಗಳಲ್ಲಿ ಹಾಡುತ್ತಾರೆ. ಒಂದು ಮೇಳದವರು ಒಗಟಿನ ಹಾಡನ್ನು ಹಾಡಿ ಪ್ರಶ್ನೆಯನ್ನು ಕೇಳಿದರೆ, ಅದಕ್ಕೆ ಮತ್ತೊಂದು ಮೇಳದವರು ಒಗಟಿನ ಹಾಡಿಗೆ ಉತ್ತರವನ್ನು ನೀಡುತ್ತಾರೆ. ಜಾತ್ರೆಗೆ ಬಂದ ಯಾವ ಮೇಳದವರಾದರೂ ಉತ್ತರ ನೀಡಬಹುದಾಗಿದೆ. ಯಾವ ಮೇಳದವರೂ ಉತ್ತರ ನೀಡದಿದ್ದರೆ ಮೊದಲು ಹಾಡಿದ ಮೇಳದವರೇ ಉತ್ತರ ನೀಡುತ್ತಾರೆ. ಅಲ್ಲದೆ ಜ್ಞಾನವಂತರು ಎಂಬ ಬಿರುದನ್ನು ಪಡೆದುಕೊಳ್ಳುತ್ತಾರೆ. ಇವು ವಾದಿ ಪ್ರತಿವಾದಿಗಳ ಮೂಲಕ ರಾತ್ರಿಯಿಡೀ ಮುಂದುವರೆಯುತ್ತವೆ. ನಾಲ್ಕು ಸಾಲಿನ ನುಡಿಗಳಿಂದ ಕೂಡಿರುವುದರಿಂದ ಇವು ಬಹಳ ಪ್ರಾಚೀನವಾಗಿರಬಹುದೆಂದು ತಿಳಿಯುತ್ತದೆ.

ಈ ಹಾಡುಗಳು ಪ್ರಶ್ನೆಯೊಂದಿಗೆ ಪ್ರಾರಂಭಗೊಂಡು "ಇಂತಾದ ಹಂಗಿತ್ತು, ಅಂತಾದ ಹಂಗಿತ್ತು, ಹಾಂಗ ಹಾಂಗಾರ ಅರ್ಥವನ್ನು ಹೇಳದಿದು, ನಿನ್ನನ್ನು ಪಾತರದಾರ ಲೇಸ ಎಂದು ಕರೆಯುತ್ತೇನೆ" ಎನ್ನುವುದರೊಂದಿಗೆ ಮುಕ್ತಾಯವಾಗುತ್ತದೆ.

ಉದಾಹರಣೆ

"ಅಂಡಜ ಪಿಂಡಜ ತತ್ತಿಯು ಪಡೆದಂತ

ಪಕ್ಷಿಯ ಕೂನ್ಯಾವದ್ಹೇಳಣ್ಣಾ ।

ತತ್ತೊದವ ನೀರಾತು ನೀರಿಗೆ ಬೇರುಂಟು

ನೀರಿನ ಮಾರ್‍ಯಾವುದ್ಹೇಳಣ್ಣಾ ।

ಬೈಲಿಗೆ ಬೈಲಿತ್ತು ಬೈಲೊಳಗೇನಿತ್ತು

ಬೀಜಲ್ಲದ ಮರ ಯಾವುದ್ಹೇಳಣ್ಣಾ ।

ಹನ್ನೆರಡು ವಾಲಿಯು ಮೂವತ್ತೆರಡ ಕಾಯಿ

ಮರ್ತ್ಸಕ ಮರ ಯಾವುದ್ಹೇಳಣ್ಣಾ ॥" ೩೯

ಈ ರೀತಿಯ ಒಗಟಿನ ಹಾಡುಗಳು ಜನರನ್ನು ಉತ್ತಮವಾಗಿ ರಂಜಿಸುತ್ತವೆ. ವಾದ ಪ್ರತಿವಾದಗಳು ನಡೆದು ಎರಡು

ಮೇಳದವರ ಮಧ್ಯೆ ಜಗಳ ಉಂಟಾಗಿರುವ ಸಂದರ್ಭಗಳು ಇವೆ. ಆದರೂ ಒಗಟಿನ ಹಾಡುಗಳು ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದಿರುವುದು ಕಂಡುಬರುತ್ತದೆ.

**೮.೩.೩ ಡೊಳ್ಳಿನ ಹಾಡುಗಳಲ್ಲಿ ರ‍್ವಾಣಗಳು**

ಕುರುಬರು ಡೊಳ್ಳಿನ ಹಾಡುಗಳ ಮೂಲಕ ಕನ್ನಡ ಜನಪದ ಸಾಹಿತ್ಯಕ್ಕೆ ಪ್ರಮುಖ ಕೊಡುಗೆ ನೀಡಿದ್ದಾರೆ. ಡೊಳ್ಳಿನ ಹಾಡುಗಳೊಂದಿಗೆ ಜನಪದ ಸಾಹಿತ್ಯಕ್ಕೆ ರ‍್ವಾಣಗಳ ಮೂಲಕ ಮತ್ತೊಂದು ಶ್ರೇಷ್ಠ ಕೊಡುಗೆ ನೀಡಿರುವುದು ಕಂಡುಬರುತ್ತದೆ. ಡೊಳ್ಳಿನ ಹಾಡುಗಳ ನಡುವೆ ಬೇಸರ ನೀಗಿಸಲು ವಚನಗಳನ್ನು ಹೇಳುವ ರೀತಿಯಲ್ಲಿಯೇ ರ‍್ವಾಣಗಳನ್ನು ಮಧ್ಯದಲ್ಲಿ ಹೇಳುತ್ತಾರೆ. ಈ ರ‍್ವಾಣಗಳು ಆಡುಮಾತಿನ ಸಂಭಾಷಣೆಗಳಂತಿರುತ್ತವೆ. ಡೊಳ್ಳಿನ ಹಾಡುಗಾರರು ನಾಲ್ಕು ಜನರಾದರೆ, ರ‍್ವಾಣಗಾರರು ಇಬ್ಬರಿರುತ್ತಾರೆ. ರ‍್ವಾಣಗಳನ್ನು ಹೇಳುವ ರೀತಿ, ಸರಾಗವಾಗಿ ತೇಲಿಸಿಕೊಂಡು ಹೋಗುವ ಲಯ, ಓಟ, ಪ್ರಾಸಾನುಪ್ರಾಸ, ಗತ್ತುಗಾರಿಕೆ, ಮೊದಲಾದವುಗಳು ರ‍್ವಾಣಗಾರನ ಜಾಣ್ಮೆಯನ್ನು ಸ್ಪಷ್ಟಪಡಿಸುತ್ತವೆ.

ಇಬ್ಬರ ಸಂಭಾಷಣೆಯಿಂದ ಹೇಳಲ್ಪಡುವ ಈ ರ‍್ವಾಣಗಳಿಂದ ಪ್ರೇರಣೆ ಪಡೆದು ನಂತರ ಕಾಲದಲ್ಲಿ ಇಬ್ಬರು ಅನೇಕರಾಗಿ ರ‍್ವಾಣದ ಕಥಾ ಪ್ರಸಂಗ ಆಟವಾಗಿ ಪರಿಣಮಿಸಿತು. ಅದೇ ಮುಂದೆ ಬಯಲಾಟವಾಗಿರಬಹುದು ಎಂದು ಡಾ॥ ಜಕಬಾಳರವರು ಅಭಿಪ್ರಾಯಪಟ್ಟಿದ್ದಾರೆ.

**೧. ರ‍್ವಾಣಗಳ ಅರ್ಥ**

ರಾವಣನು ಭಕ್ತಿಯಿಂದ ಶಿವನನ್ನು ಒಲಿಸಿಕೊಂಡನೆಂದು ಪುರಾಣ ಹೇಳುತ್ತದೆ. ಅದೇ ರಾವಣನ ದಶಕಂಠಗಳಿಂದ ಹೊರಹೊಮ್ಮುವ ನಾದ ಸುಮಧುರವಾಗಿತ್ತಲ್ಲದೇ, ಕಿವಿಗೆ ಹಿತಕರವಾಗಿತ್ತು. ಆದ್ದರಿಂದ ರ‍್ವಾಣ ಹೇಳುವುದು ಎಂದರೆ ಸುಮಧುರವಾಗಿ ಹಾಡುವುದೆಂದರ್ಥ. ಇದರಿಂದಾಗಿ ರಾವಣ ಶಬ್ದದ ಅಪಭ್ರಂಶದಿಂದ ರ‍್ವಾಣ ಶಬ್ಧ ಉಂಟಾಗಿದೆ ಎಂದು ಡಾ॥ ಜಕಬಾಳರವರು ಅಭಿಪ್ರಾಯಪಟ್ಟಿದ್ದಾರೆ.[೪೦]

ಮೊದಲು ಸಂಭಾಷಣೆಯಿಂದ ಜನ್ಮ ತಾಳಿದ ರ‍್ವಾಣ, ಕಾಲನಂತರ ಗದ್ಯ, ಪದ್ಯ, ಕಥೆ ಇವುಗಳನ್ನು ವಸ್ತುವಾಗಿರಿಸಿಕೊಂಡು ಬದಲಾವಣೆಯಾಯಿತು. ಈ ರ‍್ವಾಣಗಳು ಹೆಚ್ಚಾಗಿ ಶೃಂಗಾರ ಮತ್ತು ಹಾಸ್ಯ ರಸಕ್ಕೆ ಸಂಬಂಧಪಟ್ಟಿವೆ. ಡೊಳ್ಳಿನ ಹಾಡುಗಳ ಮಧ್ಯದಲ್ಲಿ ರ‍್ವಾಣಗಳನ್ನು ಹೇಳಲಾಗುತ್ತದೆ. ಇವುಗಳ ಒಂದರ್ಥದಲ್ಲಿ ಬಯಲಾಟದ ಅಡ್ಡಸೋಗುಗಳಂತೆ ಪಾತ್ರ ನಿರ್ವಹಿಸುವುದು ಕಂಡುಬರುತ್ತದೆ. ಹೀಗಾಗಿ ರ‍್ವಾಣವೆಂದರೆ ಆಡುಮಾತಿನ ವಿಶಿಷ್ಟವಾದ ಲಯದೊಂದಿಗೆ ಹೇಳಿಕೊಂಡು ಹೋಗುವ ಒಂದು ಜಾನಪದ ಪ್ರಕಾರ ಎಂಬುದು ಸ್ಪಷ್ಟ.

ಪ್ರಾದೇಶಿಕವಾಗಿ ರ‍್ವಾಣಗಳು ವ್ಯತ್ಯಾಸವನ್ನು ಪಡೆದುಕೊಂಡಿವೆ. ಬೆಳಗಾವಿ ಜಿಲ್ಲೆಯ ಮುರಗೋಡ, ಬೆನಕಟ್ಟಿ, ಮದ್ಲೂರ ಮೊದಲಾದ ಕಡೆಗಳಲ್ಲಿ "ಅಣ್ಣಣಪ್ಪ ಅಣ್ಣಣಪ್ಪ ಅಣ್ಣಣ್ಣೋ" ಎಂದು ತಮ್ಮ ರ‍್ವಾಣವನ್ನು ಪ್ರಾರಂಭಿಸುತ್ತಾರೆ. ಆದರೆ ಧಾರವಾಡ ಜಿಲ್ಲೆಯ ಭಾಗಗಳಲ್ಲಿ "ಹುಲ್ಲಲಿಗೆಪ್ಪಾ ಹುಲ್ಲಲಿಗೋ ಅನ್ನಪ್ಪಾ" ಎಂದು ಪ್ರಾರಂಭಿಸುತ್ತಾರೆ. ರ‍್ವಾಣವನ್ನು ಪ್ರಾರಂಭಿಸುವ ರೀತಿ

ಬೇರೆ ಬೇರೆಯಾದರೂ ಅವುಗಳನ್ನು ಹೇಳುವ ದಾಟಿ ಒಂದೇ ರೀತಿಯಾಗಿರುತ್ತದೆ. ಪ್ರತಿ ರ್‍ವಾಣಗಳು ತಮ್ಮದೇ ವಿಶಿಷ್ಟತೆಯನ್ನು ಹೊಂದಿವೆ. ಕೆಲವು ರ್‍ವಾಣಗಳ ಕೊನೆಗೆ ಹೇಳಿದವನ ಹೆಸರಿರುವುದು ವಿಶೇಷ.

ಉದಾಹರಣೆ

"ಅಂತರಲ್ಲೆ ಆಡತ್ತೈತಿ ಗಿಡಗ  
ಗಿಡಗನ ಕಾಲಾಗ ಪಾವಸೇರ ಬೆಳ್ಳಿಕಡಗ  
ದಿಡಗ ಆಡಿದ ಹೇಳತಿದ್ನಪ್ಪ  
ಹೊನ್ನ ಸೊರಟೂರ ಕುರುಬರ ಕರಿಯಪ್ಪ" [೪೧]

ಮೂಲತಃ ರ್‍ವಾಣ ಸೃಷ್ಟಿಸಿದವನ ಹೆಸರಿರುವುದಿಲ್ಲ. ಆದರೆ ರ್‍ವಾಣ ಹೇಳುವವನು ತನ್ನ ಹೆಸರು ಸೇರಿಸಿ ಹೇಳುತ್ತಾನೆ. ರ್‍ವಾಣದ ಮುಕ್ತಾಯದಲ್ಲಿ ರ್‍ವಾಣಗಾರ ಮತ್ತು ಮರಿರ್‍ವಾಣಗಾರ ಕೂಡ "ಹುಲ್ಲುಲಿಗೈಪ್ಪಾ ಹುಲ್ಲುಲಿಗ್ಯೊ" ಎಂದು ಹೇಳುತ್ತಾರೆ.

ವಸ್ತು ವೈವಿಧ್ಯತೆಯ ದೃಷ್ಟಿಯಿಂದ ರ್‍ವಾಣಗಳನ್ನು ಡಾ. ಅರವಿಂದ ಮಾಲಗತ್ತಿಯರು ಆರು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಅವುಗಳಲ್ಲಿ ೧) ನೀತಿ ಬೋಧಕ ರ್‍ವಾಣಗಳು ೨) ಲಘು ಹಾಸ್ಯದ ರ್‍ವಾಣಗಳು ೩) ಕ್ರಿಮಿ, ಕೀಟ, ಪಕ್ಷಿ ಪ್ರಾಣಿ ಸಂಬಂಧಿ ರ್‍ವಾಣಗಳು ೪) ಅದ್ಭುತ ರ್‍ವಾಣಗಳು ೫) ಸ್ಥಳ ನಾಮದ ರ್‍ವಾಣಗಳು ೬) ಆದ್ಯಾತ್ಮಿಕ ರ್‍ವಾಣಗಳು ಪ್ರಮುಖವಾಗಿದೆ. ಇವುಗಳೆಲ್ಲ ತಮ್ಮದೇ ಆದ ವಿಶಿಷ್ಟ ಸ್ಥಾನ ಪಡೆದಿವೆ. ಒಂದು ರ್‍ವಾಣದಿಂದ ಮತ್ತೊಂದು ರ್‍ವಾಣ ಭಿನ್ನವಾಗಿರುತ್ತದಲ್ಲದೇ, ಕೇಳುಗರನ್ನು ಮಂತ್ರಮುಗ್ಧರನ್ನಾಗಿಸುತ್ತವೆ.

ನೀತಿ ಬೋಧಕ ರ್‍ವಾಣಗಳು ಸಾಮಾಜಿಕ ಮೌಲ್ಯದಿಂದ ಕೂಡಿದ ನೀತಿಯನ್ನೂ ಬೋಧಿಸುತ್ತವೆ. ಇವು ಗಾದೆಯ ಮಾತುಗಳಂತೆ ತಮ್ಮ ಕಥಾವಸ್ತುವನ್ನು ಹೆಣೆದುಕೊಂಡಿರುತ್ತವೆ.

ಉದಾ : ಕಡಿವಾಣದಾಕೆ ಎಂಬ ರ್‍ವಾಣ [೪೨]

ರ್‍ವಾಣಗಾರ : ಹುಲ್ಲಿಲಗ್ಯಾ ಹುಲ್ಲಿಲಗ್ಯಾ ಅನ್ರಪಾ

ಮರಿ ರ್‍ವಾಣಗಾರ : ಸುರಂಬಳಗ್ಯಾ ಸುರಂಬಳಗ್ಯಾ ಅನ್ರಪಾ

ರ್‍ವಾಣಗಾರ : ಹತ್ತು ರೂಪಾಯಿ ತಗೊಂಡು ದೇಶಾನೆಲ್ಲ ತಿರುಗಿದರೂ ಈಗಿನ  
ಹೆಣ್ಮಕ್ಕಳಿಗೆ ಕಲ್ಸವರ ಸಿಗಲಿಲ್ಲಂತಪ್ಪ

ಮರಿ ರ್‍ವಾಣಗಾರ : ಕಡಿವಾಣ ಕಲ್ಸವರು ಸಿಗಲಿಲ್ಲಂತಪಾ

ರ್‍ವಾಣಗಾರ : ಕಲ್ಸವ ಬಂದು ಕಟ್ಟದ್ಮ್ಯ : ನಿಂಗವ್ವ ಬಂದು ನಿರ್ಗಿ ಹೊಯ್ದುಳು:  
ಯಲ್ಲವ್ವ ಬಂದು ಚೆಂದಾಗೆ ತೆಂಧ್ಯಪಾ ಇನ್ನೂಬಾಕಿನೂ ಬಂದು  
ಚೆಂದಾಗೇತೆಂಧ್ಯಪಾ

ಮರಿ ರ್‍ವಾಣಗಾರ : ಹೌದಪಾ

ರ್‍ವಾಣಗಾರ : ಕಡಿವಾಣದಾಕಿ ಶೆಟ್ಟಿ ಸಾವಕಾರನ ಅಂಗಡಿ ಮುಂದ
ಹಾದುಹೋಗುವಾಗ ಆಕಿ ನೋಡಿ ಅವ ಏನು ಅಂತಾನಪಾ
ಅಂತಂದ್ರ......

ಮರಿ ರ್‍ವಾಣಗಾರ : ಏನ ಅಂತಾನಪಾ

ರ್‍ವಾಣಗಾರ : ಹೇ! ಕರಿ ಮಾರಿಯವಳ ಕಾಡ್ಗಿಣ್ಣಿನವಳ, ನಿನ್ನ ಕಡಿವಾಣಕ ಏನ
ಮುಟ್ಟೈತಿ ಅಂದನಂತಪಾ

ಮರಿ ರ್‍ವಾಣಗಾರ : ಹಾದಪಾ

ರ್‍ವಾಣಗಾರ : ಅದಕ ಅಕಿ ಏನ ಅಂತಾಳ ಅಂತಂದ್ರ.........

ಮರಿ ರ್‍ವಾಣಗಾರ : ಏನ ಅಂತಾಳಪಾ ?

ರ್‍ವಾಣಗಾರ : ಯಳಿಗೆ ನೂರು, ತಳಿಗೆ ನೂರು, ಕಡಿವಾಣಕೆ ಮುಟ್ಟೈತಿ,
ಮುನ್ನೂರು ಮುಲ್ಲ; ಅಂಗಡ್ಯಾಗಿಲ್ಲ ಅಚ್ಚೇರ ಬೆಲ್ಲ ಅಂದಳಂತಪಾ

ಮರಿ ರ್‍ವಾಣಗಾರ : ಏ ಬೇಸ್ ಅಂದಾಳ ನೋಡಪಾ

ರ್‍ವಾಣಗಾರ : ಆವಾಗ ಶೆಟ್ಟಿ ಸಾವಕಾರ ಏನಂತಾನಂತಂದ್ರ

ಮರಿ ರ್‍ವಾಣಗಾರ : ಏನ ಅಂತಾನಪಾ

ರ್‍ವಾಣಗಾರ : ಹೇ ಕರಿಮಾರ್‍ಯಾಕ್ಕ ನಿನ್ನ ನೋಡಿದರ ಹೊರಕಡಿಗಿ ಆಗೂದಲ್ಲಂತ್ಹೇಳಿ
ಮೂಲ್ಯಾನ ಬಡಿಗಿ ತಗೊಂಡ ಮುಂಡವಾಡಮಟಾ
ತಿರುವಿದನಂತಪಾ

ಮರಿ ರ್‍ವಾಣಗಾರ : ಮಾಂಡವಾಡಮಟಾ ತಿರುವಿದನಂತಪಾ

ರ್‍ವಾಣಗಾರ : ಅಲ್ಲಿ ನನ್ನ ನಿನ್ನಂತ ಒಬ್ಬ ಹುಡುಗ ಏನ್ ಮಾಡ್ತಾನ ಅಂತಂದ್ರ

ಮರಿ ರ್‍ವಾಣಗಾರ : ಏನ ಮಾಡತಾನಾಪಾ

ರ್‍ವಾಣಗಾರ : ಆ ಹುಡಗ್ಹೋಗಿ ವಾಲಿಕಾರಗ ಹಚ್ಚಿದಾ, ವಾಲಿಕಾರ್‍ಹೋಗಿ ಗೌಡಗ
ಹಚ್ಚಿದಾ, ಗೌಡ ಹೋಗಿ ಶಾನಭೋಗಗ ಹಚ್ಚಿದ್ನಂತಪಾ

ಮರಿ ರ್‍ವಾಣಗಾರ : ಹೌದಪಾ

ರ್‍ವಾಣಗಾರ : ಶಾನ್‌ಭೋಗ್ಹೋಗಿ ಪೌಜದಾರಗ ಹಚ್ಚಿದಾ, ಪೌಜದಾರ್‍ಹೋಗಿ
ಕಲೆಕಟ್ಟೆ ಸಾಬಗ ಹಚ್ಚಿದ್ನಂತಪಾ

ಹೀಗೆ ರ್‍ವಾಣಗಾರ ತನ್ನ ಮಾತಿನ ಮೋಡಿಯಿಂದ ಗಾದೆ ಮಾತುಗಳ ಅರ್ಥಬಿಂಬಿಸುವಂತೆ ರ್‍ವಾಣಗಳನ್ನು ಹೇಳುತ್ತಾ ಜನರನ್ನು ರಂಜಿಸುತ್ತಾರೆ.

ಲಘು ಹಾಸ್ಯದರ್‍ವಾಣಗಳು ಒಂದು ಹಾಸ್ಯದ ಪ್ರಸಂಗದ ಸುತ್ತ ಜೋಡಣೆಗೊಂಡಿರುವುದು ಕಂಡುಬರುತ್ತದೆ. ಇವು ಅಶ್ಲೀಲತೆಯಿಂದ ಕೂಡಿರುತ್ತವಲ್ಲದೆ. ಹೆಚ್ಚಾಗಿ ಗೆಳೆಯ-ಗೆಳತಿಯರ ಶೃಂಗಾರ ಪ್ರಸಂಗಗಳಿಂದ ಕೂಡಿರುತ್ತವೆ. ಇವುಗಳಲ್ಲಿ ಅಶ್ಲೀಲ ಶಬ್ದಗಳನ್ನು ಬಳಸಿದರೂ ಅಶ್ಲೀಲವೆನಿಸದೆ ಹಾಸ್ಯವನ್ನು ನೀಡುವುದು ವಿಶೇಷವಾಗಿದೆ.

**ಉದಾ : ಅಕ್ಕಿಕಾಳ ಸಣ್ಣ** [೮೩]

| | | |
|---|---|---|
| ರ್‍ವಾಣಗಾರ | : | ಅನ್ನಣ್ಣಪ್ಪ ಅನ್ನಣ್ಣನೊ |
| ಮರಿ ರ್‍ವಾಣಗಾರ | : | ಅನ್ನಣ್ಣಪ್ಪ ಅನ್ನಣ್ಣನೊ |
| ರ್‍ವಾಣಗಾರ | : | ಅಕ್ಕಿಕಾಳಸಣ್ಣ, ಗೋದಿಕಾಳಸಣ್ಣ, ಬೆಲ್ಲ ಮಾಡೆತಪ್ಪ ಹೆಣ್ಣ |
| ಮರಿ ರ್‍ವಾಣಗಾರ | : | ಬೆಲ್ಲ ಮಾಡೆತಪ್ಪಾ ಹೆಣ್ಣ |
| ರ್‍ವಾಣಗಾರ | : | ಹೊಳಿ ಆಚಿಕಿತ್ತ ಅಗಡಿ, ಕಿವ್ಯಾಗ ಇಟ್ಟಾಳಪ್ಪಾ ಜೋಡಬುಗುಡಿ, |
| | | ಎದಿಮ್ಯಾಲ ಕೈಯಾಡಿಸಿದರೆ ಮಲಿಯಾಕಿಲ್ಲ ಸುಗಡಿ ಎಂದ |
| ಮರಿ ರ್‍ವಾಣಗಾರ | : | ಮಲಿಯಾಕಿಲ್ಲ ಸುಗಡಿ ಎಂದ |

ಒಟ್ಟಾರೆ ಕನ್ನಡ ಜನಪದ ಸಾಹಿತ್ಯದಲ್ಲಿ ಗಾದೆ, ಒಗಟು, ಪಕ್ಷಿ, ಪ್ರಾಣಿ ರೂಪಕಗಳನ್ನು ಹಾಗೂ ಆಧ್ಯಾತ್ಮಿಕ ವ್ಯಕ್ತಿಗಳನ್ನು ರ್‍ವಾಣಗಳ ಕಥಾ ವಸ್ತುವನ್ನಾಗಿಸಿಕೊಂಡು ಸೃಷ್ಟಿಸಲಾಗಿರುತ್ತವೆ. ಹೀಗಾಗಿ ಜನಪದ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ರ್‍ವಾಣಗಳು ನೆಲೆಗೊಂಡಿರುವುದು ಸ್ಪಷ್ಟ.

**೮.೩.೪ ಗೊರವರ ಹಾಡುಗಳು**

ಮೈಲಾರಲಿಂಗನ ಗೊರವರು ಕರ್ನಾಟಕದ ಅತ್ಯಂತ ಉತ್ಕೃಷ್ಟ ಧಾರ್ಮಿಕ ವೃತ್ತಿಗಾಯಕ ಪರಂಪರೆಗೆ ಸೇರಿದವರು. ಮೈಲಾರಲಿಂಗನ ಮಹಿಮೆಯನ್ನು ಕುರಿತು ಸವಿಸ್ತಾರವಾಗಿ ಹಾಡುವ ಗೊರವರು ಕೇವಲ ಮೈಲಾರಲಿಂಗನ ಹೊಗಳಿಕೆ, ಉತ್ಸವಾದಿ ಸಂದರ್ಭಗಳಿಗೆಷ್ಟೇ ತಮ್ಮ ಹಾಡುಗಳನ್ನು ಸೀಮಿತಗೊಳಿಸದೆ, ಮಲ್ಲಯ್ಯನ ಪಾದದಡಿಯಲ್ಲಿ ತಮ್ಮ ಬದುಕಿಗೆ ಬೆಳಕು ತರುವ ಅನುಭವ ಪದಗಳನ್ನು ಹಾಡುತ್ತಾರೆ. ಪೌರಾಣಿಕ, ಚಾರಿತ್ರಿಕ, ವಾಸ್ತವಿಕ, ಪ್ರಣಯ, ವೀರ ಕಾವ್ಯಗಳನ್ನು ಸಹ ತಮ್ಮ ಸಂಪ್ರದಾಯಕ್ಕೆ ಅಳವಡಿಸಿಕೊಂಡಿರುತ್ತಾರೆ. ಶುದ್ಧ ಪದ್ಯ ರೂಪದಲ್ಲಿ ರಚನೆಗಳು, ಗದ್ಯ ಪದ್ಯ ಮಿಶ್ರಿತ ಚಂಪೂ ರೀತಿಯ ಕಾವ್ಯಗಳು, ಗದ್ಯ ಎನಿಸಿದರೂ ಪದ್ಯಗಂಧಿಯಾದ ಶೈಲಿಯಲ್ಲಿ ಹಾಡುತ್ತಾರೆ.[೮೪]

ಗೊರವರು ಹಾಡುವ ಗೀತ ಸಾಹಿತ್ಯವನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಬಹುದು.[೮೫] ೧) ಸುತ್ತಿ ಪದಗಳು ೨) ಪುರಾಣ ಕಾವ್ಯ ೩) ಪ್ರಣಯ ಕಾವ್ಯ ೪) ಲೌಕಿಕ ಕಥನ ಕಾವ್ಯಗಳು ಪ್ರಮುಖವಾಗಿವೆ. ಈ ಬಗೆಯ ಹಾಡುಗಳನ್ನು ಜಾತ್ರೆಗಳಲ್ಲಿ,

ಧಾರ್ಮಿಕ ವಿಧಿಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ತಂಡಗಳ ರೂಪದಲ್ಲಿ ಕೂಡಿಕೊಂಡು ಹಾಡುತ್ತಾರೆ. ಮೂವರಿಂದ ಐವರವರೆಗೆ ಗೊರವರು ಕೂಡಿ ಮೇಳ ನಡೆಸುತ್ತಾರೆ. ಪ್ರಧಾನ ಹಾಡುಗಾರ ಡಮರುಗವನ್ನು ಬಾರಿಸಿಕೊಂಡು ಹಾಡಿದರೆ, ಉಳಿದ ಹಾಡುಗಾರರು ಚಿಟಕಿ, ತಾಳ, ದಮಡಿ ಬಾರಿಸುತ್ತಾ ದನಿಗೂಡಿಸುತ್ತಾರೆ. ರಾತ್ರಿಯಿಡಿ ನಡೆಯುವ ಈ ಗೋಷ್ಠಿಯನ್ನು ಮೇಳ ಎಂದು ಕರೆಯುತ್ತಾರೆ.

ಗೊರವರು ಹಾಡುವ ಅನೇಕ ಹಾಡುಗಳಲ್ಲಿ ಮಲ್ಲಯ್ಯನ ಕುರಿತು ಹಾಡಿರುವ ಹಾಡು ಈ ರೀತಿಯಾಗಿದೆ.

ಉದಾ: "ಕರಿಯಾಲದಯ್ಯ"[೪೬]

"ಸುವ್ವಾ ಬಾ, ನಂದಿ ಬಾ
ಸ್ವಾಮಿಯವರು ಈಗಾಲೇಗುರುವೆ
ಕರಿಯ ಕಲ್ಲಾಗಿ ಎಲ್ಲಿಮೂಡಾರೊ
ವಿಮಲ ಪರ್ವತ ಶ್ರೀ ಶೈಲದಲ್ಲಿ
ಹುಬ್ಬು ಇಲ್ಲಾದೆ ರೆಪ್ಪ ಇಲ್ಲಾದೆ
ಉದುಬಾವ ಲಿಂಗ ಆಗೀ ಸ್ವಾಮಿ
ಲಿಂಗದ ಮ್ಯಾಲೆ ಆಲದ ಮರವು
ಎಂಥಾ ಆಲದ ಮರವು ಗುರುವೆ
ಕರಿಯ ಮಲ್ಲಯ್ಯ ಆಗೀಗುರುವೆ
ಕರಿಯ ಕಂಬಳಿಯ ಹಾಸಿಗೆ ಮಾಡಿ
ಅವು ಶಿವದಾರೆ ಸಾರುತ್ತ ಸ್ವಾಮಿ
ಕರಿಹೊಳೆ ನದಿ ತುಂಗಭದ್ರ ತೀರದಲಿ
ಪರ್ವತ ಮಲ್ಲಯ್ಯ ಆಗಿ ಗುರುವೆ
ಅವು ಅಲ್ಲಿಗ ನೆಲುಸಾರೊ
ದೊಡ್ಡ ಮೈಲಾರ ಚಿಕ್ಕ ಮೈಲಾರ
ಶ್ರೀ ಶೈಲ ಮೈಲಾರ ಎಂದೂ ಈಗ
ಕರಿಯ ಆಲಾದ ಮರ ತಾವು ಸ್ವಾಮಿ
ಅವು ಮಲ್ಲಯ್ಯಲಿಂಗ ನೆಲೆಸೀದಾರು ॥"

ಹೀಗೆ ತಮ್ಮ ಕಾವ್ಯಗಳಲ್ಲಿ ಮಲ್ಲಯ್ಯನ, ಪಾರ್ವತಿಯ, ಕಂಬಳಿಯ, ಗೊರವಯ್ಯನ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ. ಜನಪದ ಸಾಹಿತ್ಯಕ್ಕೆ ಗೊರವರ ಕಾವ್ಯಗಳು ವಿಶಿಷ್ಟ ಕೊಡುಗೆ ನೀಡಿವೆ ಎಂಬುದು ಸ್ಪಷ್ಟ.

ಈ ಹಿನ್ನೆಲೆಯಲ್ಲಿ ಕುರುಬರ ಡೊಳ್ಳಿನ ಹಾಡುಗಳ ಜೊತೆಗೆ ರ‍್ವಾಣಗಳು, ಗೊರವರ ಹಾಡುಗಳು ಜನಪದ ಸಾಹಿತ್ಯದಲ್ಲಿ

ವಿಶಿಷ್ಟ ಸ್ಥಾನ ಪಡೆದಿವೆ. ಆಧುನಿಕ ಕಾಲದಲ್ಲೂ ಕುರುಬರು ಡೊಳ್ಳಿನ ಹಾಡುಗಳನ್ನು ಭಕ್ತಿ ಪ್ರಧಾನವಾಗಿಯೇ ಹಾಡುತ್ತಿರುವುದು ವಿಶೇಷ.

ಕರ್ನಾಟಕದಾದ್ಯಂತ ನೆಲೆಸಿರುವ ಕುರುಬರಲ್ಲಿ ಡೊಳ್ಳಿನ ಹಾಡುಗಳಲ್ಲದೆ, ಗೀಗೀ ಪದಗಳು ಚೌಡಿಕೆ ಪದಗಳು, ಭಜನೆಯ ತತ್ವಪದಗಳು, ಜನಪದ ಹಾಡುಗಳು, ಬಯಲಾಟದ ಹಾಡುಗಳು ಮೊದಲಾದ ಹಾಡುಗಳನ್ನು ಹಾಡುವ ಕಲಾವಿದರಿದ್ದಾರೆ. ಇಂಥ ಕಲಾವಿದರ ಸಂಖ್ಯೆ ಕೊಪ್ಪಳ ಜಿಲ್ಲೆಯಲ್ಲೂ ಗಣನೀಯವಾಗಿದೆ. ಕೊಪ್ಪಳ ಜಿಲ್ಲೆಯ ಪ್ರತಿಯೊಂದು ಗ್ರಾಮಗಳಲ್ಲೂ ನಾಲ್ಕರಿಂದ ಐದು ಜನರು ಪದಗಳ ಹಾಡುಗಾರಿಕೆಯಲ್ಲಿ ಪ್ರವೀಣರಾಗಿರುವುದು ಕಂಡುಬರುತ್ತದೆ. ಹೆಚ್ಚಾಗಿ ಡೊಳ್ಳಿನ ಪದಗಳನ್ನು ಹಾಡುವವರು ಕಂಡುಬರುತ್ತದೆ. ಡೊಳ್ಳಿನ ಹಾಡುಗಳಲ್ಲದೆ, ಗೀಗೀಪದಗಳು, ಜನಪದ ಹಾಡುಗಳು, ಚೌಡಿಕೆಯ ಪದಗಳು, ಭಜನೆಯ ಪದಗಳು, ಬಯಲಾಟದ ಪದಗಳನ್ನು ಹಾಡಿ ಅನೇಕ ಪ್ರಶಸ್ತಿ ಗೌರವಗಳನ್ನೂ ಸಂಪಾದಿಸಿದ್ದಾರೆ. ಅವರಲ್ಲಿ ದಪ್ಪಿನಾಟದ ಮಾಸ್ತರ್ ಜಿ.ಕರಿಯಪ್ಪ, ಜನಪದ ಕಲಾವಿದ ಶರಣಪ್ಪ ವಡಿಗೇರಿ, ಡೊಳ್ಳಿನ ಹಾಡುಗಾರ ಕಂಬಳಿ ಸಿದ್ಧಪ್ಪ, ರಂಗ ಕಲಾವಿದ ಬಾಲಜ್ಜ ಕಂಬಳಿ, ಶರಣಪ್ಪ ಪಿ.ಗಟ್ಟಿ, ತಬಲಾವಾದಕ ದಿವಂಗತ ಬಾಲಪ್ಪ ಮಾಸ್ತರ ಗುಮಗೇರಿ, ನಾಟಕ ಕಲಾವಿದ ದೊಡ್ಡಪ್ಪ ಕೈಲವಾಡಗಿ, ಹಾರ್ಮೋನಿಯಂ ವಾದಕ ಗಂಗಯ್ಯ ಗುರುವಿನ, ದೊಡ್ಡಾಟದ ಕಲಾವಿದ ಚನ್ನಪ್ಪ ಪರಸಪ್ಪ ಗಾದಾರಿ, ಬಯಲಾಟದ ಕಲಾವಿದ ಬಾಲಯ್ಯ ಜ್ಞಾನಮೂರ್ತಿಮಠ, ಚೌಡಕಿ ಪದಗಳ ಹಾಡುಗಾರ ಬಸಪ್ಪಾ ಭರಮಪ್ಪ ಚೌಡಕಿ, ಭಜನೆ ದೊಡ್ಡಾಟದ ಕಲಾವಿದ ಶರಣಪ್ಪಾ ಬಸಪ್ಪಾ ಬನ್ನಿಗೋಳ, ಹಿರೇರಾಮಣ್ಣ ಸಂಗಟಿ, ಗೀಗೀ ಪದಗಳ ಹಾಡುಗಾರ ಬೀರಪ್ಪ ಯಡಿಯಾಪುರ, ಹಾಡುಗಾರ ಮತ್ತು ನಾಟಕಕಾರ ಹನುಮಂತಪ್ಪ ಕಂಬಳಿ, ಪಿಟಿಲು ವಾದಕ ವಜ್ರಬಂಡಿಯ ನೀಲಪ್ಪ, ಕಳಕಪ್ಪ ಬೆಟಗೇರಿ, ಹಾರ್ಮೋನಿಯಂ ವಾದಕ ಪಂಚಯ್ಯ, ರಂಗಭೂಮಿ ಕಲಾವಿದ ಶಿವಪ್ಪ ಕಂಬಳಿ, ದೊಡ್ಡಪ್ಪ ಕಟ್ಟಿಮನಿ, ಕಾರಟಗಿಯ ಮೀಸೆ ಮರಿಯಪ್ಪ, ಲಮಾಣಿ ಹಾಡುಗಾರ ಮೊದಲಾದವರು ಪ್ರಮುಖವಾಗಿ ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದಾರೆ.

ಯಲಬುರ್ಗಾದ ರೇವಣೆಪ್ಪ ಹಿರೇಕುರುಬರ ಇವರ ತಂಡವು ಗುಲಬರ್ಗಾ ವಿಭಾಗಮಟ್ಟದ ಯುವಜನ ಮೇಳದಲ್ಲಿ ದ್ವಿತೀಯ ಹಾಗೂ ರಾಯಚೂರು ಜಿಲ್ಲಾ ಮಟ್ಟದಲ್ಲಿ ಪ್ರಥಮ ಸ್ಥಾನವನ್ನು ಕರಡಿ ವಾದ್ಯ ನುಡಿಸುವ ಕಲೆಯಲ್ಲಿ ಪಡೆದಿದ್ದಾರೆ. ಇವರ ತಂಡದಲ್ಲಿ ನಿಂಗಪ್ಪ, ಭರಮಪ್ಪ, ಬಸಪ್ಪ, ಬೀರಪ್ಪ, ಶಿವಪ್ಪ, ರಾಮಪ್ಪ, ಶಿವಸಿದ್ಧಪ್ಪ ಮೊದಲಾದವರಿದ್ದಾರೆ. ಕಲ್ಲೂರಿನ ಕಲ್ಲಿನಾಥೇಶ್ವರ ಡೊಳ್ಳಿನ ಮೇಳದಲ್ಲಿ ಕಳಕಪ್ಪ ಕಲ್ಲಪ್ಪ ಮೇಟಿ, ಪವಾಡಪ್ಪ, ಪಿತಾಂಬರಗೌಡ, ನಿಂಗಪ್ಪ ಮೊದಲಾದವರಿದ್ದಾರೆ. ಯಲಬುರ್ಗಾ ತಾಲೂಕಿನ ಕೋನಾಪುರ ಗ್ರಾಮದಲ್ಲಿ ಹುಚ್ಚಪ್ಪ ಅಗಸಿಮಂದೀನ್, ಗುದ್ನೆಯ್ಯ ಕೆಂಭಾವಿಮಠ, ಸಣ್ಣ ಹನುಮಪ್ಪ ಕಲಕೇರಿ, ಗವಿಸಿದ್ಧಪ್ಪ ಅಗಸಿಮಂದೀನ್ ಮೊದಲಾದವರ ಡೊಳ್ಳಿನ ತಂಡವಿದೆ. ಇವರು ಆನೆಗೊಂದಿ ಉತ್ಸವದಲ್ಲಿ ಭಾಗವಹಿಸಿದ್ದಾರೆ. ಕುಷ್ಟಗಿ ತಾಲೂಕಿನ ಶಿವಪ್ಪ ಬೆಂಚಿಮಟ್ಟಿ, ಏಗನೂರ ಸಣ್ಣಯಲ್ಲಪ್ಪ, ಕೊಪ್ಪಳ ತಾಲೂಕಿನ ಹಲಗೇರಿ ರೇವಣೆಪ್ಪ, ಬಿಸರಳ್ಳಿಯ ಭೀಮಣ್ಣ ಕಾಟಿ, ಸಂಗನಾಳಿನ ರಾಮಣ್ಣ ಮತ್ತು ತಂಡ, ವಣಗೇರಿಯ ಸಿದ್ಧಪ್ಪ ಪೂಜಾರ, ಕಾರಟಗಿಯ ಮರಿಯಪ್ಪ ಮೊದಲಾದವರ ತಂಡಗಳು ಡೊಳ್ಳಿನ ಕುಟಿತ ಹಾಗೂ ಹಾಡುಗಾರಿಕೆಯಲ್ಲಿ ಪ್ರಮುಖವಾಗಿರುವುದು ಕಂಡುಬರುತ್ತದೆ. ಸ್ತ್ರೀಯರೂ ಸಹ ಡೊಳ್ಳಿನ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ. ಅವರಲ್ಲಿ ಯಲಬುರ್ಗಾ ತಾಲೂಕಿನ ಶ್ರೀಮತಿ ಅಂದವ್ವ ಬಂಡಿ, ಶ್ರೀಮತಿ ನೀಲವ್ವ ಹಳ್ಳಿಗುಡಿ, ಕೊಪ್ಪಳದ ಹನುಮಂತವ್ವ ಮಸಲಿ ಮೊದಲಾದವರು ಜನಪದ ಹಾಡುಗಾರರಾಗಿದ್ದಾರೆ. ಅಲ್ಲದೆ ತತ್ವಪದ, ಸೋಬಾನೆಪದ, ಕುಟ್ಟುವ, ಬೀಸುವಪದ, ಭಕ್ತಿಪದ ಮೊದಲಾದವುಗಳನ್ನು ರಾಗಬದ್ಧವಾಗಿ ಹಾಡುವ ಕಲಾವಿದರಿದ್ದಾರೆ.

ಒಟ್ಟಾರೆ ಡೊಳ್ಳಿನ ಹಾಡುಗಳ ಜೊತೆಗೆ ಅನೇಕ ಜನಪದ ಪದಗಳನ್ನು ಹಾಡುವ ಕಲಾವಿದರು ಬಹುಸಂಖ್ಯೆಯಲ್ಲಿದ್ದಾರೆ. ಹೀಗಾಗಿ ಕುರುಬರು ಕರ್ನಾಟಕದ ಜನಪದ ಸಾಹಿತ್ಯ ಕ್ಷೇತ್ರಕ್ಕೆ ಹಾಡುಗಳ, ಕುಣಿತದ ಮೂಲಕ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿರುವುದು ಕಂಡುಬರುತ್ತದೆ.

### ೮.೪ ಪ್ರಮುಖ ಸಾಹಿತಿಗಳು

ಕಾಳಿದಾಸ, ಕುರುಬರ ರಟ್ಟಮತ ಶಾಸ್ತ್ರ ಬರೆದ ಮಾಚಿಮಯ್ಯದೇವ, ಮಧುರಾವಿಜಯಂ ಬರೆದ ಗಂಗಾಂಬಿಕೆ, ಕನಕದಾಸ ಅಲ್ಲದೇ ವಚನಕಾರರಾದ ಸಿದ್ಧರಾಮೇಶ್ವರ, ವೀರಗೊಲ್ಲಾಳೇಶ್ವರ, ಕಲಕೇತ ಬೊಮ್ಮಯ್ಯ, ಕೀಲಾರದ ಬೀಮಣ್ಣ ಮೊದಲಾದವರು ಮಧ್ಯಕಾಲದ ಸಾಹಿತ್ಯಕ್ಕೆ ಪ್ರಮುಖ ಕೊಡುಗೆ ನೀಡಿದ್ದಾರೆ. ಇಂದಿನ ಆಧುನಿಕ ಕಾಲದಲ್ಲಿ ಅನೇಕ ಸಾಹಿತಿಗಳು ಕಂಡುಬರುತ್ತಾರೆ. ಅವರಲ್ಲಿ ಎ.ಆರ್.ಹನುಮಂತಯ್ಯ, ಪ್ರೊ.ಹೆಚ್.ಜೆ.ಲಕ್ಕಪ್ಪಗೌಡ, ಪ್ರೊ.ಸುಧಾಕರ, ವ್ಹಿ.ಚಿಕ್ಕವೀರಯ್ಯ, ಪ್ರೊ.ಎಸ್.ಜಿ.ಸಿದ್ಧರಾಮಯ್ಯ, ಶ್ರೀ ಕಾ.ತ.ಚಿಕ್ಕಣ್ಣ, ಪ್ರೊ.ಜ್ಯೋತಿ ಹೊಸೂರು, ಪ್ರೊ.ಒಡೆಯರ ಡಿ.ಹೆಗ್ಗಡೆ, ಡಾ.ನಿಂಗಣ್ಣ ಸಣ್ಣಕ್ಕಿ, ಡಾ.ಮಲ್ಲಿಕಾ ಘಂಟಿ, ಡಾ.ಎಸ್.ಎಫ್.ಜಕಬಾಳ, ಚನ್ನಪ್ಪ ಬಂಡಿ, ಕೆ.ಬಿ.ತಳಗೇರಿ, ಶ್ರೀ ಬಿ.ನಾಗನೂರು, ಶ್ರೀ ಪ್ರಭುಕ್ಯಾಲಕೊಂಡ, ಶ್ರೀ ಎನ್.ಎಂ.ಅಂಬಲಿ, ಶ್ರೀ ಹೆಚ್.ಬಿ.ಯಲಬುರ್ಗಿ, ಶ್ರೀ ಬೋನಾ ಬಸವರಾಜ, ಬೀರಪ್ಪ ಶಂಭೋಜಿ, ಚನ್ನಪ್ಪ ಕಟ್ಟಿ, ಶ್ರೀ ತೊಂಟಾಪುರ ಮೊದಲಾದವರು ಕರ್ನಾಟಕದಾದ್ಯಂತ ನೆಲೆಸಿರುವ ಪ್ರಮುಖ ಸಾಹಿತಿಗಳಾಗಿದ್ದಾರೆ. ಇದೇ ರೀತಿ ಕೊಪ್ಪಳ ಭಾಗದಲ್ಲಿ ಅನೇಕ ಸಾಹಿತಿಗಳನ್ನು ಕಾಣಬಹುದಾಗಿದೆ.

### ೧. ಈರಪ್ಪ ಎಂ. ಕಂಬಳಿ

ಕೊಪ್ಪಳ ಜಿಲ್ಲೆಯ ಯಲಬುರ್ಗಾದಲ್ಲಿ ೦೫-೦೬-೧೯೫೮ ರಲ್ಲಿ ಜನಿಸಿದರು. ಶಾಲಾ ಶಿಕ್ಷಣವನ್ನು ಯಲಬುರ್ಗಾದಲ್ಲಿ ಪೂರೈಸಿ, ಮುಂದೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಎಂ.ಎ. (ಕನ್ನಡ) ಹಾಗೂ ಭಾಷಾಂತರದಲ್ಲಿ ಡಿಪ್ಲೋಮಾ ಪದವಿಗಳನ್ನು ಪಡೆದರು. ಇವರು ಹವ್ಯಾಸಿ ಸಾಹಿತಿಗಳಾಗಿದ್ದಾರೆ. ಅನೇಕ ಲೇಖನಗಳು ಹಾಗೂ ಲಲಿತ ಪ್ರಬಂಧಗಳನ್ನು ರಚಿಸಿದ್ದಾರೆ. ಇವರ ಅರೆಸತ್ತ ಬದುಕು ಎಂಬ ಕವನ ಸಂಕಲನಕ್ಕೆ ೧೯೯೩ರಲ್ಲಿ ಮೈಸೂರು ಜಿಲ್ಲೆ ಮಂಗಳ ಕಲಾ-ಸಾಹಿತ್ಯ ವೇದಿಕೆಯಿಂದ ರಾಷ್ಟ್ರಕವಿ ಕುವೆಂಪು ಸಾಹಿತ್ಯ ಪ್ರಶಸ್ತಿ ದೊರಕಿದೆ. ಹೆದ್ದಾರಿಗುಂಟ ಎಂಬ ಲಿಖಿತ ಪ್ರಬಂಧಕ್ಕೆ ೧೯೯೮ರಲ್ಲಿ ಬೆಂಗಳೂರಿನ ವಿಶ್ವೇಶ್ವರಯ್ಯ ಪ್ರತಿಷ್ಠಾನದಿಂದ ದಶಮಾನದ ಶ್ರೇಷ್ಠ ಕೃತಿ ಪುರಸ್ಕಾರ ದೊರೆತಿದೆ. ಇದಲ್ಲದೆ 'ಹೀಗೊಂದು ಟಾಪ ಪ್ರಯಾಣ' ಹಾಗೂ ಇನ್ನಿತರ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಗ್ರಾಮೀಣ ಸೊಗಡಿನ ಜೊತೆಗೆ ಸಾಮಾಜಿಕ ವಿಷಯಗಳಿಗೂ ಮಹತ್ವ ನೀಡಿರುವುದು ಕಂಡುಬರುತ್ತದೆ.

### ೨. ಎಚ್.ಎಸ್.ಪಾಟೀಲ್

ಕೊಪ್ಪಳ ತಾಲೂಕಿನ ಬಿಸರಳ್ಳಿಯಲ್ಲಿ ೧೯೪೨ರ ಆಗಸ್ಟ್ ೨೦ ರಂದು ಜನಿಸಿದರು. ಶಾಲಾ ಶಿಕ್ಷಣವನ್ನು ಬಿಸರಳ್ಳಿಯಲ್ಲಿ ಮುಗಿಸಿದರು. ಎಂ.ಎ.ಬಿಈಡಿ ಪದವಿ ಪಡೆದು ಶಿಕ್ಷಕರಾಗಿ, ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದರು. ಇವರು ೧೯೬೬ರಲ್ಲಿ ಗವಿದೀಪ್ತಿ, ತಿರುಳ್ಗನ್ನಡ, ಶಾಂತಪ್ರಭ, ವಿಮೋಚನೆ, ಚುಟುಕು ಚಿಲುಮೆ, ಕೊಪ್ಪಳ ಜಿಲ್ಲಾ ದರ್ಶನ ಮೊದಲಾದ ಕೃತಿಗಳನ್ನು

ಬೇರೆಯವರೊಡನೆ ಕೂಡಿ ಸಂಪಾದಿದ್ದಾರೆ. ಕನಕದಾಸ, ಸಂಗೊಳ್ಳಿ ರಾಯಣ್ಣ, ಕೊಪ್ಪಳ ಜಿಲ್ಲೆಯ ರಂಗಭೂಮಿ, ಶ್ರೀ ಗವಿಸಿದ್ಧೇಶ್ವರರು, ನಾಡಭೂಷಣ, ಮೊದಲಾದ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಇದಲ್ಲದೆ ಅನೇಕ ಲೇಖನಗಳನ್ನು ರಚಿಸಿರುವುದು ಕಂಡುಬರುತ್ತದೆ. ಇಂದಿಗೂ ಖಾಸಗಿ ಶಿಕ್ಷಣ ಸಂಸ್ಥೆಯಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡುತ್ತಿರುವುದು ಕಂಡುಬರುತ್ತದೆ.

**೩. ಡಾ. ಗವಿಸಿದ್ಧಪ್ಪ ಎಚ್.ಪಾಟೀಲ**

ಕೊಪ್ಪಳ ಜಿಲ್ಲೆಯ ಬಿಸರಳ್ಳಿ ಗ್ರಾಮದಲ್ಲಿ ೧೯೭೪ರ ಜೂನ್ ೧೬ ರಂದು ಜನಿಸಿದರು. ಇವರ ತಂದೆ ಸಾಹಿತಿ ಹೆಚ್.ಎಸ್.ಪಾಟೀಲ ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ ದಲ್ಲಿ ಪ್ರಥಮ ರ್‍ಯಾಂಕ್ ಹಾಗೂ ಎರಡು ಚಿನ್ನದ ಪದಕ ಪಡೆದಿದ್ದಾರೆ. ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಎಂ.ಎ. ರ್‍ಯಾಂಕ್ ತೆಗೆದುಕೊಂಡ ಮೊದಲಿಗರಾಗಿದ್ದಾರೆ. ಎಂ.ಎ.ಎಂ.ಫಿಲ್, ಪಿಎಚ್.ಡಿ ಪದವಿ ಪಡೆದಿದ್ದಾರೆ. ಅತಿಥಿ ಉಪನ್ಯಾಸಕರಾಗಿ ರಾಯಚೂರು ಸ್ನಾತಕೋತ್ತರ ಕೇಂದ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಮುಸ್ಲಿಂ ಅಂಗಳದ ಮುಕ್ತ ಧ್ವನಿಗಳು, ಬಿಡುಗಡೆ, ಹೈದರಾಬಾದ ಕರ್ನಾಟಕದ ಸಾಹಿತ್ಯ ಸಮೀಕ್ಷೆ ಕಲ್ಯಾಣ ಕರ್ನಾಟಕದ ಸಾಹಿತಿಗಳ ಬದುಕುಬರಹ, ನಮ್ಮ ಅನುವಾದಕರು, ಪುರಸ್ಕೃತ ಕೃತಿಗಳ ಸಮೀಕ್ಷೆ, ಸಮನ್ವಯ, ಜಾನಪದ ಸಿರಿ ಮೊದಲಾದವುಗಳು ಸಂಪಾದಿಸಿದ ಕೃತಿಗಳಾಗಿವೆ. ಸಾಹಿತ್ಯ ಸಿರಿ, ವಚನ ಸಿರಿ, ಸಾಹಿತ್ಯ ಸಂಕಥನ ವಿಮರ್ಶಾಕೃತಿಗಳಾಗಿವೆ. ಸ್ವಾತಂತ್ರ ಸೇನಾನಿ ಶ್ರೇಷ್ಠ ಸಾಹಿತಿ ಡಾ.ಪಂಚಾಕ್ಷರಿ ಹಿರೇಮಠ, ಡಾ.ಸಿದ್ಧಯ್ಯ ಪುರಾಣಿಕ, ಡಾ.ಯು.ಆರ್.ಅನಂತಮೂರ್ತಿ, ಡಾ.ಫ.ಗು.ಹಳಕಟ್ಟಿ, ಕೋಲೂರು ಮಲ್ಲಪ್ಪ, ಕಲ್ಮಲದ ಕರಿಯಪ್ಪ ತಾತಾ ಮೊದಲಾದವುಗಳು ಇವರ ಸ್ವಂತ ಕೃತಿಗಳಾಗಿವೆ. ಇವರಿಗೆ ಕರ್ನಾಟಕ ಸಾಹಿತ್ಯ ಪರಿಷತ್ ಪ್ರಶಸ್ತಿ, ರುಕ್ಮಿಣಿಬಾಯಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಸುವರ್ಣ ಕರ್ನಾಟಕ ಪ್ರಶಸ್ತಿ, ಬಸವಜ್ಯೋತಿ ಪ್ರಶಸ್ತಿ, ಕರ್ನಾಟಕ ರತ್ನ ಪ್ರಶಸ್ತಿ ಮೊದಲಾದ ಪ್ರಶಸ್ತಿಗಳು ಲಭಿಸಿವೆ. ಇವರ ಸಾಹಿತ್ಯಿಕ ಕೊಡುಗೆ ಮುಂದುವರೆದಿದೆ.

**೪. ಅರುಣ ನರೇಂದ್ರ ಪಾಟೀಲ**

ಬಾಗಲಕೋಟೆ ಜಿಲ್ಲೆಯ ಬಮ್ಮಣಗಿ ಗ್ರಾಮದಲ್ಲಿ ೧೫-೦೭-೧೯೬೮ರಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಸ್ವಗ್ರಾಮದಲ್ಲಿ ಮುಗಿಸಿದ ನಂತರ ಟಿ.ಸಿ.ಹೆಚ್.ಎಸ್.ಎಸ್. ಬಿ.ಈಡ್ ಪದವಿ ಪಡೆದರು. ೧೯೮೯ರಲ್ಲಿ ಶಿಕ್ಷಕಿಯಾಗಿ ನೇಮಕಗೊಂಡರು. ಇವರು ಮುದ್ದಿನಗಿಣಿ, ಪಾಟೀಚೀಲ, ಹಾಯಿಕು ಸಂಕಲನ ಎಂಬ ಮಕ್ಕಳ ಕೃತಿಗಳನ್ನು ರಚಿಸಿದ್ದಾರೆ. ಇವರ ಅನೇಕ ಕಥೆ, ಲೇಖನಗಳು ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಮಯೂರ, ತುಷಾರ, ಮಲ್ಲಿಗೆ, ಹೊಸತು ಸುಧಾ, ಕರ್ಮವೀರ, ಗುಬ್ಬಚ್ಚಿಗೂಡು, ತಳಮಳ, ಕವಿರಶ್ಮಿ ಮಲ್ಲಿಗೆ, ವಿಜಯಕರ್ನಾಟಕ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಜಿಲ್ಲಾ ಮತ್ತು ರಾಜ್ಯಮಟ್ಟದ ಕವಿಗೋಷ್ಠಿಗಳಲ್ಲಿ, ಅನೇಕ ಸಮಾರಂಭಗಳಲ್ಲಿ ಕವನ ವಾಚನ ಮಾಡಿದ್ದಾರೆ. ಜಿಲ್ಲಾ ಮಕ್ಕಳ ಸಾಹಿತ್ಯ ವೇದಿಕೆಯ ಅಧ್ಯಕ್ಷೆಯಾಗಿ, ಜಿಲ್ಲಾ ಜಾಗೃತ ಸಮಿತಿ, ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಮೊದಲಾದವುಗಳ ಸದಸ್ಯರಾಗಿದ್ದಾರೆ. ಕಾರ್ಯನಿರ್ವಹಿಸುತ್ತಿದ್ದಾರೆ. ಇವರಿಗೆ ಪಂಡಿತ ಪುಟ್ಟರಾಜ ಸಾಹಿತ್ಯ ಪುರಸ್ಕಾರ ಲಭಿಸಿದೆ. ಕೊಪ್ಪಳ ಜಿಲ್ಲೆಯಲ್ಲಿಯೇ ಆಧುನಿಕ ವಚನ ಸಾಹಿತ್ಯ ಬರೆಯುವ ಮಹಿಳೆಯರಲ್ಲಿ ಪ್ರಥಮವಾಗಿರುವುದು ಕಂಡುಬರುತ್ತದೆ.

೫. ಶರಣಪ್ಪ ವಡಗೇರಿ

ಕುಷ್ಟಗಿ ತಾಲೂಕಿನ ವಡಗೇರಿಯಲ್ಲಿ ಜನಿಸಿದರು. ಇವರ ತಂದೆ ತಿಮ್ಮಪ್ಪ ವಡಗೇರಿ. ಬಿ.ಎ. ಪದವಿ ಪಡೆದು ಕುಷ್ಟಗಿಯಲ್ಲಿ ತಾಲೂಕು ಗ್ರಂಥಪಾಲಕರಾಗಿದ್ದಾರೆ. ಸಾಹಿತಿಗಳು ಹಾಗೂ ಜನಪದ ಹಾಡುಗಾರರಾಗಿದ್ದಾರೆ. ಜನಪದ ಗೀತೆಗಳ ಸಂಗ್ರಹ ಹಾಗೂ ಕಾರ್ಯಕ್ರಮಗಳಲ್ಲಿ ಹಾಡುವುದು ಇವರ ಪ್ರವೃತ್ತಿಯಾಗಿದೆ. ಜನಪದ ಗಾಯಕರಾಗಿ ದೂರದರ್ಶನದ ಚಂದನ ಹಾಗೂ ಆಕಾಶವಾಣಿ ಗುಲಬರ್ಗಾದಲ್ಲಿ ಕಳೆದ ಹತ್ತು ವರ್ಷಗಳಿಂದಲೂ ಕಾರ್ಯಕ್ರಮ ನೀಡುತ್ತಿದ್ದಾರೆ. ಇವರ ಅನೇಕ ಲೇಖನ, ಕವಿತೆ, ಕಥೆಗಳು ತರಂಗ, ಕರ್ಮವೀರ, ಸುಧಾ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಮಾಯಕಾರ್ತಿ, ಹಂಚುಳ್ಳಿ ಬಸವಣ್ಣ ಎಂಬ ಕಥೆ ತರಂಗದ ತಿಂಗಳ ಬಹುಮಾನ ಪಡೆದಿವೆ. ಬಾಡಿದ ಕುಸುಮಗಳು, ಅಸ್ಪೃಶ್ಯತೆ, ಒಂದೂರಿನ ಕತೆ ಮೊದಲಾದ ಬೀದಿ ನಾಟಕಗಳನ್ನು ರಚಿಸಿ, ನಿರ್ದೇಶಿಸಿ ಪ್ರದರ್ಶಿಸಿರುವುದು ಕಂಡು ಬರುತ್ತದೆ. ಬೊಳ್ಳೊಳ್ಳಟ್ಟ ಬೊಳ್ಳೊಳ್ಳಿ, ನಾಗಲೋಕದ ನಾರಿ ಎಂಬ ಜನಪದ ಧ್ವನಿಸುರುಳಿಗಳನ್ನು ಹೊರತಂದಿದ್ದಾರೆ. ಇವರಿಗೆ ೧೯೯೨-೯೩ರಲ್ಲಿ ರಾಜ್ಯಯುವ ಪ್ರಶಸ್ತಿ ಲಭಿಸಿದೆ. ಕಾಳಿದಾಸ ಶಿಕ್ಷಣ ಸಂಸ್ಥೆ ಬಿಜಾಪುರ "ಸಾಹಿತ್ಯ ಕಲಾಪುಂಜ" ಹಾಗೂ ಶಿವರಾಮ ಕಾರಂತರವರಿಂದ ಜನಪದ ಗಾರುಡಿಗ ಎಂಬ ಬಿರುದನ್ನು ನೀಡಿ ಸನ್ಮಾನಿಸಲಾಗಿದೆ.

೬. ಹನುಮಂತಪ್ಪ ಅಂಡಗಿ

ಕೊಪ್ಪಳ ತಾಲೂಕಿನ ಚಿಲವಾಡಿಗಿ ಗ್ರಾಮದಲ್ಲಿ ೧-೬-೧೯೭೧ರಲ್ಲಿ ಜನಿಸಿದರು. ಇವರ ತಂದೆ ನಿಂಗಪ್ಪ ತಾಯಿ ಸಿದ್ಧಮ್ಮ. ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿ ಪಡೆದು, ಪ್ರೌಢ, ಪದವಿ ಶಿಕ್ಷಣವನ್ನು ಕೊಪ್ಪಳದಲ್ಲಿ ಪಡೆದರು. ಎಂ.ಎ. ಎಂ.ಈಡಿ ಪದವಿ ಪಡೆದಿದ್ದಾರೆ. ಇಂದರಗಿ ಸರಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ಸೇವೆಸಲ್ಲಿಸುತ್ತಿದ್ದಾರೆ. ಜನಪದ ಹಾಡುಗಳ ಗಾಯನ, ಲೇಖನ, ಕವನಗಳ ರಚನೆ ಪ್ರವೃತ್ತಿಯಾಗಿದೆ. ಕೊಪ್ಪಳ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಪ್ರಧಾನ ಕಾರ್ಯದರ್ಶಿ, ಜಿಲ್ಲಾ ಬೀರಲಿಂಗೇಶ್ವರ ನೌಕರರ ಸಂಘದ ಪ್ರಧಾನ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಚುಟುಕು ಸಿರಿ, ಚುಟುಕು ಚಿಲುಮೆ, ಜ್ಞಾನದೀಪ್ತಿ, ಎಂಬ ಸ್ಮರಣ ಸಂಚಿಕೆಗಳನ್ನು ಸಂಪಾದಿಸಿದ್ದಾರೆ. ಇಟಗಿ ಉತ್ಸವದಲ್ಲಿ ರಾಜ್ಯಮಟ್ಟದ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಆನೆಗೊಂದಿ ಉತ್ಸವ, ಇಟಗಿ ಉತ್ಸವ, ಇನ್ನಿತರ ಸಭೆ ಸಮಾರಂಭಗಳಲ್ಲಿ ಜಾನಪದ ಗೀತೆಗಳನ್ನು ಹಾಡಿರುವುದು ಕಂಡುಬರುತ್ತದೆ.

ಇರಕಲ್ಲಗಡದ ಶರಣಪ್ಪ ಮೂಲಿಮನಿ, ಹಿರೇಅರಳಿಹಳ್ಳಿಯ ಬಾ.ಗು.ಹುಲಿ, ಲಿಂಗನಬಂಡಿಯ ರಾಮಣ್ಣ ಸಾಲಭಾವಿ, ಕುಷ್ಟಗಿಯ ಶಂಕರ, ಯಲಬುರ್ಗಾದ ಸೋಮಶೇಖರ ಹರ್ತಿ, ರಾಮಣ್ಣ ದನಕಾಯ್, ಸಂಗನಾಳದ ಶಿವಪ್ಪ ಗುರಿಕಾರ, ಕೊರಡಕೇರಿಯ ಹನುಮಗೌಡ ಪಾಟೀಲ, ಮುಂಡನಗೌಡ ಪಾಟೀಲ, ತಾವರಗೇರೆಯ ಶ್ರೀ ದಂಡಿನ್ ಮೊದಲಾದವರು ಅನೇಕ ಕಥೆ ಕವನಗಳನ್ನು ರಚಿಸಿ ಪ್ರಶಸ್ತಿಗಳಿಸಿದ್ದಾರೆ.

ಟಿಪ್ಪಣಿಗಳು

೧. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡ-೧೯೯೮. ಪು-೬

೨. ಅದೇ, ಪು-೬

೩. ಭಾರತೀಯ ಸಂಗೀತ ವಾದ್ಯಗಳು, ಲೇ: ಜಿ.ಶಾಮಾಚಾರ್ಯ, ಪ್ರ: ಹೆಜ್ಜೆ ಪ್ರಕಾಶನ, ರಾಯಚೂರ-೧೯೮೩. ಪು-೨

೪. ಅದೇ, ಪು-೧೭

೫. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮. ಪು-೬

೬. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೧೮

೭. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮. ಪು-೭

೮. ಕರ್ನಾಟಕ ಜನಪದ ಕಲೆಗಳ ಕೋಶ, ಸಂ:ಹಿ.ಚಿ.ಬೋರಲಿಂಗಯ್ಯ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೦೭

೯. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೧೯

೧೦. ಉತ್ತರ ಕರ್ನಾಟಕದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ವೀರೇಶ ಬಡಿಗೇರ, ಪ್ರ: ವಿಮೋಚನಾ ಪ್ರಕಾಶನ, ಅಥಣಿ-೧೯೯೯. ಪು-೨೨೧

೧೧. ಅದೇ, ಪು-೨೨೧

೧೨. ಅದೇ, ಪು-೨೨೨

೧೩. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೨೦

೧೪. ಅದೇ, ಪು-೧೨೧

೧೫. ಕರ್ನಾಟಕ ಜನಪದ ಕಲೆಗಳ ಕೋಶ, ಸಂ:ಹಿ.ಚಿ.ಬೋರಲಿಂಗಯ್ಯ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,

ಹಂಪಿ-೧೯೯೭. ಪು-೧೦೮

೧೬. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೨೧

೧೭. ಅದೇ, ಪು-೧೨೨

೧೮. ಕರ್ನಾಟಕ ಜನಪದ ಕಲೆಗಳ ಕೋಶ, ಸಂ:ಹಿ.ಚಿ.ಬೋರಲಿಂಗಯ್ಯ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭. ಪು-೧೦೮

೧೯. ಕರ್ನಾಟಕದ ಕುರುಬರು, ಲೇ: ಡಾ.ಶಿವಾನಂದ ಗುಬ್ಬಣ್ಣವರ, ಪ್ರ: ಅಕ್ಷಯ ಪ್ರಕಾಶನ, ಧಾರವಾಡ-೧೯೯೩. ಪು-೧೨೩

೨೦. ಕಾಯಕಯೋಗಿ, ಸಂ: ಡಾ.ನಿಂಗಣ್ಣ ಸಣ್ಣಕ್ಕಿ, ಪ್ರ: ವಿದ್ಯಾನಿಧಿ ಪ್ರಕಾಶನ ರಜತ ಮಹೋತ್ಸವದ ಸಮಿತಿ, ಗದಗ-೨೦೦೨. ಪು-೫೭೧

೨೧. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮. ಪು-೧೦

೨೨. ಹಂಡೆ ಕುರುಬರು : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ: ವೈ.ಕೆ. ಗುಂಡಕರ್ಜಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೬೮

೨೩. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮. ಪು-೧೦

೨೪. ಅದೇ, ಪು-೧೧

೨೫. ಉತ್ತರ ಕರ್ನಾಟಕದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ವೀರೇಶ ಬಡಿಗೇರ, ಪ್ರ: ವಿಮೋಚನಾ ಪ್ರಕಾಶನ, ಅಥಣಿ-೧೯೯೯. ಪು-೨೨೪

೨೬. ಹಂಡೆ ಕುರುಬರು : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ:ವೈ.ಕೆ. ಗುಂಡಕರ್ಜಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೬೮

೨೭. ಅದೇ, ಪು-೬೮

೨೮. ಡೊಳ್ಳಿನ ಪದಗಳು, ಲೇ: ಡಾ.ಅರ್ಜುನ್ ಗೋಳಸಂಗಿ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡ-೧೯೯೮. ಪು-೧೪

೨೯. ಹಂಡೆ ಕುರುಬರು : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ:ವೈ.ಕೆ. ಗುಂಡಕರ್ಜಿಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೬೯

೩೦. ಹಾಲಕೆನೆ, ಪ್ರ.ಸಂ: ಡಾ.ಶ್ರೀರಾಮ ಇಟ್ಟಣ್ಣವರ, ಪ್ರ: ಕಾಳಿದಾಸ ಶಿಕ್ಷಣ ಸಂಸ್ಥೆ, ಬಿಜಾಪುರ-೨೦೦೨. ಪು-೨೪೨

೩೧. ಹಂಡೆ ಕುರುಬರು : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ ಅಪ್ರಕಟಿತ) ಸಂಶೋ:ವೈ.ಕೆ. ಗುಂಡಕರ್ಜಿಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೬೯

೩೨. ಹಾಲಕೆನೆ, ಪ್ರ.ಸಂ: ಡಾ.ಶ್ರೀರಾಮ ಇಟ್ಟಣ್ಣವರ ಪ್ರ: ಕಾಳಿದಾಸ ಶಿಕ್ಷಣ ಸಂಸ್ಥೆ, ಬಿಜಾಪುರ-೨೦೦೨. ಪು-೨೪೨

೩೩. ಉತ್ತರ ಕರ್ನಾಟಕದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ವೀರೇಶ ಬಡಿಗೇರ, ಪ್ರ: ವಿಮೋಚನಾ ಪ್ರಕಾಶನ, ಅಥಣಿ-೧೯೯೯. ಪು-೨೨೪

೩೪. ಹಂಡೆ ಕುರುಬರು : ಒಂದು ಅಧ್ಯಯನ (ಪಿಎಚ್.ಡಿ ಪ್ರಬಂಧ ಅಪ್ರಕಟಿತ) ಸಂಶೋ:ವೈ.ಕೆ. ಗುಂಡಕರ್ಜಿಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೭೧

೩೫. ಹೈದ್ರಾಬಾದ ಕರ್ನಾಟಕದ ಜನಪದ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ:ಎಂ.ಎಸ್.ಲಠ್ಠೆ , ಪ್ರ: ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೧೯೮೪. ಪು-೨೪

೩೬. ಹಂಡೆ ಕುರುಬರು : ಒಂದು ಅಧ್ಯಯನ, (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ:ವೈ.ಕೆ. ಗುಂಡಕರ್ಜಿಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೭೧

೩೭. ಅದೇ, ಪು-೬೮

೩೮. ಉತ್ತರ ಕರ್ನಾಟಕದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಲೇ: ಡಾ.ವೀರೇಶ ಬಡಿಗೇರ, ಪ್ರ: ವಿಮೋಚನಾ ಪ್ರಕಾಶನ, ಅಥಣಿ-೧೯೯೯. ಪು-೨೦೪

೩೯. ಹಂಡೆ ಕುರುಬರು : ಒಂದು ಅಧ್ಯಯನ, (ಪಿಎಚ್.ಡಿ ಪ್ರಬಂಧ ಅಪ್ರಕಟಿತ), ಸಂಶೋ:ವೈ.ಕೆ. ಗುಂಡಕರ್ಜಿಗಿ, ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೨. ಪು-೭೪

೪೦. ಅದೇ, ಪು-೭೬

೪೧. ಅದೇ, ಪು-೭೭

೪೨. ಅದೇ, ಪು-೭೮

೪೩. ಅದೇ, ಪು-೭೯

೪೪. ಗೊರವರ ಸಂಸ್ಕೃತಿ, ಸಂ:ಚಕ್ಕರೆ ಶಿವಶಂಕರ, ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೩. ಪು-೫೪

೪೫. ಅದೇ, ಪು-೫೪

೪೬. ಅದೇ ಪು-೧೪೮

ದೇಶದ ಅಧಿಪತಿಯಾದನು. ಅವನು ಆಳಿದ ರಾಜ್ಯ ಕುರುಂಬ ಭೂಮಿ ಎಂದು ಕರೆಯಲ್ಪಟ್ಟಿತು. ಕುಸುಬಾ ಕುರುಬರ ನಾಡಿನಲ್ಲಿ ಕುಸುಬಾ ಕುರುಬರ ನಾಡು,ವಾಯುನಾಡು, ಕೋಲ್‌ಫಾಟ್, ಪಾಯುಮಲ್ಶೆ, ತೈಕುಂಪುರಂ, ವಾರಕ್ಕಂಪರಮ್, ಪೋರ್ರೈ ಎಂಬ ಏಳು ತಾಲೂಕುಗಳು ಮಾತ್ರ ಇದ್ದವು. ನೀಲಗಿರಿ ಕುರುಬರ ಪ್ರಮುಖ ನೆಲೆಯಾಗಿತ್ತು.

ಭಾರತದ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದಕ್ಕಿಂತ ಮೊದಲು ಕುರುಬರು ನರ್ಮದಾ, ಗೋದಾವರಿ ಪ್ರದೇಶಗಳ ಉತ್ತರ ಭಾಗಗಳಲ್ಲಿ ನೆಲೆಸಿದ್ದರು. ಹಿಂದೂ ಪವಿತ್ರ ಗ್ರಂಥಗಳ ಪ್ರಕಾರ ಕಂದಾರ, ವಿದ್ಯಾರಣ್ಯ, ದಂಡಕಾರಣ್ಯ ಕುರುಬರ ಮೂಲ ಪ್ರದೇಶಗಳಾಗಿದ್ದವು ಕಾಲಾನಂತರ ಸೈನ್ಯದ ಬಲದಲ್ಲಿ ಪ್ರಾಬಲ್ಯತೆ ಪಡೆದುಕೊಂಡು ಅನೇಕ ಅರಸು ಮನೆತನಗಳನ್ನು ನಿರ್ಮಿಸಿದರು. ಅವುಗಳಲ್ಲಿ ಶಾತವಾಹನರು, ಕದಂಬರು, ಪಲ್ಲವರು, ಜಿಂಜಿ ಮತ್ತು ಕೃಷ್ಣಗಿರಿಯ ಅರಸರು, ಬರೋಡದ ಗಾಯಕವಾಡ, ಹೋಳ್ಕರು, ಮೈಸೂರಿನ ಒಡೆಯರು ಹಾಗೂ ಪ್ರಮುಖವಾಗಿ ವಿಜಯನಗರ ಸಾಮ್ರಾಜ್ಯ ಪ್ರಮುಖವಾಗಿದೆ. ಆದರೆ ಇವುಗಳ ಬಗ್ಗೆ ಸ್ಪಷ್ಟ ಉಲ್ಲೇಖಗಳಿಲ್ಲ. ಆದರೆ ಅವರ ಬೆಡಗು, ಕುಲಗೋತ್ರ, ಮೂಲ ವೃತ್ತಿ, ವೈವಾಹಿಕ ಸಂಬಂಧಗಳ ಆಧಾರದ ಮೇಲೆ ಅಭಿಪ್ರಾಯಪಟ್ಟಿದ್ದಾರೆ. ಕುರುಬರು ಪಾಳೆಯಗಾರರು, ಮಂತ್ರಿಗಳು, ದಂಡನಾಯಕರಾಗಿ ಆಳ್ವಿಕೆ ನಡೆಸಿ ಒಂದು ಸಾಮ್ರಾಜ್ಯದ ಭದ್ರ ಬುನಾದಿಗೆ ಶ್ರಮಿಸಿದ್ದಾರೆ. ಇಂದಿಗೂ ಕುರುಬರ ಮನೆತನಗಳ ಹೆಸರುಗಳಲ್ಲಿ ಗೌಡ, ಪಾಟೀಲ, ಗುರಿಕಾರ, ದಳವಾಯಿ, ಓಲೇಕಾರ, ತಳವಾರ, ನಾಯಕ ಮೊದಲಾದವುಗಳನ್ನು ಹೊಂದಿರುವುದು ಇಂದಿಗೂ ಕಂಡುಬರುತ್ತದೆ. ಇದರಿಂದ ಕುರುಬರು ರಾಜಕೀಯ ಚಟುವಟಿಕೆಗಳಲ್ಲಿ ಉತ್ತಮ ಸ್ಥಾನ ಪಡೆದಿದ್ದರೆಂಬುದು ಸ್ಪಷ್ಟವಾಗುತ್ತದೆ. ಹೀಗಾಗಿ ಭಾರತದ ರಾಜಕೀಯ ಚರಿತ್ರೆಯಲ್ಲಿ, ಪ್ರಜಾ ಮಧ್ಯದಲ್ಲಿ ಉತ್ತಮ ಸ್ಥಾನಪಡೆದಿದ್ದರೆಂಬುದಕ್ಕೆ ಇಂದಿಗೂ ಕಂಡು ಬರುವ ಕುರುಬರಹಳ್ಳಿ, ಕುರುಬಗೆರೆ, ಕುರುಬರ ಭೂಮಿ, ಕುರುಂಬಕೋಟೆ ಮೊದಲಾದ ಹೆಸರುಗಳು ಸಾಕ್ಷಿಯಾಗಿವೆ.

ಟಿಪ್ಪುವಿನ ಮರಣದ ನಂತರ ಹೈದರಾಬಾದ ಕರ್ನಾಟಕ ಪ್ರದೇಶವು ನಿಜಾಮನ ವಶವಾಯಿತು. ಬೀದರ, ಗುಲಬರ್ಗಾ, ರಾಯಚೂರು ಜಿಲ್ಲೆಗಳು ನಿಜಾಮನ ಆಳ್ವಿಕೆಗೆ ಒಳಪಟ್ಟವು. ಅಂದಿನಿಂದ ಈ ಪ್ರದೇಶಕ್ಕೆ ಹೈದರಾಬಾದ-ಕರ್ನಾಟಕವೆಂದು ಕರೆಯತೊಡಗಿದರು. ಇಂದು ಕೊಪ್ಪಳ, ಬಳ್ಳಾರಿ ಜಿಲ್ಲೆಗಳು ಈ ಪ್ರದೇಶಕ್ಕೆ ಸೇರಿಕೊಂಡಿವೆ. ಈ ಪ್ರದೇಶವು ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾದ ಐತಿಹಾಸಿಕ ಹಿನ್ನೆಲೆ ಹೊಂದಿದೆ. ಈ ಭಾಗದಲ್ಲಿ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚುರಿಗಳು, ವಿಜಯನಗರದ ಅರಸರು, ಮುಸ್ಲಿಂ ಅರಸರು, ಅನೇಕ ಪಾಳೆಯಗಾರರು ಆಳ್ವಿಕೆ ನಡೆಸಿದರು. ಇದರಿಂದಾಗಿ ವಿವಿಧ ಸಂಸ್ಕೃತಿಗಳ ಆಶ್ರಯ ತಾಣವಾದ ಈ ಪ್ರದೇಶದಲ್ಲಿ ಅನೇಕ ಸಮುದಾಯಗಳು ನೆಲೆಸಿರುವುದು ಕಂಡುಬರುತ್ತದೆ. ಒಂದೇ ಸಮುದಾಯವನ್ನು ವಿವಿಧ ಹೆಸರುಗಳ ಮೂಲಕ ಗುರುತಿಸುವುದು ಕಂಡುಬರುತ್ತದೆ. ಕುರುಬರನ್ನು ಗೊಂಡರು, ಹಾಲುಮತದವರು, ಹಂಡೆ ಕುರುಬರು ಎಂದು ಈ ಭಾಗದಲ್ಲಿ ಗುರುತಿಸುತ್ತಾರೆ. ಪ್ರತಿಯೊಂದು ಜಿಲ್ಲೆಯಲ್ಲಿ ನೆಲೆಸಿರುವ ಕುರುಬರು ತಮ್ಮದೇ ಆದ ವೈಶಿಷ್ಟತೆಯನ್ನು ಹೊಂದಿದ್ದಾರೆ. ಅವರ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಜೀವನವು ಪ್ರದೇಶಕ್ಕನುಗುಣವಾಗಿ ವ್ಯತ್ಯಾಸ ಹೊಂದಿರುವುದನ್ನು ಕಾಣಬಹುದಾಗಿದೆ.

ಭಾರತ ಸ್ವಾತಂತ್ರ ಪೂರ್ವದಲ್ಲಿ ಜಿಲ್ಲಾ ಕೇಂದ್ರವಾಗಿದ್ದ ಕೊಪ್ಪಳ ನಂತರದಲ್ಲಿ ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾಯಿತು.

ಇಂದು ಕೊಪ್ಪಳ ಹೊಸ ಜಿಲ್ಲೆಯಾಗಿ ಹೊರಹೊಮ್ಮಿದೆ. ಇದು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು, ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಹೊಂದಿದೆ. ಶಾಸನದಲ್ಲಿ ಕೊಪ್ಪಳವನ್ನು ಕುಪಣ, ಕೊಪಣ, ಕೊಪಣಾದ್ರಿ, ಕೊಪಣಾಚಲ ಎಂದು ಉಲ್ಲೇಖಿಸಲಾಗಿದೆ. ಕೊಪಣವು ಕವಿರಾಜ ಮಾರ್ಗದಲ್ಲಿ ಹೇಳಿರುವ ತಿರುಳ್ಗನ್ನಡ ಪ್ರದೇಶದ ಪೂರ್ವ ಸೀಮೆಯಾಗಿದೆ. ಮೌರ್ಯರಿಂದ ಹಿಡಿದು ವಿಜಯ ನಗರದ ಅರಸರ ಮನೆತನಗಳಲ್ಲದೇ, ಅನೇಕ ಪಾಳೆಯಗಾರರು, ಬ್ರಿಟಿಷರು, ನಿಜಾಮರು ಆಳ್ವಿಕೆ ನಡೆಸಿದ್ದಾರೆ. ಅನೇಕ ಧರ್ಮ, ಸಮುದಾಯಗಳು ಇಲ್ಲಿ ನೆಲೆ ಪಡೆದಿವೆ. ಪ್ರಾಚೀನ ಕಾಲದಿಂದಲೂ ಜನರು ವಾಸವಾಗಿದ್ದರೆಂಬುದಕ್ಕೆ ಗುಡ್ಡ-ಬೆಟ್ಟಗಳಲ್ಲಿ ದೊರೆತಿರುವ ಕಲ್ಗೋರಿಗಳು, ಬಂಡೆ ಚಿತ್ರಗಳು ಆಧಾರಗಳಾಗಿವೆ. ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ತಮ್ಮ ನೆಲೆಯನ್ನು ಉಳಿಸಿಕೊಂಡು ಬಂದಿರುವ ಸಮುದಾಯಗಳಲ್ಲಿ ಕುರುಬ ಸಮುದಾಯವೂ ಒಂದಾಗಿದೆ.

ಹಟ್ಟಿ, ಕೊಪ್ಪಗಳು ಕುರುಬರ ಮೂಲ ನೆಲೆಗಳಾಗಿವೆ. ಕೊಪ್ಪಳವನ್ನು ಕೊಪಣ, ಕೊಪ್ಪಬಾಲ, ಕೊಪ್ಪಲ್ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಇದರಿಂದಾಗಿ ಕೊಪ್ಪಳವು ಕುರುಬರ ಪ್ರಾಚೀನ ನೆಲೆ ಎಂದು ತಿಳಿಯುತ್ತದೆ. ಇಂದಿಗೂ ಕುರುಬರಹಳ್ಳಿ, ಕುರುಬರಹಟ್ಟಿ ಕುರುಬರ ಓಣಿ ಬೀದಿಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಧಾರ್ಮಿಕವಾಗಿ ಅನೇಕ ಕುರುಬರ ದೇವಾಲಯಗಳು, ಗುರುಮಠಗಳು ಕಂಡುಬರುತ್ತವೆ. ಕೊಪ್ಪಳದಲ್ಲಿ ಕುರುಬರು ಜನಸಂಖ್ಯೆಯಲ್ಲಿ ೨ನೇ ಸ್ಥಾನದಲ್ಲಿದ್ದು ಸಾಮಾಜಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದಾರೆ. ಒಟ್ಟಾರೆ ಕೊಪ್ಪಳ ಜಿಲ್ಲೆಯಲ್ಲಿ ಕುರುಬರು ವೈಶಿಷ್ಟ್ಯತೆಯನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ.

ಕುರುಬರನ್ನು ಮೂಲತಃ ಹಾಲುಮತದವರೆಂದು ಕರೆಯಲಾಗುತ್ತಿತ್ತು. ಕಾಲಾನಂತರ ಅನೇಕ ಕಾರಣಗಳಿಂದಾಗಿ ಅವರಲ್ಲಿ ಅನೇಕ ಉಪ ಪಂಗಡಗಳಾದವು. ಪ್ರತಿಯೊಂದು ಪಂಗಡಗಳು ತಮ್ಮದೇ ಆದ ವೃತ್ತಿ ಆಚಾರ-ವಿಚಾರಗಳನ್ನು ಹೊಂದಿದ್ದವಲ್ಲದೆ, ಮೂಲ ಪಂಗಡದಿಂದ ಭಿನ್ನತೆಯನ್ನು ಗುರುತಿಸಿಕೊಂಡಿದ್ದವು. ಹಾಲುಮತದಿಂದ ಬೇರ್ಪಟ್ಟ ಪಂಗಡಗಳಲ್ಲಿ ಒಡೆಯರು, ಧನಗಾರರು,ಕಾಡು ಕುರುಬರು, ಜೇನು ಕುರುಬರು, ಹಂಡೆ ಕುರುಬರು, ಗೊರವರು, ಹತ್ತಿ ಕಂಕಣದವರು, ಉಣ್ಣೆ ಕಂಕಣದವರು, ಕಂಬಳಿಕುರುಬರು ಮೊದಲಾದವು ಪ್ರಮುಖವಾಗಿವೆ. ಈ ಪಂಗಡಗಳು ತಮ್ಮದೆ ಆದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಜೀವನಕ್ರಮವನ್ನು ಒಳಗೊಂಡಿವೆ.

ಕುರುಬರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಲೋಕರೂಢಿ, ಸಂಪ್ರದಾಯಗಳಿವೆ, ಜಾತಿ ವ್ಯವಸ್ಥೆಯಲ್ಲಿ ಕುರುಬರನ್ನು ಪ್ರಥಮ ಶೂದ್ರರೆಂದು ಕರೆಯಲಾಗಿದೆ. "ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ" ಎಂಬ ಉಲ್ಲೇಖ ಶಾಸನದಲ್ಲಿರುವುದು ಗೊರವರು (ಕುರುಬರು) ಕೆಳವರ್ಗದವರಾಗಿದ್ದರೆಂದು ತಿಳಿಯುತ್ತದೆ. ಆದರೆ ಕಾಲಾನಂತರ ಕೆಲವು ಸಮುದಾಯಗಳು ಉನ್ನತ ಹಂತವನ್ನು ಮುಟ್ಟಲು ಪ್ರಯತ್ನಿಸಿದವಲ್ಲದೇ, ಅದರಲ್ಲಿ ಯಶಸ್ಸನ್ನು ಪಡೆದುಕೊಂಡವು. ಅನೇಕ ರಾಜ್ಯಗಳನ್ನು ನಿರ್ಮಿಸಿ ಕ್ಷತ್ರಿಯ ಸ್ಥಾನಮಾನ ಪಡೆದು ಸಮಾಜದಲ್ಲಿ ಗೌರವಯುತ ಸ್ಥಾನ ಪಡೆದುಕೊಂಡವೆಂಬುದಕ್ಕೆ ಅವರು ನಿರ್ಮಿಸಿದ ರಾಜಮನೆತನಗಳು ಸಾಕ್ಷಿಯಾಗಿವೆ. ಕುರುಬರು ಸಮಾಜದಲ್ಲಿ ಕುಲ, ಗೋತ್ರಕ್ಕೆ ಬಹಳ ಪ್ರಾಮುಖ್ಯತೆ ನೀಡುತ್ತಾರೆ. ಇವರ ಪ್ರತಿಯೊಂದು ಕುಲ, ಬೆಡಗುಗಳು ತಮ್ಮದೇ ಆದ ಸಾಮಾಜಿಕ ನೆಲೆ, ಸ್ಥಾನಮಾನ ಹಾಗೂ ಇಡಿ ಜಾತಿಯನ್ನೇ ನಿರ್ವಹಿಸುವ ಗುಣ ಪಡೆದುಕೊಂಡಿವೆ. ಇವರ ಬೆಡಗು ಅಥವಾ ಕುಲಗಳನ್ನು ರಾಜ ಮನೆತನ, ಪ್ರಾಣಿ, ಸಸ್ಯ , ಆಹಾರ ಮೊದಲಾದವುಗಳಿಗೆ ಸಂಬಂಧಿಸಿದ ಬೆಡಗುಗಳಿರುವುದು ಅವರ ಚರಿತ್ರೆಗೆ ಮತ್ತಷ್ಟು ಮಹತ್ವ ನೀಡುತ್ತದೆ.

ಕುರುಬರ ಸಾಮಾಜಿಕ ಜೀವನವು ಪ್ರಾಚೀನ ಕಾಲದಿಂದಲೂ ಅನೇಕ ಲೋಕರೂಢಿಗಳ, ಸಂಪ್ರದಾಯಗಳ ಸುಭದ್ರವಾದ ವ್ಯವಸ್ಥೆಯನ್ನು ಹೊದಿರುವುದು ಕಂಡುಬರುತ್ತದೆ. ಅವುಗಳಲ್ಲಿ ಕುಟುಂಬ ಪದ್ಧತಿ, ಆಹಾರ–ಪಾನೀಯಗಳು, ಉಡುಗೆ, ತೊಡುಗೆಗಳು, ವಸತಿ ವ್ಯವಸ್ಥೆ ನ್ಯಾಯಪದ್ಧತಿ, ವೈದ್ಯಪದ್ಧತಿ ಮೊದವಾದವುಗಳು ಪ್ರಮುಖವಾಗಿವೆ. ಇವುಗಳಲ್ಲಿಯ ಆಚರಣೆಗಳು ಅಂದಿನಿಂದಲೂ ಬದಲಾಗದೆ ನಡೆದುಕೊಂಡು ಬಂದಿವೆ. ಮಧ್ಯಕಾಲದಲ್ಲಿ ಉನ್ನತ ಸ್ಥಾನವನ್ನು ಪಡೆದುಕೊಂಡ ಕುರುಬರಲ್ಲಿಯ ಜೀವನ ಕ್ರಮವು ಸ್ವಲ್ಪಮಟ್ಟಿಗೆ ಪರಿವರ್ತನೆಗೊಂಡರೂ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಆದರೂ ಕಾಲಾನಂತರ ಸಾಮಾಜಿಕ ವ್ಯವಸ್ಥೆಯ ಕೆಲವು ವಿಷಯಗಳಲ್ಲಿ ಅನೇಕ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಜನನ, ವಿವಾಹ, ಮರಣದ ಸಂದರ್ಭಗಳಲ್ಲಿಯ ಆಚರಣೆಗಳು ಕಠಿಣತೆಯನ್ನು ಕಳೆದುಕೊಂಡಿವೆ. ಜಾತಿ ವ್ಯವಸ್ಥೆಯಲ್ಲಿ ಬದಲಾವಣೆಯಾಗಿದ್ದರು ಕುರುಬರು ಕಂಕಣ ಹಾಗೂ ಬೆಡಗುಗಳಿಗೆ ಬಹಳ ಮಹತ್ವ ಕೊಡುವುದು ಇಂದಿಗೂ ಕಂಡುಬರುತ್ತದೆ. ಕುರುಬನಿರುವ ಊರು ಕುಬೇರನಾಗರ ಹಾಗೂ ಕುರುಬನೇ ಶುಭ ಕಾರ್ಯಗಳಿಗೆ ಮೊದಲಾಗಬೇಕೆಂಬ ನಂಬಿಕೆ ಜನರಲ್ಲಿರುವುದು ಕುರುಬರ ಸಾಮಾಜಿಕ ಸ್ಥಾನ–ಮಾನಕ್ಕೆ ಸಾಕ್ಷಿಯಾಗಿದೆ.

ಕುರುಬರ ಸಾಮಾಜಿಕ ಜೀವನದಂತೆ, ಧಾರ್ಮಿಕ ಜೀವನವೂ ವಿಶಿಷ್ಟತೆಯನ್ನು ಹೊಂದಿದೆ. ಕುರುಬರಲ್ಲಿರುವ ಅನೇಕ ದೇವ–ದೇವತೆಗಳು ಒಂದು ಕಾಲದ ವೀರರಾಗಿದ್ದು, ಅನೇಕ ಅದ್ಭುತ ಲೀಲೆಗಳನ್ನು ತೋರಿದವರಾಗಿರುತ್ತಾರೆ. ಇಂಥ ನಾಯಕರನ್ನು ಮುಂದಿನ ಪೀಳಿಗೆಯವರು ಕೊಂಡಾಡಿದರಲ್ಲದೆ, ಅವರ ವೀರಗಲ್ಲನ್ನು ನಿರ್ಮಿಸಿ, ಅದಕ್ಕೊಂದು ಗುಡಿಯ ಕಟ್ಟಿಸಿ ದೇವರನ್ನಾಗಿಸಿರುವದು ಕಂಡು ಬರುತ್ತದೆ. ಅವರಲ್ಲಿ ಪ್ರಮುಖರಾಗಿ ಬೀರದೇವರು, ಮೈಲಾರಲಿಂಗ, ರೇವಣಸಿದ್ಧ, ಮಾಳಿಂಗರಾಯ, ಅಮೋಘಸಿದ್ಧ, ಗ್ಯಾನಪ್ಪಯ್ಯ, ಚಿನ್ನಪ್ಪಜ್ಜ, ಭರಮಪ್ಪ ಬಾಳಪ್ಪಜ್ಜ, ಸಂಗೊಳ್ಳಿರಾಯಣ್ಣ, ಕನಕದಾಸ, ಇಟಗಿ ಭೀಮಾಂಬಿಕೆ, ಸಜ್ಜಲಗುಡ್ಡದ ಶರಣಮ್ಮ ಮೊದಲಾದವರು ಪ್ರಮುಖರಾಗಿದ್ದಾರೆ. ದೇವರನ್ನು ಕುರುಬರು ಮನೆದೇವರು, ಕುಲದೇವರು,ಗ್ರಾಮದೇವರು, ನಾಡದೇವರು ಎಂದು ವಿಭಾಗಿಸಿ ಆರಾಧಿಸುವದನ್ನು ಕಾಣಬಹುದಾಗಿದೆ. ತಮ್ಮ ಕುಲದೇವರು, ಮನೆದೇವರಲ್ಲದೇ ಇತರೆ ಸಮುದಾಯದ ದೇವರನ್ನು ಆರಾಧಿಸುವುದು ಕಂಡುಬರುತ್ತದೆ. ಇತರೆ ಸಮುದಾಯದವರ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸುವುದನ್ನು ಕಾಣಬಹುದಾಗಿದೆ. ಇಂದು ಧಾರ್ಮಿಕ ಆಚರಣೆಗಳು, ನಂಬಿಕೆಗಳು ತಮ್ಮ ಕಠಿಣತೆಯನ್ನು ಕಳೆದುಕೊಂಡಿವೆ. ಉಗ್ರವಾದ ಅಥವಾ ಕಠಿಣವಾದ ಆಚರಣೆಗಳು ಹೆಚ್ಚಾಗಿ ಕಂಡುಬರುವುದಿಲ್ಲ.

ಕುರುಬರು ಕಾಲದಿಂದ ಕಾಲಕ್ಕೆ ಅನೇಕ ಧರ್ಮಗಳ ಪ್ರಭಾವಕ್ಕೊಳಗಾಗಿ ಪರಿವರ್ತನೆಗೊಂಡಿದ್ದಾರೆ ಎನ್ನುವದಕ್ಕೆ ಆಧಾರಗಳಿವೆ. ಕುರುಬರಲ್ಲಿ ಮೂಲತಃ ಶೈವಧರ್ಮವಿತ್ತು. ನಂತರ ವೈಷ್ಣವ, ಜೈನ, ಬೌದ್ಧ ಧರ್ಮಗಳಾಗಿ ಪರಿವರ್ತನೆ ಹೊಂದಿದ್ದರೆಂದು ತಿಳಿದುಬರುತ್ತದೆ. ಶೈವರಾದ ಇವರು ಲಾಕುಳ, ಪಾಶುಪತ, ಮತದವರಾಗಿದ್ದರು. ಇವರನ್ನು ಗೊರವರೆಂದು ಕರೆಯಲಾಗುತ್ತದೆ. ಲಾಕುಳ ಪಾಶುಪತ ಧರ್ಮದವರು ಕನ್ನಡ ಸಂಸ್ಕೃತಿಗೆ ಅನೇಕ ಕೊಡುಗೆಗಳನ್ನು ನೀಡಿದ್ದಾರೆ. ದೇವಾಲಯಗಳ ನಿರ್ಮಾಣಕ್ಕೆ ಅಧಿಕ ಮಹತ್ವ ನೀಡಿದ್ದರೆಂದು ಕಂಡುಬರುತ್ತದೆ. ಅನೇಕ ಅರಸು ಮನೆತನದವರಿಗೆ ರೇವಣಸಿದ್ಧ, ಲಾಕುಳ ಶೈವರು, ರಾಜಗುರುಗಳಾಗಿದ್ದರೆಂದು ತಿಳಿಯುತ್ತದೆ.

ಕುರುಬರಲ್ಲಿ ಅನೇಕ ಗುರುಮಠಗಳಿವೆ. ಈ ಗುರುಮಠಗಳು ತಮ್ಮದೆ ಆದ ಹಿನ್ನೆಲೆಯನ್ನು ಒಳಗೊಂಡಿವೆ. ರೇವಣಸಿದ್ಧರಿಂದ

ಆರಂಭಗೊಂಡ ಮಠಗಳು ಇಂದಿಗೂ ಅವರ ಹೆಸರಿನಲ್ಲಿ ಅಸ್ತಿತ್ವದಲ್ಲಿವೆ. ಕೆಲವು ಮಠಗಳನ್ನು ಅಮೋಘಸಿದ್ಧ, ರೇವಣಸಿದ್ಧರ ಮಠಗಳೆಂದು ಕರೆಯಲಾಗಿದೆ. ಮಠಗಳ ಮೂಲಕ ಸಮಾಜದವರ ಏಳ್ಗೆ ಸಂಘಟನೆಗೆ ಸಹಾಯಕವಾಗುತ್ತಿರುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಕೊರಡಕೇರಿ, ಕುಕನೂರು, ಬಿಸರಳ್ಳಿ, ಕೊಪ್ಪಳ, ಬಸವಪಟ್ಟಣ ಮೊದಲಾದೆಡೆ ಗುರುಮಠಗಳಿವೆ. ಇತ್ತೀಚೆಗೆ ಪ್ರಾರಂಭಗೊಂಡ ಕನಕಗುರುಪೀಠ ಹಾಗೂ ಅದರ ಶಾಖಾಮಠಗಳು ಜನರಲ್ಲಿ ಒಂದು ರೀತಿಯ ಐಕ್ಯತೆಯನ್ನು ತರಲು ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

ಕುರುಬರ ಆರ್ಥಿಕ ಜೀವನವು ಪ್ರಾಚೀನ ಕಾಲದಿಂದಲೂ ಉನ್ನತ ಹಂತ ತಲುಪಿತ್ತು. ಪಶುಪಾಲನೆ (ಕುರಿಸಾಕಾಣಿಕೆ), ಕೃಷಿ, ಕಂಬಳಿನೇಯ್ಗೆ ಎಂಬ ಮೂರು ರೀತಿಯ ಕಾಯಕಗಳನ್ನು ಕೈಗೊಂಡವರಾಗಿದ್ದಾರೆ. ಕುರುಬರು ಕೆಲವು ವಸ್ತುಗಳನ್ನು ತಾವೇ ಮಾರಾಟ ಮಾಡುವ ವ್ಯವಸ್ಥೆಯನ್ನು ಹೊಂದಿದ್ದರಿಂದ ಉತ್ಪಾದಕ–ವಿನಿಮಯ–ವರ್ತಕರೆಂದು ಗುರುತಿಸಲ್ಪಟ್ಟಿದ್ದಾರೆ. ಅನೇಕ ಸಂಘ ಸಂಸ್ಥೆಗಳನ್ನು ನಿರ್ಮಿಸಿಕೊಂಡಿದ್ದರು. ಅದರಲ್ಲಿ ಪ್ರಮುಖವಾಗಿ ಕುರುಬಸೇಣಿ ಕಂಡುಬರುತ್ತದೆ. ಕುರುಬಸೇಣಿಯ ಮೂಲಕ ಇಡೀ ಮಾರುಕಟ್ಟೆಯನ್ನು ನಿಯಂತ್ರಿಸಬಲ್ಲವರಾಗಿದ್ದರು. ಅನೇಕ ಶಾಸನಗಳು ಇವರ ಸಂಘದ ಬಗ್ಗೆ ಉಲ್ಲೇಖಿಸಿವೆ. ಕೃಷಿ ವ್ಯವಸ್ಥೆಯಲ್ಲಿ ಮಳೆಯಾಧಾರಿತ ಹಾಗೂ ನೀರಾವರಿ ವ್ಯವಸ್ಥೆಯುಳ್ಳ ಜಮೀನುಗಳನ್ನು ಹೊಂದಿದ್ದಾರೆ. ಆದರೆ ಕೆಲವು ಕುರುಬರು ಕೃಷಿಯೊಂದಿಗೆ ಪಶುಪಾಲನೆ, ಕಂಬಳಿ ನೇಯ್ಗೆಯನ್ನು ಮುಂದುವರೆಸಿಕೊಂಡು ಬಂದಿರುವುದು ಕಾಣುತ್ತದೆ. ಅಲ್ಲದೆ ಆಧುನಿಕ ಕಾಲದಲ್ಲಿ ಅನೇಕ ಹೊಸ ರೀತಿಯ ಕೆಲಸಗಳನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಸರ್ಕಾರಿ ಉದ್ಯೋಗಗಳಲ್ಲಿ, ಸರ್ಕಾರೇತರ ಕಾರ್ಖಾನೆಗಳಲ್ಲಿ ದುಡಿಮೆ ಮಾಡುತ್ತಿರುವುದು ಕಂಡುಬರುತ್ತದೆ. ಕೃಷಿ ಕೂಲಿ ಕಾರ್ಮಿಕರಾಗಿ, ಹಮಾಲಿಗಳಾಗಿ, ಸಣ್ಣ–ಪುಟ್ಟ ವ್ಯಾಪಾರಿಗಳಾಗಿ ಕಾರ್ಯ ಮಾಡುತ್ತಿರುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಒಣ ಭೂಮಿ ಬೇಸಾಯ ಅಧಿಕವಾಗಿರುವುದರಿಂದ ಆರ್ಥಿಕ ಸಬಲರಾಗಿಲ್ಲದಿರುವವರ ಸಂಖ್ಯೆ ಅಧಿಕವಾಗಿದೆ. ಇದರಿಂದಾಗಿ ದುಡಿಯಲು ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದು ಕಂಡುಬರುತ್ತದೆ.

ಕುರುಬರು ಪ್ರಾಚೀನ ಕಾಲದಿಂದಲೂ ತಮ್ಮದೇ ಆದ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಕುರುಬರು ಡೊಳ್ಳಿನ ಹಾಡು, ರ್‍ವಾಣಗಳು, ಡೊಳ್ಳಿನ ಕುಣಿತ, ಡೊಳ್ಳಿನಪೆಟ್ಟು ಗೊರವರ ಕುಣಿತ, ಸಾಹಿತ್ಯದ ಮೂಲಕ ಕರ್ನಾಟಕ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಡೊಳ್ಳು ಕುರುಬರಿಗೆ ಮೀಸಲಾದ ವಾದ್ಯವಾಗಿದೆ. ಶಿವನಿಂದಲೇ ಕುರುಬರಿಗೆ ಡೊಳ್ಳು ದೊರೆಯಿತು ಎಂದು ಪೌರಾಣಿಕವಾದ ಕಥೆ ಹೊಂದಿದ್ದಾರೆ. ಇದರಿಂದ ಕುರುಬರಿಗೆ ಡೊಳ್ಳು ಪೂಜ್ಯವಾಗಿದೆ. ಡೊಳ್ಳಿನ ರಚನೆ, ಕುಣಿತ, ಹಾಡುಗಾರಿಕೆ, ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಹೊಂದಿದ್ದಾರೆ.

ಡೊಳ್ಳು ಕುಣಿತ ಕುರುಬರ ಪ್ರಮುಖ ಕಲೆಯಾಗಿದೆ. ಇದರಲ್ಲಿ ಅನೇಕ ಪ್ರಕಾರಗಳಿವೆ. ಅವುಗಳಲ್ಲಿ ಕುಳಿತು ಬಾರಿಸುವುದು, ಲಾಗ ಹಾಕುವುದು, ಮಂಡಿಬಡಿತ, ಮರಗಾಲು ಬಡಿತ, ಲವಳ ಹಾಕುವುದು, ಗಾಡಿ ಚಕ್ರದ ಬಡಿತ ಪ್ರಮುಖವಾಗಿವೆ. ಪ್ರತಿಯೊಂದು ಸಮಾಜದ ಕಾರ್ಯಗಳಿಗೂ ಡೊಳ್ಳನ್ನು ಬಳಸಲಾಗುತ್ತದೆ. ವಿಶಿಷ್ಟವಾದ ಸಭೆ–ಸಮಾರಂಭ, ಹಬ್ಬ–ಜಾತ್ರೆಗಳಂದು ಡೊಳ್ಳಿನ ಕುಣಿತ

ನಡೆಯುತ್ತದೆ. ಕುರುಬರು ಡೊಳ್ಳಿನ ಹಾಡುಗಾರಿಕೆಯಲ್ಲಿ ಪ್ರಸಿದ್ಧಿಗಳಿಸಿದ್ದಾರೆ. ಹಾಡಿನ ಪ್ರಾರಂಭದಲ್ಲಿ "ನಮ್ಮಯ ದೇವರು ಬಂದಾನ ಬನ್ನಿರೇ" ಎಂದು ಹೇಳುತ್ತಾರೆ. ಈ ಹಾಡುಗಳಲ್ಲಿ ಪೌರಾಣಿಕ, ಚರಿತ್ರೆ, ಶಿವಶರಣರ ವಚನಗಳು, ನೀತಿಬೋಧಕ, ಒಗಟಿನ ಹಾಡುಗಳಿರುವುದು ಕಂಡುಬರುತ್ತದೆ. ಪ್ರಾರಂಭದಲ್ಲಿ ಮೌಖಿಕವಾಗಿದ್ದ ಈ ಹಾಡುಗಳು ಇತ್ತೀಚೆಗೆ ರಚನೆಗೆ ಒಳಪಡುತ್ತಿರುವುದು ಕಂಡುಬರುತ್ತದೆ. ಕುರುಬರಲ್ಲದೆ ಇತರೆ ಸಮಾಜದವರೂ ಡೊಳ್ಳಿನ ಹಾಡುಗಳನ್ನು ರಚಿಸುತ್ತಿರುವುದು ವಿಶೇಷ. ಡೊಳ್ಳಿನ ಹಾಡುಗಳಲ್ಲಿ ರ್‍ವಾಣಗಳ ಪಾತ್ರ ಪ್ರಮುಖವಾಗಿದೆ. ಕುರುಬರು ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾಗಿದೆ. ಕಾಳಿದಾಸ, ಕನಕದಾಸ, ವಿಜಯನಗರ ಅರಸ ಕಂಪಣ್ಣನ ಪತ್ನಿ ಗಂಗಾಂಬಿಕೆ, ೧೨ ನೇ ಶತಮಾನದ ಅನೇಕ ಕುರುಬ ಶರಣರು (ಉದಾ :ಗೊಲ್ಲಾಳೇಶ್ವರ) ಮೊದಲಾದವರು ಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಕೊಡುಗೆ ನೀಡಿದ್ದಾರೆ. ಅದಲ್ಲದೆ ಕುರುಬರು ಸ್ವತಃ ಡೊಳ್ಳಿನ ಹಾಡುಗಳನ್ನು ರಚಿಸಿ ಸಾಹಿತ್ಯದ ಪೋಷಣೆ ಮಾಡಿದ್ದಾರೆ. ಡೊಳ್ಳಿನ ಹಾಡುಗಳು ಹೆಚ್ಚಾಗಿ ದೇವರಿಗೆ ಸಂಬಂಧಿಸಿರುತ್ತವೆ. ಪೌರಾಣಿಕ, ಸಾಮಾಜಿಕ, ಚಾರಿತ್ರಿಕ ಮೊದಲಾದ ಹಾಡುಗಳನ್ನು ರಚಿಸುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಜನಪದ, ಸಾಹಿತ್ಯ, ಕಲೆಯನ್ನು ಉಳಿಸಿ ಬೆಳೆಸಿದವರಲ್ಲಿ ಕುರುಬರು ಪ್ರಮುಖರಾಗಿದ್ದಾರೆ. ಭಾರತದ ಅತ್ಯಂತ ಪ್ರಾಚೀನವಾದ ಕುರುಬ ಸಮುದಾಯವು ಕ್ರಿ.ಪೂ. ೧೨೦೦-೨೦೦೦ ವರ್ಷಗಳಷ್ಟು ಹಳೆಯದೆಂಬ ಅಭಿಪ್ರಾಯವಿದೆ. ಅತ್ಯಂತ ಪುರಾತನವಾದ ಪರಂಪರೆಯುಳ್ಳ ಈ ಸಮುದಾಯವು ಇಂದಿಗೂ ತನ್ನ ಹಳೆಯ ಪರಂಪರೆ, ಸಂಸ್ಕೃತಿಯನ್ನು ಉಳಿಸಿ-ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ. ಆಧುನಿಕ ಕಾಲದ ನಾಟಕ, ಚಲನಚಿತ್ರ ಮೊದಲಾದ ದೃಶ್ಯ ಮಾಧ್ಯಮಗಳಿಂದಾಗಿ ಡೊಳ್ಳಿನ ಹಾಡುಗಾರಿಕೆ, ಕುಣಿತ ತನ್ನ ಆಕರ್ಷಣೆಯನ್ನು ಕಳೆದುಕೊಂಡಿದೆ. ಡೊಳ್ಳಿನ ತಯಾರಿಕೆ, ಹಾಡುಗಾರಿಕೆಯಲ್ಲಿ ಬದಲಾವಣೆಗಳಾಗಿವೆ. ಹೀಗಾಗಿ ತನ್ನ ಮೂಲ ಸ್ವರೂಪವನ್ನು ಸ್ವಲ್ಪಮಟ್ಟಿಗಾದರೂ ಕಳೆದುಕೊಂಡಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

ಕುರುಬರು ಇಂದಿನ ಆಧುನಿಕ ಯುಗದಲ್ಲಿ ಸಾಕಷ್ಟು ಪರಿವರ್ತನೆಗೊಳಗಾಗಿದ್ದಾರೆ. ಅವರು ತಮ್ಮ ಸಂಪ್ರದಾಯ, ಲೋಕಾರೂಢಿಗಳಲ್ಲಿ ಸಡಿಲತೆಯನ್ನು ಹೊಂದಿದ್ದಾರೆ. ರಾಜಕೀಯವಾಗಿ ಇಂದು ಬೆಳವಣಿಗೆ ಹೊಂದಿದ್ದರೂ, ಜನಸಂಖ್ಯೆಯ ಆಧಾರದ ಮೇಲೆ ನೋಡಿದಾಗ ಕಡಿಮೆ ಎನಿಸುತ್ತದೆ. ಶಿಕ್ಷಣದ ಗುಣಮಟ್ಟ ಸುಧಾರಿಸಬೇಕಿದೆ. ಶಿಕ್ಷಣದೆಡೆಗೆ ಒಲವು ಕಡಿಮೆಯಿದೆ. ಕೃಷಿ, ಕುರಿಸಾಕಾಣಿಕೆಗೆ ಪ್ರಮುಖ ಸ್ಥಾನ ನೀಡಿದ್ದಾರೆ. ಅಲೆಮಾರಿಗಳಾಗಿ ಇಂದಿಗೂ ಅನೇಕ ಪ್ರದೇಶಗಳಿಗೆ ಕುರಿಗಳ ಹಿಂದೆ ಅಲೆಯುವುದರಿಂದಾಗಿ ಶಿಕ್ಷಣ ಹಾಗೂ ಸರ್ಕಾರದ ಕೆಲವು ಸವಲತ್ತುಗಳಿಂದ ವಂಚಿತರಾಗಿರುವುದು ಕಂಡುಬರುತ್ತದೆ.

ಬೀದರ, ಮೈಸೂರು ಭಾಗದ ಕುರುಬರಿಗೆ ದೊರೆತ ಪರಿಶಿಷ್ಟ ಪಂಗಡದ ಸೌಲಭ್ಯ ಕೊಪ್ಪಳ ಭಾಗದ ಕುರುಬರಿಗೆ ದೊರೆತರೆ ಅವರ ಶಿಕ್ಷಣ, ಆರ್ಥಿಕ ಸ್ಥಿತಿ ಅಭಿವೃದ್ಧಿ ಹೊಂದಲು ಸಹಾಯಕವಾಗುತ್ತದೆ. ಕುರಿ ಸಾಕಾಣಿಕೆದಾರರಿಗೆ ಕುರಿ ಮೇಯಿಸಲು ಪ್ರದೇಶದ ಅವಕಾಶ ಕಲ್ಪಿಸಿಕೊಡಬೇಕು, ಕುರಿಗಳು ಸಂರಕ್ಷಣೆಗಾಗಿ ವಿಶೇಷ ಸೌಲಭ್ಯಗಳನ್ನು ಒದಗಿಸಬೇಕು. ಕುರಿಗಾರರಿಗೆ ಬಂದೂಕು ಹೊಂದಲು ಅನುಮತಿ ನೀಡಬೇಕು. ವಲಸೆ ಹೋಗುವ ಕುರಿಗಾರರು ನೆಲೆಸುವ ಪ್ರದೇಶಗಳಲ್ಲಿ ಅವರ ಮಕ್ಕಳಿಗೆ ಶಿಕ್ಷಣ, ಇನ್ನಿತರ ಸೌಲಭ್ಯಗಳನ್ನು ಒದಗಿಸಿಕೊಡಬೇಕು. ಕಂಬಳಿ ನೇಯ್ಗೆಗೆ ವಿಶೇಷ ಸಾಲಸೌಲಭ್ಯಗಳನ್ನು ಸರಕಾರ ಕಲ್ಪಿಸಿಕೊಡಬೇಕು.

ಒಟ್ಟಾರೆ ಪ್ರಾಚೀನ ಭಾರತದ ಮೂಲ ನಿವಾಸಿಗಳ ಪೈಕಿ ಕುರುಬ ಸಮುದಾಯ ಭವ್ಯವಾದ ಪರಂಪರೆ ಹೊಂದಿರುವುದಲ್ಲದೇ, ತನ್ನದೇ ಆದ ಸಂಸ್ಕೃತಿ, ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

## ಅನುಬಂಧ

೧. ಗ್ರಂಥಋಣ

೨. ವಕ್ತೃಗಳು

೩. ಛಾಯಾ ಚಿತ್ರಗಳು

## ೧. ಗ್ರಂಥಋಣ


೧. ಎಂ.ಬಿ. ನೇಗಿನಹಾಳ, ೧೯೯೯, **ನೇಗಿನಹಾಳ ಪ್ರಬಂಧಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಬಿ.ವಿ. ವೀರಭದ್ರಪ್ಪ, ೨೦೦೩, **ವೇದಗಳಲ್ಲಿ ಜನಸಾಮಾನ್ಯರು**, ನವಕರ್ನಾಟಕ ಪ್ರಕಾಶನ, ಬೆಂಗಳೂರು

೩. ಡಾ.ಎಂ.ಬಿ.ಕೊಟ್ರಶೆಟ್ಟಿ, ೧೯೯೪, **ಜಾನಪದ ಸಾಹಿತ್ಯದರ್ಶನ ಭಾಗ-೧೩**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪. ಅಕ್ಕಮಹಾದೇವಿ, ೧೯೮೪, **ಟುಡಕಟ್ಟು ನ್ಯಾಯ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೫. ಬೋನಾ ಬಸವರಾಜ, ೧೯೯೮, **ಶ್ರೀ ಎಲ್ಲಾಲಿಂಗೇಶ್ವರ ಪುರಾಣ**, ಶ್ರೀ.ಮ.ನಿ.ಪ್ರ. ಸಿದ್ಧರಾಮೇಶ್ವರ ಶಿವಯೋಗಿಗಳು, ಮುಗಳಖೋಡಾ, ಜಿಡಗಾ

೬. ಹೆಚ್.ಖಂಡೋಬರಾವ್, ೨೦೦೨, **ನಾಣ್ಯ ಕರ್ನಾಟಕ**, ಮಗರ ಪಬ್ಲಿಕೇಷನ್ಸ್, ಶಿವಮೊಗ್ಗ

೭. ವಾಸುದೇವ ಬಡಿಗೇರ, ೨೦೦೧, **ಕರ್ನಾಟಕ ದೇವಾಲಯ ಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೮. ಡಾ.ಬಿ.ವ್ಹಿ.ಶಿರೂರ, ೨೦೦೦, **ಸಿದ್ಧಶ್ರೀ**, ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಾ

೯. ಬೋನಾಬಸವರಾಜ, ೨೦೦೦, **ಹಾಲುಮತದ ಹುಟ್ಟು** , ವಿದ್ಯಾನಿಧಿ ಪ್ರಕಾಶನ, ಗದಗ

೧೦. ಎಂ. ಕರಿಯಪ್ಪ, ೨೦೦೩, **ಹಾಲತೊರೆ**, ನಗರ ಕುರುಬರ ಸಂಘ, ದಾವಣಗೆರೆ

೧೧. ಪ್ರೊ. ಒಡೆಯರ.ಡಿ.ಹೆಗ್ಗಡೆ, ೨೦೦೩, **ಕರ್ನಾಟಕದ ಕುರುಬ ಜನಾಂಗ**, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು

೧೨. ಕಾ.ತ.ಚಿಕ್ಕಣ್ಣ, ೨೦೦೨, **ಕಾಗಿನೆಲೆ**, ದಶಮಾನೋತ್ಸವ ರಥೋತ್ಸವ ಸಮಿತಿ ಕಾಗಿನೆಲೆ, ಹಾವೇರಿ

೧೩. ಡಾ.ವೀರಣ್ಣ ದಂಡೆ, ೧೯೯೮, **ಹಾಲುಮತ ಪುರಾಣ**, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೧೪. ದೊಡ್ಡಣ್ಣ ಗದ್ದನಕೇರಿ, ೨೦೦೩, **ಬೀರದೇವರ ಸಂಪ್ರದಾಯ ಮತ್ತು ಆಚರಣೆಗಳು**, ಕಮಲ ಪ್ರಕಾಶನ, ಚಿತ್ತವಾಡಿಗಿ, ಹುನಗುಂದ

೧೫. ವೀರಶೆಟ್ಟಬಾವುಗೆ, ೧೯೯೦, **ಶರಣರು ಮತ್ತು ದಾಸೋಹ**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೬. ಟಿ.ಎಸ್.ನಾಗರತ್ನ, ೨೦೦೦, **ಕನಕದಾಸ**, ಸಾಹಿತ್ಯ ಅಕಾಡೆಮಿ, ನವದೆಹಲಿ

೧೭. ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೯, **ಗಾದರಿಪಾಲನಾಯಕ**, ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, ೧೯೮೮, **ಜಾನಪದ ಸಾಹಿತ್ಯದರ್ಶನ, ಭಾಗ-೯**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯. ಪ್ರೋ. ಒಡೆಯರ ಡಿ. ಹೆಗ್ಗಡೆ, ೨೦೦೩, **ಹಕ್ಕ ಬುಕ್ಕ**, ತನುಮನ ಪ್ರಕಾಶನ, ಮೈಸೂರು

೨೦. ವೀರಣ್ಣ ಶಾಸ್ತ್ರಿಮೇಟಿ, ೨೦೦೧, **ಕಣಗಿನಹಾಳ ಪರಮಪೂಜ್ಯ ಶ್ರೀ ಮಲ್ಲಪ್ರಜ್ಜನವರ ಜೀವನ ಚರಿತ್ರಾಮೃತ**, ಶ್ರೀ ಧರ್ಮ ಪ್ರಕಾಶನ, ಕಣಗಿನಹಾಳ, ಗದಗ

೨೧. ಜೀ.ಎಸ್.ಮಾಮನಿ, ೧೯೮೯, **ಸಜ್ಜಲಗುಡ್ಡದ ಶರಣಮ್ಮನವರು**, ಸಜ್ಜಲಶ್ರೀ ಪ್ರಕಾಶನ, ಸಜ್ಜಲಗುಡ್ಡ

೨೨. ಶ್ರೀ ದೂಳೇಂದ್ರ ಅರಗಂಬಿ, ೨೦೦೨, **ಸಂಗೊಳ್ಳಿ ರಾಯಣ್ಣ**, ಪಾರು ಪ್ರಕಾಶನ, ಗದಗ

೨೩. ಶರಣಬಸವರಾಜ ಬಿಸರಳ್ಳಿ, ೧೯೮೫, **ಶಿವಶರಣ ಸಿದ್ಧಪ್ಪನವರು**, ಶ್ರೀ ಗವಿಸಿದ್ಧೇಶ್ವರ ಮುದ್ರಣಾಲಯ, ಕೊಪ್ಪಳ

೨೪. ಪ್ರೋ. ಲಕ್ಷಣ್ ತೆಲಗಾವಿ (ಸಂ), ೨೦೦೩, **ಸ್ಥಳೀಯ ಚರಿತ್ರೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ಡಾ.ಬಿ.ಪಿ. ಪಾಟೀಲ, ೧೯೯೯, **ಗ್ರಾಮದೇವತೆಗಳು**, ಪ್ರಕಾಶನ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೬. ಎಸ.ರಾಮಚಂದ್ರರಾವ್, ೧೯೪೯, **ಕಾಳಿದಾಸನ ಕಾವ್ಯಗಳು**, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೭. ಪ್ರೊ. ಎಚ್.ವಿ.ನಾಗೇಶ, ೨೦೦೩, **ಕರ್ನಾಟಕ ಬುಡಕಟ್ಟುಗಳಲ್ಲಿ ನ್ಯಾಯತೀರ್ಮಾನ**, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೮. ಎನ್.ಆರ್.ನಾಯಕ, ೧೯೮೯, **ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೯. ಎಸ್.ಎಸ್.ಹಿರೇಮಠ, ೧೯೯೯, **ಕನ್ನಡ ಜನಪದ ಗುರು ಪರಂಪರೆ**, ಪ್ರಸಾರಂಗ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ

೩೦. ಡಾ.ಅರ್ಜುನ ಗೋಳಸಂಗಿ, ೧೯೯೮, **ಡೊಳ್ಳಿನ ಪದಗಳು**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೩೧. ದೇ.ಜ.ಗೌ,೨೦೦೩, **ಕನಕದರ್ಶನ**, ತನುಮನ ಪ್ರಕಾಶನ ಮೈಸೂರು

೩೨. ಸಿದ್ಧಣ್ಣ ಎಸ್.ಜಕಬಾಳ,(ಸಂ), ೧೯೯೨, **ದಾಸಶ್ರೇಷ್ಠ ಕನಕದಾಸರ ಹಾಡುಗಳು**, ಅಮರಸಿಂಧು ಪ್ರಕಾಶನ, ಗದಗ

೩೩. ದೇವೇಂದ್ರಪ್ಪ ರಾಯಪ್ಪ ಪೂಜಾರಿ, ೧೯೯೧, **ಶ್ರೀ ಕರಿಯಪ್ಪ ತಾತನವರ ಜೀವನ ಚರಿತ್ರೆ**, ಬಾಂಡಗೆ ಪ್ರೆಸ್, ಗದಗ

೩೪. ಕೆ.ವಿರುಪಾಕ್ಷಗೌಡ, (ಸಂ) ೧೯೮೧, ನಡಿಯಪ್ಪ ನಮ್ಮ ನಾಡಿಗೆ **(ಡೊಳ್ಳಿನ ಪದಗಳು)**, ಯುವಕರ ಸಂಘ, ರಾಮನಗರ, ಹಗರಿಬೊಮ್ಮನಹಳ್ಳಿ

೩೫. ಮಲ್ಲೇಪುರಂ ಜಿ. ವೆಂಕಟೇಶ, (ಸಂ), ೧೯೯೯, **ಶಂಬಾಕೃತಿ ಸಂಪುಟ–೧**, ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩೬ ಪ್ರೊ. ಬಿ. ಷೇಕ ಅಲಿ, ೨೦೦೧, **ದಕ್ಷಿಣ ಭಾರತದ ಇತಿಹಾಸ**, ಚೇತನ ಬುಕ್ ಹೌಸ, ಮೈಸೂರು

೩೭. ಆರ್.ಸಿ.ಮಜುಂದಾರ್, ೧೯೯೮, **ಸಾಮ್ರಾಜ್ಯ ಏಕತಾಯುಗ ಭಾಗ-೧**, ಭಾರತೀಯ ವಿದ್ಯಾಭವನ, ಬೆಂಗಳೂರು

೩೮. ಪ್ರೊ.ಜಿ.ಆರ್.ರಂಗಸ್ವಾಮಯ್ಯ, ೨೦೦೧, **ಕರ್ನಾಟಕ ಸಂಕ್ಷಿಪ್ತ ಚರಿತ್ರೆ**, ಚೇತನ ಬುಕ್ ಹೌಸ್, ಮೈಸೂರು

೩೯. ಡಾ. ವಸು.ಎಂ. (ಸಂ), ೨೦೦೧, **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**, ಪ್ರಸಾರಂಗ ಕ ' ನ ' ್ನ ಡ ' ವಿಶ್ವವಿದ್ಯಾಲಯ, ಹಂಪಿ

೪೦. ಶ್ರೀ ಕೆ. ಸಂಪಂಗಿರಿರಾವ್, (ಸಂ), ೧೯೭೦, **ಕರ್ನಾಟಕ ಪರಂಪರೆ**, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರ್ಕಾರ, ಬೆಂಗಳೂರು

೪೧. ಚಂದ್ರಕಾಂತ ಬಿಜ್ಜರಗಿ, ೨೦೦೬, **ಕುರುಬರ ಹೆಜ್ಜೆಗಳು ಒಂದು ಅಧ್ಯಯನ**, ಶೈಲಚಂದ್ರ ಪ್ರಕಾಶನ ವಿಜಾಪುರ

೪೨. ಕೆ.ಎಸ್.ಶಿವಣ್ಣ (ಸಂ), ೧೯೯೪, **ಕೆಳಲೆ ಮನೆತನದ ವೀರಶೈವ ದಳವಾಯಿಗಳು**, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೪೩. ಡಾ. ಚೆನ್ನಕ್ಕ ಎಲಿಗಾರ, (ಸಂ), ೧೯೯೦, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೪. ಚನ್ನಬಸಪ್ಪ ಎಸ್. ಪಾಟೀಲ್, (ಸಂ), ೧೯೯೬, **ವಿಜಯನಗರದ (ಹಂಪೆಯ) ಶಾಸನಗಳು**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೪೫. ಡಾ. ದೇವರಕೊಂಡಾರೆಡ್ಡಿ, (ಸಂ)-೧೯೯೮, **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೧, (ಬಳ್ಳಾರಿ ಜಿಲ್ಲೆ)**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ಬಿ.ಸಿ. ಪಾಟೀಲ್, ೧೯೯೮, **ಕೊಪ್ಪಳ: ಸಾಂಸ್ಕೃತಿಕ ಪರಂಪರೆ**, ಹರಿಹರ ಪ್ರಕಾಶನ, ಕೊಪ್ಪಳ

೪೭. ಕಲ್ಬುರ್ಗಿ ಎಂ.ಎಂ., (ಸಂ) ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೮. ಶೇಷಶಾಸ್ತ್ರಿ, ೧೯೮೨, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೯ ವೈಜನಾಥ ಭಂಡೆ, ೧೯೯೦, **ಬೀದರ ಜಿಲ್ಲೆಯ ಸ್ಥಳನಾಮಗಳು**, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೫೦ ಹೆಬ್ಬಾಳ ಜಗನ್ನಾಥ, ೧೯೯೬, **ಹೈದರಾಬಾದ್ ಕರ್ನಾಟಕ ಜಾತ್ರೆಗಳು**, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೫೧ ಈರಣ್ಣ ನಾರಾಯಣ, ೨೦೦೨, **ಕರ್ನಾಟಕದ ಕೊರವರು : ಒಂದು ಜಾನಪದೀಯ ಅಧ್ಯಯನ**, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೫೨ ಎಸ್.ಪಿ.ಬೀದಗೊಂಡ, ೧೯೯೦, **ಬಿಜಾಪುರ ಜಿಲ್ಲೆಯ ಗೌಡ ಮನೆತನಗಳು: ಒಂದು ಸಾಂಸ್ಕೃತಿಕ ಅಧ್ಯಯನ**, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೫೩ ಎಚ್.ಟಿ.ಪೋತೆ-೧೯೯೩, **ಹೈದರಾಬಾದ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು**, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೪ ಬಂಡಯ್ಯಸ್ವಾಮಿ, ೨೦೦೨, **ಬೀದರ ಜಿಲ್ಲೆಯ ಜಂಗಮರು** : ಒಂದು ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫ ಸಿ.ಟಿ.ಗುರುಪ್ರಸಾದ್,-೨೦೦೨, ನೀಲಗಾರರು : **ಒಂದು ಧಾರ್ಮಿಕ ಸಮುದಾಯದ ಅಧ್ಯಯನ**, ಪ್ರ : ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೬ ನಾಗೇಂದ್ರಪ್ಪ ಪೂಜಾರಿ, ೨೦೦೪, **ಜನಪದ ಹಾಲುಮತ ಮಹಾಕಾವ್ಯದಲ್ಲಿ ಉಲ್ಲೇಖಿತ ಸ್ಥಳಗಳ ಪರಿವೀಕ್ಷಣೆ**, ಕನ್ನಡ ಅಧ್ಯಯನ ಸಂಸ್ಥೆ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೭ ವೈ.ಕೆ. ಗುಂಡಕರ್ಜಗಿ, ೨೦೦೨, **ಹಂಡೆಕುರುಬರು** : ಒಂದು **ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೮ Basavarajppa-1983, **Backward Class and Caste Movement in Karnataka with special reference to Kurubas,** Anthroupologi Department Karnataka University, Dharwad

**ಆಂಗ್ಲ ಆಧಾರ ಗ್ರಂಥಗಳು**

೧. Iyer L.K.A, 1988, **The Mysore Tribes and Castes Vol-2,** Mittal Publication Delhi.

೨. Hasan Syed Sirajul, 1989, **The Caste and Tribes of H.E.H, The Nizamas Dominions.**

೩. V.D.Mahajan, 1991, **History of Medival India,** S.Chand Company Ltd. New Delhi.

೪. Singh K.S, 1994, **The Scheduled Tribes,** Oxford Press, Madras.

೫. Basavaraj K.R, 1978, **The Vijayanagar Urbanity,** N.S.U.P, Hospet.

೬. Edigar Turstion & Rangachari, 1987, **Castes and Tribes of Southern India,** Asion Educational Services,New Delhi, Madras.

೭. Srinivas Rithi, 1973, **The Seunas,** Karnataka University Dharwad.

**ಗೆಝೆಟಿಯರ್, ಡಿಕ್ಷನರಿ, ವಿಶ್ವಕೋಶ**

೧. B L Rice, 1897, **Mysore Gagetteer Vol II,** B.R.Publishing Delhi

೨. **Raichur District Gagetteer Karnataka State Gagetter,** Bangalore - 1970

೩. Suryanath Kamat, 1982, **Karnataka State Gagetteer Part I,** Government of Karnataka Bangalore.

೪. Hayavadana Rao, 1984, **Mysore Gagetteer Vol I,II,III,** B.R.Publishing Delhi

೫. Rev F.Kittel, 1991, **Kannada-English Dictionary,** Asian Educational Services, Madras.

೬. ಹಾ.ಮಾ.ನಾಯಕ, ೧೯೭೯, **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೭. ಹಿ.ಚಿ.ಬೋರಲಿಂಗಯ್ಯ, ೧೯೯೭, **ಕರ್ನಾಟಕ ಜನಪದ ಕಲೆಗಳ ಕೋಶ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪತ್ರಿಕೆಗಳು**

೧. **ಕನಕ ಪತ್ರಿಕೆ,** ಮಾಸಪತ್ರಿಕೆ ಸಂ: ಎನ್.ಬಿ. ತೋಂಟಾಪುರ, ಬೆಂಗಳೂರು. ಫ್ರೆ–೨೦೦೪

೨. **ಕನಕರಶ್ಮಿ,** ತ್ರೈಮಾಸಿಕ ಪತ್ರಿಕೆ, ಸಂ: ಎಸ್.ಬಿ. ಬಿಚಗತ್ತಿ, ಹುಬ್ಬಳ್ಳಿ. ೨೦೦೬

೩. **ಕುರುಬರ ವಿಜಯ,** ಮಾಸಪತ್ರಿಕೆ, ಸಂ: ಲಕ್ಷ್ಮಿಕಾಂತ ತೋಂಟಾಪುರ, ಬೆಂಗಳೂರು. ೨೦೦೪

೪. **ರಾಯಚೂರ ವಾಣಿ,** ದಿನಪತ್ರಿಕೆ, ಸಂ: ಎನ್.ಕೆ.ಕುಲಕರ್ಣಿ, ರಾಯಚೂರು. ಫ್ರೇ.೨೦೦೪

೫. **ಕನಕ ಸಂದೇಶ,** ಮಾಸಪತ್ರಿಕೆ, ಸಂ: ಎನ್.ಸ್ವಾಮಿ, ಬೆಂಗಳೂರು. ೨೦೦೪

೬. **ಜನಪದ,** ಮಾಸಪತ್ರಿಕೆ, ಸಂ: ಬಿ.ಎನ್.ಎಸ್.ರೆಡ್ಡಿ, ಬೆಂಗಳೂರು. ೨೦೦೩

೭. **ಕನಕ ಸ್ಪೂರ್ತಿ,** ಮಾಸಪತ್ರಿಕೆ, ಸಂ: ಕವಿಪ್ರಿಯ, ಹುಬ್ಬಳ್ಳಿ. ೨೦೦೪

೮. ಇಬ್ಬನಿಹನಿ, ವಾರಪತ್ರಿಕೆ, ಸಂ: ಪಿ.ಓ.ಪಾಂಡುರಂಗ, ಕೊಪ್ಪಳ. ೨೦೦೩

## ೨ ವಕ್ತೃಗಳು

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|---|
| ೧. | ಶರಣಪ್ಪ ಕಂಬಳಿ | ೩೮ | ಕುರುಬ | ಕೃಷಿ | ಬಿನ್ನಾಳ | ಯಲಬುರ್ಗಾ | ಕೊಪ್ಪಳ |
| ೨. | ಮುಂಡನಗೌಡ ಪಾಟೀಲ | ೪೦ | ಕುರುಬ | ಕೃಷಿ | ಕೊರಡಕೇರಿ | ಕುಷ್ಟಗಿ | ಕೊಪ್ಪಳ |
| ೩. | ಕಳಕಪ್ಪ ಬೆಟಗೇರಿ | ೪೩ | ಕುರುಬ | ಕೃಷಿ | ಕರಮುಡಿ | ಯಲಬುರ್ಗಾ | ಕೊಪ್ಪಳ |
| ೪. | ಹನುಮಂತಪ್ಪ ಗಿಡ್ಡಿ | ೩೮ | ಕುರುಬ | ಶಿಕ್ಷಕರು | ರಾಮದುರ್ಗ | ಗಂಗಾವತಿ | ಕೊಪ್ಪಳ |
| ೫. | ನಿಂಗರಾಜ.ಬಿ.ಬಿಚಗತ್ತಿ | ೪೬ | ಕುರುಬ | ಗ್ರಂಥಪಾಲಕರು | ರಾಮಗೇರಿ | ಶಿರಹಟ್ಟಿ | ಗದಗ |
| ೬. | ಯಮನಪ್ಪ ಗುರಿಕಾರ | ೪೫ | ಕುರುಬ | ಕೃಷಿ | ಹುಲಿಹೈದರ್ | ಗಂಗಾವತಿ | ಕೊಪ್ಪಳ |
| ೭. | ಸಣ್ಣ ದುರುಗಪ್ಪ ವಡಗೇರಿ | ೩೦ | ಕುರುಬ | ಕೃಷಿ | ಕುಷ್ಟಗಿ | ಕುಷ್ಟಗಿ | ಕೊಪ್ಪಳ |
| ೮. | ಕೆಂಪಯ್ಯ ಗುರುವಿನ್ | ೬೦ | ಕುರುಬ | ಕೃಷಿ | ಬಿಸರಳ್ಳಿ | ಕೊಪ್ಪಳ | ಕೊಪ್ಪಳ |
| ೯. | ಪಂಚಯ್ಯಸ್ವಾಮಿ ಕೆಂಡದಮಠ | ೪೨ | ಕುರುಬ | ಗುರುಗಳು | ಕೊಪ್ಪಳ | ಕೊಪ್ಪಳ | ಕೊಪ್ಪಳ |
| ೧೦. | ವಿರುಪಾಕ್ಷಯ್ಯ ಗುರುವಿನ್ | ೩೫ | ಕುರುಬ | ಗುರುಗಳು | ಕುಕನೂರು | ಯಲಬುರ್ಗಾ | ಕೊಪ್ಪಳ |

| | | | | | | | |
|---|---|---|---|---|---|---|---|
| ೧೧. | ಫಕೀರಪ್ಪ ಬುಕನೆಟ್ಟರ್ | ೪೫ | ಕುರುಬ | ಕೃಷಿ | ಕುರುಕುಂದ | ಸಿಂಧನೂರು | [illegible] |
| ೧೨. | ಚನ್ನಬಸಪ್ಪ ಕೊಟಬಾಗಿ | ३೮ | ಕುರುಬ | ಕೂಲಿ | ಮನಸೂರ | ಧಾರವಾಡ | ಧಾರವಾಡ |
| ೧೩. | ಮಲ್ಲಿಕಾರ್ಜುನ ಬಿಂಗಿ | ೫೨ | ಕುರುಬ | ಶಿಕ್ಷಕರು | ಬೂದಿಹಾಳ | ರೋಣ | ಗದಗ |
| ೧೪. | ಹುಚ್ಚೀರಪ್ಪ ಕುರಿ | ೪೫ | ಕುರುಬ | ವೈದ್ಯರು | ಅರಕೇರಿ | ಯಲಬುರ್ಗ | ಕೊಪ್ಪಳ |
| ೧೫. | ಡಾ. ಎಸ್.ಎಸ್.ಜಕಬಾಳ | ೪೮ | ಕುರುಬ | ಪ್ರಾಂಶುಪಾಲರು | ಗದಗ | ಗದಗ | ಗದಗ |
| ೧೬. | ರಾಮಣ್ಣ ದಿಬ್ಬದ ಮನಿ | ೪೨ | ಕುರುಬ | ಕೃಷಿ | ಹಿರೇಸಿಂದೋಗಿ | ಕೊಪ್ಪಳ | ಕೊಪ್ಪಳ |
| ೧೭. | ಶಿವನಗೌಡ ತಗ್ಗಿ | ೫೫ | ಕುರುಬ | ನಿವೃತ್ತ ಸೈನಿಕ | ಒಡ್ಡರಹಟ್ಟಿ | ಗಂಗಾವತಿ | ಕೊಪ್ಪಳ |
| ೧೮. | ಸೋಮಪ್ಪ ಕುರುಬರ್ | ೪೫ | ಕುರುಬ | ಕೃಷಿ | ಚಳಗೇರಿ | ಕುಷ್ಟಗಿ | ಕೊಪ್ಪಳ |
| ೧೯. | ಕೆ.ನಿಂಗಪ್ಪ | ೬೬ | ಕುರುಬ | ನೇಕಾರಿಕೆ | ಕಿನ್ನಾಳ | ಕೊಪ್ಪಳ | ಕೊಪ್ಪಳ |
| ೨೦. | ದೊಡ್ಡಪ್ಪ ಕಟ್ಟಿಮನಿ | ೭೮ | ಕುರುಬ | ಕೃಷಿ | ಚಳಗೇರಿ | ಕುಷ್ಟಗಿ | ಕೊಪ್ಪಳ |
| ೨೧. | ಶೇಖರಪ್ಪ ದೊಡ್ಡಮನಿ | ೫೦ | ಕುರುಬ | ಕೃಷಿ | ತಿಗರಿ | ಕೊಪ್ಪಳ | ಕೊಪ್ಪಳ |
| ೨೨. | ಬಸಪ್ಪ ಅಳಳ್ಳಿ | ೫೦ | ಕುರುಬ | ಕೃಷಿ | ಹಿರೇಮನ್ನಾಪುರ | ಕುಷ್ಟಗಿ | ಕೊಪ್ಪಳ |

| | | | | | | | |
|---|---|---|---|---|---|---|---|
| ೧೩. | ವೀರಪ್ಪ ಪೂಜಾರಿ | ೫೦ | ಕುರುಬ | ಪೂಜಾರಿಗಳು | ಗುಮಗೇರಿ | ಕುಷ್ಟಗಿ | ಕೊಪ್ಪಳ |
| ೧೪. | ಸಿದ್ದಪ್ಪ ವಗ್ಗರ್ | ೫೮ | ಕುರುಬ | ಕೃಷಿ | ಗೋನಾಳ | ಬಸವನಬಾಗೇವಾಡಿ | ಬಿಜಾಪುರ |
| ೧೫. | ವಿ.ಸಣ್ಣಪ್ಪ | ೫೦ | ಕುರುಬ | ಕೃಷಿ | ಬಸಾಪಟ್ಟಣ | ಗಂಗಾವತಿ | ಕೊಪ್ಪಳ |
| ೧೬. | ಮರೇಗೌಡರು | ೫೪ | ಕುರುಬ | ಕೃಷಿ | ಹೂವಿನಾಳ | ಕೊಪ್ಪಳ | ಕೊಪ್ಪಳ |
| ೧೭. | ಕನಕನಗೌಡ ಪೋಲಿಸ್ ಪಾಟೀಲ್ | ೫೫ | ಕುರುಬ | ಕೃಷಿ | ಬಿಳೇಬಾವಿ | ಕೊಪ್ಪಳ | ಕೊಪ್ಪಳ |
| ೧೮. | ಶಂಕರ ಗೌಡರು | ೪೦ | ಕುರುಬ | ಕೃಷಿ | ದಮ್ಮೂರು | ಯಲಬುರ್ಗಾ | ಕೊಪ್ಪಳ |
| ೧೯. | ರಾಮಚಂದ್ರಗೌಡ ಪೊ.ಪಾಟೀಲ್ | ೪೮ | ಕುರುಬ | ಕೃಷಿ | ಇಂದರಗಿ | ಕೊಪ್ಪಳ | ಕೊಪ್ಪಳ |
| ೨೦. | ರಾಮಪ್ಪ ಮುಸ್ಟೂರ್ | ೭೫ | ಕುರುಬ | ಕೃಷಿ | ಚನ್ನಳಿ | ಸಿಂಧನೂರು | ರಾಯಚೂರು |
| ೨೧. | ವಾಯುಪುತ್ರಪ್ಪ ಸಂಕನೂರು | ೫೦ | ಕುರುಬ | ಕೃಷಿ | ಸಂಕನೂರು | ಯಲಬುರ್ಗಾ | ಕೊಪ್ಪಳ |
| ೨೨. | ಹನುಮಗೌಡ ಪೊ.ಪಾಟೀಲ್ | ೨೧ | ಕುರುಬ | ದಳಪತಿ | ಕುದುರೆಮೋತಿ | ಯಲಬುರ್ಗಾ | ಕೊಪ್ಪಳ |
| ೨೩. | ಬಾಳಪ್ಪ ಹರಬರ್ | ೬೦ | ಕುರುಬ | ಕೃಷಿ | ಮುರಡಿ | ಯಲಬುರ್ಗಾ | ಕೊಪ್ಪಳ |
| ೨೪. | ವೀರಯ್ಯ ಅಮೋಘಿಮಠ | ೭೦ | ಕುರುಬ | ಕೃಷಿ | ಸೋಂಪುರ | ಯಲಬುರ್ಗಾ | ಕೊಪ್ಪಳ |

| | | | | | | | |
|---|---|---|---|---|---|---|---|
| ೩೫. | ಸಿದ್ದಪ್ಪ ಪೂಜಾರ | ೬೫ | ಕುರುಬ | ಕೃಷಿ | ವಣಿಗೇರಿ | ಕುಷ್ಟಗಿ | ಕೊಪ್ಪಳ |
| ೩೬. | ಗುಂಡಪ್ಪ ತಳಕಲ್ | ೩೮ | ಕುರುಬ | ಕೃಷಿ | ಯಡಿಯಾಪುರ | ಯಲಬುರ್ಗಾ | ಕೊಪ್ಪಳ |
| ೩೭. | ಹನುಮಂತಪ್ಪ ಹಗೆದಾಳ | ೪೦ | ಕುರುಬ | ಕೃಷಿ | ತಕ್ಕಳಿಕಿ | ಕುಷ್ಟಗಿ | ಕೊಪ್ಪಳ |
| ೩೮. | ಸಕ್ರಪ್ಪ ಬಂಗಿ | ೫೩ | ಕುರುಬ | ಕೃಷಿ | ಹನುಮಸಾಗರ | ಕುಷ್ಟಗಿ | ಕೊಪ್ಪಳ |
| ೩೯. | ಎನ್.ಬಿ.ತೋಂಟಾಪುರ | ೬೯ | ಕುರುಬ | ಸಾಹಿತಿಗಳು | ಕುಷ್ಟಗಿ | ಕುಷ್ಟಗಿ | ಕೊಪ್ಪಳ |
| ೪೦. | ವೈ.ಎನ್.ಗೌಡರು | ೪೨ | ಕುರುಬ | ರಾಜಕೀಯ | ಶಿರೋಳ | ಮುಂಡರಗಿ | ಗದಗ |
| ೪೧. | ಷಣ್ಮುಖಪ್ಪ ಬೂತಣ್ಣನವರ್ | ೫೧ | ಕುರುಬ | ನಾಟಿವೈದ್ಯರು | ಚಿಕ್ಕಸಿಂದೋಗಿ | ಕೊಪ್ಪಳ | ಕೊಪ್ಪಳ |
| ೪೨. | ಹನುಮವ್ವ ಮಡ್ಡೇರ್ | ೭೦ | ಕುರುಬ | ಕೃಷಿ | ಬೇವಿನಳ್ಳಿ | ಕೊಪ್ಪಳ | ಕೊಪ್ಪಳ |
| ೪೩. | ದೇವೇಂದ್ರಗೌಡ ಮಾ.ಪಾಟೀಲ್ | ೬೩ | ಕುರುಬ | ಕೃಷಿ | ಬಸರಳ್ಳಿ | ಕೊಪ್ಪಳ | ಕೊಪ್ಪಳ |
| ೪೪. | ಪರಕಿ ಪರಸಪ್ಪ | ೫೩ | ಕುರುಬ | ಕೃಷಿ | ಕಾರಟಗಿ | ಗಂಗಾವತಿ | ಕೊಪ್ಪಳ |
| ೪೫. | ಶಿವಪ್ಪ ಹಿರೇಹಾಳ | ೭೫ | ಕುರುಬ | ಕೃಷಿ | ಮುಧೋಳ | ಯಲಬುರ್ಗಾ | ಕೊಪ್ಪಳ |

| | | | | | | | |
|---|---|---|---|---|---|---|---|
| ೪೬. | ಹನುಮಪ್ಪ ಡೊಳ್ಳಿನ | ೬೦ | ಕುರುಬ | ಕೂಲಿ | ಬಾದಿಮನಾಳ | ಕುಷ್ಟಗಿ | ಕೊಪ್ಪಳ |
| ೪೭. | ಪಂಪ್ಪಣ ಕರಿಗಾರ | ೩೮ | ಕುರುಬ | ಹಮಾಲಿ | ಬಹದ್ದೂರಬಂಡಿ | ಕೊಪ್ಪಳ | ಕೊಪ್ಪಳ |
| ೪೮. | ಜನಗಂಡಯ್ಯಪ್ಪ | ೪೦ | ಕುರುಬ | ಪೂಜಾರಿಗಳು | ಸಿದ್ದಾಪೂರ | ಗಂಗಾವತಿ | ಕೊಪ್ಪಳ |
| ೪೯. | ತೋರಕಪ್ಪ ಗುರಿಕಾರ | ೫೦ | ಕುರುಬ | ಕೃಷಿ | ಕಬ್ಬರಗಿ | ಕುಷ್ಟಗಿ | ಕೊಪ್ಪಳ |
| ೫೦. | ಕೃಷ್ಣಪ್ಪ ಚಿಕ್ಕಗೌಡರ್ | ೭೫ | ಕುರುಬ | ಕೃಷಿ | ವಜ್ರಬಂಡಿ | ಯಲಬುರ್ಗಾ | ಕೊಪ್ಪಳ |
| ೫೧. | ಬಿ.ಎಮ್.ಗಟ್ಟಿ | ೩೮ | ಕುರುಬ | ಶಿಕ್ಷಕರು | ಕುಷ್ಟಗಿ | ಕುಷ್ಟಗಿ | ಕೊಪ್ಪಳ |
| ೫೨. | ಶಂಕರ | ೩೨ | ಕುರುಬ | ಶಿಕ್ಷಕರು | ಕಬ್ಬರಗಿ | ಕುಷ್ಟಗಿ | ಕೊಪ್ಪಳ |
| ೫೩. | ಸೋಮಶೇಖರ ಹರ್ತಿ | ೩೮ | ಕುರುಬ | ಶಿಕ್ಷಕರು | ಯಲಬುರ್ಗಾ | ಯಲಬುರ್ಗಾ | ಕೊಪ್ಪಳ |
| ೫೪. | ಹೆಚ್.ಎಸ್.ಪಾಟೀಲ್ | ೬೫ | ಕುರುಬ | ಪ್ರಾಂಶುಪಾಲರು | ಬಿಸರಳ್ಳಿ | ಕೊಪ್ಪಳ | ಕೊಪ್ಪಳ |
| ೫೫. | ಗವಿಸಿದ್ದಪ್ಪ ಎಚ್.ಪಾಟೀಲ್ | ೩೫ | ಕುರುಬ | ಉಪನ್ಯಾಸಕರು | ರಾಯಚೂರು | ರಾಯಚೂರು | ರಾಯಚೂರು |
| ೫೬. | ಶಿವಾನಂದ ಹುದ್ದೂರು | ೩೫ | ಕುರುಬ | ವ್ಯಾಪಾರ | ಕೊಪ್ಪಳ | ಕೊಪ್ಪಳ | ಕೊಪ್ಪಳ |

| | | | | | | | |
|---|---|---|---|---|---|---|---|
| ೫೭. | ಶರಣಪ್ಪ ಕೊರೂರು | ೪೦ | ಕುರುಬ | ಕೃಷಿ | ಸಂಗನಹಾಲ | ಯಲಬುರ್ಗಾ | ಕೊಪ್ಪಳ |
| ೫೮. | ಮಲ್ಲಪ್ಪ ಅವಣ್ಣೆಯರ | ೪೫ | ಕುರುಬ | ಕೃಷಿ | ಮಾದಿನೂರು | ಕೊಪ್ಪಳ | ಕೊಪ್ಪಳ |
| ೫೯. | ಸಿದ್ದಪ್ಪ ಗೊಂಡಬಾಳ | ೬೦ | ಕುರುಬ | ಕೃಷಿ | ಗೊಂಡಬಾಳ | ಕೊಪ್ಪಳ | ಕೊಪ್ಪಳ |
| ೬೦. | ಸಿದ್ಧಪ್ಪ ನೀರಲೂಟಿ | ೪೫ | ಕುರುಬ | ವ್ಯಾಪಾರ | ಕನಕಗಿರಿ | ಗಂಗಾವತಿ | ಕೊಪ್ಪಳ |
| ೬೧. | ಬಸವಂತಪ್ಪ ಗೂಳಿ | ೫೦ | ಲಿಂಗಾಯತ | ಪೂಜಾರಿ | ಮನ್ನೇರಾಳ | ಕುಷ್ಟಗಿ | ಕೊಪ್ಪಳ |
| ೬೨. | ನಟರಾಜ ಸೋನಾರ | ೪೦ | ಪತ್ತಾರ | ಶಿಕ್ಷಕ | ಗಂಗನಾಳ | ಕುಷ್ಟಗಿ | ಕೊಪ್ಪಳ |
| ೬೩. | ರುದ್ರಪ್ಪ ಇನಾಮತಿ | ೫೬ | ಲಿಂಗಾಯತ | ಸ.ನೌಕರ | ಯಲಬುರ್ಗಾ | ಯಲಬುರ್ಗಾ | ಕೊಪ್ಪಳ |
| ೬೪. | ಬಿ.ಪಿ.ಓಲೇಕಾರ | ೫೦ | ಕುರುಬ | ಶಿಕ್ಷಕ | ಕೊಪ್ಪಳ | ಕೊಪ್ಪಳ | ಕೊಪ್ಪಳ |
| ೬೫. | ಶರಣಪ್ಪ ವಡಗೇರಿ | ೩೮ | ಕುರುಬ | ಗ್ರಂಥಪಾಲಕ | ಕುಷ್ಟಗಿ | ಕುಷ್ಟಗಿ | ಕೊಪ್ಪಳ |
| ೬೬. | ಕುಪ್ಪಣ್ಣ | ೬೦ | ಬ್ರಾಹ್ಮಣ | ಕೃಷಿ | ಯಲಬುರ್ಗಾ | ಯಲಬುರ್ಗಾ | ಕೊಪ್ಪಳ |
| ೬೭. | ರಮೇಶ ಹೂಗಾರ | ೪೫ | ಹೂಗಾರ ವ್ಯಾಪಾರ | | ಕೊಪ್ಪಳ | ಕೊಪ್ಪಳ | ಕೊಪ್ಪಳ |
| ೬೮. | ಶಾಂತಯ್ಯ ಗುರುವಿನ್ | ೫೫ | ಕುರುಬ | ಶಿಕ್ಷಕ | ಮೋರನಹಳ್ಳಿ | ಕೊಪ್ಪಳ | ಕೊಪ್ಪಳ |
| ೬೯. | ಜಿ.ಎಸ್.ಗೌಡರ | ೪೫ | ಕುರುಬ | ಕೃಷಿ | ಹಲಗೇರಿ | ಕೊಪ್ಪಳ | ಕೊಪ್ಪಳ |

# ೩. ಛಾಯಾಚಿತ್ರಗಳು



೧. ವೀರ ಕೋಟನಿಂಗಪ್ಪನ ವೀರಗಲ್ಲು,
ಮುಧೋಳ, ತಾ. ಯಲಬುರ್ಗಾ



೨. ಗೊರವರ ಹೆಗ್ಗಡೆ ಮಲ್ಲಯ್ಯನ ಮೂರ್ತಿ,
ಮನ್ನೆರಾಳ, ತಾ. ಕುಷ್ಟಗಿ



೩. ವಿಜಯನಗರ ಕಾಲದಲ್ಲಿ ನಿರ್ಮಿಸಲ್ಪಟ್ಟ
ಶಿಬಾರಕಟ್ಟೆಯ ಶಿಲ್ಪ,
ಪುರ, ತಾ. ಕುಷ್ಟಗಿ



೪. ನ್ಯಾಯದಂಡ ಹಿಡಿದು ನಿಂತಿರುವ ಕುರುಬ
ಮುಖಂಡನ ಶಿಲ್ಪ,
ಕನಕಗಿರಿ, ತಾ. ಗಂಗಾವತಿ



೫. ಟಗರಿನ ಕಾಳಗದ ಶಿಲ್ಪ,
ಮೈಲಾರ, ಜಿ. ಬಳ್ಳಾರಿ



೬. ದಿ. ಹನುಮಗೌಡ ಪಾಟೀಲ, ಮಾಜಿಶಾಸಕರು
ಕೊರಡಕೇರಿ, ತಾ. ಕುಷ್ಟಗಿ



೭. ಮೈಲಾರಲಿಂಗನ ದೇವಾಲಯ
ಯಲಬುರ್ಗಾ



೮. ಬೀರದೇವರ ಮೂರ್ತಿ
ಕುಷ್ಟಗಿ



೯. ಕೆಂಡದಮಠ, ಕೊಪಳ



೧೦. ಇಟಗಿ ಭೀಮಮ್ಮನ ಮಠ, ದಮ್ಮೂರ
ತಾ. ಯಲಬುರ್ಗಾ



೧೧. ಬಾಳಪ್ಪಜ್ಜ ಮಲಗುತ್ತಿದ್ದನೆಂಬ ಪ್ರತೀತಿ
ಇರುವ ಮೂರು ಕಾಲಿನ ಮಂಚ, ಪುರ
ತಾ. ಕುಷ್ಟಗಿ



೧೨. ಗ್ಯಾನಪ್ಪಯ್ಯ ಮೇಲೆ ನಿಂತು ಕಂಬಳಿ ಬೀಸಿ
ಮಳೆ ತರಸಿದ್ದನೆಂಬ ಪ್ರತೀತಿಯಿರುವ ಕಲ್ಲುಬಂಡೆ,
ಹಿರೇಮನ್ನಾಪುರ, ತಾ. ಕುಷ್ಟಗಿ



೩. ಬೀರದೇವರ ಗಂಗಾಸ್ನಾನದ ನಂತರ ಎಡೆ ಮಾಡಿರುವುದು, ಹುಲಿಗಿ ಕ್ಷೇತ್ರ, ತಾ. ಕೊಪ್ಪಳ



೧೪. ಮೈಲಾರಲಿಂಗನ ದೋಣಿ ತುಂಬಿಸಿರುವುದು, ಕೊಪ್ಪಳ



೧೫. ಸರಪಳಿ ಪವಾಡ ಮಾಡುವ ಕಂಬಗಳು, ಮನ್ನೇರಾಳ, ತಾ. ಕುಷ್ಟಗಿ



೧೬. ನಾಟಿ ಔಷಧ ನೀಡುತ್ತಿರುವ ರೇವಣಸಿದ್ಧೇಶ್ವರ ಮಠದ ಗುರುಗಳು, ಚಿಕ್ಕ ,ಸಿಂಧೋಗಿ, ತಾ. ಕೊಪ್ಪಳ



೧೭. ಜಾತ್ರೆಯ ಸಂದರ್ಭದಲ್ಲಿ ಡೊಳ್ಳು ಬಾರಿಸುತ್ತಿರುವ ಕುರುಬರು, ಸಂಗನಹಾಳ, ತಾ. ಯಲಬುರ್ಗಾ



೧೮. ಡೊಳ್ಳು ಬಾರಿಸುವವರಿಗೆ ವೀಳ್ಯೆ ಕೊಡುತ್ತಿರುವುದು, ವಡ್ರಟ್ಟಿ ತಾ. ಗಂಗಾವತಿ



೧೯. ಮದುವೆ ಸಂದರ್ಭದಲ್ಲಿ ಹಂದರಗಂಬ ಪೂಜೆ ಮಾಡುತ್ತಿರುವುದು, ಸಂಗನಹಾಳ, ತಾ. ಯಲಬುರ್ಗಾ



೨೦. ಕುರಿ ಮಾರುಕಟ್ಟೆ, ಕೂಕನಪಳ್ಳಿ ತಾ. ಕೊಪ್ಪಳ



೧. ಅಮೋಘಸಿದ್ಧೇಶ್ವರ ಮಠ, ಕುಕನೂರು,
ತಾ. ಯಲಬುರ್ಗಾ



೨೨. ಯಲ್ಲಾಲಿಂಗ ದೇವರ ಮಠ, ಮನ್ನೇರಾಳ,
ತಾ. ಕುಷ್ಟಗಿ



೨೩. ಚಂದಾಲಿಂಗನ ದೇವಾಲಯ
ಮನ್ನೇರಾಳ, ತಾ. ಕುಷ್ಟಗಿ



೨೪. ಮೌನಪ್ಪಯ್ಯ, ಕುರುಬ ಗ್ಯಾನಪ್ಪಯ್ಯನಿಗೆ ಈ
ತಾಟಿನಲ್ಲಿ ಊಟ ಮಾಡಿಸಿದ್ದನೆಂಬ ಪ್ರತೀತಿಯಿದೆ.
ಲಿಂಗನಬಂಡಿ, ತಾ. ಯಲಬುರ್ಗಾ